ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೨

## ಬ್ರಾಹ್ಮಪರ್ವ—ದ್ವಿತೀಯ ಸಂಪುಟ



ಅನುವಾದಕ

**ಆಸ್ಥಾನ ವಿದ್ವಾನ್ ಬಿ. ಚನ್ನಕೇಶವಯ್ಯ**

ಗೌರ್ನಮೆಂಟ್ ಟ್ರೈನಿಂಗ್ ಕಾಲೇಜ್ ಪಂಡಿತ, ಮೈಸೂರು.

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಮುನ್ನುಡಿ

---

ದೈವಸೃಷ್ಟವಾದ ಈ ಜಗತ್ತಿನಲ್ಲಿ ಸಕಲಪ್ರಾಣಿವರ್ಗಕ್ಕೂ "ಸುಖಬೇಕು, ದುಃಖಬೇಡ" ಎಂಬ ಭಾವನೆಯು ಜನ್ಮಸಿದ್ಧವಾಗಿರುವುದು. ಅದರಲ್ಲೂ ಮಾನವ ವರ್ಗವಂತೂ ತಮ್ಮ ಸುಖಸಾಧನೆಗಾಗಿ ಸಕಲಪ್ರಾಣಿಗಳನ್ನೂ ದುಡಿಸುತ್ತಾ ಚರಾಚ ರಾತ್ಮಕವಾದ ವಸ್ತುಜಾಲವೆಲ್ಲಾ ತಮ್ಮ ಸುಖಕ್ಕಾಗಿಯೇ ಇದೆಯೆಂದು ಗ್ರಹಿಸುವುದು. ಜ್ಞಾನಪ್ರಧಾನನಾದ ಮಾನವನು ಸುಖಾಭಾಸಗಳಾದ ಇಂದ್ರಿಯಸುಖವನ್ನೇ ಪರಮ ಸುಖವೆಂದು ಭಾವಿಸುವನು. ಈ ಭಾವನೆಯು ಮನುಷ್ಯನ ಅಂತಃಕರಣದಿಂದ ತೊಲಗುವವರೆಗೂ ಮಾನವನಿಂದ ಇತರ ಯಾವ ಪ್ರಾಣಿವರ್ಗಕ್ಕಾಗಲಿ ಅಥವಾ ಯಾವ ಸಮಾಜಕ್ಕಾಗಲಿ ಸಹಾಯವು ದೊರಕಲಾರದು. ಅಲ್ಲದೆ ಅಂತಹ ಮನುಷ್ಯರು ಸಕಲರಿಗೂ ಕಂಟಕಪ್ರಾಯರಾಗುವರು. 'ಸುಖಬೇಕು' ಎಂದು ಹೇಳುವವರೆಲ್ಲರೂ ತತ್ಸಾಧನಗಳಲ್ಲಿ ಸ್ವಲ್ಪವೂ ಪ್ರಯತ್ನಿಸುವುದಿಲ್ಲ. ಅಲ್ಲದೆ ಮಾಡುವ ಪ್ರಯತ್ನಗಳು ತದ್ವಿರುದ್ಧಗಳಾದ ದುಃಖಪ್ರಾಪ್ತಿಗೆ ಅವರಿಗೆ ಅರಿವಿಲ್ಲದಂತೆ ಸಾಧನವಾಗುತ್ತಿರುತ್ತವೆ. ಪಿತ್ತರೋಗಿಯ ಕಣ್ಣಿಗೆ ಗೋಚರವಾಗುವ ವಸ್ತುವೆಲ್ಲ ಹಳದಿಯಾಗಿ ಕಾಣುವಂತೆ ಅಜ್ಞಾನಿಗೆ ದುಃಖವೇ ಸುಖರೂಪವಾಗಿ ಭಾಸಮಾನವಾಗುವುದು. ಇದು ಆತನ ಅಜ್ಞಾನದ ದೋಷವೇ ಹೊರತು ವಸ್ತುವಿನ ವಾಸ್ತವಿಕ ಸ್ಥಿತಿಯಲ್ಲ. ಸುಖದುಃಖಗಳ ಸ್ವರೂಪ, ಸುಖದುಃಖಸಾಧನಗಳ ಪ್ರಾಪ್ತಿವಿಚಾರ, ನಿತ್ಯಸುಖಾನ್ವೇಷಣಮಾರ್ಗ, ಇವು ಗಳನ್ನು ಮಂದಮತಿಗಳಿಗೂ ಸಾಮಾನ್ಯದಾರಿಯಲ್ಲಿ ತೋರಿಸಿ, ಒಟ್ಟು ಸಮಾಜಸಮಾ ಜವನ್ನೇ ದುಃಖದಿಂದ ದಾಟಿಸುವ ಶಕ್ತಿ ನಮ್ಮ ಪ್ರಾಚೀನಾರ್ಯ ಮಹರ್ಷಿಗಳಿಗಿತ್ತು. ಕೇವಲ ಉಪದೇಶಮಾತ್ರವಲ್ಲದೆ ಕಾರ್ಯತಃ ಅಗಾಧವಾದ ಕಾರ್ಯಗಳನ್ನು ನಡೆಯಿಸಿ ಆಧ್ಯಾತ್ಮಿಕ ತತ್ವದ ಮಾರ್ಗವನ್ನು ಸುಗಮವನ್ನಾಗಿ ಮಾಡಿದರು. ಆಧ್ಯಾತ್ಮಿಕ ಚಿತ್ತ ವೃತ್ತಿಯುಳ್ಳವನೇ ಮೇಲಿನ ಅಂತಸ್ತಿನವನೆಂದು ಸಾರಿದರು. ಅದಕ್ಕಾಗಿ ವೇದವೇದಾಂ ತಗಳ ಅರ್ಥವನ್ನು ಜನಸಾಮಾನ್ಯಕ್ಕೂ ಮನದಟ್ಟಾಗುವಂತೆ ಬರೆದರು. ಆದರೆ ಪ್ರಕೃ ತಿಯೇ ಮನುಷ್ಯನ ಕೈಹಿಡಿದು ಕೆಸರಿಗೆ ಎಳೆಯುವಾಗ ಪ್ರತಿಯೊಬ್ಬನೂ ಆ ಅಂತಸ್ತಿ ಗೇರುವುದು ಸುಲಭವಲ್ಲ. ಅಷ್ಟು ಕಷ್ಟತರವಾದ ದರ್ಜೆಗೆ ಸಾಮಾನ್ಯಜೀವಿಯನ್ನೂ ಹೇಗಾದರೂ ಮಾಡಿ ಸೇರಿಸಬೇಕೆಂಬುದೇ ಈ ಪುರಾಣ ನಿರ್ಮಾತೃಗಳ ಉಚ್ಚ ಧ್ಯೇಯವಾಗಿದೆ.

ವಿಜ್ಞಾನಬಲವನ್ನೇ ನಂಬಿ ಮುಂದುವರಿಯುತ್ತಿರುವ ಈಗಿನ ಜನಾಂಗಕ್ಕೆ ಈ ಪುರಾಣೇತಿಹಾಸಗಳು ಅಷ್ಟಾಗಿ ತೃಪ್ತಿಯುಂಟುಮಾಡಲಾರವು ಎಂದು ಕಾಣುತ್ತದೆ. ಚೆನ್ನಾಗಿ ವಿಚಾರಿಸಿದರೆ ಒಂದು ವಿಧದಲ್ಲಿ ಪುರಾಣಗಳೂ ಜನರಿಗೆ ವಿಜ್ಞಾನವನ್ನು

ಬೋಧಿಸಿವೆ ಎಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಆದರೆ ನಾವು ಆ ವೈಜ್ಞಾನಿಕ ಭಾಗವನ್ನು ಕಾರ್ಯರೂಪಕ್ಕೆ ತಂದುಕೊಳ್ಳದೆ ಬಿಟ್ಟಿರುವೆವು. ದೇಶಾಂತರದವರು ಫಲ ರೂಪಕ್ಕೆ ತಂದಿರುವ ವಿಜ್ಞಾನಭಾಗದಿಂದ ನಾವೂ ತೃಪ್ತರೇ ಆಗಿರುವುದರಿಂದ ನಮಗೆ ಈಗ ಅದು ಬೇಡವಾಗಿದೆ. ಅಲ್ಲದೆ ಬ್ರಹ್ಮಸಮಾಜದಂತಹ ಸುಧಾರಕ ಸಮಾಜಗಳು ನಮ್ಮ ದೇಶದಲ್ಲಿ ಅವತರಿಸಿ ಈ ಪುರಾಣೇತಿಹಾಸಗ್ರಂಥಗಳ ಪಠನವನ್ನೂ ಪ್ರಚಾರ ವನ್ನೂ ತಡೆಗಟ್ಟಿದುವು. ನಿರ್ಮೂಲಮಾಡುವುದಕ್ಕೂ ಪ್ರಯತ್ನಗಳು ನಡೆದುವೆಂದು ಚರಿತ್ರೆಗಳು ಕೆಲವೆಡೆ ಸೂಚಿಸುತ್ತಿವೆ. ಎಷ್ಟೇ ಅನಾದರ, ಎಷ್ಟೇ ಅಪಪ್ರಚಾರ, ಎಷ್ಟೇ ಅಜ್ಞಾನ, ಕವಿಯುತ್ತಾ ಬಂದರೂ ಸ್ಥಿರಮತಿಗಳಾದ ಋಷಿವರ್ಯರಿಂದ ರಚಿತವಾದ ಈ ಪೂಜ್ಯ ಗ್ರಂಥಗಳು ಈಗಲೂ ಅಭಿವೃದ್ಧಿಹೊಂದುತ್ತಿವೆ. ಅಗಾಧವಾದ ಸಮುದ್ರದಲ್ಲಿ ನೀರಸವಾದ ವಸ್ತುಗಳು ಅನೇಕವಿರಬಹುದು. ಆದರೂ ಅಮೂಲ್ಯವಾದ ರತ್ನಗಳು ಇರುವುದರಿಂದ ರತ್ನಾಕರವೆನಿಸಿದೆ ಅಂಥ ಅಮೂಲ್ಯವಾದ ಒಂದೊಂದು ರತ್ನದಿಂ ದಲೇ ಸಮುದ್ರವು ಜನಮನ್ನಣೆಯನ್ನು ಪಡೆದಿರುವ ದೃಷ್ಟಾಂತವನ್ನು ನಾವು ಪುರಾಣ ಗಳಲ್ಲಿ ಕಾಣಬಹುದು. ಆಧುನಿಕ ಪುರಾಣದ ಕಥೆಗಳನ್ನು ನಂಬಲಿ, ನಂಬದೆ ಇರಲಿ, ಯಾವ ಉದ್ದೇಶ ಮುಖ್ಯವಾಗಿ ಅಲ್ಲಿ ಪ್ರತಿಫಲಿತವಾಗುತ್ತದೆ ಎಂಬುದನ್ನು ಗಮನಿಸ ಬೇಕು. ವಾಚಕರು ಅಷ್ಟನ್ನು ತಿಳಿದರೆ ಪುರಾಣಕರ್ತೃಗಳ ಶ್ರಮ ಸಫಲವಾಗುವುದು.

ಪ್ರಕೃತ ಈ ಸಂಪುಟದಲ್ಲಿ ಜ್ಞಾನಸಾಧಕವಾದ ಕರ್ಮಮಾರ್ಗವು ವಿಸ್ತೃತವಾಗಿದೆ ಯೆಂದು ಹೇಳಬಹುದು. ಯಾವ ಯಾವ ದೇವತೆಗಳಿಗೆ ಯಾವ ಯಾವ ತಿಥ್ಯಾದಿ ಗಳು ಪ್ರಿಯವೆಂದು ಉಕ್ತವಾಗಿವೆ. ವ್ರತಾಚರಣೆಯ ಕ್ರಮ, ಉಪಾಸನಾಮಾರ್ಗಾವ ಲಂಬನೆಯಿಂದ ದೊರಕುವ ಫಲಗಳು, ಆ ಫಲಗಳನ್ನು ಹೊಂದಿದ ಮಹಾವ್ಯಕ್ತಿಗಳು, ಇವೆಲ್ಲಾ ಸ್ಪಷ್ಟವಾಗಿ ನಿರೂಪಿತವಾಗಿದೆ. ಗಣಪತಿ, ಕಾರ್ತಿಕೇಯ, ಸೂರ್ಯದೇವ ಈ ದೇವತೆಗಳಲ್ಲಿ ಭಕ್ತಿಯಿಟ್ಟಿರುವವರಿಗಂತೂ ಅನೇಕ ಹೊಸ ವಿಷಯಗಳನ್ನು ಈ ಭಾಗವು ಒದಗಿಸತಕ್ಕದ್ದಾಗಿದೆ.

ಇಂತಹ ಅಮೂಲ್ಯ ಪುರಾಣರತ್ನವನ್ನು ಬೆಳಕಿಗೆ ತಂದು ಈ ಮೂಲಕ ಕನ್ನಡ ನಾಡಿಗೂ ಕನ್ನಡ ಜನಾಂಗಕ್ಕೂ ಉಪಕಾರವೆಸಗಿದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ., ಮಹಾಪ್ರಭುಗಳವರಿಗೆ** ಜಗದೀಶ್ವರನೂ ಜಗನ್ಮಾತೆಯೂ ಆಯುರಾರೋಗ್ಯೈಶ್ವರ್ಯಾದಿ ಸಮಸ್ತ ಸನ್ಮಂಗಳ ಗಳನ್ನು ದಯಪಾಲಿಸಲಿ ಎಂದು ಸದಾ ಪ್ರಾರ್ಥಿಸುವೆನು.

ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ,**
ಆಸ್ಥಾನ ವಿದ್ವಾನ್,
ಟ್ರೈನಿಂಗ್ ಕಾಲೇಜ್ ಪಂಡಿತ.

ಮೈಸೂರು,
ಶ್ರೀ ಮನ್ಮಥನಾಮಸಂವತ್ಸರದ
ಆಶ್ವಯುಜ ಶುಕ್ಲ ಪ್ರತಿಪತ್

# ಶ್ರೀ ಭವಿಷ್ಯಮಹಾಪುರಾಣದ ದ್ವಿತೀಯ ಸಂಪುಟದ

# ವಿಷಯಾನುಕ್ರಮಣಿಕೆ.

---

ಸೇವನೆಯಲ್ಲಿ ಅನುಸರಿಸುವ ಕಾಲಪರಿಮಾಣ, ವ್ರತಾಚರಣಫಲ, ಷಣ್ಮುಖನು ರಚಿಸುತ್ತಿದ್ದ ಲಕ್ಷಣಸ್ತ್ರಕ್ಕೆ ವಿಘ್ನೇಶನು ತಂದ ಅಡ್ಡಿ, ಆಗ ಷಣ್ಮುಖನು ವಿನಾಯಕನ ಹಲ್ಲನ್ನು ಮುರಿದುದು, ಈಶ್ವರನು ಬಂದು ಸಂತೈಸಿ ಅವನ ನಿರೂಪಣ ಕ್ರಮವನ್ನು ಪರಿಶೀಲಿಸಿ ಒಪ್ಪದೆ ಅದನ್ನು ಸಮುದ್ರಕ್ಕೆ ಎಸೆದುದು, ಬ್ರಹ್ಮನು ಬಂದು ಗಣಪತಿಯನ್ನು ಸಂತೈಸಿ ಸಮುದ್ರನಿಂದ ಅದನ್ನು ಹೇಳಿಸಿದ್ದು, ಆ ಹಲ್ಲನ್ನು ಗಣಪತಿಗೆ ಕೊಡುವಂತೆ ಹೇಳಿದ್ದು, ಷಣ್ಮುಖನು ಒಂದು ನಿಬಂಧನೆಯಮೇಲೆ ಅದನ್ನು ಕೊಟ್ಟಿದ್ದು, ಗಣೇಶನ ಕೈಯಲ್ಲಿ ಭಿನ್ನದಂತವಿರುವುದರ ತತ್ವ; ಈಶ್ವರನು ಷಣ್ಮುಖನ ನಿರೂಪಣ ಪರಿಶೀಲನೆಯಲ್ಲಿ ಷಣ್ಮುಖನು ಶಿವನನ್ನು ಕಪಾಲಿ ಎಂದು ಸ್ತುತಿಸಿದ್ದು, ಶಿವನ ಕೈಗೆ ಕಪಾಲ ಬಂದ ಕಥೆ. 44—54

## ಇಪ್ಪತ್ತಮೂರನೆಯ ಅಧ್ಯಾಯ—

ಈಶಪುತ್ರನಿಗೆ ವಿಘ್ನೇಶತ್ವ ಪ್ರಾಪ್ತಿಯಾದ ವಿಚಾರ. ಆತನ ಅರ್ಚನ ವಿಧಾನ, ಆದಿಸೃಷ್ಟಿಯಲ್ಲಿ ಜನತೆಗೆ ನಿರ್ವಿಘ್ನತೆಯಿಂದಾದ ಹೆಮ್ಮೆ. ತ್ರಿಮೂರ್ತಿಗಳು ಆಲೋಚಿಸಿ ಅವರನ್ನು ಸನ್ಮಾರ್ಗಗಾಮಿಗಳನ್ನಾಗಿಸಲು ಗಣಪತಿಯನ್ನು ನೇಮಿಸಿದ್ದು, ಅವನು ಜನರ ಅಹಂಕಾರ ನಾಶಕ್ಕಾಗಿ ಮನೋವಿಕಾರ ದುಃಸ್ವಪ್ನಾದಿಗಳ ಕಲ್ಪನೆ, ಈ ದೋಷ ಪರಿಹಾರಾರ್ಥವಾಗಿ ಗಣಪತಿಗೆ ಅಭಿಷೇಕ ಪೂಜಾದಿಗಳ ಸಿದ್ಧತೆ, ಗುಹ, ಪಾರ್ವತಿ, ಶಿವ, ಕೃಷ್ಣ, ನವಗ್ರಹ, ದಿಕ್ಪಾಲರು ಇವರ ಆರಾಧನಪೂರ್ವಕ ಗಣಪತಿಪೂಜೆ, ಅಭಿಷೇಕ, ಹೋಮಾದಿಗಳು, ಬಲಿ ಸಮರ್ಪಣ, ಬ್ರಾಹ್ಮಣಭೋಜನ, ಗುರುವಿಗೆ ವಸ್ತ್ರಸಮರ್ಪಣ. 55—61

## ಇಪ್ಪತ್ತನಾಲ್ಕನೆಯ ಅಧ್ಯಾಯ—

ಬ್ರಹ್ಮನು ಷಣ್ಮುಖನಿಗೆ ಪುರುಷ ಲಕ್ಷಣವನ್ನು ವಿವರಿಸಿದ್ದು—ಪುರುಷ ಶರೀರದ ಔನ್ನತ್ಯದಿಂದ ಉತ್ತಮ ಮಧ್ಯಮ ನಿರ್ಣಯ, ಕಾಲಬೆರಳು, ಉಗುರು, ಹೆಬ್ಬೆರಳು, ರೋಮ, ಮೊಳಕಾಲು, ನಡಗೆ ಇವುಗಳ ಶುಭಾಶುಭ ಲಕ್ಷಣ, ತದನುಗುಣವಾದ ಫಲ ಪ್ರಾಪ್ತಿ. 62—71

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಾದಶೋಽಧ್ಯಾಯಃ

॥ ಸುಮಂತುರುವಾಚ ॥

ಪೌರ್ಣಮಾಸ್ಯುಪವಾಸಂ ತು ಕೃತ್ವಾ ಭಕ್ತ್ಯಾ ನರಾಧಿಪ ।
ಅನೇನ ವಿಧಿನಾ ಯಸ್ತು ವಿರಿಂಚಿಂ ಪೂಜಯೇನ್ನರಃ ॥ ೧ ॥

ಪ್ರತಿಪದ್ಯಾಂ ಮಹಾಬಾಹೋ ಸ ಗಚ್ಛೇದ್ಬ್ರಹ್ಮಣಃ ಪದಂ ।
ಋಗ್ಭಿರ್ವಿಶೇಷತೋ ದೇವೀ ವಿಂರಿಚೇರ್ವಾಸ್ತುದೇವತಾ ॥ ೨ ॥

ಕಾರ್ತ್ತಿಕೇಮಾಸಿ ದೇವಸ್ಯ ರಥಯಾತ್ರಾ ಪ್ರಕೀರ್ತಿತಾ ।
ಯಾಂ ಕೃತ್ವಾ ಮಾನವೋ ಭಕ್ತ್ಯಾ ಯಾತಿ ಬ್ರಹ್ಮಸಲೋಕತಾಂ ॥ ೩ ॥

---

### ಹದಿನೆಂಟನೆಯ ಅಧ್ಯಾಯ

೧-೨. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೆ! ಯಾವನು ಪೂರ್ಣಿಮೆಯದಿನ ಉಪವಾಸಮಾಡಿ ಪಾಡ್ಯಮಿಯದಿನ ಭಕ್ತಿಯಿಂದ ಈ ವಿಧಿಯಂತೆ ಬ್ರಹ್ಮದೇವನನ್ನು ಪೂಜಿಸುವನೋ ಅವನು ಬ್ರಹ್ಮಲೋಕವನ್ನು ಹೊಂದುವನು. ಋಕ್ಕುಗಳಲ್ಲಿ ಶ್ರೇಷ್ಠವೆನಿಸಿದ ಗಾಯತ್ರೀದೇವಿಯು ವಿಶೇಷತಃ ಬ್ರಹ್ಮನ ವಾಸ್ತು (ಗೃಹ) ದೇವತೆಯು.

೩. ಕಾರ್ತಿಕಮಾಸದಲ್ಲಿ ಬ್ರಹ್ಮದೇವನಿಗೆ ರಥೋತ್ಸವವನ್ನು ನಡೆಯಿಸಬೇಕೆಂದು ಹೇಳಿದೆ. ಅದನ್ನು ಭಕ್ತಿಯಿಂದ ನೆರವೇರಿಸಿದ ಮನುಷ್ಯನು ಬ್ರಹ್ಮಸಾಲೋಕ್ಯವನ್ನು ಹೊಂದುತ್ತಾನೆ.

ಕಾರ್ತ್ತಿಕೇಮಾಸಿ ರಾಜೇಂದ್ರ ಪೌರ್ಣಮಾಸ್ಯಾಂ ಚತುರ್ಮುಖಂ ।
ಮಾರ್ಗೇಣ ಚರ್ಮಣಾಸಾರ್ಧಂ ಸಾವಿತ್ರ್ಯಾ ಚ ಪರಂತಪ ॥ ೪ ॥

ಭ್ರಾಮಯೇನ್ನಗರಂ ಸರ್ವಂ ನಾನಾಮಂತ್ರೈಸ್ಸಮನ್ವಿತಂ ।
ಸ್ಥಾಪಯೇದ್ಭ್ರಾಮಯಿತ್ವಾ ತು ಸಲೋಕಂ ನಗರಂ ನೃಪ ॥ ೫ ॥

ಬ್ರಾಹ್ಮಣಂ ಭೋಜಯಿತ್ವಾಗ್ರೇ ಶಾಂಡಿಲೇಯಂ ಪ್ರಪೂಜ್ಯ ಚ ।
ಆರೋಪಯೇದ್ರಥೇ ದೇವಂ ಪುಣ್ಯವಾದಿತ್ರನಿಸ್ವನೈಃ ॥ ೬ ॥

ರಥಾಗ್ರೇ ಶಾಂಡಿಲೀಪುತ್ರಂ ಪೂಜಯಿತ್ವಾ ವಿಧಾನತಃ ।
ಬ್ರಾಹ್ಮಣಾನ್ ವಾಚಯಿತ್ವಾ ಚ ಕೃತ್ವಾ ಪುಣ್ಯಾಹಮಂಗಳಂ ॥ ೭ ॥

ದೇವಮಾರೋಪಯಿತ್ವಾ ತು ರಥೇ ಕುರ್ಯಾತ್ಪ್ರಜಾಗರಂ ।
ನಾನಾವಿಧೈಃ ಪ್ರೇಕ್ಷಣಕೈಃ ಬ್ರಹ್ಮಘೋಷೈಸ್ತು ಪುಷ್ಕಲೈಃ ॥ ೮ ॥

---

೪. ಕಾರ್ತಿಕಮಾಸದ ಪೂರ್ಣಿಮೆಯದಿನ ರಾತ್ರಿ ಚತುರ್ಮುಖಬ್ರಹ್ಮ ಮೂರ್ತಿಗೆ ಜಿಂಕೆಯ ಚರ್ಮವನ್ನು ಹೊದ್ದಿಸಿ ಅಲಂಕರಿಸಬೇಕು. ಸಾವಿತ್ರಿಯ (ಗಾಯತ್ರಿ) ಪ್ರತಿಮೆಯನ್ನು ಬ್ರಹ್ಮವಿಗ್ರಹದ ಜತೆಯಲ್ಲಿರಿಸಬೇಕು.

೫. ಅಯ್ಯಾ ನರಪತಿಯೆ ! ಹೀಗೆ ಅಲಂಕರಿಸಿದ ಮೂರ್ತಿಯನ್ನು ನಾನಾ ಮಂತ್ರಘೋಷಸಮೇತ ಊರಿನಲ್ಲೆಲ್ಲಾ ಮೆರವಣಿಗೆಯನ್ನು ಮಾಡಬೇಕು.

೬-೮. ಜನಭರಿತವಾದ ಪಟ್ಟಣದಲ್ಲೆಲ್ಲಾ ಹೀಗೆ ಮೆರವಣಿಗೆಯನ್ನು ಮಾಡಿದ ಮೇಲೆ ರಥದ ಸಮೀಪದಲ್ಲಿ ಮುಂಟಪೋತ್ಸವಕ್ಕಾಗಿ ನಿಲ್ಲಿಸಿ ಶಾಂಡಿಲ್ಯಗೋತ್ರೋತ್ಪನ್ನ ನಾದ ದ್ವಿಜನಿಗೆ ಮೊದಲು ಭೋಜನಮಾಡಿಸಿ ಸತ್ಕರಿಸಿ ಮಂಗಳವಾದ್ಯಧ್ವನಿ ಗಳೊಡನೆ ದೇವರನ್ನು ರಥಾರೋಹಣಮಾಡಿಸಲು ಸಿದ್ಧಮಾಡಬೇಕು. ಶಾಂಡಿಲ್ಯ ಗೋತ್ರೋತ್ಪನ್ನನಾದ ಆ ದ್ವಿಜನನ್ನು ರಥದ ಮುಂಭಾಗದಲ್ಲಿ ವಿಧಿಪ್ರಕಾರ ಪೂಜೆ ಮಾಡಿ ಬ್ರಾಹ್ಮಣರಿಂದ ಪುಣ್ಯಾಹ ವಾಚನಮಾಡಿಸಿ ಸುಲಗ್ನದಲ್ಲಿ ದೇವರನ್ನು ರಥಾ ರೋಹಣಮಾಡಿಸಿ ಜಾಗರಣೆಯನ್ನು ಮಾಡುವವನಾಗಿ ಸಮೃದ್ಧಿಯಾಗಿ ವೇದ ಘೋಷಮಾಡುವುದರಲ್ಲಿ ನಿರತನಾಗುವುದರಿಂದಲೂ ಬಗೆಬಗೆಯ ದರ್ಶನೀಯ ಸನ್ನಿ ವೇಶಗಳಲ್ಲಿ ತಿರುಗುವುದರಿಂದಲೂ ಆ ರಾತ್ರಿಯನ್ನು ಕಳೆಯಬೇಕು.

ಕೃತ್ವಾ ಪ್ರಜಾಗರಂ ಹ್ಯೇವಂ ಪ್ರಭಾತೇ ಬ್ರಾಹ್ಮಣಂ ನೃಪ ।
ಭೋಜಯಿತ್ವಾ ಯಥಾಶಕ್ತಿ ಭಕ್ಷ್ಯಭೋಜ್ಯೈರನೇಕಶಃ ॥ ೯ ॥

ಪೂಜಯಿತ್ವಾ ತು ತಂ ವೀರ ವಜ್ರೇಣ ವಿಧಿವನ್ನೃಪ ।
ಬೀಜೇನ ಚ ಮಹಾಬಾಹೋ ಪಯಸಾ ಪಾಯಸೇನ ಚ ॥ ೧೦ ॥

ಬ್ರಾಹ್ಮಣಾನ್ ವಾಚಯಿತ್ವಾ ಚ ಛಂದೇನ ವಿಧಿನಾ ನೃಪ ।
ಕೃತ್ವಾ ಪುಣ್ಯಾಹಶಬ್ದಂ ಚ ರಥಂ ಚ ಭ್ರಾಮಯೇತ್ಪುರೇ ॥ ೧೧ ॥

ಚತುರ್ವೇದವಿದ್ಯೈರ್ವಿಪ್ರೈಃ ಭ್ರಾಮಯೇದ್ಬ್ರಹ್ಮಣೋರಥಂ ।
ಬಹ್ವೃಚಾಥರ್ವಣೋಚ್ಚಾರ್ಯೈಃ ಛಂದೋಗಾಧ್ವರ್ಯುಭಿಸ್ತಥಾ ॥ ೧೨ ॥

ಭ್ರಾಮಯೇದ್ದೇವದೇವಸ್ಯ ಸುರಜ್ಯೇಷ್ಠಸ್ಯ ತಂ ರಥಂ ।
ಪ್ರದಕ್ಷಿಣಂ ಪುರಂ ಸರ್ವಂ ಮಾರ್ಗೇಣ ಸುಸಮೇನ ತು ॥ ೧೩ ॥

---

೯. ಅಯ್ಯಾ ಪ್ರಭುವೆ! ಈ ಪ್ರಕಾರ ಜಾಗರಣೆಮಾಡಿ ಪ್ರತಿಪತ್ಪ್ರಾತಃ ಕಾಲದಲ್ಲಿ ಶಕ್ತ್ಯನುಸಾರ ಬಹುವಿಧವಾದ ಭಕ್ಷ್ಯಭೋಜ್ಯಗಳನ್ನು ಮಾಡಿಸಿ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು.

೧೦. ವೀರಶ್ರೇಷ್ಠನೆ! ಆ ವಿಪ್ರನನ್ನು ತುಪ್ಪ, ನವಣೆಬೀಜ, ಕ್ಷೀರ, ಗುಡ ಇವುಗಳನ್ನು ಹಾಕಿ ಮಾಡಿದ ಪಾಯಸದಿಂದಲೂ ಹಾಲಿನಿಂದಲೂ ಭೋಜನಮಾಡಿಸಿ ರತ್ನಾಭರಣಗಳಿಂದ ವಿಧಿಪ್ರಕಾರ ಪೂಜೆಮಾಡಬೇಕು.

೧೧. ಅಯ್ಯಾ ರಾಜನೆ! ಅನಂತರ ವೇದೋಕ್ತವಿಧಿಯಿಂದ ಪುಣ್ಯಾಹವಾಚನವನ್ನು ಮಾಡಿಸಿ ನಗರದಲ್ಲಿ ರಥತಿರುಗುವ ಬೀದಿಗಳಿಗೆಲ್ಲಾ ಪ್ರೋಕ್ಷಿಸಿ ಪಟ್ಟಣದೊಳಗೆ ರಥವನ್ನು ಎಳೆಯಬೇಕು.

೧೨. ರಥವನ್ನು ಎಳೆಯುವಾಗ ನಾಲ್ಕುವೇದಗಳನ್ನು ಬಲ್ಲ ಬ್ರಾಹ್ಮಣರು ವೇದಪಾರಾಯಣ ಮಾಡುತ್ತಿರಬೇಕು. ಬಹ್ವೃಚರೆನಿಸಿದ ಋಗ್ವೇದಿಗಳು ಋಗ್ವೇದವನ್ನೂ, ಅಧ್ವರ್ಯುಗಳೆನಿಸಿದ ಯಜುರ್ವೇದಿಗಳು ಯಜುರ್ವೇದವನ್ನೂ, ಛಂದೋಗರೆನಿಸಿದ ಸಾಮಕರು ಸಾಮವೇದವನ್ನೂ, ಅಥರ್ವವೇದಿಗಳು ಅಥರ್ವಣವೇದವನ್ನೂ ಪಾರಾಯಣಮಾಡಿಕೊಂಡು ರಥವನ್ನು ಎಳೆಯಬೇಕು.

೧೩. ಅಯ್ಯಾ ರಾಜನೆ! ದೇವದೇವನಾದ ಬ್ರಹ್ಮನ ಆ ರಥವನ್ನು ಸಮತಳವಾದ ಮಾರ್ಗವುಳ್ಳ ನಗರದ ಬೀದಿಗಳಲ್ಲಿ ಪ್ರದಕ್ಷಿಣೆಯಾಗಿ ಬರುವಂತೆ ಎಳೆಯಬೇಕು.

ನ ವೋಢವ್ಯೋ ರಥೋ ವೀರ ಶೂದ್ರೇಣ ಶುಭಮಿಚ್ಛತಾ ।
ನಾರುಹೇತ ರಥಂ ಪ್ರಾಜ್ಞೋ ಮುಕ್ತ್ವೈಕಂ ಭೋಜಕಂ ನೃಪ ॥ ೧೪ ॥

ಬ್ರಹ್ಮಣೋ ದಕ್ಷಿಣೇಪಾರ್ಶ್ವೇ ಸಾವಿತ್ರೀಂ ಸ್ಥಾಪಯೇನ್ನೃಪ ।
ಪೂಜಕೋ ವಾಮಪಾರ್ಶ್ವೇ ತು ಪುರತೋ ಕಂಜಜಂ ನ್ಯಸೇತ್ ॥ ೧೫ ॥

ಏವಂ ತೂರ್ಯನಿನಾದೈಸ್ತು ಶಂಖಶಬ್ದೈಶ್ಚ ಪುಷ್ಕಲೈಃ ।
ಭ್ರಾಮಯಿತ್ವಾ ರಥಂ ರಾಜನ್ ಪುರಂ ಸರ್ವಂ ಪ್ರದಕ್ಷಿಣಂ ।
ಸ್ವಸ್ಥಾನೇ ಸ್ಥಾಪಯೇದ್ಭೂಯಃ ಕೃತ್ವಾ ನೀರಾಜನಂ ಬುಧಃ ॥ ೧೬ ॥

ಯ ಏವಂ ಕುರುತೇ ಯಾತ್ರಾಂ ಭಕ್ತ್ಯಾ ಯಶ್ಚಾಪಿ ಪಶ್ಯತಿ ।
ರಥಂ ಚಾಕರ್ಷತೇ ಯಸ್ತು ಸ ಗಚ್ಛೇದ್ಬ್ರಹ್ಮಣಃ ಪದಂ ॥ ೧೭ ॥

ಕಾರ್ತಿಕೇಮಾಸ್ಯಮಾಯಾಂ ತು ಯಸ್ತು ದೀಪಪ್ರದೀಪನಂ ।
ಶಾಲಾಯಾಂ ಬ್ರಹ್ಮಣಃ ಕುರ್ಯಾತ್ಸಗಚ್ಛೇದ್ಬ್ರಹ್ಮಣಃ ಪದಂ ॥ ೧೮ ॥

---

೧೪. ಅಯ್ಯಾ ವೀರನೆ! ತನಗೆ ಶುಭವಾಗಬೇಕೆಂದು ಅಪೇಕ್ಷಿಸುವ ಶೂದ್ರನು ಬ್ರಹ್ಮರಥವನ್ನು ಮುಟ್ಟಬಾರದು. ಅರ್ಚಕನು ಒಬ್ಬನು ಹೊರತು ತಿಳಿವಳಿಕೆ ಯುಳ್ಳಂಥ ಮತ್ತಾವನೂ ರಥದಮೇಲೆ ಹತ್ತಲೇಬಾರದು.

೧೫. ಗಾಯತ್ರೀದೇವಿಯ ಪ್ರತಿಮೆಯನ್ನು ಬ್ರಹ್ಮದೇವನ ಬಲಗಡೆಯಲ್ಲಿ ಇರಿಸಬೇಕು. ಅರ್ಚಕನು ದೇವರ ಎಡಭಾಗದಲ್ಲಿರಬೇಕು. ಮುಂಭಾಗದಲ್ಲಿ ಎಂದರೆ ಮಧ್ಯಭಾಗದಲ್ಲಿ ಬ್ರಹ್ಮವಿಗ್ರಹವಿರಬೇಕು.

೧೬. ಅಯ್ಯಾ ರಾಜನೆ! ಈ ಪ್ರಕಾರವಾಗಿಟ್ಟ ಮೇಲೆ ಓಲಗ ಮುಂತಾದ ಮಂಗಳವಾದ್ಯಗಳಿಂದಲೂ, ಶಂಖ, ಭೇರಿ, ತಮಟೆ ಮುಂತಾದ ಅನೇಕ ವಾದ್ಯಧ್ವನಿ ಗಳಿಂದಲೂ ಸಹಿತವಾಗಿ ಗ್ರಾಮದ ಸುತ್ತ ಪ್ರದಕ್ಷಿಣೆಯಾಗಿ ರಥವನ್ನು ಎಳೆಯಬೇಕು. ಪ್ರಾಜ್ಞನಾದವನು ಮಧ್ಯದಲ್ಲಿ ಬಿಟ್ಟುಹೋಗದೆ ಕೊನೆಯವರೆಗೂ ಹೀಗೆ ರಥವನ್ನು ಎಳೆದು ನೆಲೆಗೆ ನಿಲ್ಲಿಸಿ ದೇವರಿಗೆ ಮಂಗಳಾರತಿಯನ್ನು ಮಾಡಬೇಕು.

೧೭. ಹೀಗೆ ಸಾಂಗವಾಗುವಂತೆ ರಥೋತ್ಸವಯಾತ್ರೆಯನ್ನು ಮಾಡು ವವನೂ, ಭಕ್ತಿಯಿಂದ ನೋಡುವಂಥವನೂ, ಭಕ್ತಿಯಿಂದ ರಥವನ್ನು ಎಳೆಯುವಂಥ ವನೂ ಇವರೆಲ್ಲರೂ ಬ್ರಹ್ಮಲೋಕವನ್ನು ಸೇರುತ್ತಾರೆ.

**ಪ್ರತಿಪದಿ ಬ್ರಾಹ್ಮಣಾಂಶ್ಚಾಪಿ ಗುಡಮಿಶ್ರೈಃ ಪ್ರದೀಪಕೈಃ ।**
**ವಾಸೋಭಿರಹತೈಶ್ಚಾಪಿ ಸ ಗಚ್ಛೇದ್ಬ್ರಹ್ಮಣಃ ಪದಂ ॥ ೧೯ ॥**

**ಗಂಧೈಃ ಪುಷ್ಪೈರ್ನವೈರ್ವಸ್ತ್ರೈರಾತ್ಮಾನಂ ಪೂಜಯೇಚ್ಚ ಯಃ ।**
**ತಸ್ಯಾಂ ಪ್ರತಿಪದಾಯಾಂ ತು ಸ ಗಚ್ಛೇದ್ಬ್ರಹ್ಮಣಃ ಪದಂ ॥ ೨೦ ॥**

**ಮಹಾಪುಣ್ಯಾ ತಿಥಿರಿಯಂ ಬಲಿರಾಜ್ಯಪ್ರವರ್ತಿನೀ ।**
**ಬ್ರಹ್ಮಣಃ ಸು ಪ್ರಿಯಾ ನಿತ್ಯಂ ಬಾಲೇಯಾ ಪರಿಕೀರ್ತಿತಾಃ ॥ ೨೧ ॥**

**ಬ್ರಾಹ್ಮಣಾನ್ ಪೂಜಯಿತ್ವಾಸ್ಯಾಂ ಆತ್ಮಾನಂ ಚ ವಿಶೇಷತಃ ।**
**ಸ ಯಾತಿ ಪರಮಂ ಸ್ಥಾನಂ ವಿಷ್ಣೋರಮಿತತೇಜಸಃ ॥ ೨೨ ॥**

---

೧೮. ಕಾರ್ತೀಕ ಬಹುಳ ಅಮಾವಾಸ್ಯೆಯಲ್ಲಿ ಬ್ರಹ್ಮದೇವರ ದೇವಾಲಯದಲ್ಲಿ ಯಾರು ದೀಪಾರಾಧನೆ ಮಾಡುತ್ತಾರೆಯೋ ಅವರು ಬ್ರಹ್ಮಲೋಕಕ್ಕೆ ಹೋಗುತ್ತಾರೆ.

೧೯. ಪ್ರತಿಪತ್ತಿಥಿಯಲ್ಲಿ ಬೆಲ್ಲವನ್ನು ಹಾಕಿ ಮಾಡಿದ ತಂಬಿಟ್ಟಿನ ಸೊಡಲಿನ ದೀಪದಾನದಿಂದಲೂ, ನೀರಿಗೆ ಹಾಕಿ ಬಗೆಯದೇ ಇರುವ ಹೊಸ ವಸ್ತ್ರದಾನದಿಂದಲೂ, ಬ್ರಾಹ್ಮಣರನ್ನು ಪೂಜಿಸಿದಾತನು ಬ್ರಹ್ಮಲೋಕಕ್ಕೆ ಹೋಗುತ್ತಾನೆ.

೨೦. ಅದೇ ಪ್ರತಿಪತ್ತಿಥಿಯಲ್ಲಿ ಯಾವನು ಹೂವು, ಗಂಧ, ಹೊಸಬಟ್ಟೆಗಳು ಇವುಗಳಿಂದ ತಾನು ಅಲಂಕರಿಸಿಕೊಳ್ಳುವನೋ ಅವನೂ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

೨೧. ಈರೀತಿ ಪ್ರತಿಪತ್ತಿಥಿಯು ಪುಣ್ಯಕರವಾದುದರಿಂದ ಬಲಿಚಕ್ರವರ್ತಿಯು ಈ ತಿಥಿಯಲ್ಲಿಯೇ ತನ್ನ ರಾಜ್ಯವನ್ನು ವಹಿಸಿಕೊಂಡನು ಆದ್ದರಿಂದ ಬ್ರಹ್ಮನಿಗೆ ಪ್ರಿಯವಾದ ಈ ತಿಥಿಯು ಬಲೀಂದ್ರನಿಗೂ ಪ್ರಿಯವಾದುದರಿಂದ ಬಲಿಪಾಡ್ಯಮಿ ಎಂದು ಕರೆಯಲ್ಪಡುತ್ತದೆ.

೨೨. ಈ ಪಾಡ್ಯದಲ್ಲಿ ಯಾವನು ಬ್ರಾಹ್ಮಣರನ್ನು ಪೂಜಿಸಿ, ಆಮೇಲೆ ತನ್ನ ದೇಹವನ್ನು ವಿಶೇಷವಾಗಿ ಅಲಂಕರಿಸಿಕೊಳ್ಳುವನೋ ಅವನು ಶ್ರೇಷ್ಠವೂ ತೇಜೋಮಯವೂ ಆದ ವಿಷ್ಣುಲೋಕವನ್ನು ಸೇರುತ್ತಾನೆ.

ಚೈತ್ರೇಮಾಸಿ ಮಹಾಬಾಹೋ ಪುಣ್ಯಾ ಪ್ರತಿಪದಾ ಪರಾ ।
ತಸ್ಯಾಂ ಯಃ ಶ್ವಪಚಂ ಸ್ಪೃಷ್ಟ್ವಾ ಸ್ನಾನಂ ಕುರ್ಯಾನ್ನರೋತ್ತಮ ॥ ೨೩ ॥

ನ ತಸ್ಯ ದುರಿತಂ ಕಿಂಚಿತ್ ನಾಧಯೋ ವ್ಯಾಧಯೋ ನೃಪ ।
ಭವಂತಿ ಕುರುಶಾದೂಲ ತಸ್ಮಾತ್ಸ್ನಾನಂ ಪ್ರವರ್ಜಯೇತ್ ॥ ೨೪ ॥

ದಿವ್ಯಂ ನೀರಾಜನಂ ತದ್ಧಿ ಸರ್ವರೋಗವಿನಾಶನಂ ।
ಗೋಮಹಿಷ್ಯಾದಿ ಯತ್ಕಿಂಚಿತ್ತತ್ಸರ್ವಂ ಭೂಷಯೇನ್ನೃಪ ॥ ೨೫ ॥

ತೈಲಶಸ್ತ್ರಾದಿಭಿರ್ವಸ್ತ್ರೈಃ ತೋರಣಾಧಸ್ತತೋ ನಯೇತ್ ।
ಬ್ರಾಹ್ಮಣಾನಾಂ ತಥಾ ಭೋಜ್ಯಂ ಕುರ್ಯಾತ್ಕುರುಕುಲೋದ್ವಹ ॥ ೨೬ ॥

---

೨೩. ಎಲೈ ಮಹಾಬಾಹುವೇ! ಚೈತ್ರಶುಕ್ಲ ಪಾಡ್ಯವು ಮಹಾಪುಣ್ಯಕರವಾದುದು. ಎಲೈ ಮಾನವಶ್ರೇಷ್ಠನೆ! ಪ್ರತಿಪತ್ ರಥೋತ್ಸವಕಾಲದಲ್ಲಿ ಚಂಡಾಲನನ್ನು ಸ್ಪರ್ಶಮಾಡಿದರೂ ಸ್ನಾನಮಾಡಬೇಕಾದ್ದಿಲ್ಲ. ಇದಕ್ಕೆ ಆಧಾರ ಶ್ಲೋಕವು,

" ದೇವಾಲಯ ಸಮೀಪಸ್ಥಾನ್ ದೇವಸೇವಾರ್ಥಮಾಗತಾನ್ ।
ಚಂಡಾಲಾನ್ ಪತಿತಾನ್ ಶೂದ್ರಾನ್ ಸ್ಪೃಷ್ಟ್ವಾದೋಷೋ ನ ವಿದ್ಯತೇ ।"

ಎಂಬುದಾಗಿ ಇದೆ.

೨೪. ಆರೀತಿ ಸ್ಪರ್ಶಮಾಡಿದ್ದರಿಂದ ಯಾವ ಪಾಪವಾಗಲೀ, ಮನೋವ್ಯಥೆಯಾಗಲೀ, ರೋಗಗಳಾಗಲೀ ಬರುವುದಿಲ್ಲ. ಆದ್ದರಿಂದ ಕುರುಶ್ರೇಷ್ಠನೆ! ದೇವತಾದರ್ಶನಕ್ಕೆ ಹೋಗಿಬಂದವರು ಮೈಲಿಗೆಯಾಯಿತೆಂದು ಸ್ನಾನಮಾಡುವ ಅಭಿಪ್ರಾಯವನ್ನು ಬಿಡಬೇಕು.

೨೫. ಓ ರಾಜನೇ! ರಥದ ಮೇಲೆ ಮಾಡುವ ಮಂಗಳಾರತಿಯು ಸರ್ವರೋಗವಿನಾಶಕವೂ, ಶ್ರೇಷ್ಠವೂ ಆದುದು. ಆಗ ಆ ರಥೋತ್ಸವಕ್ಕೆ ಬಂದಿರುವ ಹಸು ಎಮ್ಮೆ ಮುಂತಾದುವೆಲ್ಲಕ್ಕೂ ಅಲಂಕಾರಮಾಡಬೇಕು.

೨೬. ದನಗಳ ಕೊಂಬಿಗೆ ಎಣ್ಣೆ ಅದ್ದಿದ ಬಟ್ಟೆಯನ್ನು ಸುತ್ತಿ, ಆಯುಧವನ್ನು ತೂಗುಹಾಕಿ, ತೋರಣ ಕಟ್ಟಿರುವ ಜಳಿ ಆ ದನಗಳನ್ನು ಅದರ ಕೆಳಗೆ ನುಗ್ಗಿಸಬೇಕು.

**ತಿಸ್ರೋಹ್ಯೇತಾಃ ಪರಾಃ ಪ್ರೋಕ್ತಾಃ ತಿಥಯಃ ಕುರುನಂದನ ।**
**ಕಾರ್ತ್ತಿಕೇಶ್ವೆಯುಜೋಮಾಸಿ ಚೈತ್ರೇಮಾಸೇ ಚ ಭಾರತ　　॥ ೨೭ ॥**

**ಸ್ನಾನಂ ದಾನಂ ಶತಗುಣಂ ಕಾರ್ತಿಕೇ ಯಾತಿಥಿರ್ನೃಪ ।**
**ಬಲಿರಾಜ್ಯಾಪ್ತಿಸುಖದಾ ಪಾಂಸುಲಾಽಶುಭನಾಶಿನೀ　　॥ ೨೮ ॥**

**ಇತಿ ಶ್ರೀ ಭವಿಷ್ಯಮಹಾಪುರಾಣೇ ಬ್ರಾಹ್ಮೇಪರ್ವಣಿ ಪ್ರತಿಪತ್ಕಲ್ಪ ಸಮಾಪ್ತಿರ್ನಾಮ ಅಷ್ಟಾದಶೋಽಧ್ಯಾಯಃ**



೨೭. ಅಯ್ಯಾ ಕುರುಕುಲೋದ್ಭವನೇ! ರಥೋತ್ಸವ ಕಾಲದಲ್ಲಿ ಬ್ರಾಹ್ಮಣರಿಗೆ ಯಥಾಶಕ್ತಿ ಭೋಜನಮಾಡಿಸಬೇಕು. ಕಾರ್ತೀಕದಂತೆ, ಆಶ್ವಯುಜ, ಚೈತ್ರ ಈ ಮಾಸಗಳಲ್ಲಿ ಬರುವ ಪಾಡ್ಯಗಳೂ ಶ್ರೇಷ್ಠವಾದುವು.

೨೮. ಅಯ್ಯಾ ರಾಜನೆ! ಅದರಲ್ಲೂ ಕಾರ್ತೀಕಶುಕ್ಲ ಪಾಡ್ಯದಲ್ಲಿ ಮಾಡಿದ ಸ್ನಾನ, ದಾನಗಳು ಇತರ ಮಾಸಗಳ ಪಾಡ್ಯಗಳಲ್ಲಿ ಮಾಡುವ ಸ್ನಾನ, ದಾನಗಳಿಗಿಂತ ಶತಗುಣವಾದ ಫಲವನ್ನು ಕೊಡುತ್ತವೆ. ಈ ಕಾರ್ತೀಕಶುದ್ಧ ಪಾಡ್ಯಮಿಯು ಬಲಿಚಕ್ರವರ್ತಿಗೆ ರಾಜ್ಯಲಾಭದ ಸುಖವನ್ನು ಕೊಟ್ಟದ್ದಾಗಿದೆ. ಅಲ್ಲದೆ ಇದು ವ್ಯಭಿಚಾರಿಣಿಯರ ಪಾಪವನ್ನು ಸಹ ನಾಶಮಾಡತಕ್ಕದ್ದಾಗಿದೆ.

ಇಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಪ್ರತಿಪತ್ಕಲ್ಪಸಮಾಪ್ತಿ ಎಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕೋನವಿಂಶೋಽಧ್ಯಾಯಃ

॥ ಸುಮಂತುರುವಾಚ ॥

ದ್ವಿತೀಯಾಯಾಂ ತು ರಾಜೇಂದ್ರ ಅಶ್ವಿನೌ ಸೋಮಪೀತಿನೌ ।
ಚ್ಯವನೇನ ಕೃತೇ ಯಜ್ಞೇ ಮಿಷತೋ ಮಘವಸ್ಯ ಚ ॥ ೧ ॥

॥ ಶತಾನೀಕ ಉವಾಚ ॥

ಕಥಮಿಂದ್ರಸ್ಯ ಮಿಷತಃ ಕೃತೌ ತೌ ಸೋಮಪೀತಿನೌ ।
ಚ್ಯವನೇನ ಹಿ ದೇವಾನಾಂ ಪಶ್ಯತಾಂ ತದ್ವದಸ್ವ ಮೇ ॥ ೨ ॥

ಅಹೋ ಮಹತ್ತಪಸ್ತಸ್ಯ ಚ್ಯವನಸ್ಯ ಮಹಾತ್ಮನಃ ।
ಯದಿಂದ್ರಸ್ಯ ಬಲಾದೇವ ದೇವತ್ವಂ ಪ್ರಾಪಿತಾವುಭೌ ॥ ೩ ॥

---

## ಹತ್ತೊಂಭತ್ತನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೆ! ಚ್ಯವನ ಋಷಿಯು ದ್ವಿತೀಯಾತಿಥಿಯಲ್ಲಿ ಮಾಡಿದ ಯಜ್ಞದಲ್ಲಿ ದೇವೇಂದ್ರನು ನೋಡುತ್ತಿರುವ ಹಾಗೆಯೇ ಅಶ್ವಿನೀ ದೇವತೆಗಳು ಸೋಮಪಾನ ಮಾಡಿದರು ಎಂದು ಹೇಳಿದನು.

೨. ಶತಾನೀಕರಾಜನು ಕೇಳುತ್ತಾನೆ—"ಇಂದ್ರನೂ, ದೇವತೆಗಳೂ ನೋಡುತ್ತಿದ್ದ ಹಾಗೆಯೇ ಅಶ್ವಿನೀ ದೇವತೆಗಳು ಸೋಮಪಾನಮಾಡುವುದಕ್ಕೆ ಹೇಗೆ ಅವಕಾಶವಾಯಿತು.''

೩. "ಆ ಮಹಾತ್ಮನಾದ ಚ್ಯವನನ ತಪಸ್ಸು ಆಶ್ಚರ್ಯಕರವಾದುದು. ಏಕೆಂದರೆ ಅಶ್ವಿನೀ ದೇವತೆಗಳಿಬ್ಬರಿಗೂ ಇಂದ್ರನ ಬಲದಿಂದಲೇ ದೇವತ್ವವುಂಟಾದುದು. ಹೀಗಿರು

॥ ಸುಮಂತುರುವಾಚ ॥

ಪುರಾತನಯುಗೇ ಸಂಧೌ ಪಶ್ಚಿಮೇsಥ ನರಾಧಿಪ ।
ಚ್ಯವನೋ ಯೋಗಮಾಸ್ಥಾಯ ಗಂಗಾಕೂಲೇsವಸಚ್ಚಿರಂ ॥ ೪ ॥

ತತ್ರ ಶರ್ಯಾತಿರಾಯಾತಃ ಸ್ನಾತುಮಂತಃಪುರೈಸ್ಸಹ ।
ಸ್ನಾತ್ವಾಭ್ಯರ್ಚ್ಯ ಪಿತೄನ್ ದೇವಾನ್ ಗಮನಾಯೋಪಚಕ್ರಮೆ ॥ ೫ ॥

ತತ್ರ ಮೂಢಂ ಜನಪದಮಪಶ್ಯತ್ಪಥಿ ಚೇಷ್ಟನಮ್ ।
ವಿಣ್ಮೂತ್ರೋತ್ಸರ್ಗಸಂರುದ್ಧಂ ಜ್ಯೋತಿರಾಕ್ಷಿಪ್ತನಿಷ್ಕ್ರಿಯಂ ।
ಭ್ರಮಂತಂ ತತ್ರ ತತ್ರೈವ ಸಮೀಕ್ಷ್ಯ ಸ್ವಬಲಂ ನೃಪಃ ॥ ೬ ॥

ಉವಾಚ ದುರ್ಮನಾ ರಾಜಾ ಅಮಾತ್ಯಾನ್ ಸ್ವಾನ್ ಪುರೋಗಮಾನ್ ।
ಚ್ಯವನಸ್ಯಾಶ್ರಮೋsಯಂ ಹಿ ನಾಪರಾದ್ಧಂ ಹಿ ಕೇನಚಿತ್ ॥ ೭ ॥

---

ವಾಗ ಚ್ಯವನನು ಇಂದ್ರನನ್ನು ಅಲಕ್ಷ್ಯಮಾಡಿ ಅವನೆದುರಿಗೆ ಇವರಿಗೆ ಸೋಮಪಾನ ಮಾಡಿಸಿದ್ದು ಹೇಗೆ? ಎಂಬುದನ್ನು ನನಗೆ ಹೇಳು'' ಎಂದನು.

೪. ಆಗ ಸುಮಂತುಮುನಿವರ್ಯರು ಹೇಳುತ್ತಾರೆ—ಪೂರ್ವಯುಗ ಸಂಧಿ ಕಳೆದು, ಪಶ್ಚಿಮಯುಗಸಂಧಿಯು ಪ್ರಾರಂಭವಾದಾಗ, ಚ್ಯವನನೆಂಬ ಋಷಿಯು ಗಂಗಾತೀರದಲ್ಲಿ ಬಹುಕಾಲ ಧ್ಯಾನಾಸಕ್ತನಾಗಿರುತ್ತಿದ್ದನು.

೫. ಶರ್ಯಾತಿ ಎಂಬ ರಾಜನು ತನ್ನ ಅಂತಃಪುರದ ಸ್ತ್ರೀಜನದೊಡನೆ ಸ್ನಾನ ಮಾಡಲು ಅಲ್ಲಿಗೆ ಬಂದನು. ಅಲ್ಲಿ ಸ್ನಾನಮಾಡಿ ದೇವಪಿತೃತರ್ಪಣಾದಿಗಳನ್ನು ನೆರವೇರಿಸಿ ಆ ಸ್ಥಳದಿಂದ ಹೊರಡಲನುವಾದನು.

೬. ಹೀಗಿರುವಾಗ ದಾರಿಯಲ್ಲಿ ಏನೋ ಚೇಷ್ಟೆಮಾಡುತ್ತಿದ್ದ ಬುದ್ಧಿ ಶೂನ್ಯವಾದ ಜನಗಳುಳ್ಳ ಪ್ರದೇಶವೊಂದನ್ನು ಕಂಡನು. ಅಲ್ಲಿದ್ದವರು ಮಲಮೂತ್ರ ವಿಸರ್ಜನೆಮಾಡಬೇಕೆಂಬ ಇಷ್ಟವಿದ್ದರೂ ಬೆಳಕಿರುವಾಗ ಆ ಕೆಲಸವನ್ನು ಮಾಡಲಾರದೆ ತಡೆದುಕೊಂಡು ಅಲ್ಲಲ್ಲಿ ಸುತ್ತಾಡುತ್ತಿದ್ದರು. ಮನಸ್ಸಿನಲ್ಲಿ ಏನೋ ದುಗುಡ ತೋರಿದ ಆ ರಾಜನು ಈರೀತಿ ತನ್ನ ಸೈನಿಕರ ಪರದಾಟವನ್ನು ನೋಡಿ ಮುಖಂಡರಾದ ಮಂತ್ರಿಗಳನ್ನು ಕುರಿತು ಹೇಳಿದನು.

೭. ಅಯ್ಯಾ ಮಂತ್ರಿಯೆ! ಇದು ಚ್ಯವನಋಷಿಗಳ ಆಶ್ರಮ. ಇಲ್ಲಿ ನಮ್ಮವರು ಯಾರೂ ಏನೂ ಅಕಾರ್ಯವನ್ನು ನಡೆಸಿ ಅಪರಾಧಮಾಡಿಲ್ಲವಷ್ಟೆ? ಎಂದನು.

ನ ಚೋವಾಚ ಯದಾ ಕಶ್ಚಿತ್ ತಸ್ಯ ರಾಜ್ಞಸ್ತು ಪೃಚ್ಛತಃ ।
ತದಾ ಸುತಾ ಸುಕನ್ಯಾಸ್ಯ ಪ್ರೋವಾಚ ಪಿತರಂ ವಚಃ ॥ ೮ ॥

ಮಯಾ ದೃಷ್ಟಂ ತು ಯತ್ತಾತ ಸಖಿಭಿಸ್ಸಹ ಕೌತುಕಂ ।
ತತೋವಚ್ಮಿ ನಿಬೋಧ ತ್ವಂ ಶೃಣು ತಾತ ಮಹಾದ್ಭುತಂ ॥ ೯ ॥

ಶಿಂಜಿತಾರಾವಬಹುಲಾಃ ಕಾಂಚೀನೂಪುರ ಮೇಖಲಾಃ ।
ಗಾಯಂತ್ಯೋ ವಿಲಪಂತ್ಯಶ್ಚ ಕ್ರೀಡಂತ್ಯಾತ್ಯಾತ್ರಕಾನನೇ ॥ ೧೦ ॥

ಕೋಕಿಲಧ್ವನಿಮಶ್ರೌಷಂ ವ್ಯಕ್ತಾವ್ಯಕ್ತಾಕ್ಷರಂ ಕೃಶಂ ।
ಸುಕನ್ಯೇ ಏಹಿಏಹೀತಿ ವಲ್ಮೀಕಾದ್ವಾಚಮುದ್ಗಿರನ್ ॥ ೧೧ ॥

ತತ್ರ ಗತ್ವಾದ್ಭುತಂ ತಾತ ಪಶ್ಯಾಮಃ ಕಿಲ ಪಾವಕೌ ।
ದೀಪಾವಿವಾಚಲಶಿಖೌ ಭೂಯಃ ಕನ್ಯಾ ಉವಾಚ ಹ ॥ ೧೨ ॥

---

೮. ಹೀಗೆ ರಾಜನು ಕೇಳುತ್ತಿದ್ದರೂ ಯಾರೂ ಏನೊಂದು ಮಾತನ್ನೂ ಹೇಳದೆ ಇದ್ದಾಗ ರಾಜನ ಮಗಳಾದ ಸುಕನ್ಯೆ ಎಂಬುವಳು ತನ್ನ ತಂದೆಗೆ ಈರೀತಿ ಹೇಳಿದಳು.

೯. ತಂದೆಯೆ! ಈ ವನದಲ್ಲಿ ನಾನು ಸಖಿಯರೊಡನೆ ತಿರುಗಾಡುತ್ತಿದ್ದಾಗ ಒಂದು ಆಶ್ಚರ್ಯವನ್ನು ಕಂಡೆನು.

೧೦-೧೧. ತಂದೆಯೆ! ನಾನು ಆ ಆಶ್ಚರ್ಯದ ಸಂಗತಿಯನ್ನು ಹೇಳುತ್ತೇನೆ ಕೇಳು. ಡಾಬು, ಕಾಲುಸರ ಮುಂತಾದ ಬಹು ಆಭರಣಗಳ ಧ್ವನಿಮಾಡಿಕೊಂಡು ನಮ್ಮಲ್ಲಿ ಕೆಲವರು ಹಾಡುತ್ತಲೂ, ಕೆಲವರು ಅಳುತ್ತಲೂ, ಕೆಲವರು ಕ್ರೀಡಿಸುತ್ತಲೂ ಇದ್ದರು. ಆಗ ಕೋಗಿಲೆ ಧ್ವನಿಯಂತಹ ಧ್ವನಿಯನ್ನು ಕೇಳಿದೆನು. ಆ ಧ್ವನಿಯು ಸಣ್ಣದಾಗಿದ್ದು ಕೆಲವು ಅಕ್ಷರವು ಸ್ಪಷ್ಟವಾಗಿಯೂ, ಕೆಲವು ಅಸ್ಪಷ್ಟವಾಗಿಯೂ ಕೇಳಿಸಿದುವು.

೧೨. "ಸುಕನ್ಯೇ! ಇಲ್ಲಿ ಬಾ, ಇಲ್ಲಿ ಬಾ" ಎಂದು ಹುತ್ತದೊಳಗಿನಿಂದ ಯಾರೋ ಮಾತನಾಡಿದ ಹಾಗಾಯಿತು. ಆಗ ಅದರ ಸಮೀಪಕ್ಕೆ ಹೋಗಿ ಒಂದು ಆಶ್ಚರ್ಯವನ್ನು ಕಂಡೆನು. ಎರಡು ಅಗ್ನಿಗಳು ದೀಪಗಳಂತೆ ತುದಿ ಅಲ್ಲಾಡದೆ ನಿಶ್ಚಲವಾಗಿದ್ದವು ಎಂದು ಹೇಳಿ ಆ ಸುಕನ್ಯೆ ಮತ್ತೂ ಹೇಳುತ್ತಾಳೆ.

**ಮಯಾ ಚ ಕೌತುಕಾತ್ತಾತ ಕಿಮೇತದಿತ್ಯಬುದ್ಧಿತಃ ।**
**ಸೂದಿತೌ ದರ್ಭಸೂಚ್ಯಗ್ರೈಸ್ತತ್ತೇಜಃ ಸಮುಪಾರಮತ್ ॥ ೧೩ ॥**

**ತಚ್ಛ್ರುತ್ವಾ ನೃಪತಿಸ್ತ್ರಸ್ತಃ ತೂರ್ಣಂ ತದ್ವನಮಾಗಮತ್ ।**
**ಯತ್ರಾಸ್ತೇ ಭಾರ್ಗವಃ ಕಷ್ಟಂ ವಲ್ಮೀಕಾಂತರ್ಗತೋ ಮುನಿಃ ॥ ೧೪ ॥**

**ಗತ್ವಾ ಸ ತತ್ರ ಪ್ರೋವಾಚ ಪ್ರಣಿಪತ್ಯ ದ್ವಿಜೋತ್ತಮಂ ।**
**ಅಪರಾದ್ಧಂ ಮಯಾ ದೇವ ತತ್ಕ್ಷಮಸ್ವ ನಮೋಽಸ್ತು ತೇ ॥ ೧೫ ॥**

**ಸ ತಂ ಪ್ರೋವಾಚ ನೃಪತಿಂ ಮಯಾ ಜ್ಞಾತಂ ನರಾಧಿಪ ।**
**ಸುಕನ್ಯಾಂ ಮೇ ಪ್ರಯಚ್ಛಸ್ವ ನಿವೇಶಾರ್ಥೀಹ್ಯಹಂ ನೃಪ ।**
**ಅನುಕ್ರಮನ್ ಸುಕನ್ಯಾಂ ತು ದತ್ವಾ ರಾಜನ್ ಸುಖೀ ಭವ ॥ ೧೬ ॥**

---

೧೩. "ತಂದೆಯೆ! ನಾನು ಕುತೂಹಲದಿಂದ 'ಇದೇನು ನೋಡೋಣ' ಎಂದು ಬುದ್ಧಿಹೀನೆಯಾಗಿ ಸೂಜಿಯಂತಿರುವ ದರ್ಭೆಯ ತುದಿಯಿಂದ ಆ ಪ್ರಕಾಶವನ್ನು ಚುಚ್ಚಿದೆನು. ಆಕ್ಷಣವೇ ಆ ತೇಜಸ್ಸು ಕಾಣದೇಹೋಯಿತು" ಎಂದಳು.

೧೪. ಅದನ್ನು ಕೇಳಿ ರಾಜನು ಹೆದರಿದವನಾಗಿ ಬೇಗನೆ ಆ ವನಪ್ರದೇಶಕ್ಕೆ ಬಂದನು. ಅಲ್ಲಿ ಒಂದು ಹುತ್ತದೊಳಗೆ ಭಾರ್ಗವ (ಚ್ಯವನ) ಮುನಿಯು ನೆಲಸಿದ್ದನು.

೧೫. ರಾಜನು ಅಲ್ಲಿಗೆ ಹೋಗಿ ಬ್ರಾಹ್ಮಣಶ್ರೇಷ್ಠನಾದ ಚ್ಯವನನಿಗೆ ನಮಸ್ಕರಿಸಿ "ಸ್ವಾಮಿ! ನಾನು ಅಪರಾಧಮಾಡಿದೇನೆ. ನಿನಗೆ ನಮಸ್ಕರಿಸುವೆನು. ಅದನ್ನು ಕ್ಷಮಿಸಬೇಕು ಎಂದು" ಬೇಡಿಕೊಂಡನು.

೧೬. ಆಗ ಮುನಿಯು ರಾಜನನ್ನು ಕುರಿತು, ಅಯ್ಯಾ ರಾಜನೆ! ನಿನ್ನ ಪ್ರಾರ್ಥನೆ ನನಗೆ ಗೊತ್ತಾಯಿತು. "ನಿನ್ನ ಮಗಳಾದ ಸುಕನ್ಯೆಯನ್ನು ನನಗೆ ಕೊಡು. ನಾನು ಇಲ್ಲಿ ಒಗೆತನಮಾಡಿಕೊಂಡು ಇರಬೇಕೆಂದು ಅಪೇಕ್ಷಿಸುತ್ತೇನೆ. ಎಲೈ ರಾಜನೆ! ಸುಕನ್ಯೆಯನ್ನು ನನಗೆ ಕೊಟ್ಟು ನೀನು ಸುಖಿಯಾಗು ಎಂದು" ಹೇಳಿದನು.

ಇತ್ಯುಕ್ತಃ ಪ್ರದದೌ ರಾಜಾ ಸುಕನ್ಯಾಮವಿಚಾರಯನ್ ।
ತತಸ್ಸ್ವಪುರಮಾಗಮ್ಯ ಅವಸತ್ಸುಚಿರಂ ಸುಖೀ ॥ ೧೭ ॥

ಸುಕನ್ಯಾಪಿ ಪತಿಂ ಲಬ್ಧ್ವಾ ಸುಪ್ರೀತಾರಾಧಯತ್ತದಾ ।
ರಾಜ್ಯಶ್ರಿಯಂ ಪರಿತ್ಯಜ್ಯ ವಲ್ಕಲಾಜಿನಧಾರಿಣೀ ॥ ೧೮ ॥

ಗತೇ ಬಹುತಿಥೇ ಕಾಲೇ ವಸಂತೇ ಸಮುಪಸ್ಥಿತೇ ।
ತಪೋದ್ಯೋತಿತಸರ್ವಾಂಗೀಂ ರೂಪೌದಾರ್ಯಗುಣಾನ್ವಿತಾಂ ।
ಸ್ನಾತಾಂ ಸ್ವಭಾರ್ಯಾಂ ಚ್ಯವನ ಉವಾಚ ಮಧುರಾಕ್ಷರಂ ॥ ೧೯ ॥

ಏಹ್ಯೇಹಿ ಭದ್ರೇ ಭದ್ರಂ ತೇ ಶಯನೀಯಂ ಸಮಾಶ್ರಯ ।
ಅಪತ್ಯಂ ಜನಯಸ್ವಾದ್ಯ ಕುಲದ್ವಯವಿವರ್ಧನಂ ॥ ೨೦ ॥

ಏವಮುಕ್ತ್ವಾ ತು ಸಾ ಕನ್ಯಾ ಪ್ರಾಂಜಲಿಃ ಪತಿಮಬ್ರವೀತ್ ।
ನಾರ್ಹಸ್ಯದ್ಯ ಸುಕಲ್ಯಾಣಸಂಗಮಂ ಸ್ಥಂಡಿಲೇऽಸಮೇ ॥ ೨೧ ॥

---

೧೭. ಆ ಮುನಿಯು ಹೀಗೆ ಹೇಳಿದ ಕೂಡಲೇ ರಾಜನು ಏನೂ ವಿಚಾರ ಮಾಡದೆ ಸುಕನ್ಯೆಯನ್ನು ಆ ಭಾರ್ಗವನಿಗೆ ಕೊಟ್ಟುಬಿಟ್ಟನು. ಅನಂತರ ರಾಜನು ತನ್ನ ಪಟ್ಟಣಕ್ಕೆ ಬಂದು ಬಹುಕಾಲ ಸುಖವಾಗಿದ್ದನು.

೧೮. ಆ ಸುಕನ್ಯೆಯೂ ಕೂಡ ಪತಿಲಾಭದಿಂದ ಸಂತುಷ್ಟಳಾಗಿ ರಾಜನ ಮಗಳಾದಾಗ್ಯೂ ಆ ಸಂಪತ್ತುಸೌಖ್ಯಗಳನ್ನು ಬಿಟ್ಟು, ನಾರುಮಡಿ ಕೃಷ್ಣಾಜಿನ ಇವನ್ನು ಧರಿಸಿಕೊಂಡು, ಗಂಡನನ್ನು ಸೇವೆಮಾಡಿಕೊಂಡಿದ್ದಳು.

೧೯-೨೦. ಹೀಗೆ ಬಹುಕಾಲ ಕಳೆದು ವಸಂತಋತು ಪ್ರಾಪ್ತವಾಗಲು ಪತಿ ಸೇವಾರೂಪವಾದ ತಪಸ್ಸಿನಿಂದ ತೇಜೋಮಯವಾದ ಸರ್ವಾಂಗವುಳ್ಳವಳೂ, ಸೌಂದರ್ಯ, ಔದಾರ್ಯಾದಿ ಗುಣವುಳ್ಳವಳೂ ಆಗಿ, ಋತುಸ್ನಾನಮಾಡಿದವಳಾದ ತನ್ನ ಹೆಂಡತಿಯನ್ನು ಕುರಿತು ಚ್ಯವನಮುನಿಯು ಮಧುರವಾದ ಮಾತಿನಿಂದ ಎಲೌ ಮಂಗಳಾಂಗಿಯೇ! ಬಾ, ಬಾ ನಿನಗೆ ಮಂಗಳವಾಗಲಿ. ನನ್ನ ಹಾಸಿಗೆಯನ್ನು ಆಶ್ರಯಿಸು.

೨೧. ಎರಡು ಕುಲಗಳಿಗೂ ವೃದ್ಧಿಯನ್ನುಂಟುಮಾಡುವ ಮಗನನ್ನು ಪಡೆದುಕೋ ಎಂದು ಹೇಳಲು, ಆ ಹೆಣ್ಣುಮಗಳು ಕೈಮುಗಿದುಕೊಂಡು ಗಂಡನನ್ನು ಕುರಿತು ಹೇಳುವಳು.

**ಮಮ ಪ್ರಿಯಂ ಕುರುಷ್ವಾದ್ಯ ತತೋ ಮಾಮಾಹ್ವಯಸ್ವ ಚ ।**
**ಪಿತೃಗೇಹೇ ಯಥಾತಿಷ್ಠಂ ಶಯನೀಯೇ ಸುಸಂಸ್ಕೃತೇ ॥ ೨೨ ॥**

**ಬಹುಗೈರಿಕವರ್ಣಾದ್ಯೈಃ ಶ್ವೇತಪೀತಾರುಣಾಕುಲೇ ।**
**ವಸ್ತ್ರಾಲಂಕಾರಗಂಧಾದ್ಯೈ ತಥಾ ತ್ವಮಪಿ ತತ್ಕುರು ॥ ೨೩ ॥**

**ಆತ್ಮಾನಂ ವಯಸೋಪೇತಂ ರೂಪವಂತಂ ಸುವರ್ಚಸಂ ।**
**ವಸ್ತ್ರಾಲಂಕಾರಗಂಧಾಢ್ಯಂ ಪಶ್ಯೇಯಂ ಯೇನ ಸಾದರಂ ॥ ೨೪ ॥**

**ಸುಕನ್ಯಾಯಾ ವಚಃ ಶ್ರುತ್ವಾ ಚ್ಯವನಃ ಪ್ರಾಹ ದುರ್ಮನಾಃ ।**
**ನ ಮೇಽಸ್ತಿ ವಿತ್ತಂ ಕಲ್ಯಾಣೀ ಪಿತುಸ್ತೇಽಸ್ತಿ ಯಥಾ ವನೇ ॥ ೨೫ ॥**

---

೨೨. ಎಲೈ ಮಂಗಳಕರನೆ! ಹಳ್ಳಿತಿಟ್ಟುಗಳಿಂದ ಕೂಡಿದ ಈ ನೆಲದ ಮೇಲೆ ನನ್ನ ಸಂಗಡ ಭೋಗಿಸುವುದು ಯುಕ್ತವಾಗಿ ಕಾಣುವುದಿಲ್ಲ. ಈಗ ನನಗೆ ಪ್ರಿಯವಾದ ಒಂದು ಕೆಲಸಮಾಡಿ ಅನಂತರ ನನ್ನನ್ನು ಕರೆ. ಅದೇನೆಂದರೆ:—

೨೩–೨೪. ನಾನು ನನ್ನ ತಂದೆಯ ಮನೆಯಲ್ಲಿದ್ದಾಗ ಬಿಳುವು, ಹಳದಿ, ಕೆಂಪು ಮೊದಲಾದ ಅನೇಕ ಬಣ್ಣಗಳಿಂದ ಕೂಡಿದ ವಸ್ತ್ರಗಳಿಂದ ಚೆನ್ನಾಗಿ ಅಲಂಕರಿಸಲ್ಪಟ್ಟು; ಗಂಧ, ಮಾಲ್ಯ ಮೊದಲಾದುವುಗಳಿಂದ ಕೂಡಿ ಶೋಭಿಸುವ ಹಾಸಿಗೆಯಲ್ಲಿ ನಾನು ಹೇಗೆ ಮಲಗುತ್ತಿದ್ದೆನೋ ಹಾಗೆಯೇ ನನಗೆ ಮಾಡಿಕೊಡು. ನಿನ್ನ ಈ ಶರೀರವನ್ನೂ ಪೂರ್ವವಯಸ್ಸಿನಿಂದ ಕೂಡಿ ಸೌಂದರ್ಯ, ತೇಜಸ್ಸು ಇವು ಉಳ್ಳದ್ದನ್ನಾಗಿಯೂ, ವಸ್ತ್ರಭೂಷಣ, ಗಂಧ, ಇವುಗಳಿಂದ ಕೂಡಿಕೊಂಡಿರುವಂತೆಯೂ ಮಾಡಿಕೋ. ನನಗೆ ನೋಡಲು ಹಿತವಾಗಿರುವಂತೆ ಇರಲಿ ಎಂದು ಹೇಳಿದಳು.

೨೫. ಈ ಮಾತನ್ನು ಕೇಳಿ ಚ್ಯವನನು ದುಃಖಿತನಾಗಿ ಹೇಳಿದನು—"ಎಲೌ ಗಮಂಗಳಾಂಗಿಯೇ! ರಾಜನಾದ ನಿನ್ನ ತಂದೆಗೆ ಇರುವಷ್ಟು ದ್ರವ್ಯಾನುಕೂಲವು ಕಾಡಿನಲ್ಲಿರುವ ನನಗೆ ಎಲ್ಲಿಂದ ಬರಬೇಕು. ಇಂಥ ನಾನು ನನ್ನ ದೇಹವನ್ನು ಹೇಗೆ ಅಲಂಕರಿಸಿಕೊಳ್ಳಲಿ? ಸೌಂದರ್ಯವಂತನು ತಾನೇ ಹೇಗೆ ಆಗಲಿ ಹೇಳು" ಎಂದನು.

ಸ ಕಥಂ ಭೂಷಯಾಮ್ಯದ್ಯ ಸುರೂಪಶ್ಚ ಕಥಂ ವದ ।
ಪ್ರೋವಾಚ ಸಾ ಪತಿಂ ಭೂಯಃ ಪ್ರಹಸಂತೀ ಕೃತಾಂಜಲಿಃ ।
ವಿತ್ತಂ ದದಾವ್ಯೈಲಬಿಲೋ ರೂಪಂ ವೈರೋಚನೋಽದದತ್ ॥ ೨೬ ॥

ಚ್ಯವನಃ ಪ್ರಾಹ ಭಾರ್ಯಾಂ ತಾಂ ನ ಕರಿಷ್ಯೇ ತಪೋವ್ಯಯಂ ।
ಏವಮುಕ್ತ್ವಾ ತಪಶ್ಚೋಗ್ರಂ ತತಾಪ ಸುಚಿರಂ ತದಾ ॥ ೨೭ ॥

ಅಥ ತತ್ರಾಗತೌ ವೀರೌ ಅಶ್ವಿನೌ ಕಾಲಪರ್ಯಯಾತ್ ।
ದೃಷ್ಟವಂತೌ ಸುಕನ್ಯಾಂ ತೌ ದೀಪ್ತ್ಯಾ ವೈ ದೇವತಾಮಿವ ॥ ೨೮ ॥

ಉಪಗಮ್ಯೋಚತುಸ್ತಾಂ ತೌ ಕಾ ತ್ವಂ ಸುಂದರರೂಪಿಣೀ ।
ಕಿಮರ್ಥಮಿಹ ಏಕಾ ತ್ವಂ ತಿಷ್ಠಸೇ ಕಸ್ತವಾಶ್ರಯಃ ॥ ೨೯ ॥

ಸಾ ತಾವುವಾಚ ತನ್ವಂಗೀ ಶರ್ಯಾತಿದುಹಿತಾಪ್ಯಹಂ ।
ಭರ್ತಾ ಚ ಚ್ಯವನೋ ಮಹ್ಯಂ ಕೌ ಚ ವಾಂ ಮೇ ತಥೋಚ್ಯತಾಂ ॥೩೦॥

---

೨೬. ಪುನಃ ಅವಳು ನಗುತ್ತಾ ಕೈಮುಗಿದುಕೊಂಡು ಪತಿಯನ್ನು ಕುರಿತು— ತಪಸ್ವಿಗಳಾದ ನಿಮಗೆ ಕುಬೇರನು ಐಶ್ವರ್ಯವನ್ನೂ ವಿಷ್ಣುಪುತ್ರನಾದ ಮದನನು ಸೌಂದರ್ಯವನ್ನೂ ಕೊಟ್ಟೇಕೊಡುವರು ” ಎಂದಳು.

೨೭. ಆ ಮಾತಿಗೆ ಚ್ಯವನನು ಹೆಂಡತಿಯನ್ನು ಕುರಿತು—“ ನಾನು ನನ್ನ ತಪಶ್ಶಕ್ತಿಯನ್ನು ಇದಕ್ಕಾಗಿ ವೆಚ್ಚಮಾಡಲಾರೆನು ” ಎಂದು ಹೇಳಿ ಮತ್ತೆ ಬಹುಕಾಲ ಘೋರವಾದ ತಪಸ್ಸುಮಾಡುತ್ತಿದ್ದನು.

೨೮. ಕೆಲವುಕಾಲ ಕಳೆದ ಮೇಲೆ ವೀರರಾದ ಅಶ್ವಿನೀ ದೇವತೆಗಳು ಅಲ್ಲಿಗೆ ಬಂದು ದೇವತಾಸ್ತ್ರೀಯಂತೆ ತೇಜೋಮಯಳಾಗಿದ್ದ ಆ ಸುಕನ್ಯೆಯನ್ನು ನೋಡಿದರು.

೨೯. ಆ ಅಶ್ವಿನೀ ದೇವತೆಗಳು ಸಮೀಪಿಸಿ ಬಂದು ಸುಕನ್ಯೆಯನ್ನು ಕುರಿತು— “ ಎಲೌ ಸುಂದರಿಯೆ ! ನೀನು ಯಾರು ? ಈ ಕಾಡಿನಲ್ಲಿ ಒಬ್ಬಳೇ ಏತಕ್ಕೆ ಇದ್ದೀ ? ನೀನು ಇರುವುದು ಎಲ್ಲಿ ? ” ಎಂದು ಕೇಳಿದರು.

೩೦ ಆಗ ಕೃಶವಾದ ಅವಯವವುಳ್ಳ ಆ ಸುಕನ್ಯೆಯು ಅವರನ್ನು ಕುರಿತು— ‘ ನಾನು ಶರ್ಯಾತಿ ರಾಜನ ಮಗಳು. ಚ್ಯವನಮಹರ್ಷಿಯು ನನ್ನ ಪತಿ. ನೀವು ಯಾರು ಎಂಬುದನ್ನು ನನಗೆ ತಿಳಿಸಿ ” ಎಂದಳು.

ಊಚತುಶ್ಚಾಶ್ವಿನೌದೇವಾವಾವಾಂ ವಿದ್ಧಿ ನೃಪಾತ್ಮಜೇ ।
ಕಿಂ ಕರಿಷ್ಯಸಿ ತೇನ ತ್ವಂ ಜೀರ್ಣೇನ ಚ ಕೃಶೇನ ಚ ।
ಆವಯೋರ್ವೃಣು ಭರ್ತಾರಂ ಏಕಮೇವ ಯದಿಚ್ಛಸಿ ॥ ೩೧ ॥

ಸಾತ್ವಬ್ರವೀಚ್ಚ ಮಾಮೈವಂ ವಕ್ತುಮರ್ಹೌ ದಿವೌಕಸೌ ।
ಭರ್ತಾರಮನುರಕ್ತಾಂಗೀ ಯಥಾ ಸ್ವಾಹಾವಿಭಾವಸೋಃ ॥ ೩೨ ॥

॥ ಅಶ್ವಿನಾವೂಚತುಃ ॥

ಆಯಾತು ಚ ವಿಶತ್ವದ್ಯ ಚ್ಯವನೋ ವೈಷ್ಣವೀ ಜಲಂ ।
ತತೋ ನೌಮಧ್ಯಗಂ ಹ್ಯೇಕಂ ವೃಣೀಷ್ವಾನ್ಯಂ ಯಮಿಚ್ಛಸಿ ॥ ೩೩ ॥

ತಾವದ್ಭೂತಾಂ ಸುಕನ್ಯಾಂ ತು ಗತ್ವಾ ಪೃಚ್ಛಸ್ವಕಂ ಪತಿಂ ।
ತಂ ಚ ಪೃಷ್ಟ್ವಾ ಪುನಶ್ಚಾತ್ರಾಗಚ್ಛ ನೌ ಸನ್ನಿಧೌ ಪುನಃ ॥ ೩೪ ॥

ಆವಾಮತ್ರೈವ ತಿಷ್ಠಾವೋ ಯಾವದಾಗಮನಂ ತವ ।
ಸಾ ಗತ್ವಾ ಪ್ರಾಹ ಭರ್ತಾರಂ ಅಶ್ವಿನಾವೇವಮೂಚತುಃ ॥ ೩೫ ॥

---

೩೧. ಆಗ ಅವರು "ಎಲೌ ರಾಜಪುತ್ರೀ! ನಾವು ಅಶ್ವಿನೀ ದೇವತೆಗಳೆಂದು ತಿಳಿ. ಮುದುಕನೂ ಕೃಶಾಂಗನೂ ಆದ ಈ ಪತಿಯನ್ನು ಕಟ್ಟಿಕೊಂಡು ಏನು ಮಾಡುವೆ? ನೀನು ಇಷ್ಟಪಡುವುದಾದರೆ ನಮ್ಮಿಬ್ಬರಲ್ಲಿ ಯಾವನಾದರೊಬ್ಬನನ್ನು ಪತಿಯನ್ನಾಗಿ ವರಿಸು" ಎಂದರು.

೩೨. ಆ ಮಾತನ್ನು ಕೇಳಿದೊಡನೆ ಅವಳು "ದೇವತೆಗಳಾದ ನೀವು ಇಂಥ ಮಾತಾಡಬಾರದು. ಹಾಗೆ ಹೇಳುವುದು ನಿಮಗೆ ಯುಕ್ತವಾದ್ದಲ್ಲ. ಸ್ವಾಹಾದೇವಿಯು ತನ್ನ ಪತಿಯಾದ ಅಗ್ನಿಯಲ್ಲಿ ಅನುರಕ್ತೆಯಾಗಿರುವಂತೆ ನಾನೂ ಇರುವೆನು" ಎಂದಳು.

೩೩-೩೫. ಆಗ ಅಶ್ವಿನೀ ದೇವತೆಗಳು ಹೇಳುತ್ತಾರೆ– "ನಿನ್ನ ಪತಿಯಾದ ಚ್ಯವನಋಷಿಯು ಈಗ ನಮ್ಮೊಡನೆ ಬರಲಿ. ವಿಷ್ಣುಪಾದೋದ್ಭವೆಯೆನಿಸಿದ ಗಂಗೆಯೊಳಗೆ ಮುಳುಗಲಿ. ಮುಳುಗಿ ಎದ್ದಮೇಲೆ ನಮ್ಮಂತೆ ಅವನೂ ಇರುವನು. ಆಗ ನಿನ್ನ ಕಣ್ಣಿಗೆ ಯಾವನು ಬೇಕಾಗುವನೋ ಅವನನ್ನು ವರಿಸು" ಎಂದರು. ಮತ್ತೆ ಅವರು ಸುಕನ್ಯೆಯನ್ನು ಕುರಿತು—"ನೀನು ಹೋಗಿ ನಿನ್ನ ಪತಿಯನ್ನು ಕೇಳಿಕೊಂಡು ಬಂದು ಹೇಳು; ನೀನು ಬರುವವರೆಗೂ ನಾವಿಬ್ಬರೂ ಇಲ್ಲಿಯೇ ಇರುತ್ತೇವೆ" ಎಂದು ಹೇಳಿದರು.

ರೂಪವಂತಂ ಚ ಭರ್ತಾರಂ ಕರಿಷ್ಯಾವೋ ಯದಿಚ್ಛಸಿ ।
ಅಥ ಮಧ್ಯಗತಂ ಹ್ಯೇಕಂ ಭರ್ತೃತ್ವೇನ ವರಿಷ್ಯಸಿ ॥ ೩೬ ॥

ಏವಮಸ್ತ್ವಿತಿ ತಾಂ ಪ್ರಾಹ ಸ ಭಾರ್ಯಾಂ ಚ್ಯವನಸ್ತ್ವರನ್ ।
ಸಾ ತಂ ಗೃಹ್ಯ ಜಗಾಮಾಶು ಯತ್ರ ತೌ ಭಿಷಜಾವುಭೌ ॥ ೩೭ ॥

ಸ ತಾವುವಾಚ ಚ್ಯವನೋ ಯಥೋಕ್ತಂ ಭವತೋರ್ವಚಃ ।
ಕುರುತಂ ಹ್ಯಶ್ವಿನೌ ಕ್ಷಿಪ್ರಂ ಸುಕನ್ಯಾ ಚೇಪ್ಸಿತಂ ವೃಣೋತ್ ॥ ೩೮ ॥

ತೌ ತಂ ಸಂಗೃಹ್ಯ ಗಂಗಾಯಾಂ ಪ್ರವಿಷ್ಟೌ ಮುನಿನಾ ಸಹ ।
ಮುಹೂರ್ತಾತ್ತು ಸಮುತ್ತಿಷ್ಠನ್ ರೂಪತಶ್ಚ ಶ್ರಿಯಾವೃತಾಃ ॥ ೩೯ ॥

---

೩೬. ಆಗ ಅವಳು ಗಂಡನ ಸಮೀಪಕ್ಕೆ ಹೋಗಿ ಅಶ್ವಿನೀ ದೇವತೆಗಳಾಡಿದ ಮಾತನ್ನು ಎಂದರೆ " ನಿನ್ನ ಗಂಡನನ್ನು ನಮ್ಮಂತೆ ರೂಪವಂತನನ್ನಾಗಿ ಮಾಡುತ್ತೇವೆ. ಆಗ ನಮ್ಮ ಮೂರು ಜನಗಳಲ್ಲಿ ನಿನಗೆ ಬೇಕಾದವನನ್ನು ವರಿಸು ಎಂದು ನನಗೆ ಅಶ್ವಿನೀ ದೇವತೆಗಳು ಹೇಳಿದರು " ಎಂಬದಾಗಿ ತಿಳಿಸಿದಳು.

೩೭. ಇದನ್ನು ಕೇಳಿ ಚ್ಯವನಋಷಿಯು ತ್ವರೆಯಿಂದ " ಹಾಗೆಯೇ ಆಗಲಿ " ಎಂದು ಸುಕನ್ಯೆಗೆ ಹೇಳಿದನು. ಅವಳು ಚ್ಯವನನನ್ನು ಕರೆದುಕೊಂಡು ಆ ದೇವ ವೈದ್ಯರಿದ್ದ ಸ್ಥಳಕ್ಕೆ ಬೇಗ ಹೋದಳು.

೩೮. ಆಗ ಚ್ಯವನನು ಅಶ್ವಿನೀ ದೇವತೆಗಳನ್ನು ಕುರಿತು—" ಎಲೈ ಅಶ್ವಿನೀ ದೇವತೆಗಳೇ ! ನೀವು ಹೇಳಿದಂತೆಯೇ ಆಗಲಿ. ಹಾಗೆಯೇ ಮಾಡಿ. ಈ ಸುಕನ್ಯೆಯು ಆ ಮೂವರಲ್ಲಿ ತನಗೆ ಬೇಕಾದ ವರನನ್ನು ಜಾಗ್ರತೆಯಾಗಿ ವರಿಸಲಿ" ಎಂದು ಹೇಳಿದನು.

೩೯. ಆಗ ಆ ಅಶ್ವಿನೀ ದೇವತೆಗಳಿಬ್ಬರೂ ಚ್ಯವನಋಷಿಯನ್ನು ಕರೆದುಕೊಂಡು ಗಂಗಾನದಿಯಲ್ಲಿ ಪ್ರವೇಶಿಸಿದರು. ಒಂದುಕ್ಷಣದ ಮೇಲೆ ಪ್ರವಾಹದಿಂದ ಮೇಲಕ್ಕೆ ಎದ್ದ ಆ ಮೂವರೂ ಆಕಾರದಲ್ಲೂ, ತೇಜಸ್ಸಿನಲ್ಲೂ ಒಂದೇ ಸಮನಾಗಿದ್ದರು.

**ಶೋಭಂತೇಸ್ಮ ಮಹಾಬಾಹೋ ಕಮುದ್ಭಿದ್ಯ ತಪೋಯುತಾಃ ।**
**ಕಲ್ಪಾದೌ ಕಲಶೇ ಯದ್ವತ್ ಕಂಜಾಕ್ಷ ವ್ಯೋಮ ವೇಧಸಃ ।**
**ಉದಕಾದುತ್ಥಿತಾಸ್ತಸ್ಮಾತ್ ಸರ್ವೇ ತೇ ಸಮರೂಪಕಾಃ** ॥ ೪೦ ॥

**ಸುಕನ್ಯಾ ತು ತತೋ ದೃಷ್ಟ್ವಾ ಭರ್ತಾರಂ ದೇವರೂಪಿಣಂ ।**
**ಹರ್ಷೇಣ ಮಹತಾವಿಷ್ಟಾ ನ ಚ ತಂ ವೇದ ಭಾರತ** ॥ ೪೧ ॥

**ಸಮಕಾಯಾಃ ಸಮವಯಃ ಸಮರೂಪಾಃ ಸಮಶ್ರಿಯಃ ।**
**ವಸ್ತ್ರಾಲಂಕಾರಸದೃಶಾನ್ ದೃಷ್ಟ್ವಾ ಚಿಂತಾಂ ಗತಾ ಚಿರಮ್** ॥ ೪೨ ॥

**ಸಾ ಚಿಂತಯಿತ್ವಾ ಸುಚಿರಂ ವೈದ್ಯದೇವಾವುವಾಚ ಹ ।**
**ಬೀಭತ್ಸೋಽಪಿ ಮಯಾ ಭರ್ತಾ ಪರಿತ್ಯಕ್ತೋ ನ ಕರ್ಹಿಚಿತ್** ॥ ೪೩ ॥

---

೪೦. ಎಲೈ ಕಮಲದಂತೆ ಕಣ್ಣುಳ್ಳ ಮಹಾಬಾಹುವೇ! ತಪಶ್ಶಕ್ತಿಯಿಂದ ಕೂಡಿದವರಾಗಿ ಜಲವನ್ನು ಭೇದಿಸಿಕೊಂಡು ಮೇಲಕ್ಕೆ ಎದ್ದ ಅವರು ಕಲ್ಪದ ಪ್ರಾರಂಭದಲ್ಲಿ ಬ್ರಹ್ಮನ ಕಲಶದಲ್ಲಿ ಮೊದಲು ಸೃಷ್ಟಿಯಾದ ಆಕಾಶದಂತೆ ಶೋಭಿಸಿದರು. ಅಯ್ಯಾ ಭರತಕುಲೋತ್ಪನ್ನನೇ! ನೀರಿನಿಂದ ಮೇಲಕ್ಕೆ ಎದ್ದಾಗ ಅವರೆಲ್ಲರೂ ಒಂದೇ ಸಮನಾದ ರೂಪವುಳ್ಳವರಾಗಿದ್ದರು.

೪೧. ಆಗ ಸುಕನ್ಯೆಯು ತನ್ನ ಗಂಡನೂ ದೇವತೆಯಂತೆ ರೂಪವುಳ್ಳವನಾದುದನ್ನು ನೋಡಿ ತುಂಬ ಸಂತೋಷಯುಕ್ತಳಾದಳು. ಆದರೆ ಮೊದಲಿನ ರೂಪಕ್ಕೂ ಈಗಿನ ರೂಪಕ್ಕೂ ವ್ಯತ್ಯಾಸವಿದ್ದುದರಿಂದ ಆ ಸುಕನ್ಯೆಗೆ ಈ ಮೂವರಲ್ಲಿ ತನ್ನ ಗಂಡನು ಯಾರೆಂಬುದು ಗುರ್ತು ಸಿಕ್ಕಲಿಲ್ಲ.

೪೨. ದೇಹಪುಷ್ಟಿ, ವಯಸ್ಸು, ಸೌಂದರ್ಯ, ದೇಹಕಾಂತಿ ಇವುಗಳಲ್ಲಿ ಮೂವರೂ ಸಮನಾಗಿಯೇ ಇದ್ದರು. ಅವರು ಉಟ್ಟಿದ್ದ ವಸ್ತ್ರಗಳು, ಧರಿಸಿದ್ದ ಒಡವೆಗಳು, ಒಂದೇ ಪ್ರಕಾರವಾಗಿದ್ದುದರಿಂದ ಅವರಲ್ಲಿ ತನ್ನ ಪತಿ ಯಾರೆಂದು ಗುರ್ತಿಸಲಾರದೆ ಬಹು ಚಿಂತೆಯಿಂದ ಕೂಡಿದವಳಾಗಿದ್ದಳು.

೪೩. ಆ ಸುಕನ್ಯೆಯು ಹೀಗೆ ಬಹುಹೊತ್ತು ಆಲೋಚಿಸುತ್ತಿದ್ದು ದೇವವೈದ್ಯರಾದ ಅಶ್ವಿನೀ ದೇವತೆಗಳನ್ನು ಕುರಿತು—ಸ್ವಾಮಿ! ನೋಡುವುದಕ್ಕೆ ಅಸಹ್ಯನಾಗಿದ್ದರೂ ನಾನು ನನ್ನ ಗಂಡನನ್ನು ಯಾವಾಗಲೂ ಬಿಟ್ಟಿರಲಿಲ್ಲ.

ಭವದ್ಭಿರಾತ್ಮಸದೃಶಂ ಕಥಂ ತ್ಯಕ್ತ್ವಾ ವೃಣೇ ಪರಮ್ ।
ತಸ್ಮಾತ್ತ್ವಮೇವ ಭರ್ತಾರಂ ಪ್ರಯಚ್ಛಧ್ವಂ ದಿವೌಕಸಃ ॥ ೪೪ ॥

ತಯಾ ಸಬಹುಮಾನಂ ತೌ ಪ್ರಾಂಜಲ್ಯಾ ಪ್ರಾರ್ಥಿತೌ ತದಾ ।
ದೇವಚಿಹ್ನಾನಿ ಸ್ವಾನ್ಯೇವ ಧಾರಯಂತೌ ಸುಪೂಜಿತೌ ॥ ೪೫ ॥

ಸುಕನ್ಯಾ ನಿಪುಣಂ ತೌ ತು ಸುನಿರೀಕ್ಷ್ಯ ಚ ವಿಹ್ವಲಾ ।
ನ ರಜೋ ನ ನಿಮೇಷೋ ವೈ ನ ಸ್ಪೃಶೇತೆ ಧರಾಂ ಪದೇ ॥ ೪೬ ॥

ಅಯಂ ಚ ಸರಜಾ ಮ್ಲಾನೋ ಭೂಮಿಮಾಶ್ರಿತ್ಯ ತಿಷ್ಠತಿ ।
ನಿಮೇಷಂ ಚೈವ ತಸ್ಯೈವಂ ಜ್ಞಾತ್ವಾ ವೈ ಚ್ಯವನೋ ವೃತಃ ॥ ೪೭ ॥

ಚ್ಯವನೇ ವೃತೇ ಸುಕನ್ಯಯಾ ಪುಷ್ಪವೃಷ್ಟಿಃ ಪಪಾತಹ ।
ದೇವದುಂದುಭಯಶ್ಚೈವ ಪ್ರಣಾದ್ಯಂತ ಅನೇಕಶಃ ॥ ೪೮ ॥

---

೪೪. ಈಗ ನಿಮ್ಮಂತೆ ಸುಂದರ ರೂಪವನ್ನು ಪಡೆದಿರುವ ಅಂಥ ಪತಿಯನ್ನು ಬಿಟ್ಟು ಬೇರೆಯವರನ್ನು ಹೇಗೆ ವರಿಸಲಿ. ಆದ್ದರಿಂದ ಎಲೈ ದೇವತೆಗಳಿರಾ! ಕೃಪೆ ಮಾಡಿ ನನ್ನ ಗಂಡನನ್ನೇ ನನಗೆ ಕೊಡಿರಿ.

೪೫. ಹೀಗೆ ಬಹುಮಾನಪುರಸ್ಸರವಾಗಿ ಅವಳಿಂದ ಪ್ರಾರ್ಥಿತರಾದ ಅಶ್ವಿನೀ ದೇವತೆಗಳು ತಮ್ಮ ದೇವಚಿಹ್ನೆಗಳನ್ನು ಪ್ರಕಟವಾಗಿ ಕಾಣಿಸಿ ಚೆನ್ನಾಗಿ ತೋರಿದರು.

೪೬. ಹೀಗಾದ ಮೇಲೆ ಸುಕನ್ಯೆಯು ನಿಪುಣತೆಯಿಂದ ಅವರನ್ನು ನೋಡಿ ಸ್ವಲ್ಪ ಗಾಬರಿಗೊಂಡವಳಾಗಿ ಇದೇನು! ಇವರಿಬ್ಬರ ಶರೀರದಲ್ಲಿ ಸ್ವಲ್ಪವೂ ಧೂಳಿಲ್ಲ. ಅದಲ್ಲದೆ ಕಣ್ಣುರೆಪ್ಪೆಯನ್ನೂ ಹೊಡೆಯುವುದಿಲ್ಲ. ಎರಡು ಕಾಲುಗಳೂ ಭೂಮಿಯನ್ನೂ ಸೋಂಕಿಲ್ಲ. ಧರಿಸಿದ ಪುಷ್ಪಮಾಲೆಯೂ ಬಾಡಿಲ್ಲ.

೪೭. ಈ ಮತ್ತೊಬ್ಬನಿಗಾದರೋ ಧೂಳು ಕವಿದಿದೆ. ಹೂಮಾಲೆ ಬಾಡಿದೆ. ಭೂಮಿಯನ್ನು ಪಾದವು ಸೋಂಕಿದೆ. ಕಣ್ಣುರೆಪ್ಪೆಗಳು ಆಡುತ್ತಿವೆ. ಈ ಕಾರಣಗಳಿಂದ ಇವನೇ ತನ್ನ ಪತಿಯಾದ ಚ್ಯವನನೆಂದು ತಿಳಿದು ಅವನನ್ನೇ ವರಿಸಿದಳು.

೪೮. ಹೀಗೆ ಸುಕನ್ಯೆಯು ಚ್ಯವನನನ್ನು ವರಿಸಿದಾಗ ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಬಹು ಪ್ರಕಾರವಾಗಿ ಮೊಳಗಿದವು.

**ತತಸ್ತು ಚ್ಯವನಸ್ತುಷ್ಟೋ ದಿವ್ಯರೂಪಧರಸ್ತದಾ ।**
**ಉವಾಚ ತೌ ತು ಸುಪ್ರೀತೋ ಅಶ್ವಿನೌ ಕಿಂ ಕರೋಮಿ ವಾಂ ॥ ೪೯ ॥**

**ಭಾರ್ಯಾ ದತ್ತಾ ಕೃತಂ ರೂಪಂ ದೇವಾನಾಮಪಿ ದುರ್ಲಭಂ ।**
**ಉಪಕಾರಂ ವರಿಷ್ಠಂ ಯೋ ನ ಕರೋತ್ಯುಪಕಾರಿಣಃ ॥ ೫೦ ॥**

**ಏಕವಿಂಶತ್ಸಗಚ್ಛೇಚ್ಚ ನರಕಾಣಿ ಕ್ರಮೇಣ ವೈ ।**
**ತಸ್ಮಾದಹಂ ವರಿಷ್ಠಂ ವೈ ಕರಿಷ್ಯೇಹಮಮಾನುಷಂ ॥ ೫೧ ॥**

**ಉಪಕಾರಂ ಭವದ್ಭ್ಯಾಂ ತು ಪ್ರೀತಃ ಕುರ್ಯಾಂ ಸುನಿಶ್ಚಿತಂ ।**
**ಯಜ್ಞಭಾಗಫಲಂ ದದ್ಯಾಂ ಯದ್ದೇವೇಷ್ವಪಿ ದುರ್ಲಭಂ ॥ ೫೨ ॥**

**ಏವಮುಕ್ತ್ವಾ ತು ದೇವೇಶೌ ವಿಸಸರ್ಜ ಮಹಾಮುನಿಃ ।**
**ಆಜಗಾಮಾಶ್ರಮಂ ಪುಣ್ಯಂ ಸಹಭಾರ್ಯೋ ಮುದಾನ್ವಿತಃ ॥ ೫೩ ॥**

---

೪೯. ದೇವಯೋಗ್ಯವಾದ ರೂಪವನ್ನು ಪಡೆದ ಚ್ಯವನನು ಆಗ ಸಂತುಷ್ಟನಾಗಿ, ಸ್ವಾಮಿ ಅಶ್ವಿನೀ ದೇವತೆಗಳೇ! ನಿಮ್ಮ ಉಪಕಾರಕ್ಕೆ ಪ್ರತಿಯಾಗಿ ನಾನು ನಿಮಗೆ ಏನನ್ನು ತಾನೇ ಮಾಡಿಯೇನು ?

೫೦–೫೨. ನನ್ನ ಹೆಂಡತಿಯನ್ನು ನನಗೆ ಕೊಟ್ಟಿರಿ. ದೇವತೆಗಳಿಗೂ ದುರ್ಲಭವಾದ ಸುಂದರರೂಪವನ್ನುಂಟುಮಾಡಿದಿರಿ. ಉಪಕಾರಮಾಡಿದವನಿಗೆ ಶ್ರೇಷ್ಠವಾದ ಪ್ರತ್ಯುಪಕಾರ ಮಾಡದಿರುವವನು ಕ್ರಮವಾಗಿ ಇಪ್ಪತ್ತೊಂದು ನರಕಗಳನ್ನು ಒಂದಾಗುತ್ತಲೊಂದರಂತೆ ಅನುಭವಿಸಬೇಕಾಗುವುದು. ಆದುದರಿಂದ ಮನುಷ್ಯನು ಮಾಡಲು ಸಾಧ್ಯವಿಲ್ಲದಂತಹ ಶ್ರೇಷ್ಠವಾದ ಉಪಕಾರವೊಂದನ್ನು ನಾನು ಮಾಡುತ್ತೇನೆ. ನನಗೆ ಸಂತೋಷವುಂಟಾಗಿರುವುದರಿಂದ ನಿಮ್ಮಿಬ್ಬರಿಗೂ ನಿಶ್ಚಯವಾಗಿಯೂ ಉಪಕಾರಮಾಡುತ್ತೇನೆ. ದೇವತೆಗಳಿಗೂ ದುರ್ಲಭವಾದ ಯಜ್ಞಭಾಗದ ಫಲವನ್ನು ನಿಮಗೆ ಕೊಡುತ್ತೇನೆ. ಎಂದು ಹೇಳಿ ಚ್ಯವನಮಹರ್ಷಿಯು ಆ ದೇವತೆಗಳನ್ನು ಕಳುಹಿಸಿಕೊಟ್ಟನು.

೫೩–೫೬. ಅನಂತರ ಆ ಮುನಿಯು ಸಂತೋಷಭರಿತನಾಗಿ ಹೆಂಡತಿಯೊಡನೆ ಪುಣ್ಯಕರವಾದ ತನ್ನ ಆಶ್ರಮವನ್ನು ಸೇರಿದನು. ಅನಂತರ ಕೆಲವು ದಿನಗಳ ಮೇಲೆ ಜಿತೇಂದ್ರಿಯನಾದ ಶರ್ಯಾತಿರಾಜನು ತನ್ನ ಅಳಿಯನಾದ ಚ್ಯವನನು ದೇವತಾಸದೃಶವಾದ ರೂಪವುಳ್ಳವನಾಗಿದ್ದಾನೆ ಎಂಬುದನ್ನು ಕೇಳಿ ಸಂತೋಷದಿಂದ ಆತನನ್ನು

**ಅಥ ಶುಶ್ರಾವ ಶರ್ಯಾತಿಃ ಚ್ಯವನಂ ದೇವರೂಪಿಣಂ ।**
**ಜಗಾಮ ಚ ಮಹಾತೇಜಾ ದ್ರಷ್ಟುಂ ಮುನಿವರಂ ವಶೀ ॥ ೫೪ ॥**

**ತಂ ದೃಷ್ಟ್ವಾ ಪ್ರಣಿಪತ್ಯಾದೌ ಪ್ರತಿಪೂಜ್ಯ ಯಥಾರ್ಹತಃ ।**
**ಸುಕನ್ಯಾಂ ತು ತತೋ ದೃಷ್ಟ್ವಾ ಪ್ರಣಿಪತ್ಯಾಭಿನಂದ್ಯ ಚ ॥ ೫೫ ॥**

**ಸಸ್ವಜೇ ಮೂರ್ಧ್ನಿ ಆಘ್ರಾಯ ತತೋತ್ಸಂಗಂ ಸಮಾನಯತ್ ।**
**ಸುಕನ್ಯಾ ಸಸ್ವಜೇ ಪ್ರೇಮ್ಣಾ ಆನಂದಾಶ್ರುಪರಿಪ್ಲುತಾ ।**
**ಸಂಸ್ಥಾಪ್ಯ ತಾಂ ಮುದಾ ಯುಕ್ತೋ ನೃಪತಿಸ್ಸಹ ಭಾರ್ಯಯಾ ॥ ೫೬ ॥**

**ಭೂಯೋಽಬ್ರವೀತ್ಸುಸಂತುಷ್ಟಂ ಚ್ಯವನಸ್ತಂ ನರಾಧಿಪಂ ।**
**ಸಂಭಾರಂ ಕುರು ಯಜ್ಞಾರ್ಥಂ ಯಾಜಯಿಷ್ಯೇ ನರಾಧಿಪ ॥ ೫೭ ॥**

**ಏವಮುಕ್ತಸ್ಸ ನೃಪತಿಃ ಪ್ರಣಿಪತ್ಯ ಮಹಾಮುನಿಂ ।**
**ಜಗಾಮ ಸ್ವಪುರಂ ಹೃಷ್ಟೋ ಯಜ್ಞಾರ್ಥಂ ಯತ್ನಮಾಚರತ್ ॥ ೫೮ ॥**

**ಸ ಪ್ರೇಷ್ಯಾನ್ ಪ್ರೇಷಯನ್ ಕ್ಷಿಪ್ರಂ ಯಜ್ಞಾರ್ಥೇ ದ್ರವ್ಯಮಾಹರತ್ ।**
**ಮಂತ್ರೀ ಪುರೋಹಿತಾಚಾರ್ಯಾನ್ ಆನಯಾಮಾಸ ಸತ್ವರಮ್ ॥ ೫೯ ॥**

---

ನೋಡುವುದಕ್ಕಾಗಿ ತನ್ನ ಹೆಂಡತಿಯೊಡನೆ ಅವನ ಆಶ್ರಮಕ್ಕೆ ಬಂದನು. ಅವನನ್ನು ನೋಡಿ ಮೊದಲು ನಮಸ್ಕರಿಸಿ ಯೋಗ್ಯತಾನುಸಾರವಾಗಿ ಪೂಜೆಮಾಡಿ, ಆಮೇಲೆ ಸುಕನ್ಯೆಯನ್ನೂ ನೋಡಿ ನಮಸ್ಕರಿಸಿ ಹೊಗಳಿ ಅವಳ ಶಿರಸ್ಸನ್ನಾಘ್ರಾಣಿಸಿ ಆಲಿಂಗನ ಮಾಡಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಸುಕನ್ಯೆಯೂ ಆನಂದಬಾಷ್ಪದಿಂದ ಕೂಡಿದವಳಾಗಿ ಪ್ರೀತಿಯಿಂದ ತಂದೆಯನ್ನು ಆಲಿಂಗಿಸಿಕೊಂಡಳು. ಶರ್ಯಾತಿ ರಾಜನೂ ಹೆಂಡತಿಯೊಡನೆ ಸುಕನ್ಯೆಯ ಆಶ್ರಮದಲ್ಲೇ ಸಂತೋಷದಿಂದ ಇರುತ್ತಿದ್ದನು.

೫೭. ಚ್ಯವನನು ಆ ರಾಜನನ್ನು ಕುರಿತು—"ಎಲೈ ರಾಜನೇ! ಯಜ್ಞಕ್ಕೆ ಬೇಕಾದ ಸಾಮಾನುಗಳನ್ನು ಸಿದ್ಧಪಡಿಸು. ನಿನ್ನಿಂದ ಯಜ್ಞಮಾಡಿಸುತ್ತೇನೆ" ಎಂದು ಹೇಳಿದನು.

೫೮. ಈ ಮಾತನ್ನು ಕೇಳಿ ರಾಜನು ಆ ಮಹರ್ಷಿಗೆ ನಮಸ್ಕರಿಸಿ ಸಂತೋಷ ದಿಂದ ತನ್ನ ಪಟ್ಟಣಕ್ಕೆ ಬಂದು ಯಜ್ಞಕ್ಕೋಸ್ಕರವಾಗಿ ಪ್ರಯತ್ನಮಾಡಿದನು.

೫೯. ಯಾರ್ಯಾರಿಗೆ ಎಲ್ಲೆಲ್ಲಿಗೆ ಹೇಳಿಕಳುಹಿಸಬೇಕೋ ಅಲ್ಲಿಗೆಲ್ಲಾ ಹೇಳಿ ಕಳು ಹಿಸಿ ಯಜ್ಞಕ್ಕೋಸ್ಕರ ಜಾಗ್ರತೆಯಾಗಿ ದ್ರವ್ಯವನ್ನು ತರಿಸಿದನು. ಅವನ ಮಂತ್ರಿ ಪುರೋಹಿತರು ಆಚಾರ್ಯರು ಇವರುಗಳನ್ನೆಲ್ಲಾ ಜಾಗ್ರತೆಯಾಗಿ ಬರಮಾಡಿದನು.

**ಸಮಾನೀತೇಷು ಸರ್ವೇಷು ತೇಷು ದ್ರವ್ಯೇಷು ಭಾರತ ।**
**ಆಜಗಾಮ ವಿಶುದ್ಧಾತ್ಮಾ ಚ್ಯವನಃ ಸಹಭಾರ್ಯಯಾ ॥ ೬೦ ॥**

**ಸಂಪೂಜಿತಶ್ಚ ಶುಶ್ರಾವ ಮಹಾಂತಂ ತ್ಯಾಗಮೌಜಸಂ ।**
**ಅನ್ಯೈಶ್ಚ ಬಹುಭಿಸ್ಸಾರ್ಧಂ ಅತ್ರ್ಯಂಗಿರಸಭಾರ್ಗವೈಃ ॥ ೬೧ ॥**

**ಪ್ರವರ್ತತೇ ಮಹಾಯಜ್ಞೇ ಯಜಮಾನೇ ನೃಪೋತ್ತಮೇ ।**
**ಋತ್ವಿಕ್ಸ್ವ ಕರ್ಮನಿರತೇ ಹೂಯಮಾನೇ ಹುತಾಶನೇ ।**
**ಆಹೂತಾಃ ಸ್ವಾಗತಾಃ ಸರ್ವೇ ಭಾಗಾರ್ಥಂ ತ್ರಿದಿವಾಲಯಾಃ ॥ ೬೨ ॥**

**ಯಜ್ಞಭಾಗೇ ಪ್ರವೃತ್ತೇ ತು ಶಾಸ್ತ್ರೋಕ್ತೇನ ವಿಧಾನತಃ ।**
**ಆಗತಾವಶ್ವಿನೌ ತತ್ರ ಆಹೂತೋ ಚ್ಯವನೇನ ತು ॥ ೬೩ ॥**

**ಆಹ್ವಾನೇ ಕ್ರಿಯಮಾಣೇ ತು ಅಶ್ವಿಭ್ಯಾಂ ತು ತದಾ ನೃಪ ।**
**ಪ್ರೋವಾಚೇಂದ್ರೋಽಥ ಚ್ಯವನಂ ನೈತೌ ಭಾಗಾನ್ವಿತೌ ಕುರು ।**
**ದೇವಾನಾಂ ಭಿಷಜಾವೇತೌ ನ ಭಾಗಾರ್ಹೌ ನ ದೈವತೌ ॥ ೬೪ ॥**

---

೬೦. ಅಯ್ಯಾ ಭರತಕುಲೋತ್ಪನ್ನನೇ! ಹೀಗೆ ಪದಾರ್ಥಗಳೆಲ್ಲವೂ ಬಂದ ಮೇಲೆ ಚ್ಯವನನೂ ಹೆಂಡತಿಯೊಡನೆ ಶರ್ಯಾತಿಯ ಪಟ್ಟಣಕ್ಕೆ ಬಂದನು

೬೧. ಅಲ್ಲಿ ಚ್ಯವನನು ಸತ್ಕೃತನಾಗಿ ಅತ್ರಿ, ಅಂಗಿರಸ್ಸು, ಭಾರ್ಗವ ಮೊದಲಾದ ಹಲವರೊಡನೆ ಮಾತಾಡುತ್ತಾ ಆ ರಾಜನ ಮಹಾತ್ಯಾಗಶೀಲತೆಯನ್ನು ಅರಿತು ಕೊಂಡನು.

೬೨. ರಾಜಶ್ರೇಷ್ಠನಾದ ಶರ್ಯಾತಿಯೇ ಯಜ್ಞದೀಕ್ಷಿತನಾದನು. ಈರೀತಿ ಯಜ್ಞವು ನಡೆಯುತ್ತಿರುವಾಗ ಋತ್ವಿಕ್ಕುಗಳೆಲ್ಲಾ ತಮ್ಮ ತಮ್ಮ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಅಗ್ನಿಯಲ್ಲಿ ಹೋಮವು ನಡೆಸಲ್ಪಡುತ್ತಿತ್ತು. ದೇವತೆಗಳೆಲ್ಲರೂ ಹವಿರ್ಭಾಗ ತೆಗೆದುಕೊಳ್ಳುವುದಕ್ಕೋಸ್ಕರ ಆಹೂತರಾಗಿ ಯಜ್ಞಶಾಲೆಗೆ ಬಂದರು.

೬೩. ಶಾಸ್ತ್ರೋಕ್ತಪ್ರಕಾರವಾಗಿ ಯಜ್ಞಭಾಗವನ್ನು ಹಂಚುತ್ತಿರುವ ಚ್ಯವನ ಮಹರ್ಷಿಯು ಅಶ್ವಿನೀ ದೇವತೆಗಳನ್ನು ಕರೆಯಲಾಗಿ ಅವರೂ ಬಂದರು.

೬೪. ಅವರನ್ನು ಆಹ್ವಾನಮಾಡುತ್ತಿರುವಾಗ ದೇವೇಂದ್ರನು ಚ್ಯವನನಿಗೆ ತಿಳಿಯಲೆಂದು "ಎಲೈ ರಾಜನೇ! ಈ ಅಶ್ವಿನೀ ದೇವತೆಗಳಿಗೆ ಯಜ್ಞಭಾಗವನ್ನು

ಚ್ಯವನಸ್ತ್ವಿಂದ್ರಮಾಹೇದಂ ದೇವೌ ಹ್ಯೇತಾವುಭಾವಪಿ ।
ಮಮೋಪಕಾರಿಣಾವೇತೌ ದದ್ಮಿ ಭಾಗಂ ನ ಸಂಶಯಃ ॥ ೬೫ ॥

ತತೋಽಹ್ಯುವಾಚ ಸಕ್ರೋಧಃ ಸ ಶಕ್ರಶ್ಚ್ಯವನಂ ರುಷಾ ।
ವಿಪ್ರರ್ಷೇ ಪ್ರಹರಿಷ್ಯಾಮಿ ಯದಿ ಭಾಗಂ ಪ್ರಯಚ್ಛಸಿ ॥ ೬೬ ॥

ಏವಮುಕ್ತಸ್ತು ವಿಪ್ರರ್ಷಿರ್ನಚೋವಾಚಾಪಿ ಕಿಂಚನ ।
ಭಾಗೌ ದದೌ ಚ ಸೋಽಶ್ವಿಭ್ಯಾಂ ಸ್ರುವಮುದ್ಯಮ್ಯ ಮಂತ್ರತಃ ॥ ೬೭ ॥

ಅಥ ಉದ್ಯಮ್ಯ ಭಿದುರಂ ಮೋಕ್ತುಕಾಮೋ ದಿವಸ್ಪತಿಃ ।
ಸ್ತಂಭಿತಶ್ಚ್ಯವನೇನಾಥ ಸವಜ್ರಸ್ಸ ನರಾಧಿಪ ॥ ೬೮ ॥

---

ಕೊಡಬೇಡ. ಇವರು ದೇವವೈದ್ಯರೇ ಹೊರತು ಯಜ್ಞಭಾಗಕ್ಕೆ ಅರ್ಹರಾದ ದೇವತೆಗಳಲ್ಲ" ಎಂಬದಾಗಿ ಹೇಳಿದನು.

೬೫. ಆಗ ಚ್ಯವನನು ಇಂದ್ರನನ್ನು ಕುರಿತು—"ಇವರಿಬ್ಬರೂ ದೇವತೆಗಳೇ ಸರಿ. ಇವರು ನನಗೆ ತುಂಬಾ ಉಪಕಾರಮಾಡಿದ್ದಾರೆ. ನಾನು ಇವರಿಗೆ ಯಜ್ಞಭಾಗವನ್ನು ಕೊಟ್ಟೇಕೊಡುತ್ತೇನೆ. ಇದರಲ್ಲಿ ಸಂದೇಹವಿಲ್ಲ" ಎಂದು ಹೇಳಿದನು.

೬೬. ಅವನ ಮಾತನ್ನು ಕೇಳಿ ದೇವೇಂದ್ರನು ಕೋಪಗೊಂಡು "ಎಲೈ ಬ್ರಹ್ಮರ್ಷಿಯೇ! ನೀನು ಯಜ್ಞಭಾಗವನ್ನು ಕೊಟ್ಟರೆ ನಾನು ನಿನ್ನನ್ನು ಹೊಡೆಯುತ್ತೇನೆ" ಎಂದನು.

೬೭. ದೇವೇಂದ್ರನು ಹೀಗೆ ಹೇಳಿದಾಗ ಆ ಬ್ರಹ್ಮಋಷಿಯು ಯಾವ ಮಾತನ್ನೂ ಆಡದೆ ಮಂತ್ರಗಳನ್ನುಚ್ಚರಿಸುತ್ತಾ ಸ್ರುವವನ್ನು ಎತ್ತಿಹಿಡಿದು ಆ ಅಶ್ವಿನೀ ದೇವತೆಗಳಿಬ್ಬರಿಗೂ ಎಗಡು ಭಾಗವನ್ನು ಕೊಟ್ಟನು.

೬೮. ಆಗ ಇಂದ್ರನು ತನ್ನ ವಜ್ರಾಯುಧವನ್ನೆತ್ತಿ ಇವನನ್ನು ಹೊಡೆಯುವುದಕ್ಕೆ ಪ್ರಯತ್ನಿಸಲಾಗಿ, ಅಯ್ಯಾ ರಾಜನೇ ಆಶ್ಚರ್ಯವನ್ನು ಕೇಳು! ಚ್ಯವನ ಋಷಿಯ ಮಹಿಮೆಯಿಂದ ಇಂದ್ರನು ಸ್ತಂಭೀಭೂತನಾದನು.

**ಸ ಸ್ತಂಭಯಿತ್ವಾ ತ್ವಿಂದ್ರಂ ತು ಭಾಗಂ ದತ್ವಾಶ್ವಿನೋರ್ವಶೀ ।**
**ಸಮಾಪಯಾಮಾಸ ತದಾ ಯಜ್ಞಕರ್ಮ ಯಥಾರ್ಥವತ್ ॥ ೬೯ ॥**

**ಕಂಜಜೋಥಾಜಗಾಮಾಶು ಆಹ ಚ ಚ್ಯವನಂ ತದಾ ।**
**ಉತ್ತಂಭ್ಯತಾಮಯಂ ಲೇಖೋ ಭಾಗಶ್ಚಾಸ್ತ್ವಶ್ವಿನೋರಿಹ ॥ ೭೦ ॥**

**ತಥೇಂದ್ರಸ್ತಮುವಾಚೇದಂ ಚ್ಯವನಂ ಪ್ರೀತಮಾನಸಃ ।**
**ಜಾನಾಮಿ ಶಕ್ತಿಂ ತಪಸಃ ಚ್ಯವನೇಹ ತವೋತ್ತಮಾಂ ॥ ೭೧ ॥**

**ಖ್ಯಾಪನಾರ್ಥಂ ಹಿ ತಪಸಃ ತವ ಏತತ್ಕೃತಂ ಮಯಾ ।**
**ಅದ್ಯ ಪ್ರಭೃತಿ ಭಾಗೋಽಸ್ತು ದೇವತ್ವಂ ಚಾಶ್ವಿನೋಸ್ತಥಾ ॥ ೭೨ ॥**

**ಯಸ್ತ್ವಿಮಾಂ ತಪಸಃ ಖ್ಯಾತಿಂ ತ್ವದೀಯಾಂ ವೈ ಪಠಿಷ್ಯತಿ ।**
**ಶೃಣುಯಾದ್ವಾಪಿ ಶುದ್ಧಾತ್ಮಾ ತಸ್ಯ ಪುಣ್ಯಫಲಂ ಶೃಣು ॥ ೭೩ ॥**

---

೬೯. ಹೀಗೆ ಆ ಚ್ಯವನನು ಇಂದ್ರನನ್ನು ಸ್ತಂಭೀತನನ್ನಾಗಿ ಮಾಡಿ, ಜಿತೇಂದ್ರಿಯನಾಗಿ ಅಶ್ವಿನೀ ದೇವತೆಗಳಿಗೆ ಯಜ್ಞಭಾಗವನ್ನು ಸಮರ್ಪಿಸಿ, ಯಜ್ಞಕರ್ಮವನ್ನು ಸಾಂಗವಾಗಿ ಮುಗಿಸಿದನು.

೭೦. ಅನಂತರ ಬ್ರಹ್ಮನು ಜಾಗ್ರತೆಯಾಗಿ ಅಲ್ಲಿಗೆ ಬಂದು ಚ್ಯವನನನ್ನು ಕುರಿತು—"ಈ ಇಂದ್ರನ ಬಂಧನವನ್ನು ಬಿಡಿಸು. ಅಶ್ವಿನೀ ದೇವತೆಗಳಿಗೆ ಯಜ್ಞಭಾಗವು ಸಲ್ಲಲಿ" ಎಂದನು.

೭೧-೭೨. ಆಗ ದೇವೇಂದ್ರನೂ ಸಂತುಷ್ಟವಾದ ಮನಸ್ಸಿನಿಂದ ಚ್ಯವನನನ್ನು ಕುರಿತು "ಎಲೈ ಚ್ಯವನನೆ! ಶ್ರೇಷ್ಠವಾದ ನಿನ್ನ ತಪಶ್ಶಕ್ತಿಯು ಈಗ ನನಗೆ ತಿಳಿಯಿತು. ನಿನ್ನ ತಪಸ್ಸಿನ ಪ್ರಭಾವವನ್ನು ಪ್ರಸಿದ್ಧಿಪಡಿಸುವುದಕ್ಕಾಗಿಯೇ ನಾನು ಈ ಕೆಲಸಮಾಡಿದೆನು. ಇಂದು ಮೊದಲ್ಗೊಂಡು ಅಶ್ವಿನೀದೇವತೆಗಳಿಗೂ ದೇವತ್ವವುಂಟಾಗಿ ಯಜ್ಞಭಾಗವು ಸಲ್ಲಲಿ."

೭೩-೭೪. ಎಲೈ ಚ್ಯವನನೇ! ಈ ನಿನ್ನ ತಪೋಖ್ಯಾತಿಯನ್ನು ಯಾವನು ಶುದ್ಧಾತ್ಮನಾಗಿ ಪಠನಮಾಡುವನೋ ಅಥವಾ ಶುದ್ಧಾತ್ಮನಾಗಿ ಕಿವಿಗೊಟ್ಟು ಕೇಳುವನೋ, ಅವನಿಗೆ ಲಭಿಸುವ ಪುಣ್ಯವನ್ನು ಹೇಳುವೆನು ಕೇಳು ಪಠನ, ಶ್ರವಣ

ವಿರೋಚನಸದೋ ಗತ್ವಾ ಗತ್ವಾ ಪುಷ್ಪಸದಸ್ತಥಾ ।
ಕಾಲೇಥ ವಾಮದೇವಸ್ಯ ಮುಂಜಕೇಶಸದಸ್ತಥಾ ।
ಯೌವನಯುಕ್ತಃ ಸ ಕ್ರೀಡಂಸ್ತಿತಿಷ್ಠ ಶೀತಿ ನ ಸಂಶಯಃ ॥ ೭೪ ॥

ಏವಮುಕ್ತ್ವಾ ಜಗಾಮಾಶು ದೇವಃ ಸ್ವಭವನಂ ವಶೀ ।
ಚ್ಯವನೋಽಪಿ ಸಭಾರ್ಯೋ ವೈ ಶರ್ಯಾತಿಶ್ಚಾಶ್ರಮಂ ಗತಃ ॥ ೭೫ ॥

ಅಥಾಪಶ್ಯದ್ವಿಮಾನಾಭಂ ಭವನಂ ದೇವನಿರ್ಮಿತಂ ।
ಶಯ್ಯಾಸನವರೈರ್ಜುಷ್ಟಂ ಸರ್ವಕಾಮಸಮೃದ್ಧಿಮತ್ ॥ ೭೬ ॥

ಉದ್ಯಾನವಾಪಿಭಿರ್ಜುಷ್ಟಂ ದೇವೇಂದ್ರೇಣ ಸಮಾಹೃತಂ ।
ಗೋಖಂಡಸನ್ನಿಭಂ ರೇಜೇ ಗೃಹಂ ತದ್ಭುವಿ ದುರ್ಲಭಂ ॥ ೭೭ ॥

ಸುಭೂಷಣಾನಿ ದಿವ್ಯಾನಿ ರತ್ನವಂತಿ ಮಹಾಂತಿ ಚ ।
ಅರಜಾಂಸಿ ಚ ವಸ್ತ್ರಾಣಿ ದಿವ್ಯಪ್ರಾವರಣಾನಿ ಚ ॥ ೭೮ ॥

---

ಇವನ್ನು ಮಾಡಿದಾತನು ವಿರೋಚನಸದಸ್ಸು (ಸಭೆ) ಪುಷ್ಪಸದಸ್ಸು, ವಾಮದೇವ (ಶಿವ) ಮುಂಜಿಕೇಶ (ವಿಷ್ಣು) ಇವರುಗಳ ಸದಸ್ಸನ್ನು ಪ್ರವೇಶಿಸಿ ಯೌವನದಿಂದಕೂಡಿ ಕ್ರೀಡಿಸುತ್ತಾನೆ ಎಂಬುದರಲ್ಲಿ ಸಂದೇಹವಿಲ್ಲ.

೭೫. ದೇವೇಂದ್ರನು ಜಿತೇಂದ್ರಿಯನಾಗಿ ಈರೀತಿ ಹೇಳಿ ಅಲ್ಲಿಂದ ಹೊರಟು ಜಾಗ್ರತೆ ತನ್ನ ನಿವಾಸವನ್ನು ಸೇರಿದನು. ಇತ್ತ ಹೆಂಡತಿಯೊಡನೆ ಚ್ಯವನನೂ ಶರ್ಯಾತಿ ಮಹಾರಾಜನೂ ಸಹ ಆಶ್ರಮಕ್ಕೆ ಬಂದರು.

೭೬. ಅವರು ಅಲ್ಲಿಗೆ ಬರುವುದರೊಳಗೆ ದೇವತೆಗಳಿಂದ ನಿರ್ಮಿಸಲ್ಪಟ್ಟುದೂ ವಿಮಾನಕ್ಕೆ ಸದೃಶವೂ ; ಹಾಸಿಗೆ, ಶ್ರೇಷ್ಠವಾದ ಪೀಠಗಳು ಮುಂತಾದ ಎಲ್ಲಾ ಭೋಗ ಸಾಮಗ್ರಿಗಳಿಂದ ಸಮೃದ್ಧವಾದುದೂ,

೭೭. ಉದ್ಯಾನ, ಭಾವಿ ಇವುಗಳಿಂದ ಕೂಡಿದುದೂ, ದೇವೇಂದ್ರನು ತಂದಿಟ್ಟುದೂ ಆಗಿ ಕೋಟಿಸೂರ್ಯ ಪ್ರಕಾಶವುಳ್ಳದ್ದೆನಿಸಿ ಭೂಲೋಕದಲ್ಲಿ ಅಲಭ್ಯವಾದಂಥ ಒಂದು ದಿವ್ಯಮಂದಿರವಿದ್ದುದನ್ನು ಕಂಡರು.

೭೮–೭೯. ಅಲ್ಲಿ ರತ್ನಗಳಿಂದ ಕೂಡಿದ್ದಾಗಿ ದೊಡ್ಡದಾಗಿರುವ ಶ್ರೇಷ್ಠಗಳಾದ ಆಭರಣಗಳನ್ನೂ ನಿರ್ಮಲವಾದ ಉಡುಪುಗಳನ್ನೂ ಶ್ರೇಷ್ಠಗಳಾದ ಹೊದೆವ ಬಟ್ಟೆ

**ದೃಷ್ಟ್ವಾ ತತ್ಸರ್ವಮಖಿಲಂ ಸಹ ಪತ್ನ್ಯಾ ಮಹಾಮುನಿಃ ।**
**ಮುದಂ ಪರಮಿಕಾಂ ಲೇಭೇ ಶಕ್ರಂ ಚ ಪ್ರಶಶಂಸ ಹ ॥ ೭೯ ॥**

**ಏವಮಿಷ್ಟಾ ತಿಥಿರಿಯಂ ದ್ವಿತೀಯಾ ಅಶ್ವಿನೋರ್ನೃಪ ।**
**ದೇವತ್ವಂ ಯಜ್ಞಭಾಗಂ ಚ ಸಂಪ್ರಾಪ್ತಾವಿಹ ಭಾರತ ॥ ೮೦ ॥**

**ಉಪೋಷ್ಯಾ ವಿಧಿನಾ ಯೇನ ತಂ ಶೃಣುಷ್ವ ನರಾಧಿಪ ।**
**ರೂಪಂ ಸುರೂಪಂ ಯೋ ವಾಂಛೇತ್ ದ್ವಿತೀಯಾಯಾಂ ನರಾಧಿಪ ॥೮೧॥**

**ಕಾರ್ತಿಕೇ ಶುಕ್ಲಪಕ್ಷಸ್ಯ ದ್ವಿತೀಯಾಯಾಂ ನರಾಧಿಪ ।**
**ಪುಷ್ಪಾಹಾರೋ ವರ್ಷಮೇಕಂ ಭವೇತ್ಸ ನಿಯತಾತ್ಮವಾನ್ ॥ ೮೨ ॥**

**ಕಾಲಪ್ರಾಪ್ತಾನಿ ಯಾನಿ ಸ್ಯುಃ ಹವಿಷ್ಯಂ ಕುಸುಮಾನಿ ತು ।**
**ಭುಂಜೀಯಾತ್ತಾನಿ ದತ್ವಾ ತು ಬ್ರಾಹ್ಮಣೇಭ್ಯೋ ನರಾಧಿಪ ॥ ೮೩ ॥**

---

ಗಳನ್ನೂ ನೋಡಿ ಹೆಂಡತಿಯೊಡಗೂಡಿದ ಆ ಮಹಾಮುನಿಯು ಬಹುಸಂತೋಷಪಟ್ಟು ದೇವೇಂದ್ರನನ್ನು ಹೊಗಳಿದನು.

೮೦ ಎಲೈ ರಾಜನೆ! ಹೀಗೆ ದ್ವಿತೀಯಾ ತಿಥಿಯು ಅಶ್ವಿನೀದೇವತೆಗಳಿಗೆ ಇಷ್ಟವಾದುದು. ಈ ತಿಥಿಯಲ್ಲಿ ಅಶ್ವಿನೀ ದೇವತೆಗಳು ದೇವತ್ವವನ್ನೂ ಯಜ್ಞಭಾಗವನ್ನೂ ಹೊಂದಿದರು.

೮೧-೮೪. ಎಲೈ ರಾಜನೆ! ಈ ದ್ವಿತೀಯಾ ತಿಥಿಯಲ್ಲಿ ಯಾವ ವಿಧಿಯಿಂದ ಉಪವಾಸಮಾಡಬೇಕೋ ಆ ವಿಧಿಯನ್ನು ಹೇಳುವೆನು ಕೇಳು. ಯಾವನು ಶ್ರೇಷ್ಠವಾದ ಸೌಂದರ್ಯವನ್ನು ಅಪೇಕ್ಷಿಸುತ್ತಾನೋ, ಅವನು ಕಾರ್ತೀಕ ಶುಕ್ಲ ದ್ವಿತೀಯಾ ತಿಥಿಯಲ್ಲಿ ಪುಷ್ಪಾಹಾರ ಸೇವನೆಮಾಡುತ್ತಾ ಒಂದು ಸಂವತ್ಸರಕಾಲ ಮನಸ್ಸನ್ನು ನಿಗ್ರಹಿಸಿಕೊಂಡು, ಯಾವ ಯಾವ ಕಾಲದಲ್ಲಿ ಯಾವುವು ದೊರಕುತ್ತವೆಯೋ ಅವನ್ನು ಎಂದರೆ ಕಾಲಪ್ರಾಪ್ತವಾದ ಹವಿಷ್ಯವನ್ನೂ ಪುಷ್ಪಗಳನ್ನೂ ಬ್ರಾಹ್ಮಣರಿಗೆ ಕೊಟ್ಟು ತಾನೂ ಭುಂಜಿಸಬೇಕು. ದಾನಕ್ಕೆ ಪುಷ್ಪಗಳು ಎಂದರೆ ಚಿನ್ನ, ಬೆಳ್ಳಿ ಇವುಗಳಿಂದ ಮಾಡಿದ ಹೂವುಗಳು ಆಗಬೇಕು. ಅದಕ್ಕೆ ಅಭಾವವಾದರೆ ಜಲಜಪುಷ್ಪಗಳನ್ನು ದಾನಮಾಡಬೇಕು ಅನಂತರ ತಾನೂ ಆಹಾರಸೇವನೆಮಾಡಬೇಕು. ಈ ವ್ರತವನ್ನು ಸಾಂಗ

ಸೌವರ್ಣರೌಪ್ಯಪುಷ್ಪಾಣಿ ಅಥವಾ ಜಲಜಾನಿ ಚ ।
ವ್ರತಾಂತೇ ತಸ್ಯ ಸಂತುಷ್ಟೌ ದೇವೌ ತ್ರಿಭುವನೇಽಶ್ವಿನೌ ॥ ೮೪ ॥

ದದ್ಯಾಶ್ಚ ಕಾಮಗಂ ದಿವ್ಯಂ ವಿಮಾನಮತಿತೇಜಸಂ ।
ಸುಚಿರಂ ದಿವಿ ನಾರೀಭಿಃ ಲೋಕೇಽಸೌ ರಮತೇಽಶ್ವಿನೋಃ ॥ ೮೫ ॥

ಇಹಚಾಗತ್ಯ ಕಲ್ಪಾಂತೇ ಜಾತೋ ವಿಪ್ರಃ ಪುರಸ್ಕೃತಃ ।
ವೇದವೇದಾಂಗವಿದುಷಃ ಸಪ್ತಜನ್ಮಾಂತರಾಣ್ಯಸೌ ॥ ೮೬ ॥

ಜಾತೋ ಜಾತೋ ಭವೇದ್ವಿದ್ವಾನ್ ಬ್ರಾಹ್ಮಣೋಽಸೌ ಕೃತೇ ಯುಗೇ ।
ದಾತಾ ಯಜ್ಞಪತಿರ್ವಾಗ್ಮೀ ಆಧಿವ್ಯಾಧಿವಿವರ್ಜಿತಃ ॥ ೮೭ ॥

ಪುತ್ರಪೌತ್ರೈಃ ಪರಿವೃತಃ ಸಹ ಪತ್ನ್ಯಾ ವಸೇಚ್ಚಿರಂ ।
ಮಧ್ಯದೇಶೇ ಸುನಗರೇ ಧರ್ಮಿಷ್ಠೋ ರಾಜ್ಯಭಾಗ್ಭವೇತ್ ॥ ೮೮ ॥

ಇತ್ಯೇಷಾ ಕಥಿತಾ ತುಭ್ಯಂ ದ್ವಿತೀಯಾ ಪುಷ್ಪಸಂಜ್ಞಿತಾ ।
ಫಲಸಂಜ್ಞಾ ತಥಾನ್ಯಾ ಸ್ಯಾತ್ ಸುತೇ ವೈ ಮುಂಜಕೇಶಿನಿ ॥ ೮೯ ॥

---

ನಾಗಿ ಮಾಡಿ ಮುಗಿಸಿದವನಿಗೆ ಅಶ್ವಿನೀ ದೇವತೆಗಳು ಸಂತುಷ್ಟರಾಗಿ ಮಹಾತೇಜಸ್ಸುಳ್ಳದೂ, ಇಷ್ಟಬಂದ ಕಡೆಗೆ ಹೋಗಬಲ್ಲುದೂ, (ಕಾಮಗಾಮಿ) ಆದ ದಿವ್ಯವಾದ ವಿಮಾನವನ್ನು ಕೊಡುವರು.

೮೫-೮೮. ಇವನು ಆ ಅಶ್ವಿನೀದೇವತೆಗಳ ಲೋಕದಲ್ಲಿ ಹೆಂಗಸರೊಡನೆ ಬಹುಕಾಲ ಪರ್ಯಂತ ಕ್ರೀಡಿಸುವನು. ಕಲ್ಪಾಂತದಲ್ಲಿ ಈ ಲೋಕಕ್ಕೆ ಬಂದು ಪುರಸ್ಕಾರಯೋಗ್ಯನಾದ ಬ್ರಾಹ್ಮಣನಾಗಿ ಹುಟ್ಟುವನು. ಹೀಗೆಯೇ ಏಳುಜನ್ಮಗಳ ಪರ್ಯಂತರವಾಗಿ ವೇದವೇದಾಂಗಗಳನ್ನು ಸಾಂಗವಾಗಿ ಅಧ್ಯಯನಮಾಡಿದ ಬ್ರಾಹ್ಮಣನಾಗುತ್ತಾನೆ. ಕೃತಯುಗದಲ್ಲಿ ಇವನು ಬ್ರಾಹ್ಮಣನಾಗಿ ಹುಟ್ಟಿ ವಿದ್ವಾಂಸನಾಗುವುದಲ್ಲದೆ ದಾನಶೀಲನೂ, ಯಜ್ಞಮಾಡುವವನೂ, ಒಳ್ಳೆಯ ವಾಚಾಳಿಯೂ, ಮನೋವ್ಯಥೆ, ದೇಹವ್ಯಾಧಿ, ಇವು ಇಲ್ಲದವನೂ, ಆಗುತ್ತಾನೆ. ಮತ್ತು ಇವನು ಮಕ್ಕಳು ಮೊಮ್ಮಕ್ಕಳುಗಳನ್ನು ಪಡೆದುಕೊಂಡು, ಬಹುಕಾಲದವರೆಗೆ ಹೆಂಡತಿಯೊಡನೆ ಮಧ್ಯದೇಶದಲ್ಲಿ ಶ್ರೇಷ್ಠವಾದ ಒಂದು ಪಟ್ಟಣದಲ್ಲಿ ಧರ್ಮಿಷ್ಠನಾಗಿ ರಾಜಪೂಜ್ಯನಾಗುತ್ತಾನೆ.

೮೯. ಪುಷ್ಪ ದ್ವಿತೀಯಾ ಮಹಾತ್ಮೆಯನ್ನು ನಿಮಗೆ ಹೇಳಿದ್ದಾಯಿತು. ಫಲದ್ವಿತೀಯೆ ಎಂಬ ಮತ್ತೊಂದು ದ್ವಿತೀಯಾ ತಿಥಿಯುಂಟು. ಕೃಷ್ಣನು ವಸು

**ಸುಷ್ಟು ಪುಣ್ಯಾ ಪಾಪಹರಾ ವಿಷ್ಟರಶ್ರವಸಃ ಪ್ರಿಯಾ ।**
**ಅಶೂನ್ಯಶಯನಾ ಲೋಕೇ ಪ್ರಖ್ಯಾತಾ ಕುರುನಂದನ ॥ ೯೦ ॥**

**ತಾಮುಪೋಷ್ಯ ನರೋ ರಾಜನ್ ಶ್ರದ್ಧಾಭಕ್ತಿಪುರಸ್ಕೃತಃ ।**
**ಋದ್ಧಿಂ ವೃದ್ಧಿಂ ಶ್ರಿಯಂ ಚಾಥ ಭಾರ್ಯಯಾ ಸಹ ಮೋದತೇ ॥ ೯೧ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ದ್ವಿತೀಯಾ ಕಲ್ಪೇ ಶರ್ಯಾತ್ಯಾಖ್ಯಾನೇ ಪುಷ್ಪದ್ವಿತೀಯಾ ವರ್ಣನಂ ನಾಮ ಏಕೋನವಿಂಶೋಽಧ್ಯಾಯಃ.**



---

ದೇವನ ಮಗನಾಗಿ ಜನಿಸಿದ ಶ್ರಾವಣಮಾಸದಲ್ಲಿ ಈ ಫಲದ್ವಿತೀಯಾ ವ್ರತವನ್ನು ನಡೆಯಿಸಬೇಕು.

೯೦. ಎಲೈ ಕುರುಪುತ್ರನೇ! ಶ್ರೀಮನ್ನಾರಾಯಣನಿಗೆ ಪ್ರಿಯಕರವೂ, ಹೆಚ್ಚು ಪುಣ್ಯಪ್ರದವೂ, ಪಾಪಪರಿಹಾರಕವೂ, ಆದ ಅಶೂನ್ಯಶಯನ ದ್ವಿತೀಯಾ ಎಂಬುದೂ ಒಂದು ಪ್ರಸಿದ್ಧವಾಗಿದೆ.

೯೧. ಎಲೈ ರಾಜನೆ! ಆ ದ್ವಿತೀಯೆಯಲ್ಲಿ ಉಪವಾಸಮಾಡಿ ಶ್ರದ್ಧಾಭಕ್ತಿಗಳಿಂದ ಕೂಡಿದವನು ಸುಖಸಂತೋಷಗಳು, ಅಭಿವೃದ್ಧಿ, ಸಂಪತ್ತು ಇವುಗಳನ್ನು ಹೊಂದಿ ಪತ್ನೀಸಮೇತನಾಗಿರುತ್ತಾ ಸಂತೋಷಪಡುತ್ತಾನೆ.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ದ್ವಿತೀಯಾ ಕಲ್ಪದಲ್ಲಿ ಶರ್ಯಾತಿ ಆಖ್ಯಾನದಲ್ಲಿ ಪುಷ್ಪದ್ವಿತೀಯಾ ವರ್ಣನೆ ಎಂಬ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ವಿಂಶೋಽಧ್ಯಾಯಃ

॥ ಶತಾನೀಕ ಉವಾಚ ॥

ಬ್ರೂಹಿ ಮೇ ದ್ವಿಜಶಾರ್ದೂಲ ದ್ವಿತೀಯಾಂ ಫಲಸಂಜ್ಞಿತಾಂ ।
ಯಾಮುಪೋಷ್ಯ ನರೋ ಯೋಷಿದ್ವಿಯೋಗಂ ನೇಹ ಗಚ್ಛತಿ ॥ ೧ ॥

ಪತ್ನ್ಯಾ ನರೋ ಮುನಿಶ್ರೇಷ್ಠ ಭಾರ್ಯಾ ಚ ಪತಿನಾ ಸಹ ।
ತಾಮಹಂ ಶ್ರೋತುಮಿಚ್ಛಾಮಿ ವಿಧವಾ ಸ್ತ್ರೀ ನ ಜಾಯತೇ ।
ಉಪೋಷಿತೇನ ಯೇನಾರ್ಯ ಪತ್ನ್ಯಾ ಚ ಸಹಿತೋ ನರಃ ॥ ೨ ॥

---

## ಇಪ್ಪತ್ತನೆಯ ಅಧ್ಯಾಯ

೧. ಶತಾನೀಕನು ಕೇಳುತ್ತಾನೆ--ಅಯ್ಯಾ ಬ್ರಾಹ್ಮಣೋತ್ತಮನೇ! ಫಲ ದ್ವಿತೀಯಾ ತಿಥಿಯಲ್ಲಿ ಉಪವಾಸಮಾಡುವುದರಿಂದ ಗಂಡಸಿಗೆ ಪತ್ನೀವಿಯೋಗವೂ ಹೆಂಗಸಿಗೆ ಪತಿವಿಯೋಗವೂ ಉಂಟಾಗುವುದಿಲ್ಲವೆನ್ನುತ್ತಾರೆ. ಆ ವಿಚಾರವನ್ನು ನನಗೆ ಹೇಳು.

೨ ಅಯ್ಯಾ ಋಷಿವರ್ಯನೇ! ಈ ವ್ರತಪ್ರಭಾವದಿಂದ ಸ್ತ್ರೀಯು ವೈಧವ್ಯವನ್ನು ಹೊಂದಲಾರಳು ಎನ್ನುವರು. ಆ ವಿಚಾರವನ್ನೂ ನಾನು ಕೇಳಲು ಬಯಸುತ್ತೇನೆ.

ತನ್ಮೇ ಬ್ರೂಹಿ ದ್ವಿಜಶ್ರೇಷ್ಠ ಶ್ರೇಯೋರ್ಥಂ ನರಯೋಷಿತಾಂ ।
ಯೇನ ಮೇ ಕೌತುಕಂ ಬ್ರಹ್ಮನ್ ಶ್ರುತ್ವಾ ಪೂರ್ವಂ ಪ್ರಸರ್ಪತಿ ॥ ೩ ॥

॥ ಸುಮಂತುರುವಾಚ ॥

ಅಶೂನ್ಯಶಯನಾಂ ನಾಮ ದ್ವಿತೀಯಾಂ ಶೃಣು ಭಾರತ ।
ಯಾಮುಪೋಷ್ಯ ನ ವೈಧವ್ಯಂ ಸ್ತ್ರೀ ಪ್ರಯಾತಿ ನರಾಧಿಪ ।
ಪತ್ನೀವಿಯುಕ್ತಶ್ಚ ನರೋ ನ ಕದಾಚಿತ್ ಪ್ರಜಾಯತೇ ॥ ೪ ॥

ಶೇತೇ ಜಗತ್ಪತಿಃ ಕೃಷ್ಣಃ ಶ್ರಿಯಾ ಸಾರ್ಧಂ ಯದಾ ನೃಪ ।
ಅಶೂನ್ಯಶಯನಾ ನಾಮ ತದಾ ಗ್ರಾಹ್ಯಾ ಹಿ ಸಾ ತಿಥಿಃ ॥ ೫ ॥

ಕೃಷ್ಣಪಕ್ಷೇ ದ್ವಿತೀಯಾಯಾಂ ಶ್ರಾವಣೇ ಮಾಸಿ ಭಾರತ ।
ಇದಮುಚ್ಚಾರಯೇತ್ ಸ್ನಾತಃ ಪ್ರಣಮ್ಯ ಜಗತಃ ಪತಿಂ ।
ಶ್ರೀವತ್ಸಧಾರಿಣಂ ದೇವಂ ಭಕ್ತ್ಯಾಭ್ಯರ್ಚ್ಯ ಶ್ರಿಯಾ ಸಹ ॥ ೬ ॥

---

೩. ಆರ್ಯನೇ ! ಗಂಡನೂ ಹೆಂಡತಿಯೂ ಯಾವ ಉಪವಾಸವನ್ನು ಮಾಡುವುದರಿಂದ ಪತ್ನೀ ಸಮೇತನಾದ ಪತಿಯು ಸುಖಿಯಾಗುತ್ತಾನೆಯೋ ಆ ವಿಚಾರವನ್ನು ಗಂಡಸರಿಗೂ ಹೆಂಗಸರಿಗೂ ಶ್ರೇಯಸ್ಸುಂಟಾಗುವುದಕ್ಕಾಗಿ ನನಗೆ ಹೇಳು. ಅಯ್ಯಾ ಬ್ರಾಹ್ಮಣನೇ ! ಅದನ್ನು ಕೇಳುವ ಕುತೂಹಲವು ತವಕಪಡುತ್ತಿದೆ.

೪. ಸುಮಂತುಮುನಿವರ್ಯರು ಹೇಳುತ್ತಾರೆ---ಎಲೈ ಭರತಕುಲೋತ್ಪನ್ನನೇ ! ಅಶೂನ್ಯಶಯನ ದ್ವಿತೀಯಾ ವಿಚಾರವನ್ನು ಹೇಳುತ್ತೇನೆ ಕೇಳು, ಆ ದ್ವಿತೀಯೆಯಲ್ಲಿ ಉಪವಾಸಮಾಡುವುದರಿಂದ ಸ್ತ್ರೀಯು ವೈಧವ್ಯವನ್ನು ಹೊಂದುವುದಿಲ್ಲ. ಗಂಡಸೂ ಕೂಡ ಯಾವಾಗಲೂ ಪತ್ನೀವಿರಹಿತನಾಗುವುದಿಲ್ಲ.

೫. ಅಯ್ಯಾ ರಾಜನೇ ! ಲೋಕೇಶ್ವರನಾದ ಕೃಷ್ಣನು ಯಾವ ದ್ವಿತೀಯೆಯಲ್ಲಿ ಲಕ್ಷ್ಮಿಯೊಡಗೂಡಿ ಶಯನ ಮಾಡುತ್ತಾನೋ ಅಂಥ ತಿಥಿಯು ಅಶೂನ್ಯಶಯನ ದ್ವಿತೀಯೆ ಎಂದು ಪ್ರಸಿದ್ಧವಾಯಿತು.

೬. ಅಯ್ಯಾ ಭರತವಂಶಜನೇ ! ಶ್ರಾವಣ ಬಹುಳ ದ್ವಿತೀಯೆಯಲ್ಲಿ ಸ್ನಾನಮಾಡಿ ಲೋಕೇಶ್ವರನೂ ಶ್ರೀವತ್ಸವೆಂಬ ಮಚ್ಚೆಯುಳ್ಳವನೂ ಲಕ್ಷ್ಮೀ ಸಮೇತನೂ ಆದ ವಿಷ್ಣುವನ್ನು ಭಕ್ತಿಯಿಂದ ಪೂಜಿಸಿ ನಮಸ್ಕಾರಮಾಡಿ ಈ ಮುಂದೆ ಹೇಳುವಂತೆ ಪ್ರಾರ್ಥಿಸಬೇಕು.

ಶ್ರೀವತ್ಸಧಾರಿನ್ ಶ್ರೀಕಾಂತ ಶ್ರೀವತ್ಸ ಶ್ರೀಪತೇऽವ್ಯಯ ।
ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದಂ ॥ ೭ ॥

ಗಾವಶ್ಚ ಮಾ ಪ್ರಣಶ್ಯಂತು ಮಾ ಪ್ರಣಶ್ಯಂತು ಮೇ ಜನಾಃ ॥ ೮ ॥

ಜಾಮಯೋ ಮಾ ಪ್ರಣಶ್ಯಂತು ಮತ್ತೋ ದಾಂಪತ್ಯಭೇದತಃ ।
ಲಕ್ಷ್ಮ್ಯಾ ತ್ವಂ ವಿಯುಜ್ಯೇऽಹಂ ದೇವ ನ ಕದಾಚಿದ್ಯಥಾ ಭವಾನ್ ॥ ೯ ॥

ತಥಾ ಕಲತ್ರಸಂಬಂಧೋ ದೇವ ಮಾ ಮೇ ವಿಯುಜ್ಯತಾಂ ।
ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇ ಶಯನಂ ಸದಾ ॥ ೧೦ ॥

ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾ ತು ಮಧುಸೂದನ ।
ಏವಂ ಪ್ರಸಾದ್ಯ ಪೂಜಾಂ ಚ ಕೃತ್ವಾ ಲಕ್ಷ್ಮ್ಯಾಸ್ತಥಾ ಹರೇಃ ॥ ೧೧ ॥

---

೭–೮. ಶ್ರೀವತ್ಸಧಾರಿಯೇ, ಶ್ರೀಕಾಂತನೇ, ಶ್ರೀವತ್ಸನೇ, ಶ್ರೀಪತಿಯೇ, ನಾಶರಹಿತನೇ, ಧರ್ಮಾರ್ಥಕಾಮಗಳನ್ನು ಕೊಡತಕ್ಕ ನನ್ನ ಗೃಹಸ್ಥತ್ವವು ಸ್ಥಿರವಾಗಿ ಇರಲಿ, ನನಗೆ ಸೇರಿದ ಜನಗಳೂ ಸ್ಥಿರವಾಗಿ ಇರಲಿ, ನನ್ನ ದನಕರುಗಳೂ ನಾಶವಾಗದೇ ಇರಲಿ, ನಮ್ಮ ಹೆಂಗಸರು ದಾಂಪತ್ಯದಲ್ಲಿ ಉಂಟಾಗಬಹುದಾದ ಕಲಹಗಳಿಂದ ನಾಶಹೊಂದದೇ ಇರಲಿ, (ಎಂದರೆ ಕುಟುಂಬ ಪರಿವಾರ ಸಮೇತವಾಗಿ ನನ್ನನ್ನು ಸುರಕ್ಷಿತವಾಗಿ ಇರಿಸು.)

೯. ನಿನಗೂ ಲಕ್ಷ್ಮಿಗೂ ಯಾವಾಗಲೂ ಹೇಗೆ ಅಗಲಿಕೆಯುಂಟಾಗುವುದಿಲ್ಲವೋ ಹಾಗೆ ನನಗೂ ನನ್ನ ಪತ್ನಿಯ ಅಗಲಿಕೆಯು ಯಾವಾಗಲೂ ಉಂಟಾಗದೇ ಇರಲಿ, ಎಂದರೆ ನನ್ನ ಪತ್ನಿಯು ಯಾವಾಗಲೂ ನನ್ನನ್ನು ಅಗಲದೇ ಇರಲಿ.

೧೦–೧೧ ಎಲೈ ಮಧುಸೂದನನೇ! ನಿನ್ನ ಹಾಸಿಗೆಯು ಹೇಗೆ ಯಾವಾಗಲೂ ಲಕ್ಷ್ಮಿಯಿಂದ ಶೂನ್ಯವಾಗಿರುವುದಿಲ್ಲವೋ ಹಾಗೆ ನನ್ನ ಹಾಸಿಗೆಯೂ ಕೂಡ ಪತ್ನೀ ವಿಯುಕ್ತವಾಗದೇ ಇರಲಿ, ಎಂಬದಾಗಿ ಲಕ್ಷ್ಮೀನಾರಾಯಣರನ್ನು ಪ್ರಾರ್ಥಿಸಿ ಪೂಜಿಸಿ ಅವರ ಅನುಗ್ರಹವನ್ನು ಪಡೆಯಬೇಕು.

ಫಲಾನಿ ದದ್ಯಾಚ್ಛಯ್ಯಾಯಾಂ ಅಭೀಷ್ಟಾನಿ ಜಗತ್ಪತಿಂ ।
ನಕ್ತಂ ಪ್ರಣಮ್ಯಾಯತನೇ ಹವಿರ್ಭುಂಜೀತ ವಾಗ್ಯತಃ ॥ ೧೨ ॥

ಬ್ರಾಹ್ಮಣಾಯ ದ್ವಿತೀಯೇಽಹ್ನಿ ಶಕ್ತ್ಯಾ ದದ್ಯಾಚ್ಚ ದಕ್ಷಿಣಾಂ ॥ ೧೩ ॥

॥ ಶತಾನೀಕ ಉವಾಚ ॥

ಕಾನಿ ತಾನಿ ಅಭೀಷ್ಟಾನಿ ಕೇಶವಸ್ಯ ಫಲಾನಿ ತು ।
ಯೋಜ್ಯಾನಿ ಶಯನೇ ವಿಪ್ರ ದೇವದೇವಸ್ಯ ಕಥ್ಯತಾಂ ॥ ೧೪ ॥

ಕಿಂಚ ದಾನಂ ದ್ವಿತೀಯೇಽಹ್ನಿ ದಾತವ್ಯಂ ಬ್ರಾಹ್ಮಣಸ್ಯ ತು ।
ಭಕ್ತ್ಯೈರ್ನರೈರ್ದ್ವಿಜಶ್ರೇಷ್ಠ ದೇವದೇವಸ್ಯ ಶಕ್ತಿತಃ ॥ ೧೫ ॥

॥ ಸುಮಂತುರುವಾಚ ॥

ಯಾನಿ ತತ್ರ ಮಹಾಬಾಹೋ ಕಾಲೇ ಸಂತಿ ಫಲಾನಿ ತು ।
ಮಧುರಾಣಿ ಸುತೀವ್ರಾಣಿ ನ ಚಾಪಿ ಕಟುಕಾನಿ ಚ ॥ ೧೬ ॥

---

೧೨. ಜಗತ್ಪತಿಯಾದ ವಿಷ್ಣುವಿನ ಪ್ರೀತ್ಯರ್ಥವಾಗಿ, ವಿಷ್ಣುವಿಗೆ ಅಭೀಷ್ಟವಾದ ವಿವಿಧಫಲಗಳನ್ನು ವಿಷ್ಣುಶಯ್ಯೆಯ ಬಳಿ ಸಮರ್ಪಿಸಿದರೆ ಅದರಿಂದ ನಮ್ಮ ಅಭೀಷ್ಟ ಫಲಗಳು ಲಭಿಸುವುವು.

೧೩. ಹೀಗೆ ರಾತ್ರಿ ದೇವಮಂದಿರದಲ್ಲಿ ವಿಷ್ಣುವಿಗೆ ಸಮರ್ಪಿಸಿ, ನಮಸ್ಕಾರ ಮಾಡಿ, ಮೌನದಿಂದ ಹವಿಷ್ಯಾನ್ನ ಭೋಜನವನ್ನು ಮಾಡಬೇಕು. ಆ ಮಾರನೆಯ ದಿನ ಬ್ರಾಹ್ಮಣರಿಗೆ ಶಕ್ತ್ಯನುಸಾರ ದಕ್ಷಿಣೆಯನ್ನು ಕೊಡಬೇಕು.

೧೪-೧೫. ಶತಾನೀಕರಾಜನು ಕೇಳುತ್ತಾನೆ—"ಎಲೈ ದ್ವಿಜವರ್ಯನೇ! ದೇವದೇವನಾದ ವಿಷ್ಣುವಿಗೆ ಯಾವ ಯಾವ ಫಲಗಳು ಇಷ್ಟವಾದುವು? ಅವನ ಶಯನೋತ್ಸವದಲ್ಲಿ ಯಾವ ಯಾವ ಹಣ್ಣುಗಳನ್ನು ಶಯ್ಯೆಯ ಬಳಿ ಇಡಬೇಕು? ಮಾರನೆಯದಿನ ಸ್ವಾಮಿಯಾದ ಆ ವಿಷ್ಣುವಿನ ಪ್ರೀತ್ಯರ್ಥವಾಗಿ ಮನುಷ್ಯನು ತನ್ನ ಶಕ್ತ್ಯನುಸಾರ ಬ್ರಾಹ್ಮಣರಿಗೆ ಯಾವ ದಾನವನ್ನು ಮಾಡಬೇಕು? ಎಂಬುದನ್ನು ಹೇಳು." ಎಂದನು.

೧೬.೧೭. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ಮಹಾಬಾಹುವೇ! ಯಾವ ಯಾವ ಕಾಲದಲ್ಲಿ ಯಾವ ಯಾವ ಫಲಗಳು ಮಧುರಗಳಾಗಿರುವುವೋ

ದಾತವ್ಯಾನಿ ನೃಪಶ್ರೇಷ್ಠ ಸ್ವಶಕ್ತ್ಯಾ ಶಯನೇ ನೃಪ ।
ಮಧುರಾಣಿ ಪ್ರದತ್ತಾನಿ ನರೋ ವಲ್ಲಭತಾಂ ವ್ರಜೇತ್ ॥ ೧೭ ॥

ಯೋಷಿಚ್ಚ ಕುರುಶಾರ್ದೂಲ ಭರ್ತುರ್ವಲ್ಲಭತಾಮಿಯಾತ್ ।
ತಸ್ಮಾತ್ ಕಟುಕತೀವ್ರಾಣಿ ಸ್ತ್ರೀಲಿಂಗಾನಿ ವಿವರ್ಜಯೇತ್ ॥ ೧೮ ॥

ಖರ್ಜೂರಮಾತುಲುಂಗಾನಿ ಶ್ವೇತೇನ ಶಿರಸಾ ಸಹ ।
ಫಲಾನಿ ಶಯನೇ ರಾಜನ್ ಯಜ್ಞಭಾಗಹರಸ್ಯ ತು ॥ ೧೯ ॥

ದೇಯಾನಿ ಕುರುಶಾರ್ದೂಲ ಸ್ವಶಕ್ತ್ಯಾ ಮುಂಜಿಕೇಶಿನೇ ।
ಏತಾನ್ಯೇವ ತು ವಿಪ್ರಸ್ಯ ಗಾಂಗೇಯಸಹಿತಾನಿ ತು ॥ ೨೦ ॥

---

ಯಾವುವು ತೀಕ್ಷ್ಣವಾಗಿಯೂ ಕಹಿಯಾಗಿಯೂ ಇರುವುದಿಲ್ಲವೋ, ಅಂಥವುಗಳನ್ನು ಶಕ್ತ್ಯನುಸಾರ ಸಂಪಾದಿಸಿ ತಂದು, ವಿಷ್ಣುಶಯನದ ಬಳಿ ಇಡಬೇಕು. ಸಿಹಿಯಾದ ಉತ್ತಮ ಫಲಗಳನ್ನು ದೇವರಿಗೆ ಸಮರ್ಪಿಸಿದ ಮನುಷ್ಯನು ಹೆಂಡತಿಗೆ ಪ್ರಿಯನಾಗುತ್ತಾನೆ.

೧೮. ಹೀಗೆಯೇ ಮಧುರ ಫಲಸಮರ್ಪಣೆಮಾಡುವುದರಿಂದ ಹೆಂಗಸೂ ಕೂಡ ಗಂಡನಿಗೆ ಅತ್ಯಂತ ಪ್ರಿಯಳಾಗುತ್ತಾಳೆ. ಆದ್ದರಿಂದ ಕೆಲವು ಸ್ತ್ರೀಯರಿಗೆ ಇಷ್ಟಗಳಾಗಿರುವ ಕಟು (ಕಹಿ) ಫಲಗಳನ್ನೂ ತೀವ್ರ (ಹುಳಿಯಾದ) ಫಲಗಳನ್ನೂ ಇಡಬಾರದು.

೧೯ ಎಲೈ ರಾಜನೇ ! ಯಜ್ಞದಲ್ಲಿ ಭಾಗವನ್ನು ಹೊಂದತಕ್ಕ ಮಹಾವಿಷ್ಣುವಿನ ಶಯನದಬಳಿ ಖರ್ಜೂರ, ಮಾದಲ ಮೊದಲಾದ ಹಣ್ಣುಗಳನ್ನು, ತೊಟ್ಟು ಸಿಪ್ಪೆ, ಇವುಗಳನ್ನು ತೆಗೆದು (ಸುಲಿದು) ಶ್ವೇತಶಿರಸ್ಸುಳ್ಳವುಗಳನ್ನಾಗಿಮಾಡಿ ಇಡಬೇಕು.

೨೦. ಅಯ್ಯಾ ಕುರುವಂಶೋದ್ಭವನೇ ! ಮನುಷ್ಯನು ತನ್ನ ಶಕ್ತಿ ಅನುಕೂಲ್ಯಗಳಿಗೆ ತಕ್ಕಂತೆ ಫಲಗಳನ್ನು ತಂದು ವಿಷ್ಣುವಿಗೆ ಸಮರ್ಪಿಸಬೇಕು. ಮಾರನೆಯ ದಿನ ಈ ಫಲಗಳನ್ನೇ ಸುವರ್ಣಸಹಿತವಾಗಿ ಭಕ್ತಿಯಿಂದ ಬ್ರಾಹ್ಮಣರಿಗೆ ಶಕ್ತ್ಯನುಸಾರವಾಗಿ ದಾನಕೊಡಬೇಕು.

ದ್ವಿತೀಯೇಹ್ನಿ ಪ್ರದೇಯಾನಿ ಭಕ್ತ್ಯಾ ಶಕ್ತ್ಯಾ ಚ ಭಾರತ ।
ವಾಸೋದಾನಂ ತಥಾ ಧಾನ್ಯಫಲದಾನಸಮನ್ವಿತಂ ।
ಗಾಂಗೇಯಸ್ಯ ವಿಶೇಷೇಣ ಧಾನ್ಯದಾನಂ ಪ್ರಚಕ್ಷತೇ　　॥ ೨೧॥

ಏವಂ ಕರೋತಿ ಯಃ ಸಮ್ಯಙ್ನರೋ ಮಾಸಚತುಷ್ಟಯಂ ।
ತತೋ ಜನ್ಮತ್ರಯಂ ವೀರ ಗೃಹಭಂಗೋ ನ ಜಾಯತೇ　　॥ ೨೨ ॥

ಅಶೂನ್ಯಶಯನಶ್ಚಾಸೌ ಧರ್ಮಕಾಮಾರ್ಥಸಾಧನಃ ।
ಭವತ್ಯವ್ಯಾಹತೈಶ್ವರ್ಯಃ ಪುರುಷೋ ನಾತ್ರ ಸಂಶಯಃ　　॥ ೨೩ ॥

ನಾರೀ ಚ ರಾಜನ್ ಧರ್ಮಜ್ಞಾ ವ್ರತಮೇತದ್ಯಥಾ ವಿಧಿ ।
ಯಾ ಕರೋತಿ ನ ಸಾ ಶೋಚ್ಯಾ ಬಂಧುವರ್ಗಸ್ಯ ಜಾಯತೇ　　॥ ೨೪ ॥

ವೈಧವ್ಯಂ ದುರ್ಭಗತ್ವಂ ಚ ಭರ್ತೃತ್ಯಾಗಂ ಚ ಸತ್ತಮ ।
ನಾಪ್ನೋತಿ ಜನ್ಮತ್ರಿತಯಮೇತಚ್ಚೀರ್ತ್ವಾ ಮಹಾವ್ರತಂ　　॥ ೨೫ ॥

---

೨೧. ಅದಲ್ಲದೆ ವಸ್ತ್ರದಾನ, ಧಾನ್ಯದಾನ, ಫಲದಾನ ಇವುಗಳನ್ನೂ ಮಾಡಬೇಕು. ದಾನಗಳಲ್ಲಿ ಸುವರ್ಣದಾನ, ಧಾನ್ಯದಾನ ಇವುಗಳನ್ನು ವಿಶೇಷದಾನಗಳೆಂದು ಹೇಳುತ್ತಾರೆ.

೨೨. ಯಾವ ಮನುಷ್ಯನು ಈ ಪ್ರಕಾರ ನಾಲ್ಕುತಿಂಗಳು ಆಚರಿಸುವನೋ, ಅವನಿಗೆ ಮುಂದಿನ ಮೂರು ಜನ್ಮಗಳಲ್ಲಿ ಗೃಹಸ್ಥತಾಭಂಗವಾಗುವುದಿಲ್ಲ.

೨೩. ಅಶೂನ್ಯಶಯನ ವ್ರತಮಾಡಿದ ಮನುಷ್ಯನು ಧರ್ಮ, ಕಾಮ, ಅರ್ಥ, ಇವುಗಳನ್ನು ಸಾಧಿಸಿ ಅಪ್ರತಿಹತವಾದ ಐಶ್ವರ್ಯವುಳ್ಳವನಾಗುವನು ಎಂಬುದರಲ್ಲಿ ಸಂಶಯವಿಲ್ಲ.

೨೪–೨೫. ಅಯ್ಯಾ ಪ್ರಭುವೇ! ಧರ್ಮಜ್ಞಳಾದ ಯಾವ ಹೆಂಗಸು ವಿಧಿಗನುಸಾರವಾಗಿ ಈ ವ್ರತವನ್ನು ಮಾಡುತ್ತಾಳೋ, ಅವಳ ವಿಷಯದಲ್ಲಿ ಬಂಧುಗಳು ಕೊರಗದೆ ನಿಶ್ಚಿಂತರಾಗಿರಬಹುದು. ಆಕೆಯು ಮುಂದಿನ ಮೂರು ಜನ್ಮಗಳಲ್ಲಿಯೂ ವೈಧವ್ಯವನ್ನಾಗಲಿ ದಾರಿದ್ರ್ಯವನ್ನಾಗಲಿ ಭರ್ತೃತ್ಯಾಗದುಃಖವನ್ನಾಗಲಿ ಹೊಂದುವುದಿಲ್ಲ.

ಅದತ್ವಾ ಕಟುಕಾನೀಹ ಫಲಾನಿ ಕುರುನಂದನ ।
ಖರ್ಜೂರ ಮಾತುಲುಂಗಾನಿ ಬೃಹತ್ಫಲಶಿರಾಂಸಿ ಚ ॥ ೨೬ ॥

ದತ್ವಾ ದ್ವಿಜೇಭ್ಯೋ ರಾಜೇಂದ್ರ ಮಧುರಾಣಿ ಪರಾಣಿ ಚ ।
ತಸ್ಮಾತ್ ಸ್ವಶಕ್ತ್ಯಾ ಯತ್ನೇನ ದೇಯಾನಿ ಮಧುರಾಣಿ ಚ ॥ ೨೭ ॥

ಇತ್ಯೇತಾ ಕಥಿತಾ ಕೃಷ್ಣದ್ವಿತೀಯಾತಿಥಿರುತ್ತಮಾ ।
ಯಾಮುಪೋಷ್ಯ ನರೋ ರಾಜನ್ ಋದ್ಧಿಂ ವೃದ್ಧಿಂ ತಥಾ ವ್ರಜೇತ್ ॥೨೮॥

॥ ಶತಾನೀಕ ಉವಾಚ ॥

ಭವತಾ ಕಥಿತೇಯಂ ವೈ ದ್ವಿತೀಯಾತಿಥಿರುತ್ತಮಾ ।
ಅಶ್ವಿಭ್ಯಾಂ ದ್ವಿಜಶಾರ್ದೂಲ ಕಥಮಸ್ಯಾಂ ಜನಾರ್ದನಃ ॥ ೨೯ ॥

ಸಂಪೂಜ್ಯಃ ಫಲಸಂಜ್ಞಾಯಾಂ ಕಥಿತಃ ಪದ್ಮಯಾಸಹ ।
ತದತ್ರ ಕೌತುಕಂ ಮಹ್ಯಂ ಸುಮಹಜ್ಜಾಯತೇ ದ್ವಿಜ ॥ ೩೦ ॥

---

೨೬-೨೭. ಅಯ್ಯಾ ಕುರುವಂಶಜನೇ! ಕಹಿಯಾದ ಹಣ್ಣುಗಳನ್ನು ದಾನ ಕೊಡದೆ, ಸಿಹಿಯಾದ ಖರ್ಜೂರ, ಮಾದಲ, ಕಿತ್ತಲೆ ಮುಂತಾದ ಶ್ರೇಷ್ಠವಾದ ಫಲಗಳನ್ನೇ ಬ್ರಾಹ್ಮಣನಿಗೆ ದಾನ ಕೊಡಬೇಕು. ಆದ್ದರಿಂದ ಶಕ್ತ್ಯನುಸಾರವಾಗಿ ಮಧುರವಾದ ಹಣ್ಣುಗಳನ್ನೇ ಕೊಡಬೇಕು.

೨೮. ಓ ರಾಜನೇ! ಈರೀತಿಯಲ್ಲಿ ಉತ್ತಮವಾದ ಕೃಷ್ಣದ್ವಿತೀಯಾ ತಿಥಿ ವಿಚಾರವನ್ನು ಹೇಳಿಯಾಯಿತು, ಈ ದ್ವಿತೀಯೆಯಲ್ಲಿ ಉಪವಾಸಮಾಡಿದ ಮನುಷ್ಯನು ಸಮೃದ್ಧಿಯನ್ನೂ ವೃದ್ಧಿಯನ್ನೂ ಹೊಂದುತ್ತಾನೆ ಎಂದನು.

೨೯. ಆಗ ಶತಾನೀಕರಾಜನು ಹೇಳುತ್ತಾನೆ—"ಅಯ್ಯಾ ಬ್ರಾಹ್ಮಣೋತ್ತಮನೇ! ಅಶ್ವಿನೀ ದೇವತೆಗಳಿಗೆ ಇಷ್ಟವೂ, ಉತ್ತಮವೂ ಆದ ಫಲದ್ವಿತೀಯೆಯಲ್ಲಿ ಲಕ್ಷ್ಮೀಸಮೇತನಾದ ವಿಷ್ಣುವನ್ನು ಪೂಜೆಮಾಡಬೇಕೆಂದು ನೀನು ಸಂಗ್ರಹವಾಗಿ ಹೇಳಿದೆ.

೩೦. ಆ ತಿಥಿಯಲ್ಲಿ ವಿಷ್ಣುವನ್ನು ಹೇಗೆ ಪೂಜಿಸಬೇಕು, ಎಂಬುದನ್ನು ವಿವರವಾಗಿ ತಿಳಿದುಕೊಳ್ಳಬೇಕೆಂದು, ನನಗೆ ಬಹಳ ಕುತೂಹಲವಾಗುತ್ತಿದೆ" ಎಂದನು.

॥ ಸುಮಂತುರುವಾಚ ॥

ನೈತನ್ನ ಸಂದೇಹೋ ತಥಾ ವದಸಿ ಭಾರತ ।
ಶ್ವಿನೋರ್ವೈ ತಿಥಿರಿಯಂ ಕಿಂತು ವಾಕ್ಯಂ ನಿಬೋಧ ಮೇ ॥ ೩೧ ॥

ಅಶೂನ್ಯಶಯನಾ ದತ್ತಾ ವಿಷ್ಣೋರಮಿತತೇಜಸಃ ।
ಅಶ್ವಿಭ್ಯಾಂ ಕುರುಶಾರ್ದೂಲ ಪ್ರೀತಯೇ ಮುಂಜಿಕೇಶಿನಃ ॥ ೩೨ ॥

ತಾವೇವ ಕುರುಶಾರ್ದೂಲ ಪೂಜ್ಯೇತೇಽತ್ರ ಮಹೀಪತೇ ।
ನಾಸತ್ಯೌ ಭಗವಾನ್ವಿಷ್ಣುಃ ದತ್ತಶ್ಚ ಶ್ರೀರ್ವಿಭಾವ್ಯತೇ ॥ ೩೩ ॥

ಇತಿ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ದ್ವಿತೀಯಾ ಕಲ್ಪ
ಸಮಾಪ್ತಿಃ ವಿಂಶೋಽಧ್ಯಾಯ.



೩೧–೩೩. ಆಗ ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ಭರತ ಕುಲೋತ್ಪನ್ನನೇ! ನೀನು ಹೇಳಿದುದು ಯಥಾರ್ಥವಾದುದು, ಆದರಲ್ಲಿ ಸಂದೇಹ ವಿಲ್ಲ, ಈ ದ್ವಿತೀಯಾ ತಿಥಿಯು ಅಶ್ವಿನೀ ದೇವತೆಗಳದು. ಈ ಸಂದರ್ಭದಲ್ಲಿ ನಾನು ಹೇಳುವುದನ್ನು ಕೇಳು, ಮಹಾತೇಜಸ್ವಿಯೂ ಮುಂಜಿಕೇಶಿಯೂ ಎನಿಸಿದ ವಿಷ್ಣು ವಿನ ಪ್ರೀತ್ಯರ್ಥವಾಗಿ ಅಶೂನ್ಯಶಯನ ವ್ರತಾಂಗವಾದ ಫಲದಾನಗಳನ್ನು ಅಶ್ವಿನೀ ದೇವತೆಗಳು ಮಾಡಿದ್ದರಿಂದ ಆ ಫಲದಾನಕ್ಕೆ ಉದ್ದೇಶ್ಯರಾದ ಆ ಲಕ್ಷ್ಮೀನಾರಾಯಣ ರನ್ನು ಜನರೆಲ್ಲರೂ ಪೂಜಿಸುತ್ತಾರೆ ಎಂದನು.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ದ್ವಿತೀಯಾಕಲ್ಪ
ವಿಚಾರವೆಂಬ ಇಪ್ಪತ್ತನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕವಿಂಶೋಽಧ್ಯಾಯಃ

॥ ಸುಮಂತುರುವಾಚ ॥

ಪತಿವ್ರತಾ ಪತಿಪ್ರಾಣಾ ಪತಿಶುಶ್ರೂಷಣೇ ರತಾ ।
ಏವಂ ವಿಧಾಪಿ ಯಾ ಪ್ರೋಕ್ತಾ ಶುಚಿಃ ಸಂಶೋಭನಾ ಸತೀ ॥ ೧ ॥

ಸೋಪವಾಸಾ ತೃತೀಯಾಯಾಂ ಲವಣಂ ಪರಿವರ್ಜಯೇತ್ ।
ಸಾ ಗೃಹ್ಣಾತಿ ಚ ವೈ ಭಕ್ತ್ಯಾ ವ್ರತಮಾಮರಣಾಂತಿಕಂ ॥ ೨ ॥

ಗೌರೀ ದದಾತಿ ಸಂತುಷ್ಟಾ ರೂಪ ಸೌಭಾಗ್ಯಮೇವ ಚ ।
ಲಾವಣ್ಯಂ ಲಲಿತಂ ಹೃದ್ಯಂ ಶ್ಲಾಘ್ಯಂ ಪುಂಸಾಂ ಮನೋರಮಂ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯ

೧-೩. ಸುಮಂತುಮುನಿವರ್ಯರು ಹೇಳುತ್ತಾರೆ—ಯಾವಳು ಪತಿವ್ರತೆಯೂ, ಪತಿಯನ್ನು ಪ್ರಾಣದಂತೆ ಕಾಣುವವಳೂ, ಪತಿಸೇವೆಯಲ್ಲಿ ಆಸಕ್ತಳೂ, ಆಗಿರುವಳೋ ಅಂಥವಳು ಸುಮಂಗಲಿ, ಪತಿವ್ರತೆ, ಪರಿಶುದ್ಧೆಯೆಂದು ಹೇಳಿಸಿಕೊಳ್ಳುತ್ತಿದ್ದರೂ, ತೃತೀಯಾತಿಥಿಯಲ್ಲಿ ಉಪವಾಸಮಾಡಬೇಕು. ಅದು ಸಾಧ್ಯವಾಗದಿದ್ದರೆ ಉಪ್ಪು ಹಾಕಿದ ಆಹಾರವನ್ನು ತಿನ್ನದೇ ವರ್ಜ್ಯಮಾಡಬೇಕು. ಸ್ತ್ರೀಯು ಈ ವ್ರತವನ್ನು ಭಕ್ತಿಯಿಂದ ಯಾವಜ್ಜೀವವೂ ಆಚರಿಸಿದರೆ ಗೌರೀದೇವಿಯು ಸುಪ್ರೀತಳಾಗಿ ಸೌಂದರ್ಯ, ಸೌಭಾಗ್ಯ, ಲಾವಣ್ಯ ಮೊದಲಾದುವನ್ನೂ ಪುರುಷರ ದೃಷ್ಟಿಗೆ ಮನೋಹರವೂ ಶ್ಲಾಘ್ಯವೂ ಆಗಿರುವ ಸೊಬಗನ್ನೂ ಕೊಡುತ್ತಾಳೆ.

**ಪುಂಸೋ ಮನೋರಮಾ ನಾರೀ ಭರ್ತಾ ನಾರ್ಯಾ ಮನೋರಮಃ ।**
**ಗೌರೀವ್ರತೇನ ಭವತಿ ರಾಜನ್ ಲವಣವರ್ಜನಂ ॥ ೪ ॥**

**ಇದಂ ವ್ರತಂ ಪ್ರತಿ ವಿಭೋ ಧರ್ಮರಾಜಸ್ಯ ಶೃಣ್ವತಃ ।**
**ಉಮಯಾ ಚ ಪುರಾ ಪ್ರೋಕ್ತಂ ಯದ್ವಾಕ್ಯಂ ತನ್ನಿಬೋಧ ಮೇ ॥ ೫ ॥**

**ಮಯಾ ವ್ರತಮಿದಂ ಸೃಷ್ಟಂ ಸೌಭಾಗ್ಯಕರಣಂ ನೃಣಾಂ ।**
**ಮರ್ತ್ಯೇ ತು ನಿಯತಾ ನಾರೀ ವ್ರತಮೇತಚ್ಚರಿಷ್ಯತಿ ।**
**ಸಹ ಭರ್ತ್ರಾ ಸ ಮೋದೇತ ಯಥಾ ಭರ್ತಾ ಹರೋ ಮಮ ॥ ೬ ॥**

**ಯಾಚ ಕನ್ಯಾ ನ ಭರ್ತಾರಂ ವಿಂದತೇ ಶೋಭನಾ ಸತೀ ।**
**ಸಾಪೀದಂ ವ್ರತಮುದ್ದಿಶ್ಯ ಭವೇದಕ್ಷಾರಭೋಜನಾ ।**
**ಮಚ್ಚಿತ್ತಾ ಮನ್ಮನಾಃ ಕುರ್ಯಾತ್ ಮದ್ಭಕ್ತ್ಯಾ ಮತ್ಪರಿಗ್ರಹಾ ॥ ೭ ॥**

---

೪. ಅಯ್ಯಾ ರಾಜನೇ! ಪುರುಷರಿಗೆ ಮನೋಹಾರಿಣಿಯಾದ ಸ್ತ್ರೀಯು ದೊರಕುವುದೂ, ಸ್ತ್ರೀಗೆ ಮನೋಹರನಾದ ಪುರುಷನು ಲಭಿಸುವುದೂ, ಈ ಎರಡೂ ಅವರು ಆಚರಿಸಿದ ಲವಣವರ್ಜ್ಯರೂಪವಾದ ತೃತೀಯಾ ಗೌರೀವ್ರತದ ಮಹಿಮೆ ಯಿಂದಲೇ ಆಗಿವೆ.

೫. ಅಯ್ಯಾ ಪ್ರಭುವೇ ! ಈ ವ್ರತವಿಚಾರವನ್ನು ಧರ್ಮರಾಯನು ಆಲಿಸು ತ್ತಿರುವಾಗ ಉಮೆಯು ಯಾವ ಪ್ರಕಾರ ಹೇಳಿದಳೋ ಆ ಮಾತಿನಿಂದಲೇ ನಾನೂ ಹೇಳುತ್ತೇನೆ ಕೇಳು.

೬. ಮನುಷ್ಯರಿಗೆ ಸೌಭಾಗ್ಯವನ್ನುಂಟುಮಾಡುವ ಈ ವ್ರತವನ್ನು ನಾನೇ ವಿಧಿಸಿದೇನೆ. ನರಲೋಕದಲ್ಲಿ ಸ್ತ್ರೀಯು ನಿಯಮವುಳ್ಳವಳಾಗಿ ಈ ವ್ರತವನ್ನು ಮಾಡಿ ದರೆ, ಹರನು ನನಗೆ ಹೇಗೆ ಪ್ರಿಯಪತಿಯಾದನೋ, ಹಾಗೆ ಅವಳ ಪತಿಯೂ ಅವಳಿಗೆ ಪ್ರಿಯನಾಗಿ ಆಕೆ ಸಂತೋಷಪಡುತ್ತಾಳೆ.

೭. ಕನ್ಯೆಯು ತಾನು ಒಳ್ಳೆಯ ಸೌಂದರ್ಯದಿಂದ ಕೂಡಿದ್ದರೂ, ಅನುರೂಪ ನಾದ ಪತಿಯು ಲಭಿಸದೇ ಇದ್ದರೆ, ಆ ಸ್ತ್ರೀಯು ಈ ತೃತೀಯಾ ಗೌರೀವ್ರತವನ್ನು ಆಚರಿಸಿ, ಲವಣವರ್ಜ್ಯವಾದ ಆಹಾರವನ್ನು ಸೇವಿಸಬೇಕು. ನನ್ನಲ್ಲೇ ಮನಸ್ಸುಳ್ಳವ ಳಾಗಿ ನನ್ನ ಭಕ್ತಳು ಈ ವ್ರತವನ್ನು ಆಚರಿಸಿದರೆ, ನಾನು ಎಂದಿಗೂ ಅವಳನ್ನು ಕೈಬಿಡುವುದಿಲ್ಲ.

ಗೌರೀಂ ಸಂಸ್ಥಾಪ್ಯ ಸೌವರ್ಣೀಂ ಗಂಧಪುಷ್ಪೈಶ್ಚ ಭೂಷಿತಾಂ ।
ವಸ್ತ್ರಾಲಂಕಾರಸಂವೀತಾಂ ಪುಷ್ಪಮಂಡಲಮಂಡಿತಾಂ ॥ ೮ ॥

ಲವಣಂ ಗುಡಂ ಘೃತಂ ತೈಲಂ ದೇವ್ಯೈ ಶಕ್ತ್ಯಾ ನಿವೇದಯೇತ್ ।
ತಥಾ ಖಂಡಂ ಜೀರಕಂ ಚ ಪತ್ರಶಾಕಂ ಚ ಭಾರತ ॥ ೯ ॥

ಗುಡಘೃಷ್ಟಾಂಸ್ತಥಾ ಪೂಪಾನ್ ಖಂಡವೇಷ್ಟಾಂಸ್ತಥಾ ನೃಪ ।
ಬ್ರಾಹ್ಮಣೇ ವ್ರತಸಂಪನ್ನೇ ಪ್ರದದ್ಯಾತ್ ಸು ಬಹುಶ್ರುತೇ ॥ ೧೦ ॥

ಶುಕ್ಲಪಕ್ಷೇ ಸದಾ ದೇಯಾ ಯಥಾಶಕ್ತ್ಯಾ ಹಿರಣ್ಮಯೀ ।
ಧನಹೀನೇ ತು ಶಕ್ತ್ಯಾ ಚ ಮಧುವೃಕ್ಷಮಯೀ ನೃಪ ॥ ೧೧ ॥

ಅರ್ಚ್ಯಾ ನಿತ್ಯಂ ಸನ್ನಿಧಾನಾತ್ ತತ್ರ ಗೌರೀ ನ ಸಂಶಯಃ ।
ಅಕ್ಷಾರಲವಣಂ ರಾತ್ರೌ ಭುಂಕ್ತೇ ಚೈವ ಸುವಾಗ್ಯತಾ ॥ ೧೨ ॥

---

೮. ಸುವರ್ಣಮಯವಾದ ಗೌರೀಪ್ರತಿಮೆಯನ್ನಿಟ್ಟುಕೊಂಡು ವಸ್ತ್ರಾಭರಣಗಳು, ಗಂಧಪುಷ್ಪಾದಿಗಳು, ಮಂಗಳದ್ರವ್ಯಗಳು ಇವುಗಳಿಂದ ಪೂಜಿಸಿ, ಪುಷ್ಪಮಾಲೆಯಿಂದ ಅಲಂಕರಿಸಿ,

೯-೧೦. ಅಯ್ಯಾ ಭರತಕುಲ ಸಂಭೂತನೇ! ಉಪ್ಪು, ಬೆಲ್ಲ, ತುಪ್ಪ, ಎಣ್ಣೆ ಇವುಗಳನ್ನೂ, ಶಕ್ತ್ಯನುಸಾರ ಕಲ್ಲುಸಕ್ಕರೆ, ಜೀರಿಕಾರಸ, ಸೊಪ್ಪಿನಪಲ್ಯಗಳು, ಬೆಲ್ಲ ಸೇರಿಸಿ ಅರೆದು ಬೇಯಿಸಿದ ಭಕ್ಷ್ಯ, ಹೋಳಿಗೆ, ಕರಿಗಡಬು ಮುಂತಾದ್ದನ್ನೂ, ವ್ರತಶಾಲಿಯೂ ಶಾಸ್ತ್ರಸಂಪನ್ನನೂ ಆದ ಬ್ರಾಹ್ಮಣನಿಗೆ ದಾನಮಾಡಬೇಕು.

೧೧. ಯಾವಾಗಲೂ ಶುಕ್ಲಪಕ್ಷತೃತೀಯೆಯಲ್ಲಿ ಈ ವ್ರತಮಾಡಬೇಕು. ಬ್ರಾಹ್ಮಣನಿಗೆ ದಾನಕೊಡುವ ಆ ವಸ್ತುಗಳಲ್ಲದೆ ಸುವರ್ಣದ ಪ್ರತಿಮೆಯನ್ನೂ ದಾನ ಮಾಡಬೇಕು. ದ್ರವ್ಯಾನುಕೂಲವಿಲ್ಲದವರು ಬೆಲ್ಲದ ಅಚ್ಚಿನಲ್ಲಿ ಅರಿಸಿನ ಗೌರಿಯನ್ನಿಟ್ಟಾದರೂ ದಾನಮಾಡಬೇಕು.

೧೨. ಈ ಗುಡಖಂಡದಲ್ಲಿ ಯಾವಾಗಲೂ ಗೌರಿಯು ಸನ್ನಿಹಿತಳಾಗಿರುವುದರಿಂದ ಅದರಲ್ಲೇ ಆಕೆಯನ್ನು ಪೂಜಿಸಬೇಕೆಂಬುದರಲ್ಲಿ ಸಂಶಯವಿಲ್ಲ. ಈ ವ್ರತ ಮಾಡಿ ರಾತ್ರಿ, ಉಪ್ಪು ಕಾರ ಸೋಕದ ಆಹಾರಪದಾರ್ಥಗಳನ್ನು ಮೌನದಿಂದ ಭೋಜನಮಾಡಬೇಕು.

**ಗೌರೀಸನ್ನಿಹಿತಾ ನಿತ್ಯಂ ಭೂಮೌ ಪ್ರಸ್ತರಶಾಯಿನೀ ।**
**ಏವಂ ನಿಯಮಸಂಯುಕ್ತಸ್ಯ ದೇವ್ಯಾ ಯತ್ಸಮುದಾಹೃತಂ ॥ ೧೩ ॥**

**ತಚ್ಛೃಣುಷ್ವ ಮಹಾಬಾಹೋ ಕಥ್ಯಮಾನಂ ಮಹತ್ಫಲಂ ।**
**ಭರ್ತಾರಂ ತು ಲಭೇತ್ಕನ್ಯಾ ಯಂ ವಾಂಛತಿ ಮನೋಗುಗಂ ॥ ೧೪ ॥**

**ಸುಚಿರಂ ಸಹ ವೈ ಭರ್ತ್ರಾ ಕ್ರೀಡಯಿತ್ವಾ ಇಹೈವ ಸಾ ।**
**ಸಂತತಿಂ ಚ ಪ್ರತಿಷ್ಠಾಪ್ಯ ಸಹ ತೇನೈವ ಗಚ್ಛತಿ ॥ ೧೫ ॥**

**ಹೇಲಿಲೋಕಂ ಚಂದ್ರಲೋಕಂ ಲೋಕಂ ಚಿತ್ರಶಿಖಂಡಿನಃ ।**
**ಗತ್ವಾ ಯಾತಿ ಸದೋರಾಜನ್ ವಾಮದೇವಸ್ಯ ಭಾರತ ॥ ೧೬ ॥**

**ವಿಧವಾ ತು ಯದಾ ರಾಜನ್ ದೇವ್ಯಾ ವ್ರತಪರಾಯಣಾ ।**
**ಭರ್ತಾರಂ ನಿಯತಾ ನಿತ್ಯಂ ಸದಾರ್ಚನಪರಾಯಣಾ ॥ ೧೭ ॥**

---

೧೩. ಗೌರಿದೇವಿಯನ್ನು ಪೂಜಿಸಿರುವ ಬಳಿ ಭೂಮಿಯಲ್ಲಿ ಹಾಸಿರುವ ಕಲ್ಲಿನ ಮೇಲೆ ಎಂದರೆ ಬರಿಯ ನೆಲದಮೇಲೆ ಮಲಗಬೇಕು. ಈರೀತಿ ನಿಯಮದಿಂದ ಕೂಡಿದವಳಿಗೆ ದೇವಿಯು ಹಿಂದೆ ಹೇಳಿರುವ ಫಲಗಳನ್ನು ಕೊಡುವಳು.

೧೪. ಅಯ್ಯಾ ಬಲಿಷ್ಠನೇ! ಮಹಾಫಲವುಳ್ಳದ್ದೆಂದು ಗೌರಿದೇವಿಯಿಂದ ಉಕ್ತವೂ ಮತ್ತು ನಿಯಮವಿಶಿಷ್ಟವೂ ಆದ ಈ ವ್ರತ ವಿಚಾರವನ್ನು ಕೇಳು, ಕನ್ಯೆಯು ಈ ವ್ರತವನ್ನು ಮಾಡಿದರೆ ತಾನು ಅಪೇಕ್ಷೆಪಟ್ಟಂತಹ ಮನೋನುಗುಣನಾದ ಪತಿಯನ್ನು ಪಡೆಯುವಳು.

೧೫–೧೬. ಅಯ್ಯಾ ಭರತಕುಲೋತ್ಪನ್ನನೇ! ಅವಳು ಈ ಲೋಕದಲ್ಲಿ ಬಹುಕಾಲದವರೆಗೆ ಗಂಡನೊಡನೆ ಕ್ರೀಡಿಸಿ ಮಕ್ಕಳನ್ನು ಪಡೆದು, ಅವನ ಸಂಗಡಲೇ ಲೋಕಾಂತರಕ್ಕೂ ಹೋಗುವಳಾಗಿ ಸೂರ್ಯಲೋಕವನ್ನೂ ಚಂದ್ರಲೋಕವನ್ನೂ ಸಪ್ತರ್ಷಿಲೋಕವನ್ನೂ ಸೇರಿ ಅಲ್ಲಿಂದ ಶಿವನ ಸಭೆಗೂ ಹೋಗುತ್ತಾಳೆ.

೧೭. ಈ ದೇವಿಯ ವ್ರತದಲ್ಲಿ ಆಸಕ್ತಳಾದವಳು, ಪ್ರಾರಬ್ಧಪ್ರಾಬಲ್ಯದಿಂದ ಒಂದುವೇಳೆ ವಿಧವೆಯಾದರೂ ಜನ್ಮಾಂತರದಲ್ಲಾದರೂ ದೇವೀ ಪೂಜಾ ಪರಾಯಣತೆಯ ಮಹಿಮೆಯಿಂದ ಚಿರಾಯುಷ್ಯನಾದ ಪತಿಯನ್ನು ನಿಜವಾಗಿ ಪಡೆಯುತ್ತಾಳೆ.

ಇಹ ಚೋತ್ಸೃಜ್ಯ ದೇಹಂ ಸ್ವಂ ದೃಷ್ಟ್ವಾ ಹರಿಪುರೇ ಪ್ರಿಯಂ ।
ಆಕ್ಷಿಪ್ಯ ಯಮದೂತೇಭ್ಯಃ ಸಹಭರ್ತ್ರಾ ರಮೇದ್ದಿವಿ ॥ ೧೮ ॥

ವರ್ಷಕೋಟಿಂ ದಶಗುಣಂ ರಮಿತ್ವಾ ಸಾ ಇಹಾಗತಾ ।
ಭರ್ತ್ರಾ ಸಹೈವ ಪೂರ್ವೋಕ್ತಂ ಲಭತೇ ಫಲಮೀಪ್ಸಿತಂ ॥ ೧೯ ॥

ಇಂದ್ರಾಣ್ಯಾಪಿ ವ್ರತಮಿದಂ ಪುತ್ರಾರ್ಥಿನ್ಯಾ ನರಾಧಿಪ ।
ಲಬ್ಧಃ ಪುತ್ರೋ ವ್ರತಸ್ಯಾಂತೇ ಜಯಂತೋನಾಮ ನಾಮತಃ ॥ ೨೦ ॥

ಅರುಂಧತ್ಯಾ ತಥಾಚೀರ್ಣಂ ವಶಿಷ್ಠಂಪ್ರತಿ ಕಾಮತಃ ।
ದೃಶ್ಯತೇ ದಿವಿ ಚಾದ್ಯಾಪಿ ವಶಿಷ್ಠಸ್ಯ ಸಮೀಪತಃ ॥ ೨೧ ॥

ರೋಹಿಣ್ಯಾ ಲವಣತ್ಯಾಗಾತ್ ಸಪತ್ನೀಗಣಮರ್ದನಂ ।
ಲಬ್ಧಂ ದೇವ್ಯಾಃ ಪ್ರಸಾದೇನ ಸೌಭಾಗ್ಯಮಚಲಂ ದಿವಿ ॥ ೨೨ ॥

---

೧೮. ಅವಳು ಈ ಲೋಕದಲ್ಲಿ ದೇಹತ್ಯಾಗಮಾಡಿ, ತನ್ನ ಪ್ರಿಯ ಪತಿಯನ್ನು ಯಮದೂತರ ಕೈಯಿಂದ ಬಿಡಿಸಿಕೊಂಡು, ವಿಷ್ಣುಲೋಕವನ್ನು ಸೇರಿ, ಅಲ್ಲಿ ವಾಸಿಸುವ ಪುಣ್ಯ ಮುಗಿದಮೇಲೆ ಸ್ವರ್ಗಕ್ಕೆ ಬಂದು ಸುಖವಾಗಿ ಕ್ರೀಡಿಸುವಳು.

೧೯. ಅಲ್ಲಿ ಹತ್ತುಕೋಟಿ ವರ್ಷಗಳವರೆಗೆ ಕ್ರೀಡಿಸಿ ಅವಳು ಗಂಡನೊಡನೆಯೇ ಈ ಲೋಕಕ್ಕೆ ಬಂದು, ಗಂಡನಸಹಿತ ಹಿಂದೆ ಹೇಳಿದಂತೆ ಇಷ್ಟವಾದ ಫಲಗಳನ್ನು ಹೊಂದುತ್ತಾಳೆ.

೨೦. ಅಯ್ಯಾ ರಾಜನೇ! ಶಚೀದೇವಿಯು ಮಗನನ್ನು ಪಡೆಯಲು ಬಯಸಿ ಈ ವ್ರತವನ್ನಾಚರಿಸಿ, ವ್ರತವು ಮುಗಿದಮೇಲೆ ಜಯಂತನೆಂಬ ಹೆಸರಿನಿಂದ ಪ್ರಸಿದ್ಧನಾದ ಪುತ್ರನನ್ನು ಪಡೆದಳು.

೨೧. ವಶಿಷ್ಠನನ್ನೇ ಮದುವೆಯಾಗಬೇಕೆಂದು ಬಯಸಿದ ಅರುಂಧತಿಯೂ ಹಿಂದೆ ಈ ವ್ರತವನ್ನು ಮಾಡಿದಳು; ಆಕೆಯು ಈಗಲೂ ಆಕಾಶದಲ್ಲಿ ಸಪ್ತರ್ಷಿಮಂಡಲದಲ್ಲಿ ವಶಿಷ್ಠನ ಸಮೀಪದಲ್ಲಿ ಕಾಣಿಸುತ್ತಿದ್ದಾಳೆ.

೨೨. ಚಂದ್ರನ ಪತ್ನಿಯಾದ ರೋಹಿಣೀದೇವಿಯೂ ಲವಣವರ್ಜನಮಾಡಿ ವ್ರತ ನಡೆಸಿದ್ದರಿಂದ ಗೌರಿದೇವಿಯ ಅನುಗ್ರಹಪಡೆದು ಸವತಿಯರ ಸಮೂಹವನ್ನೆಲ್ಲಾ ಮೆಟ್ಟಿ ಸ್ವರ್ಗದಲ್ಲಿ ಅಚಲವಾದ ಸೌಭಾಗ್ಯವನ್ನು ಪಡೆದಳು.

ಇತ್ಯೇಷಾ ತಿಥಿರಿತ್ಯೇವ ತೃತೀಯಾ ಲೋಕಪೂಜಿತಾ ।
ಸದಾ ವಿಶೇಷತಃ ಪುಣ್ಯಾ ವೈಶಾಖೇ ಮಾಸಿ ಯಾ ಭವೇತ್ ॥ ೨೩ ॥

ಪುಣ್ಯಾ ಭಾದ್ರಪದೇಮಾಸಿ ಮಾಘೇಪ್ಯೇವಂ ನ ಸಂಶಯಃ ।
ಮಾಘೇ ಭಾದ್ರಪದೇ ಚಾಪಿ ಸ್ತ್ರೀಣಾಂ ಧರ್ಮಂ ಪ್ರಚಕ್ಷತೇ ॥ ೨೪ ॥

ಸಾಧಾರಣೀ ತು ವೈಶಾಖೇ ಸರ್ವಲೋಕಸ್ಯ ಭಾರತ ।
ಮಾಘಮಾಸೇ ತೃತೀಯಾಯಾಂ ಗುಡಸ್ಯ ಲವಣಸ್ಯ ಚ ।
ದಾನಂ ಶ್ರೇಯಸ್ಕರಂ ರಾಜನ್ ಸ್ತ್ರೀಣಾಂ ಚ ಪುರುಷಸ್ಯ ಚ ॥ ೨೫ ॥

ಗುಡೇನ ತುಷ್ಯತೇ ದತ್ತೋ ಲವಣೇನ ತು ವಿಶ್ವಭೂಃ ।
ಗುಡಪೂಪಾಸ್ತು ದಾತವ್ಯಾ ಮಾಸಿ ಭಾದ್ರಪದೇ ತಥಾ ॥ ೨೬ ॥

ತೃತೀಯಾಯಾಂ ತು ಮಾಘಸ್ಯ ವಾಮದೇವಸ್ಯ ಪ್ರೀತಯೇ ।
ವಾರಿದಾನಂ ಪ್ರಶಸ್ತಂ ಸ್ಯಾತ್ ಮೋದಕಾನಾಂ ಚ ಭಾರತ ॥ ೨೭ ॥

---

೨೩. ಈ ಪ್ರಕಾರ ಈ ತೃತೀಯಾ ತಿಥಿಯು ಲೋಕಪೂಜಿತವಾದುದು. ವೈಶಾಖಮಾಸದಲ್ಲಿ ಬರುವ ಶುಕ್ಲತದಿಗೆಯೇ ವಿಶೇಷ ಪುಣ್ಯಕರವಾದ ಅಕ್ಷತೃತೀಯೆ. ಭಾದ್ರಪದ ಶುದ್ಧ ತದಿಗೆಯ ಸ್ವರ್ಣಗೌರೀವ್ರತ, ಮಾಘಶುದ್ಧ ತದಿಗೆಯಲ್ಲಿಯ ಮೌನಗೌರೀವ್ರತ ಇವೂ ಪುಣ್ಯಕರವೆಂಬುದರಲ್ಲಿ ಸಂದೇಹವಿಲ್ಲ.

೨೪-೨೫. ಮಾಘಮಾಸ ಭಾದ್ರಪದಮಾಸಗಳಲ್ಲಿ ಗೌರೀ ವ್ರತಮಾಡುವುದು ಸುಮಂಗಲಿಯರಿಗೆ ಸ್ವಧರ್ಮವಾಗಿದೆಯೆಂದು ಹೇಳುತ್ತಾರೆ. ವೈಶಾಖ ಶುದ್ಧ ತದಿಗೆಯ ವ್ರತವು ಸರ್ವರಿಗೂ ಸಾಮಾನ್ಯವಾದುದು. ಮಾಘಮಾಸ ತೃತೀಯೆಯಲ್ಲಿ ಗುಡದಾನ ಲವಣದಾನ ಇವನ್ನು ಮಾಡಿದ ಸ್ತ್ರೀಪುರುಷರಿಗೆ ಸಕಲ ಇಷ್ಟಾರ್ಥಗಳೂ ಲಭಿಸುವುವು.

೨೬. ಗುಡದಾನದಿಂದ ದತ್ತಾತ್ರೇಯನೂ, ಲವಣದಾನದಿಂದ ಸೃಷ್ಟಿಕರ್ತನೂ ಸುಪ್ರೀತರಾಗುವರು. ಭಾದ್ರಪದಮಾಸದಲ್ಲಿ ಬೆಲ್ಲಹಾಕಿ ಮಾಡಿದ ಒಬ್ಬಟ್ಟು ಮುಂತಾದ ಭಕ್ಷ್ಯಗಳನ್ನು ದಾನಮಾಡಬೇಕು.

೨೭. ಅಯ್ಯಾ ಭರತವಂಶಜನೇ ! ಮಾಘ ಶುದ್ಧ ತದಿಗೆಯಲ್ಲಿ ವಾಮದೇವ ಪ್ರೀತಿಗಾಗಿ ಉದಕುಂಭ, ಮೋದಕ ಈ ದಾನಗಳನ್ನು ಮಾಡುವುದು ಪ್ರಶಸ್ತವು.

ವೈಶಾಖೇಮಾಸಿ ರಾಜೇಂದ್ರ ತೃತೀಯಾ ಚಂದನಸ್ಯ ಚ ।
ವಾರಿಣಾ ತುಷ್ಯತೇ ವೇಧಾ ಮೋದಕೈರ್ಭೀಮ ಏವ ಹಿ ।
ದಾನಾತ್ತು ಚಂದನಸ್ಯೇಹ ಕಂಜಜೋ ನಾತ್ರ ಸಂಶಯಃ ॥ ೨೮ ॥

ಯಾತ್ವೇಷಾ ಕುರುಶಾರ್ದೂಲ ವೈಶಾಖೇಮಾಸಿ ವೈ ತಿಥಿಃ ।
ತೃತೀಯಾ ಸಾsಕ್ಷಯಾ ಲೋಕೇ ಗೀರ್ವಾಣೈರಭಿನಂದಿತಾ ॥ ೨೯ ॥

ಆಗತೇಯಂ ಮಹಾಬಾಹೋ ಭೂರಿಚಂದ್ರಂ ವಸುವ್ರತಾ ।
ಕಲಧೌತಂ ತಥಾನ್ನಂ ಚ ಘೃತಂಚಾಪಿ ವಿಶೇಷತಃ ।
ಯದ್ಯದ್ದತ್ತಂ ತ್ವಕ್ಷಯಂ ಸ್ಯಾತ್ ತೇನೇಯಮಕ್ಷಯಾಸ್ಮೃತಾ ॥ ೩೦ ॥

ಯತ್ಕಿಂಚಿದ್ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ।
ತತ್ಸರ್ವಮಕ್ಷಯಂ ಸ್ಯಾದ್ವೈ ತೇನೇಯಮಕ್ಷಯಾ ಸ್ಮೃತಾ ॥ ೩೧ ॥

---

೨೮. ವೈಶಾಖ ಶುದ್ಧ ತೃತೀಯೆಯಲ್ಲಿ ಗಂಧೋದಕ ದಾನಮಾಡೋಣದರಿಂದ ಬ್ರಹ್ಮನು ಸುಪ್ರೀತನಾಗುತ್ತಾನೆ. ಮೋದಕದಾನದಿಂದ (ಭೀಮ) ಶಿವನು ತುಷ್ಟನಾಗುತ್ತಾನೆ. ಚಂದನದ ತುಂಡನ್ನು ದಾನಮಾಡುವುದರಿಂದ ಬ್ರಹ್ಮನು ತೃಪ್ತನಾಗುತ್ತಾನೆಂಬುವುದಕ್ಕೆ ಸಂಶಯವಿಲ್ಲ.

೨೯. ಅಯ್ಯಾ ಕುರುವಂಶಶ್ರೇಷ್ಠನೇ! ವೈಶಾಖ ಶುದ್ಧದಲ್ಲಿ ಬರುವ ತೃತೀಯೆಯನ್ನು ಅಕ್ಷಯತೃತೀಯಾ ಎಂಬದಾಗಿ ದೇವತೆಗಳೆಲ್ಲಾ ಹೇಳಿರುತ್ತಾರೆ. ಲೋಕವೂ ಹಾಗೇ ಹೇಳುವುದು.

೩೦. ಅಯ್ಯಾ ಮಹಾಬಾಹುವೇ! ದ್ರವ್ಯವನ್ನು ವೆಚ್ಚಮಾಡಿ ನಿಯಮದಿಂದ ಮಾಡಲ್ಪಡಬೇಕಾದ ಈ ತೃತೀಯಾವ್ರತವು ಭೂರಿಚಂದ್ರನೆಂಬವನಿಂದ ಆಚರಣೆಗೆ ಬಂದಿತು.

೩೧. ಚಿನ್ನ, ಅನ್ನ, ತುಪ್ಪ ಇವು ಮುಂತಾದುಗಳಲ್ಲಿ ಯಾವುದನ್ನು ಈ ತಿಥಿಯಲ್ಲಿ ವಿಶೇಷವಾಗಿಯಾಗಲಿ ಸ್ವಲ್ಪವಾಗಿಯಾಗಲಿ ಕೊಟ್ಟರು ಅಕ್ಷಯವಾಗುವುದರಿಂದ ಇದನ್ನು ಅಕ್ಷಯತೃತೀಯಾ ಎಂದು ಕರೆಯುತ್ತಾರೆ.

**ಯೋऽಸ್ಯಾಂ ದದಾತಿ ಕರಕಾನ್ ವಾರಿಬೀಜಸಮನ್ವಿತಾನ್ ।**
**ಸ ಯಾತಿ ಪುರುಷೋ ವೀರ ಲೋಕಂ ವೈ ಹೇಮಮಾಲಿನಃ ॥ ೩೨ ॥**

**ಇತ್ಯೇಷಾ ಕಥಿತಾ ವೀರ ತೃತೀಯಾ ತಿಥಿರುತ್ತಮಾ ।**
**ಯಾಮುಪೋಷ್ಯ ನರೋ ರಾಜನ್ ಋದ್ಧಿಂ ವೃದ್ಧಿಂ ಶ್ರಿಯಂ ಭಜೇತ್ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ತೃತೀಯಾ ಕಲ್ಪವಿಧಿ ವರ್ಣನಂ ನಾಮ ಏಕವಿಂಶೋऽಧ್ಯಾಯಃ.**



---

೩೨. ಅಯ್ಯಾ ವೀರನೇ ! ನೀರಿನಿಂದಲೂ ಕಾಳಿನಿಂದಲೂ ಕೂಡಿದ ಕರಗ ವೆಂಬ ಪಾತ್ರೆಗಳನ್ನು ಈ ತಿಥಿಯಲ್ಲಿ ಯಾವನು ದಾನಮಾಡುವನೋ ಆ ಪುರುಷನು ವಿಷ್ಣುಲೋಕವನ್ನು ಹೊಂದುತ್ತಾನೆ.

೩೩. ಈ ಪ್ರಕಾರ ಉತ್ತಮವಾದ ತೃತೀಯಾ ತಿಥಿಯ ವಿಚಾರ ಹೇಳಿದು ದಾಯಿತು. ಈ ತಿಥಿಯಲ್ಲಿ ಉಪವಾಸಮಾಡಿದ ಮನುಷ್ಯನು ಋದ್ಧಿ, ವೃದ್ಧಿ, ಸಂಪತ್ತು ಇವುಗಳನ್ನು ಹೊಂದುವನು.

ಎಂಬಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ತೃತೀಯಾಕಲ್ಪ ವರ್ಣನೆಯೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಾವಿಂಶೋಽಧ್ಯಾಯಃ

॥ ಸುಮಂತುರುವಾಚ ॥

ಚತುರ್ಥ್ಯಾಂ ತು ಸದಾ ರಾಜನ್ ನಿರಾಹಾರವ್ರತಾನ್ವಿತಃ ।
ದತ್ವಾ ತಿಲಾನ್ನಂ ವಿಪ್ರಸ್ಯ ಸ್ವಯಂ ಭುಂಕ್ತೇ ತಿಲೌದನಂ ॥ ೧ ॥

ವರ್ಷದ್ವಯೇಸಮಾಪ್ತಿರ್ಹಿ ವ್ರತಸ್ಯ ತು ಯದಾ ಭವೇತ್ ।
ವಿನಾಯಕಸ್ತ್ರಸ್ಯ ತುಷ್ಟೋ ದದಾತಿ ಫಲಮೀಪ್ಸಿತಂ ॥ ೨ ॥

ಯಾತಿ ಭಾಗ್ಯನಿವಾಸಂ ಹಿ ಕ್ರೀಡತೇ ವಿಭವೈಸ್ಸಹ ।
ಇಹ ಚಾಗತ್ಯ ಪುಣ್ಯಾಂತೇ ದಿವ್ಯೋ ದಿವ್ಯವಪುರ್ಯಶಾಃ ॥ ೩ ॥

---

## ಇಪ್ಪತ್ತೆರಡನೆಯ ಅಧ್ಯಾಯ

೧–೨. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ ! ಯಾವಾಗಲೂ ಚತುರ್ಥೀದಿನ ನಿರಾಹಾರಮಾಡಿ, ಪಾರಣೆಯ ಕಾಲದಲ್ಲಿ ಬ್ರಾಹ್ಮಣನಿಗೆ ಎಳ್ಳುಪುಡಿ ಅನ್ನವನ್ನು ದಾನಮಾಡಿ, ತಾನೂ ಆ ಎಳ್ಳುಪುಡಿ ಅನ್ನವನ್ನೇ ಸೇವಿಸುತ್ತ ಎರಡುವರ್ಷಗಳಕಾಲ ಈ ಪ್ರಕಾರ ನಡೆಯಿಸಿ ವ್ರತಮುಗಿಸಿದರೆ, ವಿನಾಯಕನು ಈ ವ್ರತಿಗೆ ಇಷ್ಟವಾದ ಫಲವನ್ನು ಕೊಡುತ್ತಾನೆ.

೩–೪. ಈ ವ್ರತಮಾಡಿದವನು ಸಂಪದ್ಯುಕ್ತವಾದ ಕುಬೇರಲೋಕವನ್ನು ಹೊಂದಿ ವೈಭವಗಳಿಂದ ಕೂಡಿ ಕ್ರೀಡಿಸುತ್ತಾನೆ. ಆ ಪುಣ್ಯ ಮುಗಿಯುತ್ತಲೆ ಈ ಲೋಕಕ್ಕೆ ಬಂದು ಶ್ರೇಷ್ಠವಾದ ಶರೀರ ಮತ್ತು ಕೀರ್ತಿ ಇವುಗಳಿಂದ ಪ್ರಕಾಶಿಸು

**ಮತಿಮಾನ್ ಧೃತಿಮಾನ್ ವಾಗ್ಮೀ ಭಾಗ್ಯವಾನ್ ಕಾಮಕಾರವಾನ್ ।**
**ಅಸಾಧ್ಯಾನಪಿ ಸಾಧ್ನೋತೀಹ ಕ್ಷಣಾದೇವ ಮಹಾಂತ್ಯಪಿ ॥ ೪ ॥**

**ಹಸ್ತ್ಯಶ್ವರಥಸಂಪನ್ನಃ ಪತ್ನೀ ಪುತ್ರಸಹಾಯವಾನ್ ।**
**ರಾಜಾ ಭವತಿ ದೀರ್ಘಾಯುಃ ಸಪ್ತಜನ್ಮಾನ್ಯಸೌ ನೃಪ ।**
**ಏತದ್ದದಾತಿ ಸಂತುಷ್ಟೋ ವಿಘ್ನಹಂತಾ ವಿನಾಯಕಃ ॥ ೫ ॥**

**॥ ಶತಾನೀಕ ಉವಾಚ ॥**

**ವಿಘ್ನಃ ಕಸ್ಯ ಕೃತಸ್ತೇನ ಯೇನ ವಿಘ್ನ ವಿನಾಯಕಃ ।**
**ಏತದ್ವದಸ್ವ ವಿಘ್ನೇಶವಿಘ್ನಕಾರಣಮದ್ಯ ಮೇ ॥ ೬ ॥**

**॥ ಸುಮಂತುರುವಾಚ ॥**

**ಕೌಮಾರೇ ಲಕ್ಷಣೇ ಪುಂಸಾಂ ಸ್ತ್ರೀಣಾಂ ಚ ಸುಕೃತೇ ಕೃತೇ ।**
**ವಿಘ್ನಂ ಚಕಾರ ವಿಘ್ನೇಶೋ ಗಾಂಗೇಯಸ್ಯ ವಿನಾಯಕಃ ॥ ೭ ॥**

---

ವನೂ, ಬುದ್ಧಿವಂತನೂ, ಧೈರ್ಯವಂತನೂ, ಭಾಗ್ಯವಂತನೂ ವಾಚಾಲನೂ, ಇಚ್ಛಾನುಸಾರ ನಡೆವ ಶಕ್ತಿಯುಳ್ಳವನೂ ಆಗಿ, ಅಸಾಧ್ಯಗಳಾದ ದೊಡ್ಡ ದೊಡ್ಡ ಕಾರ್ಯಗಳನ್ನು ಕ್ಷಣಮಾತ್ರದಲ್ಲಿ ಸಾಧಿಸುವನು.

೫. ಅಯ್ಯಾ ಪ್ರಭುವೇ ! ಈತನು ಆನೆ ಕುದುರೆ ತೇರು ಇವುಗಳನ್ನು ಇಟ್ಟುಕೊಂಡು, ಹೆಂಡಿರು ಮಕ್ಕಳನ್ನು ಪಡೆದು ದೀರ್ಘಾಯುಷ್ಮಂತನಾದ ರಾಜನಾಗಿ ಮುಂದಿನ ಏಳು ಜನ್ಮಗಳನ್ನು ಕಳೆಯುತ್ತಾನೆ. ವಿಘ್ನನಿವಾರಕನಾದ ವಿನಾಯಕನು ತೃಪ್ತನಾದರೆ ಈ ಸಂಪತ್ತನ್ನೆಲ್ಲಾ ಕೊಡುತ್ತಾನೆ.

೬. ಶತಾನೀಕರಾಜನು ಕೇಳುತ್ತಾನೆ—ಅತಿ ಸಂತುಷ್ಟನಾಗಿದ್ದೂ ಆ ವಿಘ್ನನಾಥನು ಯಾರಿಗೆ ವಿಘ್ನವನ್ನು ಮಾಡಿದನು? ಏತಕ್ಕಾಗಿ ವಿಘ್ನಮಾಡಿದನು? ಎಂಬುದನ್ನೂ ಆ ವಿಘ್ನವು ಪರಿಹಾರವಾದ ಕ್ರಮವನ್ನೂ ಈಗ ನನಗೆ ಹೇಳು ಎಂದನು.

೭. ಸುಮಂತು ಮುನಿವರ್ಯರು ಹೇಳುತ್ತಾರೆ—ಸ್ತ್ರೀಪುರುಷರ ಲಕ್ಷಣವನ್ನು ಪ್ರತಿಪಾದಿಸುವ ಕುಮಾರಸ್ವಾಮಿಕೃತವಾದ ಗ್ರಂಥದಲ್ಲಿ ವಿನಾಯಕನು ತಾನು ವಿಘ್ನವನ್ನುಂಟುಮಾಡಿದನು.

ತಂ ತು ವಿಘ್ನಂ ವಿದಿತ್ವಾಸೌ ಕಾರ್ತಿಕೇಯೋ ರುಷಾನ್ವಿತಃ ।
ಉತ್ಕೃಷ್ಯ ದಂತಂ ತಸ್ಯಾಸ್ಯಾದ್ಧಂತುಂ ತಂ ಚ ಸಮುದ್ಯತಃ ॥ ೮ ॥

ನಿವಾರ್ಯಾಪೃಚ್ಛದ್ದೇವೇಶೋ ರೋಷಃ ಕಾರ್ಯಃ ಕುತಸ್ತ್ವಯಾ ।
ತಂ ಚಾಚಖ್ಯೌ ಸ ಪಿತ್ರೇ ವೈ ಕೃತಂ ಪುರುಷಲಕ್ಷಣಂ ।
ತತ್ರ ವಿಘ್ನ ಕೃತೋಽಮುಷ್ಯಂ ಯೋಷಿತಾಂ ನ ಚ ಲಕ್ಷಣಂ ॥ ೯ ॥

ಅಥೋವಾಚ ಮಹಾದೇವಃ ಪ್ರಹಸನ್ ಸ್ವಸುತಂ ಕಿಲ ।
ಮಮ ಕಿಂ ಲಕ್ಷಣಂ ಪುತ್ರ ಪಶ್ಯಸೇ ತ್ವಂ ವದಸ್ವ ಮೇ ॥ ೧೦ ॥

ಸ ಚೋವಾಚ ಕರೇ ತುಭ್ಯಂ ಕಪಾಲಂ ದ್ವಿಜಲಕ್ಷಿತಂ ।
ಅವಿಚಾರೇಣ ಸಂಸ್ಥಾಪ್ಯಂ ಕಪಾಲೀ ತೇನ ಚೋಚ್ಯಸೇ ।
ಸ ತಲ್ಲಕ್ಷಣಮಾದಾಯ ಸಮುದ್ರೇ ಪ್ರಾಕ್ಷಿಪದ್ರುಷಾ ॥ ೧೧ ॥

---

೮. ಹಾಗೆ ವಿಘ್ನಮಾಡಿದುದನ್ನು ಷಣ್ಮುಖನು ನೋಡಿ ವಿನಾಯಕನಮೇಲೆ ಕುಪಿತನಾಗಿ ಅವನ ದಂತವನ್ನು ಕಿತ್ತುಕೊಂಡು ಅದರಿಂದಲೇ ಹೊಡೆದು ಅವನನ್ನು ಕೊಲ್ಲುವುದಕ್ಕೆ ಪ್ರಯತ್ನಿಸಿದನು.

೯. ಆಗ ಶಿವನು ಅವನನ್ನು ತಡೆದು "ನೀನು ಏಕೆ ಕೋಪಮಾಡುವೆ" ಎಂದು ಕೇಳಲಾಗಿ ಕುಮಾರಸ್ವಾಮಿಯು ತಂದೆಯನ್ನು ಕುರಿತು "ನನ್ನಿಂದ ರಚಿತವಾದ ಸ್ತ್ರೀ ಪುರುಷರ ಲಕ್ಷಣಗಳು ತನ್ನಲ್ಲಿ ಯಾವುವೂ ಇಲ್ಲವೆಂದು ನನ್ನ ಗ್ರಂಥಕ್ಕೆ ಅಡ್ಡಿಯನ್ನೊಡ್ಡಿದನು. ಅದಕ್ಕಾಗಿ ಅವನಿಗೆ ದಂತಭಂಗಮಾಡಿದೆನು" ಎಂದನು.

೧೦. ಆಗ ಮಹಾದೇವನು ನಗುತ್ತಾ ಮಗನನ್ನು ಕುರಿತು "ಪುತ್ರನೇ! ನನ್ನಲ್ಲಿ ಸ್ತ್ರೀ ಲಕ್ಷಣವನ್ನೋ ಪುರುಷಲಕ್ಷಣವನ್ನೋ ಯಾವುದನ್ನು ಕಾಣುತ್ತೀ? ನನಗೆ ಹೇಳು" ಎಂದನು.

೧೧. ಆಗ ಷಣ್ಮುಖನು "ಹಲ್ಲುಗಳಿಂದ ಕೂಡಿದ ತಲೆಬುರುಡೆ, ಕೈಯಲ್ಲಿರುವುದೇ ನಿನ್ನ ಲಕ್ಷಣ, ಅವಿಚಾರಿಯಾಗಿ ನೀನು ಇದನ್ನು ಧರಿಸಿರುವುದರಿಂದ ಎಲ್ಲರಿಂದಲೂ ಕಪಾಲಿ ಎಂದು ಕರೆಸಿಕೊಳ್ಳುತ್ತೀ" ಎಂದನು. ಆಗ ಶಿವನು ಆ ಷಣ್ಮುಖನು ನಿರೂಪಿಸಿದ ಸ್ತ್ರೀ ಪುರುಷ ಲಕ್ಷಣವನ್ನು ತೆಗೆದುಕೊಂಡು ಕೋಪದಿಂದ ಅದನ್ನು ಸಮುದ್ರಕ್ಕೆ ಬಿಸಾಡಿದನು.

ಅಥ ದೇವಸಮಾಜೇ ವೈ ಪ್ರವೃತ್ತೇ ಬ್ರಹ್ಮರುದ್ರಯೋಃ ।
ಅಹಂ ಜ್ಯಾಯಾನಹಂ ಜ್ಯಾಯಾನ್ ವಿವಾದೋಽಭೂತ್ತಯೋರ್ದ್ವಯೋಃ ।
ತವ ಸಂಭೂತ್ಯಭಿಜ್ಞೋಽಸ್ತಿ ಮಾಂ ತು ವೇದ ನ ಕಶ್ಚನ　　　॥ ೧೨ ॥

ಏತಂ ಶಿವೇತಿ ಬ್ರುವತಿ ಬ್ರಹ್ಮಣಃ ಪಂಚಮಃ ಶಿರಃ ।
ಮುಖಾತ್ಸಹಾಸಂ ಪ್ರೋವಾಚ ತ್ವಾಮಹಂ ವೇದಿತಾ ಭವ　　　॥ ೧೩ ॥

ಏವಂ ಬ್ರುವತ್ತು ರುದ್ರೇಣ ಬ್ರಾಹ್ಮಂ ಹಯಶಿರೋ ಮಹತ್ ।
ನಖಾಗ್ರೇಣ ನಿಕೃತ್ತಂ ಚ ತಸ್ಯೈವ ಚ ಕರೇ ಸ್ಥಿತಂ　　　॥ ೧೪ ॥

ಕರಸ್ಥೇನೈವ ತೇನಾಸೌ ಆಗಚ್ಛದ್ಯತ್ರ ವೈ ಹರಿಃ ।
ತಪಸ್ತೇಪೇ ತದಾ ಮೇರೌ ತತ್ರಾಸೌ ಭಗವಾನ್ ವಶೀ　　　॥ ೧೫ ॥

---

೧೨. ಆ ಕಪಾಲವು ಶಿವನ ಕೈಗೆ ಬಂದ ಕ್ರಮವನ್ನು ವಿವರಿಸುತ್ತಾನೆ ಒಂದುಕಾಲದಲ್ಲಿ ದೇವಸಭೆಯಲ್ಲಿ ಶಿವ ಬ್ರಹ್ಮ ಇವರಿಬ್ಬರಿಗೂ ನಾನುಹೆಚ್ಚು, ತಾನು ಹೆಚ್ಚು, ಎಂಬ ವಿವಾದವುಂಟಾಯಿತು. ಇದು ಪಂಚಮುಖತ್ವ ನಿಮಿತ್ತವೆಂದು ತಿಳಿದ ಈಶ್ವರನು ಬ್ರಹ್ಮನನ್ನು ಕುರಿತು "ನೀನು ಹುಟ್ಟಿದುದನ್ನು ಅರಿತವನು ಪ್ರಪಂಚದಲ್ಲಿ ಸಿಕ್ಕುತ್ತಾನೆ.

೧೩. ನಾನು ಹುಟ್ಟಿದುದನ್ನು ಯಾರೂ ಅರಿಯರು" ಎಂದು ಹೇಳುತ್ತಿರಲು ಬ್ರಹ್ಮನ ಐದನೆಯ ತಲೆಯು ಗಟ್ಟಿಯಾಗಿ ನಕ್ಕು "ಎಲೈ ಶಿವನೇ ! ನಾನು ನಿನ್ನನ್ನು ತಿಳಿದವನು" ಎಂದಿತು,

೧೪. ಅದು ಹೀಗೆನ್ನುತ್ತಲೇ ಕುದುರೆಯ ತಲೆಯಂತಿದ್ದ ಬ್ರಹ್ಮನ ಆ ಐದನೆಯ ತಲೆಯನ್ನು, ರುದ್ರನು ಉಗುರು ತುದಿಯಿಂದ ಚಿಗುಟಿ ಕತ್ತರಿಸಿದನು. ಹೀಗೆ ಕತ್ತರಿಸಿದ ತಲೆಯು ಆವನ ಕೈಗೆ ಅಂಟಿಕೊಂಡೇ ನಿಂತಿತು.

೧೫. ಆಗ ಶಿವನು ಕೈಯಲ್ಲಿ ಕಪಾಲಸಹಿತನಾಗಿಯೇ ವಿಷ್ಣುವಿದ್ದಲ್ಲಿಗೆ ಬಂದನು. ಅಲ್ಲೇ ಮೇರುಪರ್ವತದಲ್ಲಿ ಭಗವಂತನಾದ ಶಿವನು ಜಿತೇಂದ್ರಿಯನಾಗಿ ತಪಸ್ಸುಮಾಡತೊಡಗಿದನು.

ಕೃತ್ತೇ ಹಯಶಿರೇ ತಸ್ಮಿನ್ ಸ್ಥಾನಾತ್ತಸ್ಮಾತ್ತು ಬ್ರಹ್ಮಣಃ
ರೋಷಾದ್ವಿನಿಸ್ಸೃತಸ್ತ್ವನ್ಯಃ ಪುರುಷಃ ಶ್ವೇತಕುಂಡಲಃ ॥ ೧೬ ॥

ಕವಚೀ ಸಶಿರಸ್ತ್ರಶ್ಚ ಸಶರಃ ಸಶರಾಸನಃ ।
ಅನಿರ್ದೇಶ್ಯವಪುಃ ಸ್ರಗ್ವೀ ಕಿಂ ಕರೋಮಿ ಸ ಚಾಬ್ರವೀತ್ ॥ ೧೭ ॥

ಅಥೋವಾಚ ರುಷಾ ಬ್ರಹ್ಮಾ ಹನ್ಯತಾಂ ಸ ಸುದುರ್ಮತಿಃ ।
ಸ ತು ಮಾರ್ಗೇಣ ರುದ್ರಸ್ಯ ಆಗಚ್ಛದ್ರೋಷತೋ ದ್ರುತಂ ॥ ೧೮ ॥

ರುದ್ರೋಽಪಿ ವಿಷ್ಣುತೇಜೋಭಿಃ ಪ್ರವಿಷ್ಟಃ ಸತ್ವಧಿಷ್ಠಿತಃ ।
ಸ ಪ್ರವಿಶ್ಯ ತದಾಪಶ್ಯತ್ ತಪಂತಂ ಚೋತ್ತಮಂ ತಪಃ ॥ ೧೯ ॥

---

೧೬. ಅತ್ತ ಕುದುರೆಯ ತಲೆಯ ಆಕಾರವುಳ್ಳ ಬ್ರಹ್ಮಶಿರಸ್ಸು ಕತ್ತರಿಸಲ್ಪಡುತ್ತಲೆ ಬ್ರಹ್ಮನ ಆ ತಲೆ ಇದ್ದ ಸ್ಥಳದಿಂದ ಬಿಳಿಯ ಕುಂಡಲಗಳನ್ನು ಧರಿಸಿದ ಒಬ್ಬ ಪುರುಷನು ರೋಷದಿಂದ ಹೊರಟನು.

೧೭. ಕವಚ, ಶಿರಸ್ತ್ರಾಣ, ಧನುಸ್ಸು, ಬಾಣ, ಇವುಗಳಿಂದ ಕೂಡಿದವನಾಗಿಯೂ ಇವನ ಶರೀರವು ಇಂಥದೆಂದು ನಿಶ್ಚಯಿಸಲಸಾಧ್ಯವಾಗಿಯೂ, ಹೂವಿನ ಮಾಲೆಯನ್ನು ಧರಿಸಿಕೊಂಡೂ, ಇರುವ ಆ ಪುರುಷನು ಬಂದು ಬ್ರಹ್ಮನ ಮುಂದೆ ನಿಂತು " ನಾನು ಮಾಡಬೇಕಾದ ಕೆಲಸವೇನು ? ಹೇಳು " ಎಂದನು.

೧೮. ಆಗ ಬ್ರಹ್ಮನು ರೋಷದಿಂದ ಶಿವನು ಮಾಡಿದ್ದನ್ನು ಹೇಳಿ, " ಮಹಾ ದುರ್ಬುದ್ಧಿಯುಳ್ಳ ಅವನನ್ನು ಕೊಲ್ಲಬೇಕು " ಎಂದು ಹೇಳಿದನು. ಅದನ್ನು ಕೇಳಿ ಈತನು ಕೋಪಾವಿಷ್ಟನಾಗಿ ಶಿವನು ಹೋದ ಮಾರ್ಗದಲ್ಲಿಯೇ ತ್ವರೆಯಿಂದ ಹೋದನು.

೧೯. ಅಷ್ಟರಲ್ಲಿ ತೀವ್ರವಾದ ತಪಸ್ಸು ಮಾಡುತ್ತಿದ್ದ ರುದ್ರನಲ್ಲಿ ವಿಷ್ಣು ತೇಜಸ್ಸು ಪ್ರವೇಶಮಾಡಿತು. ಅದರಿಂದ ಅವನು ವಿಷ್ಣುವಿನ ಸ್ವರೂಪವನ್ನು ಪಡೆದನು. ಬ್ರಹ್ಮನ ಸಮೀಪದಿಂದ ಹೊರಟ ಆಶ್ವೇತಕುಂಡಲಿ ಪುರುಷನು ಆಗ ಅಲ್ಲಿಗೆ ಬಂದು ವೈಕುಂಠ ಸಂಜ್ಞನೂ ಅಪರಾಜಿತನೂ ಆದ ನಾರಾಯಣನು ಉತ್ತಮವಾದ ತಪಸ್ಸುಮಾಡುತ್ತ ಕುಳಿತಿದ್ದಂತೆ ಕಂಡನು.

ಹರೋ ನಾರಾಯಣಂ ದೈವಂ ವೈಕುಂಠಮಪರಾಜಿತಂ ।
ಹರಂ ದೃಷ್ಟ್ವಾಽಥ ಸಂಪ್ರಾಪ್ತಂ ಕಾರ್ಯಂ ಚಾಸ್ಯ ವಿಚಿಂತ್ಯ ಚ ॥ ೨೦ ॥

ಉವಾಚ ಶೂಲಿನಂ ದೇವೋ ಭಿಂಧಿ ಶೂಲೇನ ಮೇ ಭುಜಂ ।
ಸ ಬಿಭೇದ ಮಹಾತೇಜಾ ಭುಜಂ ಶೂಲೇನ ತಂ ಹರಃ ॥ ೨೧ ॥

ಶೂಲಭೇದಾದಸೃಕ್ ಚೋರ್ಧ್ವಂ ಜಗಾಮಾವೃತ್ಯ ರೋದಸೀ ।
ವಿನಿವೃತ್ಯ ತತಃ ಪಶ್ಚಾತ್ ಕಪಾಲೇ ನಿಪಪಾತ ಹ ॥ ೨೨ ॥

ಅಸೃಕ್ಕಪಾಲೇ ಪತಿತಂ ಪ್ರದೇಶಿನ್ಯಾ ವ್ಯವರ್ಧಯತ್ ।
ಯದಾ ಹಿ ವಿನಿವೃತ್ತಿಃ ಸ್ಯಾತ್ ದೇವಸ್ಯ ರುಧಿರಂ ಪ್ರತಿ ॥ ೨೩ ॥

ತದಾ ತು ವ್ಯಸೃಜತ್ತೋಯಂ ಸ ಕೃತ್ವಾ ವಾರುಣೀಂ ತನುಂ ।
ತೋಯೇ ಪ್ರವೃತ್ತೇಽಸೃಗ್ಭೂತೇ ಕಪಾಲೇ ಯತ್ರ ತಚ್ಛಿರಃ ॥ ೨೪ ॥

ಕಪಾಲೇ ತು ಪ್ರದೇಶಿನ್ಯಾ ರುದ್ರೋಽಸೌ ರುಧಿರೇಽಸೃಜತ್ ।
ಆಮುಕ್ತಕವಚಂ ರಕ್ತಂ ರಕ್ತಕುಂಡಲಿನಂ ನರಂ ॥ ೨೫ ॥

---

೨೦-೨೧. ಆ ಶ್ವೇತಕುಂಡಲಿಯು ತನ್ನ ಕಣ್ಣಿಗೆ ಕಂಡವನೇ ಈಶ್ವರನು ಎಂದೂ, ಅವನಿಗೆ ಏನಾದರೂ ಕೆಲಸಕೊಡಬೇಕೆಂದೂ ಯೋಚಿಸಿ ಶೂಲಿಯನ್ನು ಕುರಿತು " ಶೂಲದಿಂದ ನನ್ನ ಭುಜವನ್ನು ಭೇದಿಸು " ಎಂದು ಹೇಳಿದನು.

೨೨. ಮಹಾತೇಜಸ್ವಿಯಾದ ಶಿವನು ಅವನ ಮಾತಿನಂತೆ ಶೂಲದಿಂದ ಭುಜವನ್ನು ಭೇದಿಸಿದನು. ಹೀಗೆ ಚುಚ್ಚಿದ್ದರಿಂದ ರಕ್ತವು ಮೇಲಕ್ಕೆ ಚಿಮ್ಮಿ ಭೂಮಿ ಆಕಾಶಗಳಲ್ಲೆಲ್ಲಾ ಆವರಿಸಿ ಸ್ವಲ್ಪಹೊತ್ತಿನಮೇಲೆ ಹಿಂದಿರುಗಿ ಬಂದು ಶಿವನ ಕಯ್ಯಲ್ಲಿದ್ದ ಕಪಾಲದಲ್ಲಿ ಬಿದ್ದಿತು.

೨೩. ಹೀಗೆ ಕಪಾಲದಲ್ಲಿ ಬಿದ್ದ ರಕ್ತವನ್ನು ಶಿವನು ತರ್ಜನೀ ಬೆರಳಿನಿಂದ ಒರಸಿದನು. ಯಾವಾಗ ಆ ದೇವನ ಶರೀರದಲ್ಲಿ ರಕ್ತವು ಕಮ್ಮಿಯಾಯಿತೋ ಆಗ ತಾನು ತನ್ನ ಶರೀರವನ್ನು ಜಲಮಯವನ್ನಾಗಿ ಮಾಡಿಕೊಂಡು ರಕ್ತವಾದ ಆ ಸ್ಥಳದಲ್ಲೆಲ್ಲಾ ಜಲವು ಬೀಳುವಂತೆ ಮಾಡಿದನು.

೨೪-೨೫. ಹೀಗೆ ರಕ್ತಮಯವಾಗಿದ್ದ ಕಪಾಲದಲ್ಲಿ ಜಲವುಂಟಾಗುತ್ತಲೆ, ಈ ರುದ್ರನು ತರ್ಜನೀ ಬೆರಳಿನಿಂದ ಚೆನ್ನಾಗಿ ಒರಸಿದನು. ಕೂಡಲೇ ಕವಚಧಾರಿಯೂ ಕೆಂಪು ಕುಂಡಲವುಳ್ಳವನೂ ಆದ ಒಬ್ಬ ಮನುಷ್ಯನನ್ನು ಸೃಷ್ಟಿಸಿದನು.

ಅಥೋವಾಚ ಭವಂ ದೇವಂ ಕಿಂಕರೋಮೀತಿ ಮಾನಸಃ ।
ಅಸೂವಪಿ ಸಸರ್ಜಾಥ ಶ್ವೇತಕುಂಡಲಿನಂ ನರಂ ॥ ೨೬ ॥

ತಾವುಭೌ ಸಮಯುಧ್ಯೇತಾಂ ಧನುಷ್ಪ್ರವರ ಧಾರಿಣೌ ।
ಯಥಾ ರಾಜನ್ ಬಲೀಯಾಂಸೌ ಕುಜಕೇತೂ ಯುಗಾತ್ಯಯೇ ॥ ೨೭ ॥

ತಯೋಸ್ತು ಯುಧ್ಯತೋರೇವಂ ಸಂವರ್ತಶ್ಚಾಧಿಕೋ ಗತಃ ।
ನ ಚಾದೃಶ್ಯತ ವಿಜಯು ಏಕಸ್ಯಾಪಿ ತದಾ ತಯೋಃ ॥ ೨೮ ॥

ಅಥಾಂತರಿಕ್ಷೇ ತೌ ದೃಷ್ಟ್ವಾ ವಾಗುವಾಚಾಶರೀರಿಣೀ ।
ಅವತಾರೋಥ ಭವಿತಾ ಯುವಯೋರ್ಹಿ ಮಯಾ ಸಹ ॥ ೨೯ ॥

ಭಾರಾಪನೋದಃ ಕರ್ತವ್ಯಃ ಪೃಥಿವ್ಯರ್ಥೇ ಸುರೈಸ್ಸಹ ।
ತದಾಶ್ಚರ್ಯೋ ಹಿ ಭವಿತಾ ದೇವಕಾರ್ಯಾರ್ಥಸಿದ್ಧಯೇ ॥ ೩೦ ॥

---

೨೬. ಹಾಗೆ ಹುಟ್ಟಿದ ಅವನು ಶಿವನನ್ನು ಕುರಿತು "ಎಲೈ ಅಭಿಮಾನ ದಾತನೇ ! ಮುಂದೆ ನಾನು ಮಾಡಬೇಕಾದ್ದೇನು ?" ಎಂದು ಕೇಳಿದನು. ಆಗ ಶಿವನು ಬಿಳಿಯ ಕುಂಡಲವನ್ನು ಧರಿಸಿದ್ದ ಆ ಪುರುಷನನ್ನು ತೋರಿಸಿಬಿಟ್ಟನು.

೨೭. ಆಗ ಅವರಿಬ್ಬರೂ ಶ್ರೇಷ್ಠವಾದ ಧನುಸ್ಸುಗಳನ್ನು ಹಿಡಿದುಕೊಂಡು ಪ್ರಬಲರಾದ ಕುಜ, ಕೇತು, ಈ ಗ್ರಹಗಳು ಕಲ್ಪಾಂತದಲ್ಲಿ ಹೋರಾಡುವಂತೆ ಘೋರವಾಗಿ ಯುದ್ಧಮಾಡತೊಡಗಿದರು.

೨೮. ಹೀಗೆ ಅವರಿಬ್ಬರೂ ಹೋರಾಡುತ್ತಿರಲು ಕಲ್ಪವೇ ಮುಗಿಯುತ್ತ ಬಂತು. ಅವರಿಬ್ಬರಲ್ಲಿ ಯಾರೊಬ್ಬರಿಗೂ ಜಯವು ಕಾಣಿಸಲಿಲ್ಲ.

೨೯. ಆಗ ಅವರಿಬ್ಬರನ್ನೂ ಕುರಿತು ಆಕಾಶವಾಣಿಯು "ನೀವಿಬ್ಬರೂ ಯುದ್ಧರಂಗದಲ್ಲಿ ನನ್ನ ಸಂಗಡ ಯುದ್ಧಕ್ಕೆ ಇಳಿಯಬೇಕಾಗುವುದು."

೩೦. "ನಾವು ದೇವತೆಗಳೊಡನೆ ಕೂಡಿ ಭೂಭಾರವನ್ನು ಇಳಿಸಬೇಕಾಗಿದೆ. ದೇವತೆಗಳ ಕಾರ್ಯಸಿದ್ಧಿಗಾಗಿ ಮತ್ತೊಂದು ಆಶ್ಚರ್ಯದ ಸನ್ನಿವೇಶವುಂಟಾಗುವುದು. ಆ ಭೂಭಾರವನ್ನು ಪರಿಹರಿಸಿ ಮತ್ತೆ ದೇವಲೋಕಕ್ಕೆ ಬರಬೇಕು." ಎಂದು ಹೇಳಿದ್ದು ಕೇಳಿಸಿತು.

ಭೂಲೋಕಭಾರಂ ನಿರ್ಧೂಯ ಭೂಯೋ ಗಂತಾ ಸುರಾಲಯಂ ।
ಏವಮುಕ್ತ್ವಾ ತು ವೈಕುಂಠೋ ದದಾವೇಕಂ ರವೇಸ್ತದಾ ॥ ೩೧ ॥

ಶ್ವೇತಕುಂಡಲಿನಂ ದೃಪ್ತಂ ತಂ ಜಗ್ರಾಹ ರವಿರ್ಮುದಾ ।
ಇಂದ್ರಸ್ಯಾಪಿ ತತಃ ಪಶ್ಚಾತ್ ರಕ್ತಕುಂಡಲಿನಂ ದದೌ ॥ ೩೨ ॥

ಜಗ್ರಾಹ ಚ ಮುದಾ ಯುಕ್ತ ಇಂದ್ರಃ ಸ್ವಂ ಚ ಪುರಂ ಯಯೌ ।
ಗತೌ ರವೀಂದ್ರೌ ಪ್ರಗೃಹ್ಯ ಪುರುಷೌ ಕ್ರೋಧಸಂಭವೌ ॥ ೩೩ ॥

ಅಥೋವಾಚ ತದಾ ರುದ್ರಂ ದೇವಃ ಕಮಲಸಂಸ್ಥಿತಃ ।
ಗಚ್ಛ ತ್ವಮಪಿ ಕಾಪಾಲೇ ಕಪಾಲವ್ರತಚರ್ಯಯಾ ॥ ೩೪ ॥

ಅವತಾರೋ ವ್ರತಸ್ಯಾಸ್ಯ ಮರ್ತ್ಯಲೋಕೇ ಭವಿಷ್ಯತಿ ।
ಯೇ ಚ ವ್ರತಂ ತ್ವದೀಯಂ ವೈ ಧಾರಯಿಷ್ಯಂತಿ ಮಾನವಾಃ ॥ ೩೫ ॥

ನ ತೇಷಾಂ ದುರ್ಲಭಃ ಕಿಂಚಿತ್ ಭವಿತೇಹ ಪರತ್ರ ಚ ।
ಏವಂ ಸಂಲಪ್ಯ ಬಹುಶಃ ಸುಮುಖಂ ಪ್ರತಿನಂದ್ಯ ಚ ॥ ೩೬ ॥

---

೩೧. ಶ್ರೀಮನ್ನಾರಾಯಣನು ಈರೀತಿ ಹೇಳಿ ಶ್ವೇತಕುಂಡಲಿಯಾದ ಒಬ್ಬನನ್ನು ಸೂರ್ಯನ ವಶಪಡಿಸಿದನು.

೩೨. ಮಹಾಗರ್ವಿಷ್ಠನಾದ ಆ ಶ್ವೇತಕುಂಡಲಿಯನ್ನು ಸೂರ್ಯನು ಸಂತೋಷದಿಂದ ಕರೆದುಕೊಂಡನು. ಬಳಿಕ ರಕ್ತಕುಂಡಲಿಯಾದ ಮತ್ತೊಬ್ಬನನ್ನು ಇಂದ್ರನ ವಶಕ್ಕೆ ಕೊಟ್ಟನು.

೩೩. ಇಂದ್ರನು ಸಂತೋಷದಿಂದ ಅವನನ್ನು ಕರೆದುಕೊಂಡು ತನ್ನ ಪಟ್ಟಣಕ್ಕೆ ಹೋದನು. ಹೀಗೆ ಬ್ರಹ್ಮ, ರುದ್ರ, ಇವರ ಕೋಪದಿಂದ ಹುಟ್ಟಿದ ಅವರಿಬ್ಬರನ್ನೂ ಇಂದ್ರ ಸೂರ್ಯರಿಬ್ಬರೂ ಕರೆದುಕೊಂಡು ಹೊರಟುಹೋದರು.

೩೪-೩೬. ಅನಂತರ ಕಮಲಸಂಭವನಾದ ಬ್ರಹ್ಮನು ರುದ್ರನನ್ನು ಕುರಿತು "ಎಲೈ ಕಪಾಲಿಯೇ ! ಕಪಾಲ ವ್ರತವನ್ನು ಆಚರಿಸುತ್ತಾ ನೀನೂ ಹೊರಡು. ಇದರ ಕ್ರಮವು ಮರ್ತ್ಯಲೋಕದಲ್ಲಿ ಆಚರಣೆಗೆ ಬರಲಿ. ಯಾವ ಮನುಷ್ಯನು ನಿನ್ನ ಸಂಬಂಧವಾದ ಈ ವ್ರತವನ್ನು ಧಾರಣೆಮಾಡುವನೋ, ಅವನಿಗೆ ಇಹಪರಗಳಲ್ಲಿ ದುರ್ಲಭವಾದುದು ಯಾವುದೂ ಇಲ್ಲ" ಎಂದನು.

ಆಹೂಯ ಚ ಸಮುದ್ರಂ ಸ ಪ್ರತ್ಯುವಾಚಾವಿಚಾರಯನ್ ।
ಸ್ತ್ರೀಣಾಂ ಚ ಪುರುಷಾಣಾಂ ಚ ಲಕ್ಷಣಂ ಯದ್ವಿಲಕ್ಷಣಂ ॥ ೩೭ ॥

ಕಾರ್ತಿಕೇಯೇನ ಯತ್ಪ್ರೋಕ್ತಂ ತದ್ವದಸ್ವಾವಿಚಾರಯನ್ ।
ಸಚಾಹ ಮಮ ನಾಮ್ನೇದಂ ಭವೇತ್ಪುರುಷಲಕ್ಷಣಂ ॥ ೩೮ ॥

ದೇವೇನ ತತ್ಪ್ರತಿಜ್ಞಾತಂ ಏವಮೇತದ್ಭವಿಷ್ಯತಿ ।
ಕಾರ್ತಿಕೇಯೇನ ಯತ್‌ಪ್ರೋಕ್ತಂ ತದ್ವದಸ್ವಾವಿಚಾರಯನ್ ॥ ೩೯ ॥

ಪ್ರಯಚ್ಛಾಸ್ಯ-ವಿಷಾಣಂ ವೈ ನಿಷ್ಕೃಷ್ಟಂ ಯತ್ತ್ವಯಾಧುನಾ ।
ಅವಶ್ಯಮೇವ ತದ್ಭೂತಂ ಭವಿತವ್ಯಂ ತು ಕಸ್ಯಚಿತ್ ॥ ೪೦ ॥

ಋತೇ ವಿನಾಯಕಂ ತದ್ವೈ ದೈವಯೋಗಾನ್ನಕಾಮತಃ ।
ಗೃಹಾಣ ಏತತ್ಸಾಮುದ್ರಂ ಯತ್ತ್ವಯಾ ಪರಿಕೀರ್ತಿತಂ ॥ ೪೧ ॥

---

೩೭. ಈರೀತಿ ಶಿವನು ಕಪಾಲವನ್ನು ಧರಿಸಿದ ಸಂಗತಿಯನ್ನು ವಿಸ್ತಾರವಾಗಿ ತಿಳಿಸಿದನು, ಮತ್ತು ವಿನಾಯಕನನ್ನು ಶ್ಲಾಘಿಸಿ, ಸಮುದ್ರನನ್ನು ಕರೆದು ಏನೂ ವಿಚಾರಿಸದೆಯೇ ಪ್ರತ್ಯುತ್ತರ ಹೇಳುವನಾಗಿ "ಷಣ್ಮುಖನು ಹೇಳಿರುವ ಸ್ತ್ರೀ ಪುರುಷರ ಲಕ್ಷಣಾವಲಕ್ಷಣವಿಷಯವನ್ನು ಈಗ ವಿಚಾರಮಾಡದೆಯೇ ತಿಳಿಸು" ಎಂದನು.

೩೮-೩೯. ಆಗ ಸಮುದ್ರನು "ಪುರುಷ ಲಕ್ಷಣವಿವರವು ನನ್ನ ಹೆಸರಿನಿಂದ ಪ್ರಸಿದ್ಧಿಯಾಗಲಿ" ಎಂದು ಕೇಳಿಕೊಂಡನು. "ಹಾಗೆಯೇ ಆಗಲಿ" ಎಂದು ಬ್ರಹ್ಮನು ಮಾತುಕೊಟ್ಟನು. ಬಳಿಕ "ನೀನು ಒಪ್ಪಿಕೊಂಡಂತೆಯೇ ಷಣ್ಮುಖನು ಹೇಳಿರುವ ಲಕ್ಷಣವನ್ನು ವಿಚಾರಮಾಡದೇ ಹೇಳು" ಎಂದು ಸಮುದ್ರರಾಜನಿಗೆ ನಿಯಮಿಸಿದನು.

೪೦. "ಷಣ್ಮುಖನು ಮುರಿದಿದ್ದ ಗಣೇಶನ ಕೊಂಬನ್ನು ಈಗ ಮತ್ತೆ ಅವನಿಗೆ ಕೊಡಬೇಕು. ಯಾರಿಗೇ ಆಗಲಿ ಆಗಬೇಕಾದದ್ದು ಆವಶ್ಯವಾಗಿ ಆಗಿಯೇತೀರುವುದು."

೪೧. "ವಿನಾಯಕನಿಗೆ ಹೀಗಾದುದು, ದೈವಯೋಗದಿಂದಲೇ ಹೊರತು ಇಚ್ಛಾಪೂರ್ವಕವಾಗಿ ಮಾಡಿದುದಲ್ಲ. ನಿನ್ನಿಂದ ಉಕ್ತವಾದುದರಿಂದ ಇದು ಸಾಮುದ್ರ ಶಾಸ್ತ್ರವೆನಿಸಲಿ."

**ಸ್ತ್ರೀಪುಂಸೋರ್ಲಕ್ಷಣಂ ಶ್ರೇಷ್ಠಂ ಸಾಮುದ್ರಮಿತಿ ವಿಶ್ರುತಂ ।**
**ಇಮಂ ಚ ಸವಿಷಾಣಂ ವೈ ಕುರು ದೇವಂ ವಿನಾಯಕಂ ॥ ೪೨ ॥**

**ಅಥೋವಾಚ ಚ ದೇವೇಶಂ ಬಾಹುಲೇಯಃ ಸಮತ್ಸರಂ ।**
**ವಿಷಾಣಂ ದದ್ಮಿ ಚಾಸ್ಯಾಹಂ ತವ ವಾಕ್ಯಾನ್ನ ಸಂಶಯಃ ॥ ೪೩ ॥**

**ಯದಾ ತ್ವಯಂ ವಿಷಾಣಂ ಚ ಮುಕ್ತ್ವಾ ತು ವಿಚರಿಷ್ಯತಿ ।**
**ತದಾ ವಿಷಾಣಮುಕ್ತಸ್ಸನ್ ಭಸ್ಮ ಏತಂ ಕರಿಷ್ಯತಿ ॥ ೪೪ ॥**

**ಏವಮಸ್ತ್ವಿತಿ ತಂ ಚೋಕ್ತ್ವಾ ವಿಷಾಣಂ ತತ್ಕರೇ ದದೌ ।**
**ವಿನಾಯಕಸ್ಯ ದೇವೇಶಃ ಕಾರ್ತಿಕೇಯಮತೇ ಸ್ಥಿತಃ ॥ ೪೫ ॥**

**ಸವಿಷಾಣಕರೋಽದ್ಯಾಪಿ ದೃಶ್ಯತೇ ಪ್ರತಿಮಾ ನೃಪ ।**
**ಭೀಮಸೂನೋರ್ಮಹಾಬಾಹೋರ್ವಿಘ್ನಂ ಕರ್ತುಂ ಮಹಾತ್ಮನಃ ॥೪೬॥**

---

೪೨ "ಸ್ತ್ರೀಪುರುಷರ ಲಕ್ಷಣವನ್ನು ಹೇಳುವ ಈ ಶಾಸ್ತ್ರವು ಸಾಮುದ್ರಿಕಾ ಶಾಸ್ತ್ರವೆಂಬ ಹೆಸರಿನಿಂದ ಪ್ರಸಿದ್ಧಿಯಾಗಲಿ. ಈ ವಿನಾಯಕನನ್ನು ವಿಷಾಣಸಹಿತನನ್ನಾಗಿ ಮಾಡು" ಎಂದು ಹೇಳಿದನು.

೪೩. ಆಗ ಷಣ್ಮುಖನು ಮಾತ್ಸರ್ಯದಿಂದ ತಂದೆಯಾದ ಶಿವನನ್ನು ಕುರಿತು "ನಿನ್ನ ಮಾತಿಗಾಗಿ ಈಗ ಕೊಂಬನ್ನು ಕೊಡುತ್ತೇನೆ. ಅದಕ್ಕೆ ಸಂಶಯವಿಲ್ಲ."

೪೪. "ಯಾವಾಗ ಇವನು ಆ ಕೊಂಬನ್ನು ಬಿಟ್ಟು ಚರಿಸುವನೋ ಆಗ ಅದು ಇವನನ್ನು ಭಸ್ಮಮಾಡಿಬಿಡುತ್ತದೆ." ಎಂದು ಹೇಳಿ ಕೊಂಬನ್ನು ಶಿವನ ಕೈಗೆ ಕೊಟ್ಟನು.

೪೫. ಶಿವನೂ "ಹಾಗೇ ಆಗಲಿ" ಎಂದು ಹೇಳಿ ಆ ಕೊಂಬನ್ನು ವಿನಾಯಕನ ಕೈಗೆ ಕೊಟ್ಟನು. ಷಣ್ಮುಖನ ಇಷ್ಟದಂತೆ ವಿನಾಯಕನು ನಡೆಯಬೇಕೆಂದು ಶಿವನು ಒಪ್ಪಿದನು.

೪೬. ಈಗಲೂ ವಿನಾಯಕನ ಪ್ರತಿಮೆಯು ಕೈಯಲ್ಲಿ ಮುರಿದ ಕೊಂಬನ್ನು ಹಿಡಿದಿರುವುದು ಕಾಣುತ್ತದೆ. ಭೀಮ ಎಂದರೆ ಶಿವನ ಸೂನುವೆನಿಸಿದ ವಿಘ್ನಗಣಪತಿಯು ವಿಘ್ನಮಾಡುವುದು ಭಿನ್ನದಂತವನ್ನು ಧರಿಸಿದುದರ ರಹಸ್ಯವಾಗಿದೆ.

ಏತದ್ರಹಸ್ಯಂ ದೇವಾನಾಂ ಮಯಾ ತೇ ಸಮುದಾಹೃತಂ ।
ಯತ್ರ ದೇವೋ ನ ವೈ ವೇದ ದೇವಾನಾಂ ಭುವಿ ದುರ್ಲಭಂ ॥ ೪೭ ॥

ಮಯಾ ಪ್ರಸನ್ನೇನ ತವ ಗುಹ್ಯಮೇತದುದಾಹೃತಂ ।
ಕಥಿತಂ ತಿಥಿಸಂಯೋಗೇ ವಿನಾಯಕಕಥಾಮೃತಂ ॥ ೪೮ ॥

ಯ ಇದಂ ಶ್ರಾವಯೇದ್ವಿದ್ವಾನ್ ಬ್ರಾಹ್ಮಣಾನ್ ವೇದಪಾರಗಾನ್ ।
ಕ್ಷತ್ರಿಯಾಂಶ್ಚ ಸ್ವವೃತ್ತಿಸ್ಥಾನ್ ವಿಟ್‌ಶೂದ್ರಾಂಶ್ಚ ಗುಣಾನ್ವಿತಾನ್ ॥ ೪೯ ॥

ನ ತಸ್ಯ ದುರ್ಲಭಂ ಕಿಂಚಿದಿಹ ಚಾಮುತ್ರ ವಿದ್ಯತೇ ।
ನ ಚ ದುರ್ಗತಿಮಾಪ್ನೋತಿ ನ ಚ ಯಾತಿ ಪರಾಭವಂ ॥ ೫೦ ॥

ನಿರ್ವಿಘ್ನಂ ಸರ್ವಕಾರ್ಯಾಣಿ ಸಾಧಯೇನ್ನಾತ್ರ ಸಂಶಯಃ ।
ಋದ್ಧಿಂ ವೃದ್ಧಿಂ ಶ್ರಿಯಂ ಚಾಪಿ ವಿಂದೇತ ಭರತೋತ್ತಮ ॥ ೫೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಚತುರ್ಥೀಕಲ್ಪ ವರ್ಣನಂ ನಾಮ ದ್ವಾವಿಂಶೋಽಧ್ಯಾಯಃ.

---

೪೭. ದೇವಲೋಕದಲ್ಲಿರುವ ದೇವತೆಗಳೂ ತಿಳಿಯಲಸಾಧ್ಯವೂ ಅತಿ ಗೋಪ್ಯವೂ ಆದ ಈ ವಿಷಯವನ್ನು ನಾನು ನಿನಗೆ ತಿಳಿಸಿದೇನೆ.

೪೮. ಚತುರ್ಥೀತಿಥಿ ಸಂಯೋಗದಲ್ಲಿ ಮಾಡುವ ವಿನಾಯಕನ ಈ ಕಥಾಮೃತ ರಹಸ್ಯವನ್ನು ನಿನ್ನಲ್ಲಿ ಪ್ರಸನ್ನನಾದ ನಾನು ಈಗ ತಿಳಿಸಿದೇನೆ.

೪೯-೫೦. ವೇದಪಾರಂಗತರಾದ ಬ್ರಾಹ್ಮಣರಿಗೂ, ಧರ್ಮನಿರತರಾದ ಕ್ಷತ್ರಿಯರಿಗೂ, ಗುಣವಂತರಾದ ವೈಶ್ಯ ಶೂದ್ರರಿಗೂ, ಯಾವ ಪ್ರಾಜ್ಞನು ಈ ವಿನಾಯಕ ಕಥಾಶ್ರವಣ ಮಾಡಿಸುವನೋ, ಅಂಥವನಿಗೆ ಇರಪರ ಲೋಕಗಳಲ್ಲಿ ಯಾವುದೂ ದುರ್ಲಭವೆನಿಸುವುದಿಲ್ಲ. ಅವನು ದುರ್ಗತಿಯನ್ನಾಗಲಿ ಪರಾಭವವನ್ನಾಗಲಿ ಎಂದೂ ಹೊಂದುವುದಿಲ್ಲ,

೫೧. ಅವನು ನಿರ್ವಿಘ್ನವಾಗಿ ಎಲ್ಲಕಾರ್ಯಗಳನ್ನೂ ಸಾಧಿಸುವುದರಲ್ಲಿ ಸಂದೇಹವಿಲ್ಲ. ಅಯ್ಯಾ ಭರತಕುಲೋತ್ಪನ್ನನೇ ! ಅಂಥವನಿಗೆ ಋದ್ಧಿಯೂ ವೃದ್ಧಿಯೂ ಸಂಪತ್ತೂ ಧಾರಾಳವಾಗಿ ಉಂಟಾಗುವುವು.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಚತುರ್ಥೀಕಲ್ಪ ವರ್ಣನೆಯೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಯೋವಿಂಶೋಽಧ್ಯಾಯಃ

॥ ಶತಾನೀಕ ಉವಾಚ ॥

ಕೇನಾಯಂ ಭೀಮಜೋ ವಿಪ್ರ ಪ್ರಮಥಾಧಿಪತಿಃ ಕೃತಃ ।
ಭರ್ತೃತ್ವೇ ಚಾಪಿ ವಿಘ್ನಾನಾಮಧಿಕಾರೀ ಕಥಂ ಬಭೌ ॥ ೧ ॥

॥ ಸುಮಂತುರುವಾಚ ॥

ಸಾಧು ಪೃಷ್ಟೋಽಸ್ಮಿ ರಾಜೇನ್ದ್ರ ಯದರ್ಥಂ ವಿಘ್ನಕಾರಕಃ ।
ಯೈರ್ವಾಪಿ ವಿಘ್ನಕರಣೇ ನಿಯುಕ್ತೋಽಪಿ ವಿನಾಯಕಃ
ತತ್ತೇ ವಚ್ಮಿ ಮಹಾಬಾಹೋ ಶೃಣುಷ್ವೈಕಮನಾಧುನಾ ॥ ೨ ॥

---

### ಇಪ್ಪತ್ತಮೂರನೆಯ ಅಧ್ಯಾಯ

೧. ಶತಾನೀಕರಾಜನು ಹೇಳುತ್ತಾನೆ—ಶಿವಪುತ್ರನಾದ ಈ ವಿನಾಯಕನನ್ನು ಯಾರು ಪ್ರಮಥಾಧಿಪತಿಯನ್ನಾಗಿ ಮಾಡಿದರು ? ವಿಘ್ನಗಳಿಗೆ ಇವನು ಒಡೆಯನಾದ ಮಾತ್ರಕ್ಕೆ ಅಧಿಕಾರಿಯಾದುದು ಹೇಗೆ ? ಎಂದು ಕೇಳಿದನು.

೨. ಸುಮಂತು ಮುನಿವರ್ಯರು ಹೇಳುತ್ತಾರೆ—ಎಲೈ ರಾಜೇಂದ್ರನೇ ! ನೀನು ನನ್ನನ್ನು ಕೇಳಿದುದು ಸರಿಯಾಗಿದೆ. ಯಾವ ನಿಮಿತ್ತಕ್ಕಾಗಿ ವಿಘ್ನಕಾರಕನಾದ ವಿನಾಯಕನು ವಿಘ್ನಮಾಡುವುದರಲ್ಲಿ ನಿಯುಕ್ತನಾದನೋ ಅದನ್ನು ಹೇಳುವೆನು ಒಂದೇ ಮನಸ್ಸಿನಿಂದ ಕೇಳು.

ಆದ್ಯೇ ಕೃತಯುಗೇ ವೀರ ಪ್ರಜಾಸರ್ಗಮವಾಪ ಹ ।
ದೃಷ್ಟ್ವಾ ಕರ್ಮಾಣಿ ಸಿದ್ಧಾನಿ ವಿನಾ ವಿಘ್ನೇನ ಭಾರತ ॥ ೩ ॥

ಗತಕ್ಲೇಶಾಂ ಪ್ರಜಾಂ ದೃಷ್ಟ್ವಾ ಗರ್ವಿತಾಂ ಕೃತ್ಸ್ನಶೋ ನೃಪ ।
ಬಹುಶಶ್ಚಿಂತಯಿತ್ವಾ ತು ಇದಂ ಕರ್ಮ ಮಹೀಪತೇ ॥ ೪ ॥

ವಿನಾಯಕಃ ಸಮೃದ್ಧ್ಯರ್ಥಂ ಪ್ರಜಾನಾಂ ವಿನಿಯೋಜಿತಃ ।
ಗಣಾನಾಂ ಚಾಧಿಪತ್ಯೇ ಚ ಭೀಮಃ ಕಂಜಜಸಾತ್ವತೈಃ ॥ ೫ ॥

ತತೋಪಸೃಷ್ಟೋ ಯಸ್ತಸ್ಯ ಲಕ್ಷಣಾನಿ ನಿಬೋಧ ಮೇ ।
ಸ್ವಪ್ನೇವಗಾಹತೇಽತ್ಯರ್ಥಂ ಜಲಂ ಮುಂಡಾಂಶ್ಚ ಪಶ್ಯತಿ ।
ಕಾಷಾಯವಾಸಸಶ್ಚೈವ ಕ್ರವ್ಯಾದಾಂಶ್ಚಾಧಿರೋಹತಿ ॥ ೬ ॥

ಅಂತ್ಯಜೈರ್ಗರ್ಧಭೈರುಷ್ಟ್ರೈಃ ಸಹೈಕತ್ರಾವತಿಷ್ಠತೇ ।
ವ್ರಜಮಾನಸ್ತಥಾತ್ಮಾನಂ ಮನ್ಯತೇಽನುಗತಂ ಪರೈಃ ॥ ೭ ॥

---

೩. ಅಯ್ಯಾ ಭರತಕುಲ ಸಂಜಾತನಾದ ವೀರನೇ! ಮೊದಲನೇ ಕೃತಯುಗದಲ್ಲಿ ಪ್ರಜಾಸೃಷ್ಟಿಯು ಆಯಿತು, ವಿಘ್ನವಿಲ್ಲದೇ ಕೆಲಸ ಸಿದ್ಧವಾದುದು ಕಾಣಿಸಿತು.

೪-೫. ಅಯ್ಯಾ ರಾಜನೇ! ಜನರು ಸರ್ವತ್ರ ಕ್ಲೇಶರಹಿತರಾದರು. ಇದರಿಂದ ಗರ್ವಿತರಾದ ಪ್ರಜೆಗಳನ್ನು ನೋಡಿ ಹೀಗಾಗಿರುವುದಕ್ಕಾಗಿ ಈಶ್ವರನು ಬ್ರಹ್ಮ ವಿಷ್ಣುಗಳೊಡನೆ ಕೂಡಿ ಬಹುವಾಗಿ ಆಲೋಚನೆ ಮಾಡಿ, ಗರ್ವಿತರಾದ ಪ್ರಜೆಗಳನ್ನು ಶಿಕ್ಷಿಸುವುದಕ್ಕೂ, ಮತ್ತು ಅವರಿಗೆ ಅನುಕೂಲಪಡಿಸಿ ಈ ಕೆಲಸವನ್ನು ಅಭಿವೃದ್ಧಿಪಡಿಸಲು ಸುಮುಖನನ್ನು ಗಣಗಳಿಗೆ ಅಧಿಪತಿಯನ್ನು ಮಾಡಿದರು. ಇದೆಲ್ಲಾ ಆದನಂತರ ಗಣಪತಿಗೆ ವಿಘ್ನವನ್ನುಂಟುಮಾಡುವ ಕ್ರಮಗಳನ್ನು ವಿಘ್ನದ ಲಕ್ಷಣಗಳನ್ನು ತಿಳಿಯಹೇಳಿದರು.

೬. ನರನು ತನ್ನ ಕನಸಿನಲ್ಲಿ ನೀರಿನಲ್ಲಿಳಿದು ವಿಶೇಷವಾಗಿ ಮುಳುಗಿ ಸ್ನಾನ ಮಾಡುವುದು, ಕನಸಿನಲ್ಲಿಯೇ ತಲೆಯಿಲ್ಲದ ಮುಂಡವನ್ನು ಕಾಣುವುದು, ಕಾವೀ ವಸ್ತ್ರವನ್ನು ಧರಿಸಿದವನಾಗುವುದು, ರಾಕ್ಷಸರಮೇಲೆ ಸವಾರಿ ಮಾಡುವುದು.

೭. ಅಂತ್ಯಜರೊಡನೆಯೂ, ಕತ್ತೆ ಒಂಟೆ ಇವುಗಳೊಡನೆಯೂ, ಬಂದೇಕಡೆ ಕೂಡಿ ಸದಾ ಓಡಾಡುವುದು, ನಡೆಯುವಾಗ ಯಾರೋ ತನ್ನನ್ನು ಬೆನ್ನಟ್ಟಬಂದಂತೆ ಕಾಣುವುದು.

ವಿಮನಾ ವಿಫಲಾರಂಭಃ ಸಂಸೀದತ್ಯನಿಮಿತ್ತತಃ ।
ಕರಟಾರೂಢಮಾತ್ಮಾನಮಂಭಸೋಂತರಗಂ ತಥಾ ॥ ೮ ॥

ಪತ್ತಿಭಿಶ್ಚಾವೃತಂ ಯಾಂತಂ ನೃಪಸಂಗಮನಾಂತಿಕಂ ।
ಪಶ್ಯತೇ ಕುರುಶಾರ್ದೂಲ ಸ್ವಪ್ನಾಂತೇ ನಾತ್ರ ಸಂಶಯಃ ॥ ೯ ॥

ಚಿತ್ತಂ ಚ ವಿಕೃತಾಕಾರಂ ಕರವೀರವಿಭೂಷಿತಂ ।
ತೇನೋಪಸ್ಪೃಷ್ಟೋ ಲಭತೇ ನ ರಾಜ್ಯಂ ಪೌರ್ವಸಂಭವಂ ॥ ೧೦ ॥

ಕುಮಾರೀ ನ ಚ ಭರ್ತಾರಮಪತ್ಯಂ ಗರ್ಭಿಣೀ ತಥಾ ।
ಆಚಾರ್ಯತ್ವಂ ಶ್ರೋತ್ರಿಯಶ್ಚ ಶಿಷ್ಯಶ್ಚಾಧ್ಯಯನಂ ತಥಾ ।
ವಣಿಗ್ಲಾಭಂ ಚ ನಾಪ್ನೋತಿ ಕೃಷಿಂ ಚೈವ ಕೃಷೀವಲಃ ॥ ೧೧ ॥

ಸ್ನಪನಂ ತಸ್ಯ ಕರ್ತವ್ಯಂ ಪುಣ್ಯೇऽಹನಿ ಮಹೀಪತೇ ।
ಗೌರಸರ್ಷಪಕಲ್ಕೇನ ಸಾಜ್ಯೇನೋತ್ಸಾದಿತೇನ ತು ॥ ೧೨ ॥

---

೮-೧೦. ಇವನ್ನು ಸ್ವಪ್ನದಲ್ಲಿ ನೋಡಿದವನು ಯಾವ ಕೆಲಸಮಾಡಲೂ ಮನಸ್ಸಿಲ್ಲದೆ ವ್ಯರ್ಥವಾದ ಕಾರ್ಯಪ್ರಯತ್ನವುಳ್ಳವನಾಗಿ ನಿಷ್ಕಾರಣವಾಗಿ ವ್ಯಸನ ಪಡುವನು. ರಾಜನು ತಾನು ಕಾಗೆಯಮೇಲೆ ಕುಳಿತುಕೊಂಡು ಹೋಗುತ್ತಿರುವಂತೆಯೂ, ನೀರಿನ ಮಧ್ಯದಲ್ಲಿ ಮುಳುಗಿದ ಹಾಗೂ, ಪ್ರಯಾಣಮಾಡುತ್ತಿರುವಾಗ ಪದಾತಿ ಸೇನೆಯಿಂದ ಆವೃತನಾದಂತೆಯೂ ಸ್ವಪ್ನಾಂತದಲ್ಲಿ ಕಂಡರೆ ಮತ್ತು ಮನಸ್ಸು ವಿಕಾರ ಹೊಂದಿ, ಕಣಿಗಲೆ ಹೂವಿನಿಂದ ಅಲಂಕೃತನಾದ ಹುಚ್ಚನನ್ನು ಸ್ವಪ್ನದಲ್ಲಿ ಕಂಡರೆ, ಪೂರ್ವಿಕರ ರಾಜ್ಯವನ್ನು (ಸಂಪತ್ತನ್ನು) ಕಳೆದುಕೊಂಡು ಮತ್ತೆ ಹೊಂದಲಾರನು.

೧೧. ಹೆಣ್ಣುಹುಡುಗಿಗೆ ಈ ಸ್ವಪ್ನವಾದರೆ ಯೋಗ್ಯನಾದ ಗಂಡ ಸಿಕ್ಕುವುದೇ ಕಷ್ಟವಾಗುವುದು. ಗರ್ಭಿಣಿಯು ಈ ದೃಶ್ಯವನ್ನು ನೋಡಿದರೆ ಅಪತ್ಯ (ಮಗು) ವನ್ನು ಕಳೆದುಕೊಳ್ಳುವಳು. ಶ್ರೋತ್ರಿಯನು ಈ ಸ್ವಪ್ನವನ್ನು ಕಂಡರೆ ಅವನಿಗೆ ಆಚಾರ್ಯ ಗೌರವವು ದೊರೆಯದೆ ಹೋಗುವುದು. ಶಿಷ್ಯನು ಇದನ್ನು ಕಂಡರೆ ಅಧ್ಯಯನ ಲಾಭ ತಪ್ಪಿಹೋಗುವುದು, ವರ್ತಕನು ಕಂಡರೆ ವ್ಯಾಪಾರದಲ್ಲಿ ಲಾಭ ದೊರೆಯದೆ ಹೋಗುವುದು, ಆರಂಬಗಾರನು ಕಂಡರೆ ಕೃಷಿಯಲ್ಲಿ ಫಲಹೊಂದದೆ ಹೋಗುವನು,

೧೨. ಅಯ್ಯಾ ರಾಜನೇ ! ಹೀಗೆಲ್ಲಾ ತೊಂದರೆಯಾಗಿರುವಾಗ ಆ ದೋಷ ಶಾಂತ್ಯರ್ಥವಾಗಿಯೂ ದೇವತಾ ಪ್ರೀತ್ಯರ್ಥವಾಗಿಯೂ ಆ ಸ್ವಪ್ನ ಕಂಡವನಿಗೆ ಪುಣ್ಯ

ಶುಕ್ಲಪಕ್ಷೇ ಚತುರ್ಥ್ಯಾಂ ತು ವಾಸರೇ ಧಿಷಣಸ್ಯ ಚ ।
ತಿಷ್ಯೇ ಚ ವೀರ ನಕ್ಷತ್ರೇ ತಸ್ಯೈವ ಪುರತೋ ನೃಪ ॥ ೧೩ ॥

ಸರ್ವೌಷಧೈಃ ಸರ್ವಗಂಧೈಃ ವಿಲಿಪ್ತಂ ಶಿರಸಸ್ತಥಾ ।
ಭದ್ರಾಸನೋಪವಿಷ್ಟಸ್ಯ ಸ್ವಸ್ತಿವಾಚ್ಯ ದ್ವಿಜಾಞ್ಛುಭಾನ್ ॥ ೧೪ ॥

ವ್ಯೋಮಕೇಶಂ ತು ಸಂಪೂಜ್ಯ ಪಾರ್ವತೀಂ ಭೀಮಜಂ ತಥಾ ।
ಕೃಷ್ಣಂ ಸಪಿತರಂ ತಾತ ಪವಮಾನಂ ಸಿತಂ ತಥಾ ॥ ೧೫ ॥

ಧಿಷಣಂ ಚೇಂದುಪುತ್ರಂ ಚ ಕೋಣಂ ಕೇತುಂ ಚ ಭಾರತ ।
ವಿಧುಂತುದಂ ಬಾಹುಲೇಯಂ ನಂದಕಸ್ಯ ಚ ಧಾರಿಣಂ ॥ ೧೬ ॥

ಅಶ್ವಸ್ಥಾನಾತ್ ಗಜಸ್ಥಾನಾತ್ ವಲ್ಮೀಕಾತ್ಸಂಗಮಾಧ್ರದಾತ್ ।
ಮೃತ್ತಿಕಾಂ ರೋಚನಾಂ ಗಂಧಾನ್ ಗುಗ್ಗುಲಂ ಚಾಪ್ಸು ನಿಕ್ಷಿಪೇತ್ ॥೧೭॥

---

ಕರವಾದ ಶುಕ್ಲಪಕ್ಷ ಚತುರ್ಥೀ ದಿನದಲ್ಲಿ ಬಿಳಿಸಾಸುವೆಯ ಪುಡಿಯನ್ನು ತುಪ್ಪದಲ್ಲಿ ಕಲಸಿ ತಲೆಗೂ ಮೈಗೂ ಲೇಪಿಸಬೇಕು.

೧೩-೧೫. ಶುಕ್ಲಚತುರ್ಥೀ, ಗುರುವಾರ, ಪುಷ್ಯ ಅಥವಾ ಆರ್ದ್ರ ನಕ್ಷತ್ರ, ಇವೆಲ್ಲಾ ಕೂಡಿದದಿನ, ಗಣಪತಿಯ ಸನ್ನಿಧಿಯಲ್ಲಿ ಕುಳಿತು ಬ್ರಾಹ್ಮಣರಿಂದ ಸ್ವಸ್ತಿ ವಾಚನ ಮಾಡಿಸುತ್ತ ಸಮಸ್ತಮೂಲಿಕಾರಸಗಳನ್ನು ಸ್ಪಷ್ಟ ಕಂಡವನ ತಲೆಗೆ ಲೇಪನ ಮಾಡಿ ಶಿವ ಪಾರ್ವತಿ ಶಿವಕುಮಾರ ಇವರನ್ನು ಭದ್ರಾಸನದಲ್ಲಿ ಕುಳ್ಳಿರಿಸಿ ಪೂಜಿಸಿ, ಮಾತಾಪಿತೃ ಸಹಿತನಾದ ಕೃಷ್ಣನನ್ನೂ, ವಾಯು, ಶುಕ್ರ, ಇವರನ್ನೂ ಪೂಜಿಸಬೇಕು.

೧೬. ಬೃಹಸ್ಪತಿ. ಬುಧ, ಶನೈಶ್ಚರ, ಕೇತು, ರಾಹು, ಷಣ್ಮುಖ, ನಂದಕ ವೆಂಬ ಕತ್ತಿಯನ್ನು ಧರಿಸಿರುವ ವಿಷ್ಣು, ಇವರುಗಳನ್ನೆಲ್ಲಾ ಪೂಜಿಸಬೇಕು.

೧೭. ಆನೆಯಲಾಯ, ಕುದುರೆಯಲಾಯ, ಹುತ್ತ, ಸಂಗಮಸ್ಥಳ, ಮಡು, ಈ ಜಾಗಗಳ ಮೃತ್ತಿಕೆಗಳನ್ನೂ ಗೋರೋಚನ, ಗಂಧವಸ್ತುಗಳು, ಗುಗ್ಗುಲ ಇವು ಗಳನ್ನೆಲ್ಲಾ ಅಭಿಷೇಕದ ಕಲಶದ ನೀರಿನಲ್ಲಿ ಹಾಕಲು ಸಿದ್ಧಮಾಡಬೇಕು.

ಯದಾಹೃತಂ ಹ್ಯೇಕವರ್ಣೈಶ್ಚತುರ್ಭಿಃ ಕಲಶೈರ್ಹ್ರದಾತ್ ।
ಚರ್ಮಣ್ಯಾನಡುಹೇ ರಕ್ತೇ ಸ್ಥಾಪ್ಯಂ ಭದ್ರಾಸನಂ ತಥಾ ॥ ೧೮ ॥

ಸಹಸ್ರಾಕ್ಷಂ ಶತಧಾರಂ ಋಷಿಭಿಃ ಪಾವನಂಕೃತಂ ।
ತೇನ ತ್ವಾಮಭಿಷಿಂಚಾಮಿ ಪಾವಮಾನ್ಯಃ ಪುನಂತು ತೇ ॥ ೧೯ ॥

ಭಗಂ ತೇ ವರುಣೋ ರಾಜಾ ಭಗಂ ಸೂರ್ಯೋ ಬೃಹಸ್ಪತಿಃ ।
ಭಗಮಿಂದ್ರಶ್ಚ ವಾಯುಶ್ಚ ಭಗಂ ಸಪ್ತರ್ಷಯೋ ದದುಃ ॥ ೨೦ ॥

ಯತ್ತೇ ಕೇಶೇಷು ದೌರ್ಭಾಗ್ಯಂ ಸೀಮಂತೇ ಯಚ್ಚ ಮೂರ್ಧನಿ ।
ಲಲಾಟೇ ಕರ್ಣಯೋರಕ್ಷ್ಣೋ ರಾಪಸ್ತದ್ಘ್ನಂತು ತೇ ಸದಾ ॥ ೨೧ ॥

ಸ್ನಾತಸ್ಯ ಸಾರ್ಷಪಂ ತೈಲಂ ಸುವ್ರೇಣೌದುಂಬರೇಣ ತು ।
ಜುಹುಯಾನ್ಮೂರ್ಧನಿ ಕುಶಾನ್ ಪರಿಗೃಹ್ಯ ತು ॥ ೨೨ ॥

---

೧೮ ಒಂದೇಬಣ್ಣದ ನಾಲ್ಕುಕಲಶಗಳಲ್ಲಿ ಮಡುವಿನಿಂದ ನೀರನ್ನು ತಂದು, ಕೆಂಪು ಎತ್ತಿನ ಚರ್ಮವನ್ನು ಹಾಸಿ, ಈ ನಾಲ್ಕು ಕಲಶಗಳನ್ನೂ ಅದರಮೇಲಿಡ ಬೇಕು. ಮೇಲೆ ಹೇಳಿದ ವಸ್ತುಗಳನ್ನು ಕಲಶಗಳಲ್ಲಿ ಹಾಕಬೇಕು.

೧೯. "ಋಷಿಗಳು ಪರಿಶುದ್ಧಿಮಾಡಿದ ಸಹಸ್ರರಂಧ್ರದ ಧಾರಾಪಾತ್ರೆಯಿಂ ದಲೂ ಅನೇಕ ರಂಧ್ರದ ಧಾರಾಪಾತ್ರೆಯ ಮೂಲಕವೂ ಆ ಪರಿಶುದ್ಧವಾದ ಕಲಶೋ ದಕದಿಂದ ನಿನಗೆ ಅಭಿಷೇಕಮಾಡುತ್ತೇನೆ. ಪವಮಾನ ಸೂಕ್ತಗಳು ನಿನಗೆ ಪರಿಶುದ್ಧಿ ಯನ್ನುಂಟುಮಾಡಲಿ"

೨೦-೨೧. "ಭಗದೇವತಾತ್ಮಕನಾದ ಪರಮಾತ್ಮನೂ ಗ್ರಹರಾಜನೂ, ವರು ಣನೂ, ಬೃಹಸ್ಪತಿಯೂ, ಇಂದ್ರನೂ, ವಾಯುವೂ, ಸಪ್ತರ್ಷಿಗಳೂ ನಿನಗೆ ಷಡ್ಗು ಣೈಶ್ವರ್ಯಗಳನ್ನು ಕೊಡಲಿ. ನಿನ್ನ ತಲೆಗೂದಲು, ಮುಂದಲೆ ನೆತ್ತಿ, ಹಣೆ, ಕಿವಿ, ಕಣ್ಣು ಇವುಗಳಲ್ಲಿರುವ ದುರ್ಲಕ್ಷಣಗಳನ್ನು ಈ ಜಲವು ಪರಿಹಾರಮಾಡಲಿ" ಎಂಬ ಅರ್ಥ ವುಳ್ಳ ಈ ಮಂತ್ರ ಹೇಳುತ್ತಾ ಪುರೋಹಿತರು ಆ ಮನುಷ್ಯನಿಗೆ ಸ್ನಾನಮಾಡಿಸಬೇಕು.

೨೨-೨೩. ಸ್ನಾನಾನಂತರ ಅಗ್ನಿಯನ್ನು ಪ್ರತಿಷ್ಠೆಮಾಡಿ ಅತ್ತಿಮರದ ಸ್ರುವ ದಲ್ಲಿ ಸಾಸುವೆಯ ಎಣ್ಣೆಯನ್ನು ಹಾಕಿ ಬಲಗೈಯಲ್ಲಿ ಹಿಡಿದುಕೊಂಡು, ಎಡಗೈಯಲ್ಲಿ

ಮಿತಶ್ಚ ಸಂಮಿತಶ್ಚೈವ ತಥಾ ಚ ಶಾಲಿಕಂಟಕಃ ।
ಕೂಷ್ಮಾಂಡೋ ರಾಜಶ್ರೇಷ್ಠಾಸ್ತ್ರೇಽಗ್ನಯಃ ಸ್ವಾಹಾ ಸಮನ್ವಿತಾಃ ॥ ೨೩ ॥

ನಾಮಭಿರ್ಬಲಿಮಂತ್ರೈಶ್ಚ ನಮಸ್ಕಾರಸಮನ್ವಿತೈಃ ।
ದದ್ಯಾಚ್ಚತುಷ್ಪಥೇ ಶೂರ್ಪೇ ಕುಶಾನಾಸ್ತೀರ್ಯ ಸರ್ವತಃ ॥ ೨೪ ॥

ಕೃತಾಕೃತಾಂಸ್ತಂಡುಲಾಂಶ್ಚ ಪಲಲೌದನಮೇವ ಚ ।
ಮತ್ಸ್ಯಾನ್ ಪಕ್ವಾನ್ ತಥೈವಾಮಾನ್ ಮಾಂಸಮೇತಾವದೇವ ತು ॥೨೫॥

ಪುಷ್ಪಂ ಚಿತ್ರಂ ಸಗಂಧಂ ಚ ಸುರಾಂ ಚ ತ್ರಿವಿಧಾಮಪಿ ।
ಮೂಲಕಂ ಪೂರಿಕಾಃ ಪೂಪಾಂಸ್ತಥೈವೋಂಡೇರಿಕಾಸ್ರಜಂ ।
ದಧಿಪಾಯಸಮನ್ನಂ ಚ ಗುಡಪೇಷ್ಟಾನ್ ಸಮೋದಕಾನ್ ॥ ೨೬ ॥

ವಿನಾಯಕಸ್ಯ ಜನನೀಂ ಉಪತಿಷ್ಠೇತ್ತತೋಂಬಿಕಾಂ ।
ದೂರ್ವಾಸರ್ಷಪಪುಷ್ಪಾಣಾಂ ದತ್ವಾ ಪುಷ್ಪಾಂಜಲಿತ್ರಯಂ ॥ ೨೭ ॥

---

ದರ್ಭೆಯನ್ನು ತಲೆಯಮೇಲೆ ಹಿಡಿದುಕೊಂಡು ಮಿತಶ್ಚಸ್ವಾಹಾ, ಇದರಂತೆ ಸಮ್ಮಿತ, ಶಾಲಿಕಂಟಕ, ಕೂಶ್ಮಾಂಡ, ರಾಜಶ್ರೇಷ್ಠ, ಅಗ್ನಿ, ಈ ಶಬ್ದಗಳನ್ನು ಸ್ವಾಹಾಂತಗಳನ್ನಾಗಿ ಮಾಡಿಕೊಂಡು ಮೇಲೆ ಹೇಳಿದ ಸ್ರುವದಿಂದ ಅಗ್ನಿಯಲ್ಲಿ ಆಹುತಿಕೊಡಬೇಕು.

೨೪–೨೭. ಮೇಲೆ ಹೇಳಿದ ನಾಮಗಳೊಡನೆ ನಮಸ್ಕಾರಪೂರ್ವಕವಾಗಿ ಬಲಿಮಂತ್ರಗಳಿಂದ ನಾಲ್ಕು ದಾರಿಗಳು ಕೂಡಿದ ಸ್ಥಳದಲ್ಲಿ, ಒಂದು ಮೊರದಲ್ಲಿ ದರ್ಭೆಯನ್ನು ಹಾಸಿ, ಒಂದಕ್ಕೆ ಒಂದುಭತ್ತ ಇರುವಂತೆ ಅರ್ಧಕುಟ್ಟಿದ ಧಾನ್ಯ, ಮಾಂಸ ಮಿಶ್ರವಾದ ಅನ್ನ, ಹಸಿಯಮೀನು, ಹುರಿದಮೀನು; ಇಂಥದೇ ಮಾಂಸ ವಾಸನೆಯುಳ್ಳ ಬಗೆಬಗೆಯ ಹೂವುಗಳು, ಮೂರು ಬಗೆಯ ಹೆಂಡಗಳು, ಮೂಲಂಗಿ, ಪೂರಿ, ಒಬ್ಬಟ್ಟು, ಮತ್ತು ವಡೆಯಸರ, ಪಾಯಸ, ಮೊಸರನ್ನ, ಬೆಲ್ಲದ ಪಾಕದಲ್ಲಿ ಅದ್ದಿದ ಕಡುಬು ಇವೆಲ್ಲವನ್ನೂ ಇಟ್ಟು ಬಲಿಸಮರ್ಪಣೆ ಮಾಡಬೇಕು. ವಿನಾಯಕಜನನಿಯಾದ ಸರ್ವಮಂಗಳದಾಯಿನಿಯನ್ನು ಪೂಜಿಸಿ ಆಮೇಲೆ ದೂರ್ವೆ, ಸಾಸುವೆ, ಹೂವು ಇವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಮೂರು ಅಂಜಲಿಗಳಿಂದ ಸಮರ್ಪಿಸಬೇಕು.

ರೂಪಂ ದೇಹಿ ಯಶೋ ದೇಹಿ ಭಗಂ ಭಗವತಿ ದೇಹಿ ಮೇ ।
ಪುತ್ರಾನ್ ದೇಹಿ ಧನಂ ದೇಹಿ ಸರ್ವಾನ್ ಕಾಮಾಂಶ್ಚ ದೇಹಿ ಮೇ ।
ಅಚಲಾಂ ವೃದ್ಧಿಂ ಮೇ ದೇಹಿ ಧರಾಯಾಂ ಖ್ಯಾತಿಮೇವ ಚ ॥ ೨೮ ॥

ತತಶ್ಶುಕ್ಲಾಂಬರಧರಃ ಶುಕ್ಲಮಾಲ್ಯಾನುಲೇಪನಃ ।
ಭೋಜಯೇದ್ಬ್ರಾಹ್ಮಣಾನ್ ದದ್ಯಾತ್ ವಸ್ತ್ರಯುಗ್ಮಂ ಗುರೋರಪಿ ॥೨೯॥

ಏವಂ ವಿನಾಯಕಂ ಪೂಜ್ಯ ಗ್ರಹಾಂಶ್ಚೈವ ವಿಧಾನತಃ ।
ಕರ್ಮಣಾಂ ಫಲಮಾಪ್ನೋತಿ ಶ್ರಿಯಂ ಪ್ರಾಪ್ನೋತ್ಯನುತ್ತಮಾಂ॥ ೩೦ ॥

ಆದಿತ್ಯಸ್ಯ ಸದಾ ಪೂಜಾಂ ತಿಲಕಂ ಸ್ವಾಮಿನಸ್ತಥಾ ।
ವಿನಾಯಕಪತೇಶ್ಚೈವ ಸರ್ವಸಿದ್ಧಿಮವಾಪ್ನುಯಾತ್ ॥ ೩೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಚತುರ್ಥೀ ಕಲ್ಪವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ.

---

೨೮. ಅಲ್ಲದೆ "ಹೇ ಭಗವತಿ ! ಸೌಂದರ್ಯ, ಯಶಸ್ಸು, ಪುತ್ರರು, ಧನ, ಧಾನ್ಯ, ಸಮಸ್ತಇಷ್ಟಾರ್ಥಗಳು, ನಿಶ್ಚಲವಾದ ಬುದ್ಧಿ, ಲೋಕವಿಖ್ಯಾತವಾದ ಯಶಸ್ಸು ಇವುಗಳನ್ನೆಲ್ಲಾ ಕರುಣಿಸು" ಎಂದು ಪ್ರಾರ್ಥನೆಮಾಡಬೇಕು.

೨೯. ಅನಂತರ ತಾನು ಶ್ವೇತವಸ್ತ್ರ ಶ್ವೇತಪುಷ್ಪಗಳನ್ನು ಧರಿಸಿ ಅಲಂಕರಿಸಿ ಕೊಂಡು ಯಥಾಶಕ್ತಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಮತ್ತು ಗುರುವಿಗೆ ಒಂದುಜೊತೆ ಪಂಚೆಯನ್ನು ದಾನಮಾಡಬೇಕು.

೩೦. ಹೀಗೆ ವಿಧಿಪ್ರಕಾರವಾಗಿ ವಿನಾಯಕನನ್ನೂ ಗ್ರಹಗಳನ್ನೂ ಪೂಜಿಸಿದ ವನು ಈ ಪೂಜಾಕರ್ಮಕ್ಕೆ ತಕ್ಕ ಫಲವನ್ನು ಹೊಂದುವುದಲ್ಲದೆ ಸರ್ವೋತ್ತಮವಾದ ಸಂಪತ್ತನ್ನೂ ಹೊಂದುವನು.

೩೧. ಸೂರ್ಯಾರಾಧನೆಯನ್ನು ಸರ್ವದಾ ಮಾಡುತ್ತ ಯಾವನು ಸ್ವಾಮಿ ಯಾದ ವಿನಾಯಕನಿಗೆ ತಿಲಕಧಾರಣೆಯನ್ನು ಮಾಡಿಸುವನೋ ಅವನು ಸರ್ವಸಿದ್ಧಿ ಯನ್ನೂ ಪಡೆಯುವನು.

ಎಂಬಲ್ಲಿಗೆ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಕಲ್ಪದಲ್ಲಿ ಚತುರ್ಥೀಕಲ್ಪ ವರ್ಣನೆಯೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುರ್ವಿಂಶೋಽಧ್ಯಾಯಃ

॥ ಶತಾನೀಕ ಉವಾಚ ॥

ನರಾಣಾಂ ಯೋಷಿತಾಂ ಚೈವ ಲಕ್ಷಣಾನಿ ಮಹಾಮತೇ ।
ಪ್ರೋಕ್ತಾನಿ ಯಾನಿ ವಿಪ್ರೇಂದ್ರ ವ್ಯೋಮಕೇಶಸ್ಯ ಸೂನುನಾ ॥ ೧ ॥

ಕ್ರುದ್ಧೇನ ಯಾನಿ ಕ್ಷಿಪ್ತಾನಿ ಈಶ್ವರೇಣ ಮಹೋದಧೌ ।
ಕೃಷ್ಣಸ್ಯ ವಚನಾದ್ಭೂಯಃ ಸಮುದ್ರೇಣಾರ್ಪಿತಾನಿ ವೈ ॥ ೨ ॥

ಅರ್ಪಿತಾನಿ ತತಸ್ತಸ್ಯ ತೇನ ಪ್ರಾಪ್ತಾನಿ ವೈ ಕಥಂ ।
ಬಾಹುಲೇಯೇನ ವಿಪ್ರೇಂದ್ರ ತಾನಿ ಮೇ ವದ ಸುವ್ರತ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧–೩. ಶತಾನೀಕರಾಜನು ಕೇಳುತ್ತಾನೆ—"ಮಹಾಬುದ್ಧಿಶಾಲಿಯಾದ ವಿಪ್ರ ಶ್ರೇಷ್ಠನೆ! ಈಶ್ವರನ ಮಗನಾದ ಷಣ್ಮುಖನು ಸ್ತ್ರೀಲಕ್ಷಣ ಪುರುಷಲಕ್ಷಣಗಳನ್ನು ನಿರೂಪಿಸಿದ್ದನೆಂದೂ, ಈಶ್ವರನು ಕೋಪಗೊಂಡು ಸಮುದ್ರಕ್ಕೆ ಬಿಸುಟನೆಂದೂ, ಕೃಷ್ಣನ ಮಾತಿನ ಪ್ರಕಾರ ಸಮುದ್ರನು ಅದನ್ನು ಹಿಂದಕ್ಕೆ ತಂದುಕೊಟ್ಟನೆಂದೂ, ಅನಂತರ ಅವು ಮತ್ತೆ ಷಣ್ಮುಖನಿಗೇ ದೊರೆತುವೆಂದೂ ಹೇಳುತ್ತಾರೆ. ಓ ಸುವ್ರತನೆ! ಆ ವಿಷಯವೆಲ್ಲವನ್ನೂ ನನಗೆ ನೀನು ಹೇಳು" ಎಂದನು.

॥ ಸುಮಂತುರುವಾಚ ॥

ಯಥಾ ಗುಹೇನ ರಾಜೇಂದ್ರ ಸ್ತ್ರೀಪುಂಸಾಂ ಲಕ್ಷಣಾನಿ ವೈ ।
ಪ್ರೋಕ್ತಾನಿ ಕುರುಶಾರ್ದೂಲ ತಥಾ ತೇ ಕಥಯಾಮಿ ವೈ ॥ ೪ ॥

ಶಕ್ತಿಪಾತಾದ್ಧತೇ ಕ್ರೌಂಚೇ ವ್ಯೋಮಕೇಶಸ್ಯ ಸೂನುನಾ ।
ಬ್ರಹ್ಮಾ ತುಷ್ಟೋಽಬ್ರವೀದೇನಂ ವರಂ ವರಯ ಮೇಽನಘ ॥ ೫ ॥

ಅಸಾವಪಿ ಮಹಾತೇಜಾಃ ಪ್ರಣಮ್ಯ ಶಿರಸಾ ವಿಭುಂ ।
ಪಿತಾಮಹಂ ಬಭಾಷೇದಂ ಲಕ್ಷಣಂ ಬ್ರೂಹಿ ಮೇ ವಿಭೋ ॥ ೬ ॥

ನರಾಣಾಂ ಯುವತೀನಾಂ ಚ ಕೌತುಕಂ ಪರಮಂ ಮಮ ।
ಯನ್ಮಯೋಕ್ತಂ ಪುರಾ ದೇವ ಪ್ರಕ್ಷಿಪ್ತಂ ಲವಣಾರ್ಣವೇ ॥ ೭ ॥

ಮತ್ಪಿತ್ರಾ ದೇವದೇವೇಶ ಸಕ್ರೋಧೇನ ಪುರಾ ತಥಾ ।
ಪ್ರಾಪ್ತಂ ಚ ವಿಸ್ಮೃತಂ ಭೂಯಃ ತನ್ಮೇ ಬ್ರೂಹಿ ಹ್ಯಶೇಷತಃ ॥ ೮ ॥

---

೪. ಆಗ ಸುಮಂತುವು "ಅಯ್ಯಾ ರಾಜಶ್ರೇಷ್ಠನೆ ! ಷಣ್ಮುಖನು ಸ್ತ್ರೀಲಕ್ಷಣ ಪುರುಷಲಕ್ಷಣಗಳನ್ನು ಹೇಗೆ ಹೇಳಿದ್ದಾನೋ ಹಾಗೆಯೇ ನಾನೂ ನಿನಗೆ ಹೇಳುತ್ತೇನೆ.

೫. ಪೂರ್ವದಲ್ಲಿ ಶಿವಸೂನುವಾದ ಷಣ್ಮುಖನು ಶಕ್ತ್ಯಾಯುಧದಿಂದ ಏಟು ಹೊಡೆದು ಕ್ರೌಂಚಪರ್ವತವನ್ನು ಸೀಳಿದನು. ಆಗ ಬ್ರಹ್ಮನು ಸಂತೋಷಗೊಂಡು ಅವನನ್ನು ಕುರಿತು " ನಿನಗೆ ಬೇಕಾದ ವರವನ್ನು ಕೇಳು " ಎಂದನು.

೬. ಆಗ ತೇಜಸ್ವಿಯಾದ ಷಣ್ಮುಖನು ಬ್ರಹ್ಮನನ್ನು ನಮಸ್ಕರಿಸಿ " ನನಗೆ ಸ್ತ್ರೀಯರ ಮತ್ತು ಪುರುಷರ ಲಕ್ಷಣವನ್ನು ಕೇಳಲು ಬಹುಕುತೂಹಲವಾಗಿದೆ."

೭-೮. " ಪೂರ್ವದಲ್ಲಿ ಕುಪಿತನಾದ ನನ್ನ ತಂದೆಯು ಅವುಗಳನ್ನು ಸಮುದ್ರದಲ್ಲಿ ಎಸೆದನೆಂದು ಹೇಳಿದೆನಷ್ಟೆ. ಆ ಸ್ತ್ರೀಪುರುಷ ಲಕ್ಷಣ ಶಾಸ್ತ್ರವು ಪುನಃ ದೊರಕಿದರೂ ಬಹು ಕಾಲವಾದ್ದರಿಂದ ಮರೆತುಹೋಗಿದೆ. ಅದುದರಿಂದ ಅದನ್ನು ನನಗೆ ಸಮಗ್ರವಾಗಿ ಹೇಳು " ಎಂದನು.

॥ ಬ್ರಹ್ಮೋವಾಚ ॥
ಸಾಧು ಪೃಷ್ಟೋಽಸ್ಮಿ ದೇವೇಶ ಭೀಮಸ್ಯಾನಂದವರ್ಧನ ।
ಲಕ್ಷಣಾನಿ ನಿಬೋಧ ತ್ವಂ ಪುರುಷಾಣಾಮಶೇಷತಃ ॥ ೯ ॥

ಅಥಮೋತ್ತಮಮಧ್ಯಾನಿ ಯಾನಿ ಪ್ರಾಪ ಪಯೋನಿಧಿಃ ।
ಶಿವೇಹನಿ ಸುನಕ್ಷತ್ರೇ ಗ್ರಹೇ ಸೌಮ್ಯೇ ಶುಭೇ ರವೌ ।
ಪೂರ್ವಾಹ್ಣೇ ಮಂಗಳೈರ್ಯುಕ್ತೇ ಪರೀಕ್ಷೇತ ವಿಚಕ್ಷಣಃ ॥ ೧೦ ॥

ಪ್ರಮಾಣಂ ಸಂಹತಿಂ ಛಾಯಂ ಗತಿಂ ಸರ್ವಾಂಗಲಕ್ಷಣಂ ।
ದಂತಕೇಶನಖಶ್ಮಶ್ರು ಏತತ್ಸರ್ವಂ ವಿಚಕ್ಷಣಃ ॥ ೧೧ ॥

ಪೂರ್ವಮಾಯುಃ ಪರೀಕ್ಷೇತ ಪಶ್ಚಾಲ್ಲಕ್ಷಣಮಾದಿಶೇತ್ ।
ಕ್ಷೀಣೇಹ್ಯಾಯುಷಿ ಮರ್ತ್ಯಾನಾಂ ಲಕ್ಷಣೈಃ ಕಿಂ ಪ್ರಯೋಜನಂ ॥ ೧೨ ॥

---

೯. ಬ್ರಹ್ಮನು ಹೇಳುತ್ತಾನೆ—ಶಿವನಿಗೆ ಆನಂದವನ್ನುಂಟುಮಾಡುವ ಎಲೈ ಷಣ್ಮುಖನೇ ! ಒಳ್ಳೆಯದನ್ನೇ ಕೇಳಿದೆ. ಸಮುದ್ರನು ಉತ್ತಮಾಧಮ ಮಧ್ಯಮ ಎಂಬ ಮೂರು ವಿಭಾಗದಿಂದ ಕೂಡಿದ ಯಾವ ಸ್ತ್ರೀಲಕ್ಷಣ ಪುರುಷ ಲಕ್ಷಣಗಳ ಶಾಸ್ತ್ರಗಳನ್ನು ತನ್ನಲ್ಲಿ ಇಟ್ಟುಕೊಂಡಿದ್ದನೋ ಅವುಗಳನ್ನೇ ಹೇಳುವೆನು.

೧೦. ಯಾವುದಾದರೂ ಒಂದು ಶುಭದಿವಸ ಪೂರ್ವಾಹ್ನದಲ್ಲಿ ಒಳ್ಳೆಯ ನಕ್ಷತ್ರದಲ್ಲಿ ರವಿ ಬುಧ ಇವರು ಶುಭಸ್ಥಾನದಲ್ಲಿರುವುದನ್ನು ನೋಡಿ ಈ ಲಕ್ಷಣವನ್ನು ಪರೀಕ್ಷಿಸಬೇಕು.

೧೧. ದೇಹದಪ್ರಮಾಣ, ದೇಹದ ಒಟ್ಟು ಅಂದ, ಛಾಯ, ನಡಗೆ, ಹಲ್ಲು, ಕೂದಲು, ಉಗುರು, ಮೀಸೆ ಮುಂತಾದ ಎಲ್ಲಾ ಅಂಗಗಳ ಲಕ್ಷಣವನ್ನೂ ಪರೀಕ್ಷಿಸಬೇಕು.

೧೨. ಸ್ತ್ರೀಯನ್ನೇ ಆಗಲಿ ಪುರುಷನನ್ನೇ ಆಗಲಿ ಲಕ್ಷಣಪರೀಕ್ಷೆ ಮಾಡುವುದಕ್ಕಿಂತ ಮುಂಚೆ ಅವರ ಆಯುರ್ದಾಯವನ್ನು ನೋಡಿ ಆಮೇಲೆ ಇತರ ಲಕ್ಷಣವನ್ನು ನೋಡಬೇಕು. ಆಯುಸ್ಸೇ ಇಲ್ಲದ ವ್ಯಕ್ತಿಗಳ ಲಕ್ಷಣ ಪರೀಕ್ಷೆಯಿಂದ ಏನು ಫಲ ?

ಃ ನವತಿಪ್ರೋಕ್ತೋ ಮಧ್ಯಮಸ್ತು ಶತಾಂಗುಲಃ ।
[illegible]ತ್ತರಶತಂ ಯಸ್ಯ ಉತ್ತಮಂ ತಸ್ಯ ಲಕ್ಷಣಂ ॥ ೧೩ ॥

ಪ್ರಮಾಣಲಕ್ಷಣಂ ಪ್ರೋಕ್ತಂ ಸಮುದ್ರೇಣ ಶುಭಾಶುಭಂ ।
ಯನ್ಮೇ ಪುರಾ ದೇವವರ ಮಯಾ ವೈ ಕಥಿತಂ ತವ ।
ಅತಃಪರಂ ಪ್ರವಕ್ಷ್ಯಾಮಿ ದೇಹಾವಯವಲಕ್ಷಣಂ ॥ ೧೪ ॥

ಪಾದೈಃ ಸಮಾಂಸಕೈಃ ಸ್ನಿಗ್ಧೈಃ ರಕ್ತೈಃ ಸಾಮ್ಯೈಃ ಸುಶೋಭನೈಃ ।
ಉನ್ನತೈಃ ಸ್ವೇದರಹಿತೈಃ ಶಿರಾಹೀನೈಶ್ಚ ಪಾರ್ಥಿವಃ ॥ ೧೫ ॥

ಯಸ್ಯಪಾದತಲೇ ರೇಖಾ ಸಾಂಕುಶೇವ ಪ್ರಕಾಶತೇ ।
ಸತತಂ ಹಿ ಸುಖಂ ತಸ್ಯ ಪುರುಷಸ್ಯ ನ ಸಂಶಯಃ ॥ ೧೬ ॥

---

೧೩. [ಪೂರ್ವಕಾಲದ ಅಳತೆಯಲ್ಲಿ ವಿತಸ್ತಿ ಎಂದರೆ ಒಂದುಗೇಣು ಎಂದರ್ಥ. ಈ ವಿತಸ್ತಿಗೆ ಹನ್ನೆರಡು ಬೆರಳು ಅಗಲ ಎಂದು ಗೊತ್ತುಮಾಡಿರುವರು. ಆ ಗೇಣಿಗೆ ಈಗಿನ ಒಂಭತ್ತು ಅಂಗುಲ ಸಮ.] ಎತ್ತರವು ತೊಂಭತ್ತು ಅಂಗುಲ ಇರುವವರು ಕೀಳುದರ್ಜೆಯವರು, ನೂರುಅಂಗುಲ ಎತ್ತರದವರು ಮಧ್ಯಮ ತರಹೆಯವರು, ನೂರೆಂಟು ಅಂಗುಲ ಎತ್ತರದವರು ಉತ್ತಮರೆಂದು ಸಾಮುದ್ರಿಕಾ ಶಾಸ್ತ್ರದಲ್ಲಿ ಈ ಶುಭಲಕ್ಷಣಗಳು ಉಕ್ತವಾಗಿವೆ.

೧೪. ಅಯ್ಯಾ ದೇವಶ್ರೇಷ್ಠನೆ! ನನ್ನಲ್ಲಿದ್ದ ಈ ಲಕ್ಷಣ ಶಾಸ್ತ್ರವನ್ನು ನಾನೇ ಹಿಂದೆ ನಿನಗೆ ಹೇಳಿದ್ದೆನಷ್ಟೆ. ಇನ್ನು ಮುಂದೆ ದೇಹದ ಅವಯವಗಳ ಲಕ್ಷಣ ವನ್ನು ಹೇಳುತ್ತೇನೆ.

೧೫. ಪಾದಗಳು ಮಾಂಸಯುಕ್ತಗಳಾಗಿಯೂ, ಕೆಂಪಗೂ, ಸೌಮ್ಯ ವಾಗಿಯೂ, ಶುಭಕರವಾಗಿಯೂ, ಮಿಂಚುತ್ತಲೂ, ಬೆವರಿಲ್ಲದೆಯೂ, ನರಗಳು ಕಾಣಿ ಸದೆಯೂ, ಉನ್ನತವಾಗಿಯೂ ಇದ್ದರೆ ಆ ಮನುಜನು ರಾಜನೆನಿಸುವನು.

೧೬. ಯಾರ ಅಂಗಾಲಿನಲ್ಲಿ ರೇಖೆಯು ಅಂಕುಶಾಕೃತಿಯಾಗಿ ಪ್ರಕಾಶಿಸುವುದೋ ಆ ಮನುಷ್ಯನಿಗೆ ಯಾವಾಗಲೂ ಸುಖವುಂಟಾಗುತ್ತದೆ ಎನ್ನಲು ಸಂಶಯವಿಲ್ಲ.

ಅಸ್ವೇದನೌ ಮೃದುತಲೌ ಕಮಲೋದರಸನ್ನಿಭೌ ।
ಶ್ಲಿಷ್ಟಾಂಗುಲೀ ತಾಮ್ರನಖೌ ಸುಪಾರ್ಷ್ಣೀ ವ್ಯೋಮಕೇಶಜ ॥ ೧೭ ॥

ಉಷ್ಣೌ ಶಿರಾವಿರಹಿತೌ ಗೂಢಗುಲ್ಫೌ ಚ ಭೀಮಜ ।
ಕೂರ್ಮೋನ್ನತೌ ಚ ಚರಣೌ ಪ್ರಖ್ಯಾತೌ ಪಾರ್ಥಿವಸ್ಯ ತು ॥ ೧೮ ॥

ಶೂರ್ಪಾಕೃತೀ ಮಹಾಬಾಹೋ ರೂಕ್ಷೌ ಶ್ವೇತನಖೌ ತಥಾ ।
ವಕ್ರೌ ಶಿರಾಸಂತತೌ ಚ ಸಂಶುಷ್ಕೌ ವಿರಲಾಂಗುಲೀ ॥ ೧೯ ॥

ದಾರಿದ್ರ್ಯದುಃಖದೌ ಜ್ಞೇಯೌ ಚರಣೌ ಭೀಮನಂದನ ।
ಬ್ರಹ್ಮಘ್ನೌ ದೇವಶಾರ್ದೂಲ ಪಕ್ವಮೃತ್ಸದೃಶೌ ಪದೌ ॥ ೨೦ ॥

---

೧೭. ಎಲೈ ಶಿವಕುಮಾರನೆ! ಪಾದಗಳು ಮೃದುವಾಗಿಯೂ, ಬೆವರಿಲ್ಲದೆಯೂ, ಕಮಲದ ಒಳಭಾಗದಂತೆ ಬಣ್ಣವುಳ್ಳದ್ದೂ, ಕೂಡಿಸಿದಾಗ ಸಂದುಬಿಡದಂತೆ ಇರುವ ಬೆರಳುಗಳುಳ್ಳದ್ದೂ, ಕೆಂಪಗಿರುವ ಉಗುರುಳ್ಳದ್ದೂ, ಒಳ್ಳೆಯ ಹಿಮ್ಮಡಿಯುಳ್ಳದ್ದೂ, ಆಗಿರಬೇಕು.

೧೮. ಅಯ್ಯಾ ಗುಹನೆ! ಕಾಲು ಶಾಖವಾಗಿಯೂ, ನರಗಳಿಲ್ಲದೆಯೂ, ಹರಡು ಹೊರಗೆ ಕಾಣಿಸದೆಯೂ, ಆಮೆಯ ಬೆನ್ನಿನಂತೆ ಮೇಲ್ಭಾಗ ಉಬ್ಬಾಗಿಯೂ ಇರುವುದು ರಾಜಲಕ್ಷಣವೆಂದು ಪ್ರಸಿದ್ಧಿ

೧೯. ಇನ್ನು ದುರ್ಲಕ್ಷಣವನ್ನು ಹೇಳುತ್ತೇನೆ. ಮೊರದ ಆಕಾರವುಳ್ಳದ್ದಾಗಿಯೂ, ಒರಟಾಗಿಯೂ, ಬಿಳಿಯ ಉಗುರುಳ್ಳದ್ದಾಗಿಯೂ, ದುಂಡಾಗಿಯೂ, ನರಗಳಿಂದ ತುಂಬಿಯೂ, ಒಣಕಲಾಗಿಯೂ, ಸಂದುಬಿಡುವ ಬೆರಳುಳ್ಳದ್ದಾಗಿಯೂ ಇರುವ ಚರಣಗಳು ಇರಬಾರದು.

೨೦. ಪಾದಗಳು ಹೀಗೆ ಇದ್ದರೆ ದಾರಿದ್ರ್ಯ, ದುಃಖ, ಇವನ್ನುಂಟುಮಾಡುತ್ತವೆ. ಅಯ್ಯಾ ದೇವಪ್ರಮುಖನೆ! ಪಾದಗಳು ಸುಟ್ಟ ಮಣ್ಣಿನಂತೆ ಬಣ್ಣವುಳ್ಳವಾಗಿದ್ದರೆ ಅವು ಬ್ರಹ್ಮಹತ್ಯಾ ದೋಷಕ್ಕೆ ಕಾರಣಗಳಾಗುವವು.

ಪೀತಾವಗಮ್ಯಾನಿರತೌ ಕೃಷ್ಣೌ ಪಾನರತೌ ಸದಾ ।
ಅಭಕ್ಷ್ಯಭಕ್ಷಣೇ ಶ್ವೇತೌ ಜ್ಞೇಯಾ ಸೇನಾಧಿಪೋತ್ತಮ ॥ ೨೧ ॥

ಅಂಗುಷ್ಠೌ ಪೃಥುಲೌ ಯೇಷಾಂ ತೇ ನರಾ ಭಾಗ್ಯವರ್ಜಿತಾಃ ।
ಕ್ಲಿಶ್ಯಂತೇ ವಿಕೃತಾಂಗುಷ್ಠಾಸ್ತೇ ನರಾ ಪಾದಗಾಮಿನಃ ॥ ೨೨ ॥

ಚಿಪಿಟೈರ್ವಿಕೃತೈರ್ಭಗ್ನೈರಂಗುಷ್ಠೈರತಿನಿಂದಿತಾಃ ।
ವಕ್ರೈರ್ಭಗ್ನೈಸ್ತಥಾ ಹ್ರಸ್ವೈರಂಗುಷ್ಠೈಃ ಕ್ಲೇಶಭಾಗಿನಃ ॥ ೨೩ ॥

ಶೂರ್ಪಾಕಾರೈಶ್ಚ ವಿಕೃತೈಃ ಭಗ್ನೈರ್ವಕ್ರೈಃ ಶಿರಾತತೈಃ ।
ಸಸ್ವೇದೈಃ ಪಾಂಡುರೂಕ್ಷೈಶ್ಚ ಚರಣೈರತಿನಿಂದಿತಾಃ ॥ ೨೪ ॥

---

೨೧. ಅಯ್ಯಾದೇವಸೇನಾಪತಿಯೆ ! ಹಳದಿಯ ಬಣ್ಣದ ಪಾದವುಳ್ಳವನು ಅಗಮ್ಯಾಗಮನವಮಾಡುತ್ತಾನೆ. (ಎಂದರೆ ವಾವೆಯಲ್ಲಿ ತಾಯಿ, ತಂಗಿ ಆಗಬೇಕಾದಂಥ ಸ್ತ್ರೀಯರನ್ನು ಆಶಿಸುತ್ತಾನೆ). ಪಾದವು ಕಪ್ಪಾಗಿದ್ದರೆ ಮದ್ಯಪಾಯಿಯಾಗುತ್ತಾನೆ. ಅತಿಯಾಗಿ ಬಿಳಿಚಿಕೊಂಡಿದ್ದರೆ ತಿನ್ನಬಾರದುದನ್ನು ತಿನ್ನುತ್ತಾನೆ.

೨೨. ಹೆಬ್ಬೆಟ್ಟು ದಪ್ಪವಾಗಿರುವವರು ಅದೃಷ್ಟಹೀನರು (ನಿರ್ಭಾಗ್ಯರು). ವಿಕಾರವಾದ ಅಂಗುಷ್ಠವುಳ್ಳವರು ವಾಹನರಹಿತರಾಗಿ ಪಾದಚಾರಿಗಳೇ ಆಗುತ್ತಾರೆ.

೨೩. ಅಂಗುಷ್ಠಗಳು ಅವಲಕ್ಕಿಯಂತೆ ಹರಡಿಕೊಂಡು ವಿಕಾರವಾಗಿಯೂ, ಬಿರುಕುಳ್ಳದ್ದಾಗಿಯೂ ಇದ್ದರೆ ಅವರು ಬಹು ನಿಂದಾರ್ಹರಾಗುತ್ತಾರೆ. ಮುರಿದು ಹೋದಂತೆ ಡೊಂಕಾಗಿಯೂ ಮೋಟಾಗಿಯೂ ಇರುವ ಅಂಗುಷ್ಠವುಳ್ಳವರು ದುಃಖವನ್ನು ಅನುಭವಿಸುವರು.

೨೪. ಮೊರದಂತೆ ವಿಕಾರವಾದುದು, ಬಿರಿದಿರುವುದು, ಡೊಂಕಾಗಿರುವುದು, ಅನೇಕ ನರಗಳಿಂದ ವ್ಯಾಪ್ತವಾದುದು, ಸದಾ ಬೆವರುತ್ತಿರುವುದು, ಅತಿಯಾಗಿ ಬಿಳುಪಾಗಿರುವುದು, ಒರಟಾದುದು, ಇಂಥ ಪಾದವುಳ್ಳವರು ಬಹು ನಿಂದೆಗೆ ಗುರಿಯಾಗುತ್ತಾರೆ.

ಯಸ್ಯ ಪ್ರದೇಶಿನೀ ದೀರ್ಘಾ ಅಂಗುಷ್ಠಂ ಯಾ ಅತಿಕ್ರಮೇತ್ ।
ಸ್ತ್ರೀಭೋಗಂ ಲಭತೇ ನಿತ್ಯಂ ಪುರುಷೋ ನಾತ್ರ ಸಂಶಯಃ ।
ಕನಿಷ್ಠಾಯಾಂ ತು ದೀರ್ಘಾಯಾಂ ಸುವರ್ಣಸ್ಯ ತು ಭಾಗಿನಃ ॥ ೨೫ ॥

ಚಿಪಿಟಾ ವಿರಲಾಃ ಶುಷ್ಕಾ ಯಸ್ಯಾಂಗುಲ್ಯೋ ಭವಂತಿ ವೈ ।
ಸ ಭವೇದ್ದುಃಖಿತೋ ನಿತ್ಯಂ ಧನಹೀನಶ್ಚ ವೈ ಗುಹ ॥ ೨೬ ॥

ಶ್ವೇತೈರ್ನಖೈರ್ವಿರೂಕ್ಷೈಶ್ಚ ಪುರುಷಾ ದುಃಖಜೀವಿನಃ ।
ಕುಶೀಲಾ ಕು ನಖೈರ್ಜ್ಞೇಯಾಃ ಕಾಮಭೋಗವಿವರ್ಜಿತಾಃ ।
ವಿಕೃತೈಃ ಸ್ಫುಟಿತೈ ರೂಕ್ಷೈರ್ನಖೈರ್ದಾರಿದ್ರ್ಯಭಾಗಿನಃ ॥ ೨೭ ॥

ಬ್ರಹ್ಮಹತ್ಯಾಂ ಚ ಕುರ್ವಂತಿ ಪುರುಷಾ ಹರಿತೈರ್ನಖೈಃ ।
ಬಂಧುಭಿಶ್ಚ ವಿಯುಜ್ಯಂತೇ ಕುಲಕ್ಷಯಕರಾಶ್ಚ ತೇ ॥ ೨೮ ॥

---

೨೫. ಯಾವನ ಹೆಬ್ಬೆರಳಪಕ್ಕದ ಬೆರಳು ಅಂಗುಷ್ಠಕ್ಕಿಂತ ಉದ್ದವಾಗಿರುವುದೋ ಅವನು ಯಾವಾಗಲೂ ಸ್ತ್ರೀಸುಖವನ್ನು ಅನುಭವಿಸುವನು. ಇದರಲ್ಲಿ ಸಂದೇಹವಿಲ್ಲ.

೨೬. ಅಯ್ಯಾ ಗುಹನೆ! ಕಿರುಬೆರಳು ಉದ್ದವಾಗಿದ್ದವನು ಬಹು ಸುವರ್ಣಯುಕ್ತನಾಗುತ್ತಾನೆ. ಅವಲಕ್ಕಿಯಂತೆ ಚಪ್ಪಟೆಯಾಗಿಯೂ ಸಂದುಬಿಡುವುದಾಗಿಯೂ ಒಣಕಲಾಗಿಯೂ ಇರುವ ಬೆರಳುಗಳುಳ್ಳವನು ಯಾವಾಗಲೂ ದುಃಖಿತನೂ ಧನಹೀನನೂ ಆಗುವನು.

೨೭. ಉಗುರುಗಳು ಬೆಳ್ಳಗೂ ಒರಟಾಗಿಯೂ ಇರುವಾತನು ದುಃಖಜೀವಿಯಾಗುವನು. ಹುಳುಕಾದ ಉಗುರುಳ್ಳವರು, ದುಷ್ಟಸ್ವಭಾವದವರೂ, ಕಾಮಸುಖಗಳ ಲಭ್ಯವಿಲ್ಲದವರೂ ಆಗುತ್ತಾರೆ. ವಿಕಾರವಾಗಿಯೂ, ಬಿರುಕುಳ್ಳದ್ದಾಗಿಯೂ, ಒರಟಾಗಿಯೂ, ಇರುವ ಉಗುರುಳ್ಳವರು ದರಿದ್ರರಾಗುವರು.

೨೮. ಹಳದಿಯ ಬಣ್ಣದ ಉಗುರುಳ್ಳವರು ಬ್ರಹ್ಮಹತ್ಯವನ್ನು ಮಾಡುತ್ತಾರೆ. ಅಲ್ಲದೆ ಬಂಧುಗಳೆಲ್ಲರಿಂದ ತ್ಯಾಜ್ಯರಾಗಿ ವಂಶವನ್ನು ನಾಶಮಾಡತಕ್ಕವರಾಗುತ್ತಾರೆ.

ಇಂದ್ರಗೋಪಕ ಸಂಕಾಶೈಃ ನಖೈರ್ನೃಪತಯಃ ಸ್ಮೃತಾಃ ।
ಶಂಖಾವರ್ತಪ್ರತೀಕಾಶೈಃ ನಖೈರ್ಭವತಿ ಪಾರ್ಥಿವಃ ॥ ೨೯ ॥

ತಾಮ್ರೈರ್ನಖೈಸ್ತಥೈಶ್ವರ್ಯಂ ಧನ್ಯಾಃ ಪದ್ಮನಖಾ ನರಾಃ ।
ರಕ್ತೈರ್ನಖೈಸ್ತಥೈಶ್ವರ್ಯಂ ಪುಷ್ಪಿತೈಸ್ಸುಭಗೋ ಭವೇತ್ ॥ ೩೦ ॥

ಸೂಕ್ಷ್ಮೈರುಪಚಿತೈಸ್ತಾಮ್ರೈರ್ನಖೈ ರ್ನೃಪತಯಃ ಸ್ಮೃತಾಃ ।
ರೋಮಶಾಭ್ಯಾಂ ಚ ಜಂಘಾಭ್ಯಾಂ ದುಃಖದಾರಿದ್ರ್ಯಭಾಗಿನಃ ।
ಬಂಧನಂ ಹ್ರಸ್ವಜಂಘಾನಾಮೈಶ್ವರ್ಯಂ ಚೈವ ನಿರ್ದಿಶೇತ್ ॥ ೩೧ ॥

ಮೃಗಜಂಘಾಶ್ಚ ರಾಜಾನೋ ಜಾಯಂತೇ ನಾತ್ರ ಸಂಶಯಃ ।
ದೀರ್ಘಜಂಘಾಃ ಸ್ಥೂಲಜಂಘಾಃ ನಿತ್ಯಂ ಭಾಗ್ಯವಿವರ್ಜಿತಾಃ ॥ ೩೨ ॥

ಶೃಗಾಲಜಂಘಾಃ ಪುರುಷಾಃ ನಿತ್ಯಂ ಭಾಗ್ಯವಿವರ್ಜಿತಾಃ ।
ಕಾಕಜಂಘಾ ನರಾ ಯೇ ತು ಭವೇಯುರ್ದುಃಖ ಭಾಗಿನಃ ॥ ೩೩ ॥

---

೨೯. ಇಂದ್ರಗೋಪ (ಚಿಮ್ಮಂಡೆ) ಎಂಬ ಹುಳುಗಳ ಬಣ್ಣದ ಉಗುರುಗಳಿದ್ದರೆ ಅವನು ರಾಜನಾಗುತ್ತಾನೆ. ಶಂಖದ ಸುಳಿಯಂತೆ (ತಿರುವಿನಂತೆ) ಇರುವ ಉಗುರುಳ್ಳವನು ರಾಜರಾಗುತ್ತಾನೆ.

೩೦. ಕೆಂಪಾದ ಉಗುರುಳ್ಳವರು ಐಶ್ವರ್ಯವಂತರಾಗುವರು ಕಮಲದ ವರ್ಣದ ಉಗುರುಳ್ಳವರು ಧನ್ಯರೆನಿಸುತ್ತಾರೆ. ಪುಷ್ಪಾಕೃತಿಯ ಉಗುರುಳ್ಳವರು ಅದೃಷ್ಟವಂತರು (ಸೌಭಾಗ್ಯಶಾಲಿಗಳು) ಆಗುತ್ತಾರೆ.

೩೧. ಸಣ್ಣದಾಗಿಯೂ, ಉದ್ದವಾಗಿಯೂ, ಕೆಂಪಾಗಿಯೂ, ಇರುವ ಉಗುರುಗಳುಳ್ಳವರು ರಾಜರಾಗುತ್ತಾರೆ. ಎರಡು ಮೊಳಕಾಲುಗಳಲ್ಲಿಯೂ ಹೆಚ್ಚಾಗಿ ರೋಮಗಳು ಬೆಳೆದಿದ್ದವರು ದುಃಖವನ್ನೂ ಬಡತನವನ್ನೂ ಅನುಭವಿಸುತ್ತಾರೆ.

೩೨. ಮೋಟಾದ ಮೊಳಕಾಲುಳ್ಳವರು ಐಶ್ವರ್ಯವನ್ನು ಅನುಭವಿಸುವರು. ಆದಾಗ್ಯೂ ಕದಾಚಿತ್ ಬಂಧನಕ್ಕೂ ಒಳಗಾಗುವರು. ಜಿಂಕೆಯ ಮೊಳಕಾಲಿನಂತೆ ಮೊಳಕಾಲುಳ್ಳವರು ರಾಜರಾಗುತ್ತಾರೆ. ಇದು ನಿಸ್ಸಂದೇಹವಾದ ವಿಷಯ. ಮೊಳಕಾಲು ಉದ್ದವಾಗಿದ್ದರೂ, ದಪ್ಪವಾಗಿದ್ದರೂ ಅವರು ಭಾಗ್ಯವಂತರಾಗುವುದಿಲ್ಲ.

೩೩. ನರಿಯ ಮೊಳಕಾಲಿನಂತೆ, ಮೊಳಕಾಲು ಇದ್ದರೆ, ಅವರು ಸರ್ವದಾ ಭಾಗ್ಯಹೀನರಾಗಿ ಇರುತ್ತಾರೆ.

ಪೀನಜಂಘಾಸ್ತಥೈಶ್ವರ್ಯಂ ಪ್ರಾಪ್ನುವಂತಿ ನ ಸಂಶಯಃ ।
ಸಿಂಹವ್ಯಾಘ್ರಸಮಾ ಜಂಘಾ ಧನಿನಃ ಪರಿಕೀರ್ತಿತಾಃ ॥ ೩೪ ॥

ಪಾರ್ಥಿವಾನಾಂ ಭವೇದ್ರೋಮ ಚೈಕೈಕಂ ರೋಮಕೂಪಕೇ ।
ಪಂಡಿತಶ್ರೋತ್ರಿಯಾಣಾಂ ಚ ದ್ವೇದ್ವೇ ಜ್ಞೇಯೇ ಮಹಾಮತೇ ॥ ೩೫ ॥

ತ್ರಿಭಿಸ್ತ್ರಿಭಿಃ ತಥಾ ನಿಃಸ್ವಾ ಮಾನವಾ ದುಃಖಭಾಗಿನಃ ।
ಕೇಶಾಶ್ಚೈವ ಮಹಾಬಾಹೋ ನಿಂದಿತಾ ಪೂಜಿತಾಸ್ತಥಾ ॥ ೩೬ ॥

ನಿರ್ಮಾಂಸಜಾನುರ್ಮ್ರಿಯತೇ ಪ್ರವಾಸೇ ಶಿವನಂದನ ॥ ೩೭ ॥

ಸೌಭಾಗ್ಯಮಲ್ಪೈಃ ಕಥಿತಂ ದಾರಿದ್ರ್ಯಂ ವಿಕಟೈಸ್ತಥಾ ।
ನಿಮ್ನೈಃ ಸ್ವಸ್ತ್ರೀಜಿತಾ ಜ್ಞೇಯಾಃ ಸಮಾಂಸೈ ರಾಜ್ಯಭಾಗಿನಃ ॥ ೩೮ ॥

---

೩೪. ಕಾಗೆಯ ಮೊಳಕಾಲಿನಂತೆ ಡೊಂಕಾದ ಮೊಳಕಾಲುಳ್ಳವರು ದುಃಖವನ್ನು ಅನುಭವಿಸುತ್ತಾರೆ. ಮೊಳಕಾಲು ದಪ್ಪವಾಗಿದ್ದರೆ ಐಶ್ವರ್ಯವಂತರಾಗುತ್ತಾರೆ. ಸಿಂಹ, ಹುಲಿ ಇವುಗಳ ಮೊಳಕಾಲಿನಂತೆ ಮೊಳಕಾಲಿದ್ದರೆ ಧನಿಕರಾಗುವರು.

೩೫. ಯಾರಿಗೆ ರೋಮಕೂಪದಲ್ಲಿ ಒಂದೊಂದೇ ರೋಮದಂತೆ ಹುಟ್ಟಿರುವುದೋ ಅವರು ರಾಜರಾಗುವರು. ಒಂದೊಂದು ರೋಮಕೂಪದಲ್ಲಿ ಎರಡೆರಡರಂತೆ ರೋಮ ಹುಟ್ಟಿದವರು ಪಂಡಿತರೂ ಶ್ರೋತ್ರಿಯರೂ ಆಗಿರುವರು.

೩೬. ಹೀಗೆಯೇ ಒಂದೊಂದರಲ್ಲಿ ಮೂರು ಮೂರು ರೋಮಗಳುಳ್ಳವರು ದರಿದ್ರರೂ ದುಃಖಿತರೂ ಆಗುವರು ಅಯ್ಯಾ ಮಹಾಬಾಹುವಾದ ಷಣ್ಮುಖನೆ! ರೋಮಗಳ ವಿಚಾರದಲ್ಲಿ ನಿಂದಿತಗಳಾವುವು? ಶ್ಲಾಘಾರ್ಹಗಳಾವುವು? ಎಂಬುದನ್ನು ಹೇಳಿದ್ದಾಯಿತು.

೩೭. ಮೊಳಕಾಲಿನಲ್ಲಿ ಮಾಂಸಖಂಡಗಳೇ ಇಲ್ಲದಿದ್ದರೆ ಅವನು ಪರದೇಶಕ್ಕೆ ಪ್ರಯಾಣಮಾಡಿ ಸ್ವಸ್ಥಳಕ್ಕೆ ಹಿಂದಿರುಗದೆ ಮಾರ್ಗಮಧ್ಯದಲ್ಲೇ ಮೃತನಾಗುತ್ತಾನೆ.

೩೮. ಮೊಳಕಾಲಿನಲ್ಲಿ ಸ್ವಲ್ಪ ಮಾಂಸವಿರುವುದು ಸೌಭಾಗ್ಯಕರವು; ಮಾಂಸವು ವಿಶೇಷ ಒರಟು ಒರಟಾಗಿದ್ದರೆ ದಾರಿದ್ರ್ಯವುಂಟಾಗುವುದು. ಮೊಳಕಾಲು ಉಬ್ಬಿರದೆ ಹಳ್ಳವಾಗಿದ್ದರೆ ತಮ್ಮ ಹೆಂಗಸರಿಗೇ ಸೋಲುತ್ತಾರೆ. ಮಾಂಸ ಭರಿತವಾಗಿದ್ದರೆ ರಾಜ್ಯವನ್ನು ಹೊಂದುತ್ತಾರೆ.

ಹಂಸಭಾಸ ಶುಕಾನಾಂ ಚ ತುಲ್ಯಾ ಯಸ್ಯ ಗತಿರ್ಭವೇತ್ ।
ಸ ಭವೇತ್ಪಾರ್ಥಿವಃ ಪೂಜ್ಯಃ ಸಮುದ್ರವಚನಂ ಯಥಾ ॥ ೩೯ ॥

ಅನ್ಯೇಷಾಮಪಿ ಶಸ್ತಾನಾಂ ಪಕ್ಷಿಣಾಂ ಚ ಶುಭಾಗತಿಃ ।
ವೃಷಸಿಂಹಗಜೇಂದ್ರಾಣಾಂ ಗತಿರ್ಭೋಗವಿವರ್ಧಿನೀ ॥ ೪೦ ॥

ಜಲೋರ್ಮಿಸದೃಶೀ ಯಾ ಚ ಕಾಕೋಲೂಕಸಮಾ ಚ ಯಾ ।
ಗತಿರ್ದ್ರವ್ಯವಿಹೀನಾನಾಂ ದುಃಖಶೋಕಭಯಂಕರಾ ॥ ೪೧ ॥

ಶ್ವಾನೋಷ್ಟ್ರಮಹಿಷಾಣಾಂ ಚ ಖರಸೂಕರಯೋಸ್ತಥಾ ।
ಗತಿರ್ಮೇಷಸಮಾ ಯೇಷಾಂ ತೇ ನರಾ ಭಾಗ್ಯವರ್ಜಿತಾಃ ॥ ೪೨ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಚತುರ್ಥೀಕಲ್ಪೇ ಪುರುಷಲಕ್ಷಣ ವರ್ಣನಂ ನಾಮ ಚತುರ್ವಿಂಶೋಽಧ್ಯಾಯಃ.**

---

೩೯. ಹಂಸ, ಭಾಸಪಕ್ಷಿ, ಗಿಳಿ ಇವುಗಳ ನಡಗೆಯಂತೆ ನಡಗೆಯುಳ್ಳವರು ಪೂಜಾರ್ಹರಾದ ರಾಜರಾಗುವರೆಂದು ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದೆ.

೪೦. ಶ್ಲಾಘ್ಯಗಳಾದ ಇತರ ಪಕ್ಷಿಗಳ ನಡಗೆಯಂತೆ ನಡೆಯುವುದು. ಮಾನವರಿಗೆ ಶುಭಕರವಾದ ಲಕ್ಷಣ. ಎತ್ತು, ಸಿಂಹ, ಆನೆ ಇವುಗಳ ನಡಗೆಯಂತೆ ನಡಗೆಯುಳ್ಳವರಿಗೆ ಭೋಗವೃದ್ಧಿಯಾಗುವುದು.

೪೧. ಯಾರ ನಡಗೆಯು ಚಲಿಸುವ ನೀರಿನ ಅಲೆಗೆ ಸಮಾನವಾಗಿರುವುದೋ ಅವರೂ ; ಕಾಗೆ, ಗೂಬೆ ಇವುಗಳ ನಡಗೆಯಂತೆ ನಡಗೆಯುಳ್ಳವರೂ ; ದ್ರವ್ಯಹೀನತೆ, ದುಃಖ, ಭಯ ಇವುಗಳಿಂದ ಕೂಡಿದವರಾಗುತ್ತಾರೆ.

೪೨. ನಾಯಿ, ಒಂಟೆ, ಕೋಣ, ಕತ್ತೆ, ಹಂದಿ, ಟಗರು ಇವುಗಳ ನಡಗೆಗೆ ಸಮಾನವಾದ ನಡಗೆ ಯಾರಿಗಿರುವುದೋ ಅವರು ಭಾಗ್ಯಹೀನರಾಗುವರು.

ಇಲ್ಲಿಗೆ ಶ್ರೀ ಭವಿಷ್ಯಪುರಾಣದ ಬ್ರಾಹ್ಮಪರ್ವದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚವಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ದಕ್ಷಿಣಾವರ್ತಲಿಂಗಶ್ಚ ನರೋ ವೈ ಪುತ್ರವಾನ್ ಭವೇತ್ ।
ವಾಮಾವರ್ತೇ ತಥಾ ಲಿಂಗೇ ನರಃ ಕನ್ಯಾಂ ಪ್ರಸೂಯತೇ ॥ ೧ ॥

ಸ್ಥೂಲೈಃ ಶಿರಾಲೈರ್ವಿಷಮೈಃ ಲಿಂಗೈರ್ದಾರಿದ್ರ್ಯಮಾದಿಶೇತ್ ।
ಋಜುಭಿರ್ವರ್ತುಲಾಕಾರೈಃ ಪುರುಷಾಃ ಪುತ್ರಭಾಗಿನಃ ॥ ೨ ॥

ನಿಮ್ನಪಾದೋಪವಿಷ್ಟಸ್ಯ ಭೂಮಿಂ ಸ್ಪೃಶತಿ ಮೇಹನಃ ।
ದುಃಖಿತಂ ತಂ ವಿಜಾನೀಯಾತ್ ಪುರುಷಂ ನಾತ್ರ ಸಂಶಯಃ ॥ ೩ ॥

---

## ಇಪ್ಪತ್ತೈದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಶಿಶ್ನದಲ್ಲಿ ಎಡಗಡೆಗೆ ಸುಳಿ ಇದ್ದರೆ ಹೆಣ್ಣು ಮಕ್ಕಳು ಹುಟ್ಟುವರು. ಬಲಗಡೆ ಸುಳಿಯಿದ್ದರೆ ಗಂಡು ಮಕ್ಕಳಾಗುವರು.

೨–೩. ಶಿಶ್ನವು ದಪ್ಪನಾಗಿಯೂ ನರಗಳಿಂದ ಕೂಡಿಯೂ, ಡೊಂಕಾಗಿಯೂ ಇರುವುದರಿಂದ ಮನುಷ್ಯನಿಗೆ ದಾರಿದ್ರ್ಯವುಂಟಾಗುವುದೆಂದು ಹೇಳಬೇಕು. ನೇರವಾಗಿಯೂ ದುಂಡಾಗಿಯೂ ಇರುವ ಶಿಶ್ನವುಳ್ಳವರು ಗಂಡುಮಕ್ಕಳನ್ನು ಪಡೆವರು. ಪಾದಗಳನ್ನು ಇಳಿಜಾರಾಗಿಟ್ಟುಕೊಂಡು ಕುಳಿತಾಗ ಶಿಶ್ನವು ನೆಲವನ್ನು ಸೋಂಕಿದರೆ ಆ ಪುರುಷನು ದುಃಖಿತನಾಗುವನು ಎಂಬುದರಲ್ಲಿ ಸಂಶಯವಿಲ್ಲ.

ಭೂಮೌ ಪಾದೋಪವಿಷ್ಟಸ್ಯ ಗುಲ್ಫೌ ಸ್ಪೃಶತಿ ಮೇಹನಃ ।
ಈಶ್ವರಂ ತಂ ವಿಜಾನೀಯಾತ್ ಪ್ರಮದಾನಾಂ ಚ ವಲ್ಲಭಂ ॥ ೪ ॥

ಸಿಂಹವ್ಯಾಘ್ರಸಮೋ ಯಸ್ಯ ಹ್ರಸ್ವೋ ಭವತಿ ಮೇಹನಃ ।
ಭೋಗವಾನ್ ಸ ತು ವಿಜ್ಞೇಯೋಽಶೇಷಭೋಗಸಮನ್ವಿತಃ ॥ ೫ ॥

ರೇಖಾಕೃತಿರ್ಮಣಿರ್ಯಸ್ಯ ಮೇಹನೇ ಹಿ ವಿರಾಜತೇ ।
ಪಾರ್ಥಿವಃ ಸ ತು ವಿಜ್ಞೇಯಃ ಸಮುದ್ರವಚನಂ ಯಥಾ ॥ ೬ ॥

ಸುವರ್ಣರಜತಪ್ರಖ್ಯೈಃ ಮಣಿಮುಕ್ತಾಸಮಪ್ರಭೈಃ ।
ಪ್ರವಾಲಸದೃಶೈಃ ಸ್ನಿಗ್ಧೈಃ ಮಣಿಭಿಃ ಪಾರ್ಥಿವೋ ಭವೇತ್ ॥ ೭ ॥

ಪಾಂಡುರೈರ್ಮಲಿನೈ ರೂಕ್ಷೈರ್ದೀರ್ಘವ್ಯಾಸೈರ್ದಿಶೋ ವ್ರಜೇತ್ ।
ಸಮೈಸ್ತಥೋನ್ನತೈಶ್ಚಾಪಿ ಸುಸ್ನಿಗ್ಧೈರ್ಮಣಿಭಿರ್ಗೃಹೀ ॥ ೮ ॥

---

೪ ನೆಲದಮೇಲೆ ಕಾಲುಗಳನ್ನಿಟ್ಟು ಕುಳಿತಾಗ ಶಿಶ್ನವು ಹರಡುಗಳನ್ನು ಸೋಕಿದರೆ, ಅವನು ಅಧಿಕಾರವುಳ್ಳವನೂ ಹೆಂಗಸರ ಪ್ರೀತಿಗೆ ಪಾತ್ರನೂ ಆಗುವನು.

೫. ಸಿಂಹ, ಹುಲಿ ಇವುಗಳ ಶಿಶ್ನಗಳಿಗೆ ಸಮವಾಗಿ ಮೋಟಾಗಿದ್ದರೆ ಭೋಗವುಳ್ಳವನೂ, ಸರ್ವಸುಖಗಳಿಂದ ಕೂಡಿದವನೂ ಆಗುವನು.

೬. ಯಾವನ ಶಿಶ್ನದಲ್ಲಿ ಗೆರೆಯ ಆಕಾರವಾದ ಮಣಿ ಇರುವುದೋ ಅವನು ಸಾಮುದ್ರಿಕಾ ಶಾಸ್ತ್ರಪ್ರಕಾರ ರಾಜನಾಗುವನೆಂದು ತಿಳಿಯಬೇಕು.

೭. ಯಾವನ ಶಿಶ್ನದಲ್ಲಿನ ಮಣಿಯು, ಚಿನ್ನ ಬೆಳ್ಳಿ ಇವುಗಳಂತೆ ಹೊಳೆಯುತ್ತಲೂ, ರತ್ನ ಮುತ್ತು ಇವುಗಳಿಗೆ ಸಮಾನವಾದ ಕಾಂತಿಯುಳ್ಳದ್ದಾಗಿಯೂ, ಹವಳದಂತೆ ಮಿಂಚುತ್ತಲೂ ಇರುವುದೋ ಅವನು ರಾಜನಾಗುವನು.

೮. ಬೆಳ್ಳಗೂ, ಮಂಕಾಗಿಯೂ, ಒರಟಾಗಿಯೂ, ಅಗಲವಾಗಿಯೂ, ಬಿಡಿ ಬಿಡಿಯಾಗಿಯೂ, ಇರುವ ಮಣಿಗಳುಳ್ಳವನು ದೇಶಾಂತರಗತನಾಗುವನು. ನೇರವಾಗಿಯೂ ಎತ್ತರವಾಗಿಯೂ ಜಿಡ್ಡಿನಂತೆ ಮಿಂಚುತ್ತಲೂ ಇರುವ ಮಣಿಗಳುಳ್ಳವರು ದೇಶಾಂತರ ಪ್ರವಾಸಮಾಡದೆ ಮನೆಯಲ್ಲಿಯೇ ಇರುವರು.

ಧನರಕ್ಷಾಸ್ತಥಾ ಸ್ತ್ರೀಣಾಂ ಭೋಕ್ತಾರಸ್ತೇ ಭವಂತಿ ಹಿ ।
ಮಣಿಭಿರ್ಮಧ್ಯನಿಮ್ನೈಸ್ತು ಪಿತರಸ್ತೇ ಭವಂತಿ ಹಿ [illegible]

ಯುವತೀನಾಂ ಮಹಾಬಾಹೋ ನಿಃಸ್ವಾಶ್ಚಾಪಿ ಭವಂತಿ ತೇ ।
ನೋಲ್ಬಣೈಶ್ಚಾಪಿ ಧನಿನೋ ನರಾ ವೀರ ಭವಂತಿ ಹಿ ॥ ೧೦ ॥

ಮೂತ್ರಧಾರಾ ಪತೇದೇಕಾ ವಲಿತಾ ದಕ್ಷಿಣಾ ಯದಿ ।
ಸ ಭವೇತ್ಪಾರ್ಥಿವಃ ಪೃಥ್ವ್ಯಾಃ ಸಮುದ್ರವಚನಂ ಯಥಾ ॥ ೧೧ ॥

ದ್ವೇ ಧಾರೇ ಚ ತಥಾಸ್ನಿಗ್ಧೇ ಧನವಾನ್ ಭೋಗವಾನ್ ಸ್ಮೃತಃ ।
ಬಹುಧಾರಾಸ್ತಥಾರೂಕ್ಷಾಃ ಸಶಬ್ದಾಃ ಪುರುಷಾಧಮಾಃ ॥ ೧೨ ॥

ಮೀನಗಂಧಿ ಭವೇದ್ರೇತೋ ಧನವಾನ್ ಪುತ್ರವಾನ್ ಭವೇತ್ ।
ಹವಿರ್ಗಂಧಿ ಭವೇದ್ಯಸ್ಯ ಧನಾಢ್ಯಃ ಶ್ರೋತ್ರಿಯಃ ಸ್ಮೃತಃ ॥ ೧೩ ॥

---

೯. ಅಂಥವರು ಸ್ವಂತ ಧನವನ್ನು ರಕ್ಷಿಸಿಕೊಂಡು ಸ್ತ್ರೀಸುಖವನ್ನೆ ಅನುಭವಿಸುವರು. ಮಧ್ಯದಲ್ಲಿ ಹಳ್ಳವಾದ ಮಣಿಯುಳ್ಳವರು ಮಕ್ಕಳ ತಂದೆಯಾಗುತ್ತಾರೆ.

೧೦. ಆಯ್ಯಾ ಮಹಾಬಾಹುವೆ ! ಅವರಿಗೆ ಸ್ತ್ರೀಧನಾದಿಗಳಿಲ್ಲದೆ ಸಾಮಾನ್ಯವಾಗಿರುವರು. ಮಣಿಗಳು ಉಲ್ಬಣವಾಗಿಲ್ಲದಿದ್ದವರು ಧನಿಕರಾಗುವರು.

೧೧. ಮೂತ್ರ ವಿಸರ್ಜನೆ ಮಾಡುವಾಗ ಒಂದೇ ಧಾರೆಯು ಬಲಕ್ಕೆ ತಿರುವಿದಂತೆ ಬಿದ್ದರೆ, ಸಾಮುದ್ರಿಕಾ ಶಾಸ್ತ್ರಪ್ರಕಾರ ಅವನು ಭೂಪತಿಯಾಗುವನು.

೧೨. ಮಿಂಚುತ್ತಿರುವ ಎರಡು ಧಾರೆಯು, ಮೂತ್ರವಿಸರ್ಜನ ಕಾಲದಲ್ಲಿ ಯಾರಿಗೆ ಬೀಳುವುದೋ ಅವರು ಧನಿಕರಾಗಿ ಸುಖವನ್ನನುಭವಿಸುವರು. ಅನೇಕ ಮೂತ್ರಧಾರೆಗಳು ಶಬ್ದಸಹಿತವಾಗಿ ಒರಟಾಗಿ ಬಿದ್ದರೆ ಅವರನ್ನು ಪುರುಷಾಧಮರೆಂದು ತಿಳಿಯಬೇಕು.

೧೩. ಯಾವನ ರೇತಸ್ಸು ಮೀನಿನ ವಾಸನೆಯುಳ್ಳದ್ದಾಗಿರುವದೋ, ಅವನು ಧನವಂತನೂ, ಪುತ್ರವಂತನೂ ಆಗುವನು. ತುಪ್ಪದ ವಾಸನೆಯಂಥ (ಹವಿಸ್ಸಿನ) ವಾಸನೆಯ ರೇತಸ್ಸುಳ್ಳವನು ಧನಿಕನೂ ಶ್ರೋತ್ರಿಯನೂ ಆಗುವನು.

ಮೇಷಗಂಧಿರ್ಭವೇತ್ಪುತ್ರೀ ಪದ್ಮಗಂಧಿರ್ನೃಪಃ ಸ್ಮೃತಃ ।
ಲಾಕ್ಷಾಗಂಧಿರ್ಭವೇದ್ಯಶ್ಚ ಬಹುಕನ್ಯಃ ಪ್ರಜಾಯತೇ ।
ಮದ್ಯಗಂಧಿರ್ಭವೇದ್ಯೋದ್ಧಾ ಕ್ಷಾರಗಂಧಿರ್ದರಿದ್ರಕಃ ॥ ೧೪ ॥

ಶೀಘ್ರಮೈಥುನಗಾಮೀ ಯಃ ಸ ದೀರ್ಘಾಯುರತೋಽನ್ಯಥಾ ।
ಅಲ್ಪಾಯುರ್ದೇವಶಾರ್ದೂಲ ವಿಜ್ಞೇಯೋ ನಾತ್ರಸಂಶಯಃ ॥ ೧೫ ॥

ತನುಶುಕ್ಲಃ ಸ್ತ್ರೀಜನಕೋ ಮಾಂಸಗಂಧೀ ಚ ಭೋಗವಾನ್ ।
ಪದ್ಮವರ್ಣಂ ಭವೇದ್ರಕ್ತಂ ಸ ನರೋ ಧನವಾನ್ ಭವೇತ್ ॥ ೧೬ ॥

ಕಿಂಚಿದ್ರಕ್ತಂ ತಥಾ ಕೃಷ್ಣಂ ಭವೇದ್ಯಸ್ಯ ತು ಶೋಣಿತಂ ।
ಅಧಮಃ ಸ ತು ವಿಜ್ಞೇಯಃ ಸದಾ ದುಃಖೈಕಭಾಜನಂ ॥ ೧೭ ॥

---

೧೪. ಟಗರಿನ ಮೈಯಂತೆ, ವಾಸನೆಯ ರೇತಸ್ಸುಳ್ಳವನು ಬಹು ಪುತ್ರವಂತನೆನಿಸುವನು. ಕಮಲದ ವಾಸನೆಯಂತೆ ರೇತಸ್ಸುಳ್ಳವನು, ಭೂಪತಿಯಾಗುವನು. ಅರಗಿನ ವಾಸನೆಯಂತೆ ವಾಸನೆಯ ರೇತಸ್ಸುಳ್ಳವನು ಬಹು ಪುತ್ರಿಯರನ್ನು ಪಡೆಯುವನು. ಹೆಂಡದ ವಾಸನೆಯಂತಹ ರೇತಸ್ಸುಳ್ಳವನು ಯುದ್ಧಮಾಡುವ ಭಟನು ಎನಿಸುವನು. ಕಾರದವಾಸನೆಯ ರೇತಸ್ಸುಳ್ಳವನು ದರಿದ್ರನಾಗುವನು.

೧೫. ಮೈಥುನವು ಬೇಗ ಮುಗಿದರೆ ದೀರ್ಘಾಯುವಾಗುವನು. ಹಾಗಾಗದೆ ಬಹುಹೊತ್ತು ನಡೆದರೆ ಅಲ್ಪಾಯುವಾಗುವನು ಎಂಬುದರಲ್ಲಿ ಸಂಶಯವಿಲ್ಲ.

೧೬. ಶುಕ್ಲ ಶೋಣಿತಗಳಲ್ಲಿ ಶುಕ್ಲಾಂಶವು ಕಮ್ಮಿಯಾದರೆ ಸ್ತ್ರೀಶಿಶುವೇ ಆಗುವುದು. ರೇತಸ್ಸು ಮಾಂಸದ ವಾಸನೆಯುಳ್ಳದ್ದಾದರೆ ಸುಖಿಯಾಗುತ್ತಾನೆ ತಾವರೆ ಹೂವಿನಂತೆ ರಕ್ತವರ್ಣವಾಗಿದ್ದರೆ ಧನವಂತನಾಗುವನು.

೧೭. ಯಾವನ ಶರೀರದ ರಕ್ತವು ಸ್ವಲ್ಪ ಕೆಂಪು ಬಣ್ಣ ಮತ್ತು ಕಪ್ಪು ಬಣ್ಣವುಳ್ಳದ್ದಾಗಿರುವುದೋ ಅವನು ಯಾವಾಗಲೂ ದುಃಖಕ್ಕೆ ಗುರಿಯಾಗುವ ಅಧಮನೆಂದು ತಿಳಿಯಬೇಕು.

ಪ್ರವಾಲಸದೃಶಂ ಸ್ನಿಗ್ಧಂ ಭವೇದ್ಯಸ್ಯ ಚ ಶೋಣಿತಂ ।
ರಾಜಾನಂ ತಂ ವಿಜಾನೀಯಾತ್ ಸಪ್ತದ್ವೀಪಾಧಿಪಂ ಗುಹ ॥ ೧೮ ॥

ವಿಸ್ತೀರ್ಣಾ ಮಾಂಸಲಾ ಸ್ನಿಗ್ಧಾ ಬಸ್ತಿಃ ಪುಂಸಾಂ ಪ್ರಶಸ್ಯತೇ ।
ನಿರ್ಮಾಂಸಾ ವಿಕಟಾ ರೂಕ್ಷಾ ಬಸ್ತಿಯೇರ್ಷಾಂ ನ ತೇ ಶುಭಾಃ ॥ ೧೯ ॥

ಗೋಮಾಯುಸದೃಶೀ ಯಸ್ಯ ಶ್ವಾನೋಷ್ಟ್ರಮಹಿಷಸ್ಯ ಚ ।
ಸ ಭವೇದ್ದುಃಖಿತೋ ನಿತ್ಯಂ ಪುರುಷೋ ನಾತ್ರ ಸಂಶಯಃ ॥ ೨೦ ॥

ಯಶ್ಚೈಕ ವೃಷಣಸ್ತಾತ ಜಲೇ ಪ್ರಾಣಾನ್ ವಿಮುಂಚತಿ ।
ಸ್ತ್ರೀಚಂಚಲಸ್ತು ವಿಷಮೈಃ ಸಮೈ ರಾಜ್ಯಂ ಪ್ರಚಕ್ಷತೇ ॥ ೨೧ ॥

---

೧೮. ಅಯ್ಯಾ ಗುಹನೆ! ಯಾವನ ರಕ್ತವು ಹವಳಕ್ಕೆ ಸಮಾನವಾಗಿ ಮಿಂಚುತ್ತಿರುವುದೋ ಅವನು ಸಪ್ತದ್ವೀಪಗಳಿಗೂ ಅಧಿಪತಿಯಾದ ರಾಜನಾಗುವ ನೆಂದು ತಿಳಿಯಬೇಕು.

೧೯. ಮನುಷ್ಯರಿಗೆ ಕೆಳಹೊಟ್ಟೆಯು ಅಗಲವಾಗಿಯೂ, ಬಲವಾಗಿಯೂ, ಮಿಂಚುತ್ತಲೂ ಇದ್ದರೆ ಒಳ್ಳೆಯ ಪ್ರಶಸ್ತವು. ಕಿಬ್ಬೊಟ್ಟೆಯು ಮಾಂಸವಿಲ್ಲದುದೂ ಡೊಂಕೂ ಒರಟೂ ಆಗಿರುವುದು ಶುಭಕರವಲ್ಲ.

೨೦. ಯಾವ ಕಿಬ್ಬೊಟ್ಟೆಯು ನರಿ, ನಾಯಿ, ಒಂಟೆ, ಕೋಣ ಇವುಗಳ ಹೊಟ್ಟೆಗೆ ಸಮಾನವಾಗಿರುವುದೋ ಅವನು ಯಾವಾಗಲೂ ದುಃಖಭಾಜನನು ಎಂಬು ವರಲ್ಲಿ ಸಂಶಯವಿಲ್ಲ.

೨೧. ಅಪ್ಪಾ ಗುಹ! ಒಂದೇ ವೃಷಣ (ಬೀಜ) ವುಳ್ಳವನಿಗೆ ನೀರಿನಲ್ಲಿ ಮರಣಸಂಭವಿಸುವುದು. ವ್ಯತ್ಯಾಸವಾದ ವೃಷಣವುಳ್ಳವನು ಸ್ತ್ರೀಯರಂತೆ ಚಂಚಲ ವಾದ ಮನಸ್ಸುಳ್ಳವನಾಗುವನು. ಎರಡು ವೃಷಣಗಳೂ ಸಮವಾಗಿದ್ದರೆ ರಾಜ್ಯ ಲಾಭವಾಗುವುದೆಂದು ಹೇಳುತ್ತಾರೆ.

ಊರ್ಧ್ವಾಗ್ರೈಶ್ಚಾಪಿ ಹ್ರಸ್ವಾಯುಃ ಶತಂಜೀವೀ ಪ್ರಲಂಬಧೃಕ್ ।
ಮಾನವಾಶ್ಚಾಪಿ ರಕ್ತೈಸ್ತು ಧನವಂತೋ ಭವಂತಿ ವೈ ॥ ೨೨ ॥

ಸ್ಥೂಲಸ್ಫಿಗ್ಭವತಿ ಕ್ಷೇಮೀ ದ್ರವ್ಯಯುಕ್ತಃ ಸಮಾಂಸಧೃಕ್ ।
ವ್ಯಾಘ್ರಸ್ಫಿಙ್ಮಂಡಲೋ ರಾಜಾ ಮಂಡೂಕಸ್ಫಿಙ್ನರಾಧಿಪಃ ।
ದ್ವಿಮಂಡಲೋ ಮಹಾಬಾಹೋ ಸಿಂಹಸ್ಫಿಕ್ ಸಾರ್ವಭೌಮತಾ ॥ ೨೩ ॥

ಉಷ್ಟ್ರವಾನರಯೋರ್ಯಸ್ತು ಧಾರಯೇತ್ ಸ್ಫಿಙ್ಮಹಾಮತೇ ।
ಧನಧಾನ್ಯವಿಹೀನೋಽಸೌ ವಿಜ್ಞೇಯೋ ಭೀಮನಂದನ ॥ ೨೪ ॥

ಪುಮಾನ್ ಮೃಗೋದರೋ ಧನ್ಯೋ ಮಯೂರೋದರ ಏವ ಚ ।
ವ್ಯಾಘ್ರೋದರೋ ನರಪತೀ ರಾಜಾ ಸಿಂಹೋದರೋ ಭವೇತ್ ॥ ೨೫ ॥

---

೨೨ ವೃಷಣಗಳು ಮೇಲ್ಮುಖವಾಗಿದ್ದರೆ ಅಲ್ಪಾಯುವಾಗುವನು. ಜೋಲಾಡುತ್ತಿದ್ದರೆ ನೂರುವರ್ಷ ಬದುಕುತ್ತಾನೆ. ವೃಷಣವು ಕೆಂಬಣ್ಣವಾಗಿದ್ದರೆ ಧನವಂತರಾಗುತ್ತಾರೆ

೨೩. ರುಂಡಿಯು ದಪ್ಪವಾಗಿರುವವರು ಯಾವಾಗಲೂ ಕ್ಷೇಮಿಗಳು. ಅದರಲ್ಲೂ ಮಾಂಸಪುಷ್ಟಿಯುಳ್ಳದ್ದಾಗಿದ್ದರೆ ಧನವಂತರಾಗುವರು. ಹುಲಿಯ ರುಂಡಿಯಂತೆ ಗುಂಡಾದ ರುಂಡಿಯುಳ್ಳವರು ರಾಜರಾಗುತ್ತಾರೆ. ಕಪ್ಪೆಯ ಹೊಟ್ಟೆಯಂತೆ ಮೃದುವಾದ ಘಿರ್ರೆಯುಳ್ಳವರು ನರಪತಿಗಳಾಗುವರು. ಅಯ್ಯಾ ಮಹಾಬಾಹುವೆ! ಎರಡು ರುಂಡಿಗಳೂ ಗುಂಡಾಗಿ ಸಿಂಹದ ರುಂಡಿಯಂತೆ ಇದ್ದರೆ ಸಾರ್ವಭೌಮನಾಗುವನು.

೨೪. ಅಯ್ಯಾ ಮಹಾಬುದ್ಧಿಶಾಲಿಯಾದ ಶಿವಕುಮಾರನೆ! ಯಾರಿಗೆ ಒಂಟೆ ಕಪಿ ಇವುಗಳ ರುಂಡಿಯಂತೆ ರುಂಡಿ ಇರುವುದೋ ಅವನು ಧನಧಾನ್ಯ ವಿಹೀನನಾಗುವನೆಂದು ಭಾವಿಸಬೇಕು.

೨೫. ಜಿಂಕೆ, ನವಿಲು, ಹುಲಿ ಇವುಗಳ ಹೊಟ್ಟೆಯಂತೆ ಹೊಟ್ಟೆಯುಳ್ಳವರು ಧನ್ಯರೆನಿಸುವರು. ಸಿಂಹ ಇವುಗಳ ಹೊಟ್ಟೆಯಂತೆ ಹೊಟ್ಟೆಯುಳ್ಳವನು ರಾಜನಾಗುವನು.

ಮಂಡೂಕಸದೃಶಂ ಯಸ್ಯ ಪುರುಷಸ್ಯೋದರಂ ಭವೇತ್ ।
ಸ ಭವೇತ್ಪಾರ್ಥಿವಃ ಪೃಥ್ವ್ಯಾಂ ಸಮುದ್ರವಚನಂ ಯಥಾ ॥ ೨೬ ॥

ಮಾಂಸಲೈಃ ಋಜುಭಿರ್ವೃತ್ತೈಃ ಪಾರ್ಶ್ವೈರ್ನೃಪತಯಃ ಸ್ಮೃತಾಃ ।
ಈಶ್ವರೋ ವ್ಯಾಘ್ರಪೃಷ್ಠಸ್ತು ಸೇನಾಯಾಶ್ಚೈವ ನಾಯಕಃ ॥ ೨೭ ॥

ಸಿಂಹಪೃಷ್ಠೋ ನರೋ ಯಸ್ತು ಬಂಧನಂ ತಸ್ಯ ನಿರ್ದಿಶೇತ್ ।
ಕೂರ್ಮಪೃಷ್ಠಸ್ತು ರಾಜಾನೋ ಧನಸೌಭಾಗ್ಯಭಾಗಿನಃ ॥ ೨೮ ॥

ವಿಸ್ತೀರ್ಣಂ ಹೃದಯಂ ಯೇಷಾಂ ಮಾಂಸಲೋಮಚಿತಂ ಸಮಂ ।
ಶತಾಯುಷೋ ವಿಜಾನೀಯಾತ್ ಭೋಗಭಾಜೋ ಮಹಾಧನಾನ್ ॥೨೯ ॥

ವಿರಲಾಃ ಶುಷ್ಕಾಸ್ತಥಾ ರೂಕ್ಷಾ ದೃಶ್ಯಂತೇಽಂಗುಲಯಃ ಕರೇ ।
ಸ ಭವೇದ್ದುಃಖಿತೋ ನಿತ್ಯಂ ನರೋ ದಾರಿದ್ರ್ಯಭಾಜನಂ ॥ ೩೦ ॥

---

೨೬. ಯಾರ ಹೊಟ್ಟೆಯು ಕಪ್ಪೆಯ ಹೊಟ್ಟೆಗೆ ಸದೃಶವಾಗಿರುವುದೋ, ಅವನು ಸಾಮುದ್ರಿಕಾ ಶಾಸ್ತ್ರವಚನ ಪ್ರಕಾರ ಭೂಮಿಯಲ್ಲಿ ರಾಜನಾಗುವನು.

೨೭. ಮಾಂಸಪುಷ್ಟಗಳಾಗಿಯೂ, ನೇರವಾಗಿಯೂ, ಇರುವ ಪಕ್ಕೆಗಳಿದ್ದರೆ ರಾಜರಾಗುವರು. ಹುಲಿಯ ಬೆನ್ನಿನಂತೆ ಬೆನ್ನುಳ್ಳವನು ಅಧಿಕಾರಿಯೋ ಸೇನಾಪತಿಯೋ ಆಗುತ್ತಾನೆ

೨೮. ಯಾವನ ಬೆನ್ನು ಸಿಂಹದ ಬೆನ್ನಿನಂತಿರುವುದೋ ಅವನಿಗೆ ಬಂಧನ ಪ್ರಾಪ್ತಿಯಾಗುವುದು ಎನ್ನಬೇಕು. ಆಮೆಯ ಚಿಪ್ಪಿನಂತೆ ಬೆನ್ನುಳ್ಳವರು ಧನ, ಸೌಭಾಗ್ಯ ಇವುಗಳನ್ನುಳ್ಳ ರಾಜರಾಗುತ್ತಾರೆ.

೨೯. ಯಾರ ಎದೆಯು ಅಗಲವಾಗಿಯೂ, ಧೃಢವಾಗಿಯೂ, ರೋಮಗಳಿಂದ ಕೂಡಿಯೂ, ಹಳ್ಳತಿಟ್ಟಿಲ್ಲದೆ ಸಮನಾಗಿಯೂ, ಇರುವುದೋ ಅವರನು ದೀರ್ಘಾಯುಗಳೆಂದೂ, ಸುಖಪಡತಕ್ಕ ಮಹಾಧನಿಕರೆಂದೂ ತಿಳಿಯಬೇಕು.

೩೦. ಯಾರ ಕೈಬೆರಳುಗಳು ದೂರದೂರವಾಗಿ ಒಣಕಲಾಗಿ ಒರಟಾಗಿ ಕಾಣುವುವೋ ಅವರು ಸದಾ ದುಃಖಿತರೂ ಬಡವರೂ ಆಗಿರುವರು.

ಯಸ್ಯ ಮೀನಸಮಾ ರೇಖಾ ಕರ್ಮಸಿದ್ಧಿಶ್ಚ ತಸ್ಯ ತು ।
ಧನವಾನ್ ಸ ತು ವಿಜ್ಞೇಯೋ ಬಹುಪುತ್ರಶ್ಚ ಮಾನವಃ　॥ ೩೧ ॥

ತುಲಾ ಯಸ್ಯ ತು ವೇದೀ ವಾ ಕರಮಧ್ಯೇ ತು ದೃಶ್ಯತೇ ।
ತಸ್ಯ ಸಿಧ್ಯತಿ ವಾಣಿಜ್ಯಂ ಪುರುಷಸ್ಯ ನ ಸಂಶಯಃ　॥ ೩೨ ॥

ಸೌಮ್ಯೇ ಪಾಣಿತಲೇ ಯಸ್ಯ ದ್ವಿಜಸ್ಯ ತು ವಿಶೇಷತಃ ।
ಯಜ್ಞಯಾಜೀ ಭವೇನ್ನಿತ್ಯಂ ಬಹುವಿತ್ತಶ್ಚ ಮಾನವಃ　॥ ೩೩ ॥

ಶೈಲಂ ವಾಪ್ಯಥವಾ ವೃಕ್ಷಃ ಕರಮಧ್ಯೇ ತು ದೃಶ್ಯತೇ ।
ಅಚಲಾಂ ಶ್ರಿಯಮಾಪ್ನೋತಿ ಬಹುಭೃತ್ಯಸಮನ್ವಿತಃ　॥ ೩೪ ॥

ಶಕ್ತಿತೋಮರಬಾಣಾಸಿರೇಖಾ ಚಾಪೋಪಮಾ ತಥಾ ।
ಯಸ್ಯ ಹಸ್ತೇ ಮಹಾಬಾಹೋ ಸ ಜಯೇದ್ವಿಗ್ರಹೇ ರಿಪೂನ್　॥ ೩೫ ॥

---

೩೧. ಯಾವನ ಕೈಯ್ಯಲ್ಲಿ ಮೀನರೇಖೆ ಇರುವುದೋ ಅವನು ಮಾಡಿದ ಕಾರ್ಯವೆಲ್ಲಾ ಸಿದ್ಧಿಯಾಗುವುದು. ಅಲ್ಲದೆ ಅವನು ಧನಿಕನೂ ಬಹುಪುತ್ರವಂತನೂ ಆಗುವನು.

೩೨. ಯಾವನ ಕೈಯಲ್ಲಿ ತಕ್ಕಡಿಯಂತಿರುವ ರೇಖೆಯೂ, ಜಗಲಿಯಂತಿರುವ ರೇಖೆಯೂ, ಇರುವುದೋ ಅವನು ವರ್ತಕನಾಗುತ್ತಾನೆ. ಎಂದರೆ ವ್ಯಾಪಾರದಿಂದ ಜೀವಿಸುವವನಾಗುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ

೩೩. ಯಾವನ (ಬಹುತರವಾಗಿ ಬ್ರಾಹ್ಮಣನ) ಎರಡು ಅಂಗೈಗಳು ಸೌಮ್ಯಗಳಾಗಿರುವವೋ ಅವನು ಯಜ್ಞಮಾಡುವವನೂ ಧನವುಳ್ಳವನೂ ಆಗುತ್ತಾನೆ.

೩೪. ಪರ್ವತರೇಖೆಯಾಗಲಿ ವೃಕ್ಷರೇಖೆಯಾಗಲಿ ಯಾವನ ಕೈಮಧ್ಯದಲ್ಲಿ ಕಾಣುವುದೋ ಅವನು ಸ್ಥಿರವಾದ ಸಂಪತ್ತು ಹೊಂದಿ ಬಹುಜನ ಭೃತ್ಯರಿಂದ ಕೂಡಿರುವನು.

೩೫. ಯಾರ ಕೈಯಲ್ಲಿ ಶಕ್ತ್ಯಾಯುಧ, ತೋಮರ, ಬಾಣ, ಖಡ್ಗ, ಧನುಸ್ಸು ಇವುಗಳಂತಿರುವ ರೇಖೆಗಳಿರುವುವೋ ಅವರು ಯುದ್ಧದಲ್ಲಿ ಶತ್ರುಗಳನ್ನು ಜಯಿಸುತ್ತಾರೆ.

ಧ್ವಜಶ್ಚಾಪ್ಯಥವಾ ಶಂಖಃ ಕರಮಧ್ಯೇ ತು ದೃಶ್ಯತೇ ।
ಸಮುದ್ರಯಾಯೀ ಸ ಭವೇತ್ ಧನೀ ಚ ಸತತಂ ಗುಹ ॥ ೩೬ ॥

ಶ್ರೀವತ್ಸಮಥ ವಾ ಪದ್ಮಂ ವಜ್ರಂ ವಾ ಚಕ್ರಮೇವ ಚ ।
ರಥೋ ವಾಪ್ಯಥ ವಾ ಕುಂಭೋ ಯಸ್ಯ ಹಸ್ತೇ ಪ್ರಕಾಶತೇ ।
ರಾಜಾನಂ ತಂ ವಿಜಾನೀಯಾತ್ ಪರಸೈನ್ಯವಿದಾರಣಂ ॥ ೩೭ ॥

ದಕ್ಷಿಣೇ ತು ಕರಾಂಗುಷ್ಠೇ ಯವೋ ಯಸ್ಯ ತು ದೃಶ್ಯತೇ ।
ಸರ್ವವಿದ್ಯಾಪ್ರವಕ್ತಾ ಚ ಭವೇದ್ವೈ ನಾತ್ರ ಸಂಶಯಃ ॥ ೩೮ ॥

ಯಸ್ಯ ಪಾಣಿತಲೇ ರೇಖಾ ಕನಿಷ್ಠಾಮೂಲಮುಚ್ಛ್ರಿತಾ ।
ಗತಾ ಮಧ್ಯಂ ಪ್ರದೇಶಿನ್ಯಾಃ ಸ ಜೀವೇಚ್ಛರದಃ ಶತಂ ॥ ೩೯ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಚತುರ್ಥೀ ಕಲ್ಪೇ ಪುರುಷಲಕ್ಷಣ ವರ್ಣನಂ ನಾಮ ಪಂಚವಿಂಶೋಽಧ್ಯಾಯಃ.**

---

೩೬. ಅಯ್ಯಾ ಗುಹನೇ ! ಧ್ವಜರೇಖೆ, ಶಂಖರೇಖೆ ಇವು ಯಾರ ಕೈ ಮಧ್ಯದಲ್ಲಿರುವುವೋ ಅವನು ಸದಾ ಸಮುದ್ರಯಾನ ಮಾಡುವವನೂ ಧನಿಕನೂ ಆಗುತ್ತಾನೆ.

೩೭. ಶ್ರೀವತ್ಸ, ಪದ್ಮ, ವಜ್ರ, ಚಕ್ರ, ರಥ, ಕುಂಭ ಈ ಆಕೃತಿಯ ರೇಖೆಗಳು ಯಾವನ ಕೈಯಲ್ಲಿರುವುವೋ ಅವನು ಶತ್ರುಸೇನಾಧ್ವಂಸಕನಾದ ರಾಜನಾಗುವನೆಂದು ತಿಳಿಯಬೇಕು.

೩೮ ಯಾವನ ಬಲಗೈ ಹೆಬ್ಬೆರಳಿನಲ್ಲಿ ಯವ ರೇಖೆ (ಗೋಧಿಯ ಕಾಳಿಟ್ಟಂತೆ) ಕಾಣುವುವೋ ಅವನು ಸರ್ವವಿದ್ಯಾಬೋಧಕನಾಗುವನೆಂಬುದರಲ್ಲಿ ಸಂಶಯವಿಲ್ಲ.

೩೯. ಯಾವನ ಕೈಯ ಕಿರುಬೆರಳಿನ ಬುಡದ ಕೆಳಗಿನಿಂದ ಹೊರಟ ರೇಖೆಯು ತರ್ಜನೀ ಮಧ್ಯಮ ಈ ಬೆರಳುಗಳ ಮಧ್ಯದವರೆಗೂ ಲಂಬಿಸಿರುವುದೋ ಅವನು ನೂರುವರ್ಷಕಾಲ ಬದುಕುವನು.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಚತುರ್ಥೀಕಲ್ಪದಲ್ಲಿ ಪುರುಷಲಕ್ಷಣ ವರ್ಣನೆಯೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಡ್ವಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಸಮಕುಕ್ಷಿರ್ಭವೇದ್ಭೋಗೀ ನಿಮ್ನಕುಕ್ಷಿರ್ಧನಾಪಹಃ ।
ಮಾಯಾವೀ ವಿಷಮಾ ಕುಕ್ಷಿಃ ತಥಾ ಕುಹಕಕೃತ್ಸದಾ ॥ ೧ ॥

ರಾಜಾಸ್ಯಾನ್ನಿಮ್ನಕುಕ್ಷಿಸ್ತು ಸಾರ್ವಭೌಮೋ ಮಹಾಬಲಃ ।
ಸರ್ಪೋದರಾ ದರಿದ್ರಾ ಸ್ಸ್ಯು ರ್ಬಹುಭಕ್ಷಾಶ್ಚ ಸುವ್ರತ ॥ ೨ ॥

ವಿಸ್ತೀರ್ಣಾಭಿರ್ಮಂಡಲಾಭಿರುನ್ನತಾಭಿಶ್ಚ ನಾಭಿಭಿಃ ।
ಭವಂತಿ ಸುಖಿನೋ ವೀರಾ ಧನಧಾನ್ಯಸಮನ್ವಿತಾಃ ॥ ೩ ॥

---

## ಇಪ್ಪತ್ತಾರನೆಯ ಅಧ್ಯಾಯ

೧. ಬ್ರಹ್ಮನು ಮುಂದುವರಿಸಿ ಹೇಳುತ್ತಾನೆ— ಹೊಟ್ಟೆಯು ಸಮವಾಗಿದ್ದರೆ ಭೋಗಿಯಾಗುವನು. ಅದು ಹಳ್ಳವಾಗಿದ್ದರೆ ಧನಹೀನನಾಗುವನು. ಒಂದುಕಡೆ ಎತ್ತರ ಮತ್ತೊಂದುಕಡೆ ಹಳ್ಳ ಹೀಗೆ ವಿಷಮವಾಗಿದ್ದರೆ ಮೋಸಗಾರನೂ ಕಪಟಿಯೂ ಆಗುವನು.

೨. ಹೊಟ್ಟೆಯು ಹಳ್ಳವಾಗಿದ್ದರೆ ರಾಜನಾಗುವನು. ಅದರಲ್ಲೂ ಬಲಿಷ್ಠನಾದ ಚಕ್ರವರ್ತಿಯಾಗುವನು, ಹಾವಿನ ಹೊಟ್ಟೆಗೆ ಸಮನಾಗಿದ್ದರೆ ಬಡವನೂ, ಬಹಳವಾಗಿ ತಿನ್ನುವವನೂ ಆಗುವನು.

೩. ಅಗಲವಾದ ಹೊಕ್ಕಳುಳ್ಳವರು ವೀರರಾಗುವರು. ಗುಂಡಾದ ಹೊಕ್ಕಳುಳ್ಳವರು ಸುಖಿಗಳು ; ಹೊಕ್ಕಳು ಎತ್ತರವಾಗಿದ್ದವರು ಧನಧಾನ್ಯ ಸಮೃದ್ಧಿಯುಳ್ಳವರಾಗುವರು.

ನಿಮ್ನಾಭಿಥ ಸ್ವಲ್ಪಾಭಿಃ ಕ್ಲೇಶಭಾಜೋ ಭವಂತಿ ಹಿ ।
ಧನಹಾನಿಂ ತಥಾ ಶೂಲಂ ನಿತ್ಯಂ ಜನಯತೇ ವಿಭೋ ॥ ೪ ॥

ವಾಮಾವರ್ತಾ ಸದಾ ಶಾಂತಿಂ ಕರೋತೀತಿ ವಿದುರ್ಬುಧಾಃ ।
ಕರೋತಿ ಮೇಧಾಂ ದಕ್ಷಿಣೇನ ಸಂಪ್ರವೃತ್ತಾ ದಿವಸ್ಪತೇ ॥ ೫ ॥

ಪಾರ್ಶ್ವಾಯತಾ ದೀರ್ಘಮಾಯುರೈಶ್ವರ್ಯಮೂರ್ಧ್ವತಃ ಸ್ಮೃತಂ ।
ಗವಾಢ್ಯತಾಮಧಸ್ತಾತ್ತು ಕರೋತೀತಿ ವಿದುರ್ಬುಧಾಃ ॥ ೬ ॥

ಶತಪತ್ರಕರ್ಣಿಕಾಭಾ ನಾಭಿರ್ಯಸ್ಯ ಮಹಾಮತೇ ।
ಭೂಪತ್ವಂ ಕುರುತೇ ಸಾ ತು ಪುರುಷಸ್ಯ ನ ಸಂಶಯಃ ॥ ೭ ॥

ಸಮೋದರೋ ಭವೇದ್ಭೋಗೀ ನಿಸ್ವಃ ಸ್ಯಾದ್ವಿಷಮೋದರಃ ।
ಸೂಕ್ಷ್ಮೋದರೋ ಭವೇದ್ವಾಗ್ಮೀ ಬಹುಸಂಪತ್ಸಮನ್ವಿತಃ ॥ ೮ ॥

---

೪. ಎಲೈ ವೀರನೇ! ಕೇಳು. ಹಳ್ಳವಾಗಿಯೂ, ಚಿಕ್ಕದಾಗಿಯೂ ಇರುವ ನಾಭಿಯುಳ್ಳವರು ಕ್ಲೇಶಭಾಗಿಗಳಾಗುವರು. ವಲಿಯು (ಹೊಟ್ಟೆಯ ಮಡಿಕೆಯು) ಮಧ್ಯದಲ್ಲಿದ್ದರೂ, ವಿಶೇಷ ವ್ಯತ್ಯಸ್ತವಾಗಿದ್ದರೂ ಧನಹಾನಿ, ಶೂಲರೋಗ ಇವು ಯಾವಾಗಲೂ ಉಂಟಾಗುವುವು.

೫. ಹೊಕ್ಕಳ ಸುಳಿಯು ಎಡಗಡೆಗಿದ್ದರೆ ಯಾವಾಗಲೂ ಶಾಂತಿಯನ್ನು ಕೊಡುವುದು, ಬಲಗಡೆಗಿದ್ದರೆ ಮೇಧಾವಂತನಾಗುವನು.

೬. ಪಕ್ಕಕ್ಕೆ ಉದ್ದವಾಗಿ ನೀಡಿದ್ದರೆ ದೀರ್ಘಾಯುಸ್ಸುಂಟಾಗುವುದು, ಮೇಲ್ಮೊಗನಾಗಿದ್ದರೆ ಐಶ್ವರ್ಯವುಂಟಾಗುವುದು, ಕೆಳಕ್ಕೆ ನೀಡಿದ್ದರೆ ಗೋಸಮೃದ್ಧಿಯುಂಟಾಗುವುದು.

೭. ಎಲೈ ಬುದ್ಧಿಶಾಲಿಯೇ! ಯಾವನ ಹೊಕ್ಕಳು ಕಮಲದ ಕರ್ಣಿಕೆಯಂತೆ ಇರುವುದೋ ಅವನಿಗೆ ಅದು ರಾಜತ್ವವನ್ನುಂಟುಮಾಡುವುದರಲ್ಲಿ ಸಂಶಯವಿಲ್ಲ.

೮. ಉದರವು ಸಮವಾಗಿದ್ದರೆ ಭೋಗಿಯೂ, ಹಳ್ಳತಿಟ್ಟಾಗಿದ್ದರೆ ದರಿದ್ರನೂ ಆಗುವನು. ತೆಳ್ಳಗಿರುವ ಉದರವುಳ್ಳವನು ವಾಚಾಲನೂ, ಬಹು ಸಂಪತ್ತುಳ್ಳವನೂ ಆಗುವನು ಎಂಬುದು ಒಂದು ಮತ.

**ಶಸ್ತ್ರೇಣಾಂತಂ ವ್ರಜೇದ್ವೀರ ಸ್ತ್ರೀಭೋಗಂ ಚಾಪ್ನುಯಾತ್ತಥಾ ।**
**ಆಚಾರ್ಯೋ ಬಹುಪುತ್ರಶ್ಚ ಯಥಾಸಂಖ್ಯಂ ವಿನಿರ್ದಿಶೇತ್ ॥ ೯ ॥**

**ವಲಿಭಿರ್ದೇವಶಾರ್ದೂಲ ಇತ್ಯಾಹ ಸ ಪಯೋನಿಧಿಃ ।**
**ಅಗಮ್ಯಾಗಮಿನೋ ಜ್ಞೇಯಾ ವಿಷಮಾಭಿರ್ನ ಸಂಶಯಃ ॥ ೧೦ ॥**

**ಋಜುಭಿರ್ವಸುಭೋಗೀ ಸ್ಯಾತ್ ಪರದಾರವಿನಿಂದಕಃ ।**
**ಮಾಂಸಲೈರ್ಮೃದುಭಿಃ ಪಾರ್ಶ್ವೈ ರಾಜಾಸ್ಯಾನ್ನಾತ್ರ ಸಂಶಯಃ ॥ ೧೧ ॥**

**ಅನೂರ್ಧ್ವಚಿಬುಕಾ ಯೇ ತು ಸುಭಗಾಸ್ತೇ ಭವಂತಿ ವೈ ।**
**ನಿರ್ಧನಾ ಏಷಮೈರ್ದೀರ್ಘೈರ್ಭವಂತೀಹ ಸುವೀರಜ ॥ ೧೨ ॥**

**ಪೀನೈಶ್ಚೋಪಚಿತೈರ್ನಿಮ್ನೈಃ ಸ್ಕಂಧೈರ್ಭೀಮಾಂಗಸಂಭವ ।**
**ರಾಜಾನಃ ಸುಖಿನಶ್ಚಾಪಿ ಭವಂತೀಹ ನ ಸಂಶಯಃ ॥ ೧೩ ॥**

---

೯. ಅನುಕ್ರಮವಾಗಿ ಈ ಲಕ್ಷಣವುಳ್ಳವನು ವೀರನಾಗಿ ಶಸ್ತ್ರಪ್ರಹಾರದಿಂದ ಸಾಯುವವನೂ, ಸ್ತ್ರೀಭೋಗಪಡೆದವನೂ, ಮತ್ತು ಆಚಾರ್ಯನೂ, ಬಹುಪುತ್ರರುಳ್ಳವನೂ ಆಗುವನೆಂದು ಇನ್ನೊಂದು ಮತ. ಹೀಗೆಂದು ಸಾಮುದ್ರಿಕಾಶಾಸ್ತ್ರದಲ್ಲಿ ಹೇಳಿದೆ.

೧೦. ಎಲೈ ರಾಜಶ್ರೇಷ್ಠನೇ! ಸಮವಾದ ವಲಿಗಳಿರಲು ಈ ಫಲಗಳುಂಟೆಂದೂ, ವಲಿಗಳು ಸಮವಾಗಿಲ್ಲದಿರಲು ಆಗಮ್ಯಾಗಮನವನ್ನು ಮಾಡುವರೆಂದೂ ಸಾಮುದ್ರಿಕಾ ಶಾಸ್ತ್ರದಲ್ಲಿ ಹೇಳಿದೆ.

೧೧. ವಲಿಗಳು ನೇರವಾಗಿದ್ದರೆ ದ್ರವ್ಯಾನುಭವವುಳ್ಳವನಾಗಿ ಭೋಗಿಯಾಗುವನು. ಅಲ್ಲದೆ ಪರಸ್ತ್ರೀನಿಂಧೆಯನ್ನೂ ಮಾಡುವನು. ಪಕ್ಕೆಗಳು ಮೆತ್ತಗೆ ಮಾಂಸಪುಷ್ಟಗಳಾಗಿದ್ದರೆ ರಾಜನಾಗುವನು. ಅದರಲ್ಲಿ ಏನೂ ಸಂದೇಹವಿಲ್ಲ.

೧೨. ಯಾರ ಗಡ್ಡವು ಮೇಲಕ್ಕೆ ಎತ್ತಿಕೊಂಡಿರುವುದಿಲ್ಲವೋ ಅವರು ಸೌಭಾಗ್ಯವಂತರು. ಉದ್ದವಾಗಿಯೂ ವಿಷಮವಾಗಿಯೂ ಇದ್ದರೆ ಧನಹೀನರಾಗುವರು.

೧೩. ಅಯ್ಯಾ ಶಿವಕುಮಾರನೇ! ಹೆಗಲುಗಳು ದಪ್ಪವಾಗಿಯೂ, ಪುಷ್ಟಿಯಾಗಿ ಬೆಳೆದುಕೊಂಡೂ, ಸ್ವಲ್ಪ ತಗ್ಗಾಗಿಯೂ, ಇದ್ದರೆ ರಾಜರೂ ಸುಖಿಗಳೂ ಆಗುವರು. ಈ ವಿಷಯದಲ್ಲಿ ಸಂಶಯವಿಲ್ಲ.

ಸಮೋನ್ನತಂ ತು ಹೃದಯಂ ಸಮಂ ಚ ಪೃಥು ಚೈವ ಹಿ ।
ಅವೇಪನಂ ಮಾಂಸಲಂ ಚ ಪಾರ್ಥಿವಾನಾಂ ನ ಸಂಶಯಃ ॥ ೧೪ ॥

ಖರರೋಮಚಿತಂ ವೀರ ಶಿರಾಲಂ ಚ ವಿಶೇಷತಃ ।
ಅಧನಾನಾಂ ಭವೇದೇವ ಹೃದಯಂ ಖಗಭವೋತ್ತಮ ।
ಸಮವಕ್ಷಸೋಽರ್ಥಯುತಾಃ ಪೀನೈಃ ಶೂರಾಃ ಸ್ಮೃತಾ ಬುಧೈಃ ॥ ೧೫ ॥

ತನುಭಿರ್ದ್ರವ್ಯ ಹೀನಾಸ್ಸ್ಯುರಸಮೈಶ್ಚಾಪ್ಯಕಿಂಚನಾಃ ।
ವಧ್ಯಂತೇ ಚಾಪಿ ಶಸ್ತ್ರೇಣ ನಾತ್ರ ಕಾರ್ಯಾ ವಿಚಾರಣಾ ॥ ೧೬ ॥

ಹನುಭಿರ್ವಿಷಮೈರ್ವೀರ ಜನ್ಮಹೀನೋ ಭವೇನ್ನರಃ ।
ಯಸ್ಯೋನ್ನತೋ ಭವೇದ್ಧನುಃ ಸ ಭೋಗೀ ಸ್ಯಾನ್ನ ಸಂಶಯಃ ॥ ೧೭ ॥

---

೧೪. ಹೃದಯವು ಅತಿ ಎತ್ತರವೂ ಅತಿ ತಗ್ಗೂ ಇಲ್ಲದೆಯೂ, ಹಳ್ಳತಿಟ್ಟು ಗಳಾಗಿಲ್ಲದೆಯೂ, ಸ್ಥೂಲವಾಗಿಯೂ, ಕಂಪಿಸದೆ ದಪ್ಪವಾಗಿಯೂ, ಇರುವುದು ರಾಜರ ಲಕ್ಷಣ ಎಂಬುದರಲ್ಲಿ ಸಂಶಯವಿಲ್ಲ.

೧೫. ಒರಟುಕೂದಲಿನಿಂದ ಕೂಡಿಯೂ, ನರಗಳು ಹೆಚ್ಚಾಗಿ ಕಾಣುತ್ತಲೂ ಇರುವ ಎದೆಯು ನಿರ್ಧನತ್ವದ ಗುರುತು. ಅಯ್ಯಾ ಖಭುಪುತ್ರರಲ್ಲಿ ಶ್ರೇಷ್ಠನೇ! ವಕ್ಷಸ್ಥಳವು ಸಮವಾಗಿದ್ದರೆ ಧನಯುಕ್ತರೂ, ದಪ್ಪವಾಗಿದ್ದರೆ ಶೂರರೂ, ಆಗುವರೆಂದು ವಿದ್ವಾಂಸರು ಹೇಳುವರು.

೧೬. ವಕ್ಷಸ್ಥಳವು ಕೃಶವಾಗಿದ್ದರೆ ನಿರ್ಧನರಾಗುವರು. ಹಳ್ಳತಿಟ್ಟಾಗಿದ್ದರೆ ನಿರ್ಗತಿಕರಾಗುವರು. ಮತ್ತು ಅವರಿಗೆ ಶಸ್ತ್ರದಿಂದ ಮರಣವಾಗುವುದು. ಈ ಅಂಶ ವಲ್ಲಿ ಸ್ವಲ್ಪವೂ ವಿಚಾರಪಡುವ ಅವಶ್ಯವೇ ಇಲ್ಲ.

೧೭. ಅಯ್ಯಾ ವೀರನೇ! ಗಲ್ಲಗಳು ಒಂದೇಸಮವಾಗಿಲ್ಲದೆ ಒಂದು ದಪ್ಪ ಒಂದು ಸಣ್ಣ ಹೀಗಿದ್ದರೆ, ಹುಟ್ಟಿದ ಮೊದಲುಗೊಂಡು ಕೊನೆಯವರೆಗೂ ಹೀನ ನಾಗಿಯೇ ಇರುವನು. ಗಲ್ಲಗಳು ಎತ್ತರವಾಗಿದ್ದವನು ಭೋಗಿಯಾಗುವನು. ಇದ ರಲ್ಲಿ ಸಂಶಯವಿಲ್ಲ.

ನಿರ್ಮಾಂಸೈರ್ವಿಷಮೈರ್ವೀರ ನಿಸ್ವೋ ನಿಮ್ನೈಃ ಪ್ರಚಕ್ಷ್ಯತೇ ।
ಧನವಾಂಶ್ಚ ಭವೇತ್ಪೀನೈಃ ಸುಖಭೋಗಸಮನ್ವಿತಃ ।
ವಿಷಮೈರರ್ಥಹೀನಃ ಸ್ಯಾತ್ ದುಃಖಭಾಗೀ ಸದಾ ನರಃ ॥ ೧೮ ॥

ಚಿಪಿಟಗ್ರೀವಕೋ ದುಷ್ಟೋ ಮತೋ ಲೋಕೇ ಸ ವೈ ಗುಹ ।
ಕ್ರೂರಸ್ಯಾನ್ಮಹಿಷಗ್ರೀವೋ ಮೃಗಗ್ರೀವೋ ಭಯಾತುರಃ ॥ ೧೯ ॥

ಕಂಬುಗ್ರೀವೋ ಭವೇದ್ರಾಜಾ ಲಂಬಕಂಠೋಗ್ರಲಕ್ಷಣಃ ।
ಹ್ರಸ್ವಗ್ರೀವಸ್ತು ಧನವಾನ್ ಸು ಸುಖೀ ಭೋಗವಾಂಸ್ತಥಾ ॥ ೨೦ ॥

ನಿರ್ಮಾಂಸೌ ರೋಮಶೌ ಭಗ್ನಾವಲ್ಪೌ ವಾಪಿ ವಿಶೇಷತಃ ।
ನಿರ್ಧನಸ್ಯೇದೃಶಾವಂಸೌ ಪ್ರಖ್ಯಾತೌ ವ್ಯೋಮಕೇಶಜ ॥ ೨೧ ॥

---

೧೮. ವೀರಶ್ರೇಷ್ಠನೇ! ಮಾಂಸಶೂನ್ಯಗಳಾಗಿಯೂ (ಒಂದಕ್ಕೊಂದು ಸಮವಿಲ್ಲದೆ) ವ್ಯತ್ಯಾಸಗಳಾಗಿಯೂ, ತಗ್ಗಾಗಿಯೂ ಇರುವ ಗಲ್ಲವಿರುವುದು ದಾರಿದ್ರ್ಯದ ಲಕ್ಷಣ. ಹೆಗಲುಗಳು ದಪ್ಪವಾಗಿದ್ದರೆ ಸುಖಾನುಭವಮಾಡುತ್ತಾನೆ. ಒಂದು ದಪ್ಪ, ಒಂದು ಸಣ್ಣ ಈರೀತಿ ವ್ಯತ್ಯಾಸವಾದ ಹೆಗಲಿದ್ದರೆ ಧನರಹಿತನಾಗುತ್ತಾನೆ ಮತ್ತು ಯಾವಾಗಲೂ ದುಃಖವುಳ್ಳವನಾಗಿಯೇ ಇರುವನು.

೧೯. ಆವಲಕ್ಕಿಯಂತೆ ಚಪ್ಪಟೆಯಾದ ಕುತ್ತಿಗೆಯುಳ್ಳವನು ದುಷ್ಟನಾಗುತ್ತಾನೆ. ಕೋಣನಕತ್ತಿನಂತೆ ದಪ್ಪನಾದ ಕತ್ತುಳ್ಳವನು ಕ್ರೂರನಾಗುವನು. ಜಿಂಕೆಯಂತೆ ಕತ್ತುಳ್ಳವನು ಭಯಶಾಲಿಯೂ ರೋಗಿಯೂ ಆಗುವನು.

೨೦. ಶಂಖದಂತೆ ಕತ್ತುಳ್ಳವನು ರಾಜನಾಗುವನು. ಜೋಲುವ ಕಂಠವುಳ್ಳವನು ಭಯಂಕರ ಲಕ್ಷಣನೆನಿಸುವನು. ಮೋಟಾದ ಕುತ್ತಿಗೆಯುಳ್ಳವನು ಧನವಂತನೂ, ಸುಖಶಾಲಿಯೂ, ಭೋಗಪಡುವವನೂ ಆಗುವನು.

೨೧. ಅಯ್ಯಾ ಈಶ್ವರಪುತ್ರನೇ! ಕೇಳು. ಹೆಗಲುಗಳಲ್ಲಿ ಮಾಂಸಪುಷ್ಟಿಯಿಲ್ಲದೆ ರೋಮಗಳಿಂದ ಕೂಡಿ ತಗ್ಗಾಗಿಯೂ, ಬಹಳ ಚಿಕ್ಕದಾಗಿಯೂ ಇದ್ದರೆ ಅದು ಧನಹೀನನ ಲಕ್ಷಣ.

ಭವೇದರೋಮಶಂ ಪೃಷ್ಠಂ ಧನಿನಾಂ ಭೀಮಸಂಭವ ।
ಸಲೋಮಶಂ ತಥಾ ವಕ್ತ್ರಂ ನಿರ್ಧನಾನಾಂ ಬಲಾಧಿಪ ॥ ೨೨ ॥

ಅಸ್ವೇದನಾವುನ್ನತೌ ಚ ತಥಾ ಪೀನೌ ಷಡಾನನ ।
ಸಮರೋಮಸುಗಂಧೌ ಚ ಕಕ್ಷೌ ಜ್ಞೇಯೌ ಧನಾನ್ವಿತಾ ॥ ೨೩ ॥

ಅವ್ಯುಚ್ಛಿನ್ನೌ ತಥಾ ಶ್ಲಿಷ್ಟೌ ವಿಪುಲೌ ಚ ಸುರಾಧಿಪ ।
ಶೂರಾಣಾಮೀದೃಶಾವಂಸೌ ನಗಜಾನಂದವರ್ಧನ ॥ ೨೪ ॥

ಊರ್ಧ್ವೈರ್ಬದ್ಧಬಾಹುಕೋ ಯಸ್ತು ವಧಬಂಧನಮಾಪ್ನುಯಾತ್ ।
ದೀರ್ಘಬಾಹುರ್ಭವೇದ್ರಾಜಾ ಸಮುದ್ರವಚನಂ ಯಥಾ ॥ ೨೫ ॥

ಪ್ರಲಂಬಬಾಹುರ್ವಿಜ್ಞೇಯೋ ನರಃ ಸರ್ವಗುಣಾನ್ವಿತಃ ।
ಹ್ರಸ್ವಬಾಹುರ್ಭವೇದ್ದಾಸಃ ಪರಪ್ರೇಷ್ಯಕರೋಽಪಿ ವಾ ॥ ೨೬ ॥

---

೨೨. ಅಯ್ಯಾ ಸೇನಾನಿಯಾದ ಶಿವಕುಮಾರ! ಧನವಂತನ ಬೆನ್ನಿನಲ್ಲಿ ಕೂದಲು ಇರುವುದಿಲ್ಲ. (ಬೆನ್ನು ರೋಮರಹಿತವಾಗಿರುವುದು.) ಮುಖದಲ್ಲಿ ಕೂದಲು ಇಲ್ಲದವರು ನಿರ್ಧನರೆನಿಸುವರು.

೨೩. ಅಯ್ಯಾ ಷಣ್ಮುಖನೇ! ಕೇಳು. ಕಂಕಳು ಸದಾ ಬೆವರಿನಿಂದ ಕೂಡಿರದೆ ಎತ್ತರವಾಗಿಯೂ, ದಪ್ಪವಾಗಿಯೂ, ತಕ್ಕಷ್ಟು ರೋಮಗಳುಳ್ಳದ್ದಾಗಿಯೂ, ಸುಗಂಧವುಳ್ಳವುಗಳಾಗಿಯೂ ಇದ್ದ ಪುರುಷನು ಧನವಂತನಾಗುತ್ತಾನೆ.

೨೪. ಪಾರ್ವತೀ ಪ್ರಿಯಪುತ್ರನೂ, ದೇವಸೇನಾಪತಿಯೂ ಆದ ಗುಹನೇ! ಕೇಳು. ದೂರದೂರವಾಗಿ ಬಿಟ್ಟಿರದೆ ಒಟ್ಟಿಗೆ ಸೇರಿ ವಿಸ್ತಾರವಾಗಿರುವ ಹೆಗಲು ಶೂರರಾದವರಿಗೆ ಇರುತ್ತದೆ

೨೫. ಯಾವನ ತೋಳುಗಳು ಮೇಲಕ್ಕೆ ಎತ್ತಿಕೊಂಡಿರುವುದೋ ಅವನು ಕೊಲೆಯನ್ನೋ ಬಂಧನವನ್ನೋ ಹೊಂದುವನು. ತೋಳುಗಳು ಉದ್ದವಾಗಿರುವುದು ರಾಜಲಕ್ಷಣವೆಂದು ಸಾಮುದ್ರಿಕಾಶಾಸ್ತ್ರದಲ್ಲಿ ಹೇಳಿದೆ.

೨೬. ನೀಳವಾದ ತೋಳುಗಳುಳ್ಳವನು ಸಮಸ್ತ ಸುಗುಣಗಳಿಂದ ಕೂಡಿದವನಾಗುವನು ಮೋಟಾದ ತೋಳುಗಳುಳ್ಳವನು ಇತರರು ಹೇಳಿದಂತೆ ನಡೆಯುವ ದಾಸನಾಗುವನು. ಅಥವಾ ಇತರರಲ್ಲಿ (ಚಾಕರ) ನಾಗುವನು.

ವಾಮಾವರ್ತಭುಜಾ ಯೇ ತು ದೀರ್ಘಾಯತಭುಜಾಶ್ಚ ಯೇ ।
ಸಂಪೂರ್ಣಬಾಹೂ ರಾಜಾ ಸ್ಯಾದಿತ್ಯಾಹ ಸ ಪಯೋನಿಧಿಃ ॥ ೨೭ ॥

ಗ್ರೀವಾ ಚ ವರ್ತುಲಾಕಾರಾ ಕಂಬುರೇಖಾ ಸಮಾವೃತಾ ।
ಸ ಭವೇತ್ಪಾರ್ಥಿವೋ ಭೂಮೌ ಸರ್ವದುಷ್ಟನಿಬರ್ಹಣಃ ॥ ೨೮ ॥

ದೀರ್ಘಗ್ರೀವಾ ಬಕಗ್ರೀವಾ ಶುಕಗ್ರೀವಾಶ್ಚ ಯೇ ನರಾಃ ।
ಉಷ್ಟ್ರಗ್ರೀವಾ ಕರಿಗ್ರೀವಾಃ ಸರ್ವೇ ತೇ ನಿರ್ಧನಾ ಸ್ಮೃತಾಃ ॥ ೨೯ ॥

ಶುಂಡಯಾ ಸದೃಶೌ ವೃತ್ತೌ ಸಮೌ ಪೀನೌ ಚ ಸುವ್ರತ ।
ಆಜಾನುಲಂಬಿನೌ ಬಾಹೂ ಪಾರ್ಥಿವಾನಾಂ ನ ಸಂಶಯಃ ॥ ೩೦ ॥

---

೨೭. ಯಾರ ತೋಳುಗಳಲ್ಲಿ ಎಡಗಡೆ ಸುಳಿಯಿರುವುದೋ ಯಾರ ಭುಜಗಳು ನೀಳವಾಗಿಯೂ, ಒಂದುಭುಜಕ್ಕೂ ಮತ್ತೊಂದುಭುಜಕ್ಕೂ ಇರುವ ಅಂತರವು ಹೆಚ್ಚಾಗಿಯೂ ಇರುವುದೋ ಮತ್ತು ಯಾವನಿಗೆ ತುಂಬು ತೋಳಾಗಿರುವುದೋ ಅವನು ರಾಜನಾಗುವನೆಂದು ಸಾಮುದ್ರಿಕಾಶಾಸ್ತ್ರದಲ್ಲಿ ಹೇಳಿದೆ.

೨೮. ಯಾವನಿಗೆ ದುಂಡಾಗಿಯೂ, ಶಂಖದಲ್ಲಿರುವಂತೆ ಗೆರೆಗಳಿಂದ ಕೂಡಿಯೂ ಇರುವ ಕುತ್ತಿಗೆ ಇರುವುದೋ ಅವನು ಸಮಸ್ತ ದುಷ್ಟರನ್ನೂ ನಿಗ್ರಹಮಾಡತಕ್ಕ ಪ್ರಬಲನಾದ ರಾಜನಾಗುತ್ತಾನೆ.

೨೯. ಯಾರ ಕುತ್ತಿಗೆ ಉದ್ದವಾಗಿರುವುದೋ ಮತ್ತು ಕೊಕ್ಕರೆ, ಗಿಳಿ, ಒಂಟೆ, ಆನೆ, ಇವುಗಳ ಕುತ್ತಿಗೆಗಳಂತಿರುವುದೋ ಅವರೆಲ್ಲರೂ ನಿರ್ಧನರಾಗುವರು ಎಂದು ತಿಳಿಯಬೇಕು.

೩೦. ತೋಳುಗಳೆರಡೂ ಆನೆಯ ಸೊಂಡಲಿನಂತೆ ದುಂಡಾಗಿಯೂ ಒಂದಕ್ಕೊಂದು ಸಮವಾಗಿಯೂ ಭುಜಶಿರಸ್ಸು ಎತ್ತರವಾಗಿಯೂ, ಬೆರಳುತುದಿಯು ಮಂಡಿಗೆ ಸೋಕುವಂತೆ ನೀಳವಾಗಿಯೂ ಇರುವುದು ರಾಜಲಕ್ಷಣ. ಇದರಲ್ಲಿ ಸಂಶಯವಿಲ್ಲ.

ದರಿದ್ರಾಣಾಂ ಲೋಮಶೌ ಹ್ರಸ್ವೌ ಬಾಹೂಜ್ಞೇಯೌ ಸುರೋತ್ತಮ ।
ತಸ್ಕರಾಣಾಂ ಚ ವಿಷಮೌ ಸ್ಥೂಲೌ ಸೂಕ್ಷ್ಮೌ ಚ ಸುವ್ರತ ॥ ೩೧ ॥

ನಿಮ್ನಂ ಕರತಲಂ ಯಸ್ಯ ಪಿತೃವಿತ್ತಂ ನ ತಸ್ಯ ವೈ ।
ಭವೇದಾರ್ಭವ ಶಾರ್ದೂಲ ತಥಾ ಭೀರುಶ್ಚ ಮಾನವಃ ॥ ೩೨ ॥

ಸುವೃತ್ತತನುನಿಮ್ನೇನ ಧನವಾನ್ ಕರತಲೇನ ತು ।
ಉತ್ತಾನಕರತಲೋ ದಾತಾ ಭವತೀತಿ ನ ಸಂಶಯಃ ॥ ೩೩ ॥

ವಿಷಮೋ ಭವಂತಿ ವಿಷಮೈಃ ನಿಮ್ನೈಶ್ಚಾಪಿ ವಿಶೇಷತಃ ।
ಕರತಲೈರ್ದೇವ ಶಾರ್ದೂಲ ಲಾಕ್ಷಾಭೈರೀಶ್ವರಾ ಸ್ಮೃತಾಃ ॥ ೩೪ ॥

---

೩೧. ಅಯ್ಯಾ ದೇವತೆಗಳಲ್ಲಿ ಶ್ರೇಷ್ಠನೇ! ಮೋಟಾಗಿಯೂ, ರೋಮಗಳಿಂದ ಕೂಡಿಯೂ ಇರುವ ತೋಳುಗಳುಳ್ಳವರು ದರಿದ್ರರಾಗುವರು. ವ್ಯತ್ಯಾಸವಾದ ತೋಳುಗಳುಳ್ಳವರು ಎಂದರೆ ಒಂದು ದಪ್ಪ, ಒಂದು ಸಣ್ಣ ಹೀಗಿರುವ ತೋಳುಗಳುಳ ವರು ಕಳ್ಳತನದಿಂದ ಜೀವಿಸುವರು

೩೨. ಯಾವನ ಅಂಗೈ ಹಳ್ಳವಾಗಿರುವುದೋ ಅವನಿಗೆ ತಂದೆಯ ದ್ರವ್ಯವು ಏನೂ ಇರುವುದಿಲ್ಲ. ಎಲೈ ಋಭುಪುತ್ರರದಲ್ಲಿ ಶ್ರೇಷ್ಠನೇ! ಅಂತಹವನು ಅಂಜು ಪುರುಕನಾಗುತ್ತಾನೆ.

೩೩. ದುಂಡಾಗಿಯೂ, ಚಿಕ್ಕದಾಗಿಯೂ, ಸ್ವಲ್ಪ ಹಳ್ಳವಾಗಿಯೂ ಇರುವ ಅಂಗೈಯುಳ್ಳವನು ಹಣಗಾರನಾಗುವನು. ಅಂಗೈ ಸ್ವಲ್ಪ ಎತ್ತರವಾಗಿದ್ದರೆ ದಾನ ಶೀಲನಾಗುವನು. ಇದರಲ್ಲಿ ಸಂಶಯವಿಲ್ಲ.

೩೪. ಅಯ್ಯಾ ದೇವಶ್ರೇಷ್ಠನೇ! ಅಂಗೈ ಹಳ್ಳತಿಟ್ಟಾಗಿದ್ದರೂ, ಅಥವಾ ವಿಶೇಷ ಹಳ್ಳವಾಗಿದ್ದರೂ, ವಿಷಮಸ್ಥಿತಿಯನ್ನು ಅನುಭವಿಸುತ್ತಾರೆ, (ಎಂದರೆ ಕಷ್ಟಪಡುವವ ರಾಗುತ್ತಾರೆ.) ಅರಗಿನ ಬಣ್ಣದ ಅಂಗೈಯುಳ್ಳವರು ಅಧಿಕಾರಿಗಳಾಗುತ್ತಾರೆ.

ಆಗಮ್ಯಾಗಮನಂ ಪೀತ್ಯೈ ರೂಕ್ಷೈರ್ನಿರ್ಧನತಾ ಸ್ಮೃತಾ ।
ಅಪೇಯಪಾನಂ ಕುರ್ವಂತಿ ನೀಲಕೃಷ್ಣೈಃ ಸದೈವ ಹಿ ॥ ೩೫ ॥

ನಿಮ್ನಾಃ ಸ್ನಿಗ್ಧಾ ಭವೇಯುರ್ವೈ ರೇಖಾ ಕರತಲೇ ಯದಿ ।
ಧನಿನಾಂ ನ ದರಿದ್ರಾಣಾಂ ಇತ್ಯಾಹ ಸ ಪಯೋನಿಧಿಃ ॥ ೩೬ ॥

ವಿರಲಾಂಗುಲಯೋ ಯೇ ತು ತೇ ದರಿದ್ರಾ ಇತೀರಿತಾಃ ।
ಧನಿನಸ್ತು ಮಹಾಬಾಹೋ ಯೇ ಘನಾಂಗುಲಯೋ ನರಾಃ ॥ ೩೭ ॥

ವದನಂ ಮಂಡಲಂ ಯಸ್ಯ ಧರ್ಮಶೀಲಂ ತಮಾದಿಶೇತ್ ।
ಶುಂಡಾ ವಕ್ತ್ರಾ ನರಾ ಯೇ ತು ದುರ್ಭಗಾಸ್ತೇ ನ ಸಂಶಯಃ ॥ ೩೮ ॥

ಹರಿವಕ್ತ್ರಾ ಜಿಂಹವಕ್ತ್ರಾ ವಿಕೃತಾಸ್ಯಾಸ್ತಥಾ ನರಾಃ ।
ಭಗ್ನವಕ್ತ್ರಾಃ ಕರಾಲಾಸ್ಯಾಃ ಸರ್ವೇ ತೇ ತಸ್ಕರಾಃ ಸ್ಮೃತಾಃ ॥ ೩೯ ॥

---

೩೫. ಅಂಗೈ ಹಳದಿಬಣ್ಣವಾಗಿಸುವವರು ಅಗಮ್ಯಳಾದ (ಕೂಡಲು ಅರ್ಹತೆ ಇಲ್ಲದಿರುವ) ಸ್ತ್ರೀಯಲ್ಲಿ ಗಮನಮಾಡುವರು. ಅಂಗೈ ಒರಟಾಗಿದ್ದರೆ ಬಡತನ ಬರುವುದು. ನೀಲಬಣ್ಣ, ಕಪ್ಪುಬಣ್ಣದ ಅಂಗೈವುಳ್ಳವರು ಕುಡಿಯಬಾರದುದನ್ನು (ಎಂದರೆ ಹೆಂಡ, ಸಾರಾಯಿ ಮೊದಲಾದುವನ್ನು) ಸಹ ಕುಡಿಯುವರಾಗುತ್ತಾರೆ.

೩೬. ಅಯ್ಯಾ ಷಣ್ಮುಖನೇ! ಕೈಯಲ್ಲಿರುವ ಗೆರೆಗಳು ಆಳವಾಗಿಯೂ, ಮಿಂಚುವವುಗಳಾಗಿಯೂ ಇದ್ದರೆ ಧನಿಕರಾಗುವರೇ ಹೊರತು ದರಿದ್ರರಾಗುವುದಿಲ್ಲ ಎಂಬದಾಗಿ ಸಾಮುದ್ರಿಕಾಶಾಸ್ತ್ರದಲ್ಲಿ ಹೇಳಿದೆ.

೩೭. ಬೆರಳುಗಳು ಒಟ್ಟುಗೂಡಿಸಿದರೂ ಒತ್ತಾಗಿರದೆ ವಿರಳವಾಗಿ ಯಾರಿಗೆ ಇರುವುದೋ ಅವರು ಬಡವರಾಗುವರೆಂದೂ, ಬೆರಳುಗಳು ಒತ್ತಾಗಿ ಕೂಡಿಕೊಂಡಿರುವವರು ಧನಿಕರು ಎಂದೂ ಹೇಳಬೇಕು.

೩೮. ದುಂಡಾದ ಮುಖವುಳ್ಳವನು ಧರ್ಮಶೀಲನೆನಿಸುವನು. ಉದ್ದವಾದ ಎಂದರೆ ಕೋಲಾದ ಮುಖವುಳ್ಳ ಜನರು ದುರದೃಷ್ಟಶಾಲಿಗಳೆಂಬುದರಲ್ಲಿ ಸಂಶಯವಿಲ್ಲ.

೩೯. ಕುದುರೆಯ ಮುಖದಂತೆ ಮುಖವುಳ್ಳವರು, ಸೊಟ್ಟಮೋರೆಯವರು, ವಿಕಾರವಾದ ಮುಖವುಳ್ಳವರು, ಕ್ರೂರವಾದ ಮುಖವುಳ್ಳವರು ಇವರೆಲ್ಲಾ ಕಳ್ಳರೆಂದು ತಿಳಿಯಬೇಕು.

ಸಂಪೂರ್ಣವಕ್ತ್ರಾ ರಾಜಾನೋ ಗಜಸಿಂಹಾನನಾಸ್ತಥಾ ।
ಛಾಗವಾನರವಕ್ತ್ರಾಶ್ಚ ಧನಿನಃ ಪರಿಕೀರ್ತಿತಾಃ ॥ ೪೦ ॥

ಯಸ್ಯ ಗಂಡೌ ಸು ಸಂಪೂರ್ಣೌ ಪದ್ಮಪತ್ರಸಮಪ್ರಭೌ ।
ಕೃಷಿಭಾಗೀ ಭವೇನ್ನಿತ್ಯಂ ಬಹುವಿತ್ತಶ್ಚ ಮಾನವಃ ॥ ೪೧ ॥

ಸಿಂಹವ್ಯಾಘ್ರಗಜೇಂದ್ರಾಣಾಂ ಕಪೋಲಃ ಸದೃಶೋ ಯದಿ ।
ಮಹಾಭೋಗೀ ಸ ವಿಜ್ಞೇಯಃ ಸೇನಾಯಾಶ್ಚೈವ ನಾಯಕಃ ॥ ೪೨ ॥

ವದನಂ ತು ಸಮಂ ಶ್ಲಕ್ಷ್ಣಂ ಸೌಮ್ಯಂ ಸಂವೃತಮೇವ ಹಿ ।
ಪಾರ್ಥಿವಾನಾಂ ಮಹಾಬಾಹೋ ವಿಪರೀತಂ ತು ದುಃಖದಂ ॥ ೪೩ ॥

---

೪೦. ಮುಖವು ಎಲ್ಲಾ ಕಡೆಯಲ್ಲಿಯೂ ತುಂಬಿಕೊಂಡಿರುವವರು ರಾಜರಾಗುವರು. ಅವರ ಮುಖವು ಆನೆ, ಸಿಂಹ ಇವುಗಳಂತೆ ಭವ್ಯವಾಗಿರುತ್ತದೆ. ಆಡು, ಕಪಿ, ಇವುಗಳ ಮುಖಗಳಂತೆ ಮುಖವುಳ್ಳವರು ಧನಿಕರಾಗುವರೆಂದು ಹೇಳಿದೆ.

೪೧. ಯಾರ ಕೆನ್ನೆಗಳು ತುಂಬಿಕೊಂಡು ಕಮಲದ ಎಸಳಿನ ಬಣ್ಣದಂತೆ ಬಣ್ಣವುಳ್ಳವುಗಳಾಗಿರುವುವೋ ಅವನು ಯಾವಾಗಲೂ ಕೃಷಿಯ (ಭೂವ್ಯವಸಾಯ) ಫಲವನ್ನು ಹೊಂದುವನು. ಮತ್ತು ಬಹು ಧನಿಕನೂ ಆಗುವನು.

೪೨. ಯಾವ ಮನುಷ್ಯನ ಗಲ್ಲವು ಸಿಂಹ, ಹುಲಿ ಇವುಗಳ ಗಲ್ಲಕ್ಕೆ ಸಮವಾಗಿರುವುದೋ ಅವನು ತುಂಬಾ ಸುಖಪಡತಕ್ಕವನೂ ಸೇನಾಪತಿಯೂ ಆಗುವನೆಂದು ತಿಳಿಯಬೇಕು.

೪೩. ಅಯ್ಯಾ ಮಹಾಬಾಹುವಾದ ಷಣ್ಮುಖನೇ! ನುಣುಪಾಗಿ ಸಮವಾಗಿಯೂ, ಭಯಂಕರವಿಲ್ಲದೆಯೂ, ಹೆಚ್ಚು ಆಡಂಬರವಿಲ್ಲದೆ ಗಂಭೀರತೆಯಿಂದ ಅಲಂಕೃತವಾಗಿಯೂ ಇರುವ ಮುಖವುಳ್ಳವರು ರಾಜರಾಗುವರು. ರಾಜರಲ್ಲದ ಇತರರಲ್ಲಿ ಈ ಲಕ್ಷಣವು ವ್ಯತಿರಿಕ್ತವಾಗಿದ್ದು ದುಃಖಪ್ರದವಾಗುವುದು.

ಮಹಾಮುಖಂ ತು ದೇವೇಶ ದುರ್ಭಗತ್ವಂ ಪ್ರಯಚ್ಛತಿ ।
ಸ್ತ್ರೀಮುಖಂ ಪುತ್ರನಾಶಾಯ ಮಂಡಲಂ ಸುಖಿತಾಂ ವ್ರಜೇತ್ ॥ ೪೪ ॥

ದ್ರವ್ಯನಾಶಾಯ ವೈ ದೀರ್ಘಂ ಪಾಪದಂ ಭಯದಂ ತಥಾ ।
ಧೂರ್ತಾನಾಂ ಚತುರಸ್ರಂ ಸ್ಯಾತ್ ಪುತ್ರಹಾನಿಕರಂ ಶೃಣು ॥ ೪೫ ॥

ನಿಮ್ನವಕ್ತ್ರಂ ಚ ದೇವೇಂದ್ರ ಪುತ್ರಹಾನಿಕರಂ ಭವೇತ್ ।
ಹ್ರಸ್ವಂ ಭವತಿ ಕೀನಾಶೇ ಪೂರ್ಣಕಾಂತಂ ಚ ಭೋಗಿನಾಂ ॥ ೪೬ ॥

ರಕ್ತಾಧರೋ ನರಪತಿಃ ಧನವಾನ್ ಕಮಲಾಧರಃ ।
ಸ್ಥೂಲೋಷ್ಠೈಃ ಹನುಮೂಲೈಶ್ಚ ಶುಷ್ಕೈಃ ತೀಕ್ಷ್ಣೈಶ್ಚ ದುಃಖಿತಾಃ ॥೪೭॥

---

೪೪. ಅಯ್ಯಾ ದೇವಶ್ರೇಷ್ಠನೇ ! ಅತಿ ದೊಡ್ಡಮುಖವು ದುರದೃಷ್ಟಕರವಾದುದು ಹೆಂಗಸಿನ ಮುಖದಂತೆ ಮುಖವುಳ್ಳವನು ಪುತ್ರನನ್ನು ಕಳೆದುಕೊಳ್ಳುವನು. ದುಂಡುಮುಖವುಳ್ಳವನು ಸುಖಿಯಾಗುವನು.

೪೫. ಅಯ್ಯಾ ಗುಹನೇ ! ಕೋಲುಮುಖ (ಉದ್ದವಾದ ಮುಖವು) ಉಳ್ಳವನು ಧನವನ್ನು ಕಳೆದುಕೊಳ್ಳುವನು. ಅಲ್ಲದೆ ಮುಖವು ಹಾಗಿರುವುದು ಅವನಿಗೆ ಪಾಪವನ್ನೂ ಭಯವನ್ನೂ ಉಂಟುಮಾಡುವುದು. ಚಚ್ಚೌಕವಾದ ಮುಖವುಳ್ಳವನು ಧೂರ್ತನಾಗುವನು. ಮತ್ತು ಪುತ್ರರನ್ನು ಕಳೆದುಕೊಳ್ಳುವನು.

೪೬. ಅಯ್ಯಾ ದೇವಶ್ರೇಷ್ಠನೇ! ಮುಖವು ಹಳ್ಳವಾಗಿದ್ದರೆ ಪುತ್ರಹಾನಿಕರವು. ಮುಖವು ಬಹಳ ಕಿರಿದಾಗಿದ್ದರೆ ಬೇಗ ಯಮನಿಗೆ ವಶ್ಯನಾಗುವನು. ಮುಖವು ತುಂಬಿಕೊಂಡು ಮನೋಹರವಾಗಿ ಕಾಣುವವರು ಭೋಗವನ್ನು ಅನುಭವಿಸುತ್ತಾರೆ.

೪೭. ಕೆಂಪಾದ ತುಟಿಯುಳ್ಳವನು ರಾಜನಾಗುವನು. ತಾವರೆಹೂವಿನ ಬಣ್ಣದಂತೆ ತುಟಿಯಿರುವವನು ಧನಿಕನೆನಿಸುವನು. ತುಟಿಗಳು ದಪ್ಪವಾಗಿ ಗಲ್ಲಗಳ ಬುಡದವರೆಗೂ ವ್ಯಾಪಿಸುವಂತಿದ್ದರೂ, ತುಟಿಯು ಒಣಕಲಾಗಿ ಕಪ್ಪಾಗಿ ಕೃಶವಾಗಿದ್ದರೂ, ದುಃಖವುಳ್ಳವರಾಗುವರು.

ಅಸ್ಫೋಟಿತಾಗ್ರಂ ಸ್ನಿಗ್ಧಂ ಚ ನತಂ ಮೃದು ತಥಾ ಗುಹ ।
ಸಂಪೂರ್ಣಂ ಚ ಸದಾ ಶಸ್ತಂ ಶ್ಮಶ್ರು ಭೂಮಿಪತೇರ್ಗುಹ ॥ ೪೮ ॥

ರಕ್ತೈಶ್ಚಾಲ್ಪೈಃ ತಥಾರೂಕ್ಷೈಃ ಶ್ಮಶ್ರುಭಿರ್ಭೀಮನಂದನ ।
ನರಾಶ್ಚೋರಾ ಭವಂತ್ಯೇವ ಪರದಾರರತಾಸ್ತಥಾ ॥ ೪೯ ॥

ನಿರ್ಮಾಂಸೌ ಯಸ್ಯ ವೈ ಕರ್ಣೌ ಸಂಗ್ರಾಮಾನ್ಮೃತ್ಯುಮೃಚ್ಛತಿ ।
ಚಿಪಿಟಾಭ್ಯಾಂ ಭವೇದ್ಭೋಗೀ ಹ್ರಸ್ವೌ ಚ ಕೃಪಣಸ್ತಥಾ ॥ ೫೦ ॥

ಶಂಕುಕರ್ಣಶ್ಚ ಭೂನಾಥೋ ಸರ್ವಶತ್ರುಭಯಂಕರಾಃ ।
ದೀರ್ಘಾಯುಃ ರೋಮಶಾಭ್ಯಾಂ ತು ವಿಪುಲಾಭ್ಯಾಂ ನರಾಧಿಪಃ
ಭೋಗೀ ಸ ಚ ಭವೇನ್ನಿತ್ಯಂ ದೇವಬ್ರಾಹ್ಮಣಪೂಜಕಃ ॥ ೫೧ ॥

---

೪೮. ಅಯ್ಯಾ ಗುಹನೇ! ತುದಿಯು ಒಡೆಯದೆಯೂ, ಮಿಂಚುತ್ತಲೂ, ಬಾಗಿಕೊಂಡೂ, ಒರಟಿಲ್ಲದೆಯೂ, ಕೊಂಚವೂ ನ್ಯೂನತೆಯಿಲ್ಲದಂತೆಯೂ (ಎಂದರೆ ಮಧ್ಯೆ ಕೃಶವಿಲ್ಲದೆ) ಇರುವ ಮೀಸೆಯು ಪ್ರಶಸ್ತವಾದುದು.

೪೯. ಅಯ್ಯಾ ಈಶಪುತ್ರನೇ! ಕೇಳು. ಮೀಸೆಗಳು ಕೆಂಪಾಗಿಯೂ, ಸ್ವಲ್ಪವಾಗಿಯೂ, ಒರಟಾಗಿಯೂ, ಇದ್ದರೆ ಅವರು ಕಳ್ಳರೂ ಪರಸ್ತ್ರೀಯರಲ್ಲಿ ಆಸಕ್ತರೂ ಆಗುವರು.

೫೦. ಯಾವನ ಕಿವಿಯಲ್ಲಿ ಮಾಂಸಖಂಡವು ಇರುವುದಿಲ್ಲವೋ ಅವನು ಯುದ್ಧದಲ್ಲಿ ಸಾಯುತ್ತಾನೆ. ಕಿವಿಗಳು ಅವಲಕ್ಕಿಯಂತೆ ಚಪ್ಪಟೆಯಾಗಿದ್ದರೆ ಸುಖವನ್ನು ಅನುಭವಿಸುವನು. ಜಿಪುಣನಾದವನಿಗೆ ಕಿವಿಯು ಮೋಟಾಗಿರುತ್ತದೆ.

೫೧. ೫೧. ಯಾವನ ಕಿವಿಯು ಶಂಕುವಿನಂತೆ (ಗೂಟದಂತೆ) ಎತ್ತರವಾಗಿರುವುದೋ ಅವನು ಸಮಸ್ತ ಶತ್ರುಗಳಿಗೂ ಭಯಂಕರನಾದ ರಾಜನಾಗುವನು. ಕಿವಿಗಳು ಉದ್ದವಾಗಿಯೂ, ರೋಮಗಳಿಂದ ಕೂಡಿಯೂ ಇದ್ದರೆ ದೀರ್ಘಾಯುಷ್ಯವನಾಗುವನು. ಅಗಲವಾಗಿದ್ದರೆ ರಾಜನಾಗುವನಲ್ಲದೆ ಯಾವಾಗಲೂ ಭೋಗಿಯೂ ದೇವಬ್ರಾಹ್ಮಣ ಪೂಜಕನೂ ಆಗುತ್ತಾನೆ.

**ಶಿರಾವಬದ್ಧೌ ಕ್ರೂರಸ್ಯ ವ್ಯಾಲಂಚೌ ಚ ವಿಶೇಷತಃ ।**
**ಮಾಂಸಲೌ ಸುಖದೌ ಜ್ಞೇಯೌ ಶ್ರವಣೌ ವ್ಯೋಮಕೇಶಜ ॥ ೫೨ ॥**

**ಭೋಗೀ ಸ್ಯಾನ್ನಿಮ್ನಗಂಡೋ ವೈ ಮಂತ್ರೀ ಸಂಪೂರ್ಣಗಂಡಕಃ ।**
**ಶುಭಭಾಕ್ ಶುಕನಾಸಸ್ತು ಚಿರಾಯುಃ ಶುಷ್ಕನಾಸಿಕಃ ॥ ೫೩ ॥**

**ಕುಂದಕುಂಡ್ಮಲಸಂಕಾಶೈಃ ಪ್ರಕಾಶೈರ್ದಶನೈರ್ನೃಪಃ ।**
**ಋಕ್ಷವಾನರದಂತಾಶ್ಚ ನಿತ್ಯಂ ಕ್ಷುತ್ಪರಿಪೀಡಿತಾಃ ॥ ೫೪ ॥**

**ಹಸ್ತಿದಂತಾಃ ಖರದಂತಾಃ ಸ್ನಿಗ್ಧದಂತಾಃ ಗುಣಾನ್ವಿತಾಃ ।**
**ಕರಾಲೈರ್ವಿರಲೈ ರೂಕ್ಷೈರ್ದಶನೈರ್ದುಃಖಜೀವಿನಃ ॥ ೫೫ ॥**

---

೫೨. ಅಯ್ಯಾ ಶಿವಕುಮಾರನೇ! ಯಾರ ಕಿವಿಗಳು ನರಗಳಿಂದ ಕೂಡಿ ಜೋಲುಬಿದ್ದಂತಿರುವುವೋ ಅವನು ಕ್ರೂರನಾಗುವನು. ಬಲವಾಗಿರುವ ಕಿವಿಗಳು ಸುಖದಾಯಕಗಳು ಎಂದು ತಿಳಿಯಬೇಕು.

೫೩. ಕೆನ್ನೆಗಳು ಹಳ್ಳವಾಗಿರುವವನು ಸುಖಿಯಾಗುವನು. ಕೆನ್ನೆಗಳು (ಗಲ್ಲಗಳು) ತುಂಬಿಕೊಂಡಿರುವವನು ಮಂತ್ರಿಯಾಗುವನು ಗಿಳಿಯಮೂಗಿನಂತೆ ಮೂಗುಳ್ಳವನು ಶುಭಹೊಂದುವನು. ಒಣಕಲು ಮೂಗುಳ್ಳವನು ಬಹುಕಾಲ ಬದುಕುವನು.

೫೪. ಮಲ್ಲಿಗೆಯ ಮೊಗ್ಗಿನಂತೆ ಸಾಲಾಗಿ ಹೊಳೆಯುತ್ತಿರುವ ಹಲ್ಲುಳ್ಳವನು ಮಹಾರಾಜನಾಗುವನು. ಕರಡಿ, ಕಪಿ ಇವುಗಳಂತೆ ಹಲ್ಲುಳ್ಳವರು ಯಾವಾಗಲೂ ಹಸಿವಿನಿಂದ ಕ್ಲೇಶಪಡುತ್ತಾರೆ.

೫೫. ಆನೆಯ ಹಲ್ಲುಗಳಂತೆ ಹಲ್ಲುಗಳುಳ್ಳವರೂ, ಕತ್ತೆಯ ಹಲ್ಲಿನಂತೆ ಹಲ್ಲುಳ್ಳವರೂ, ಮಿಂಚುವ ಹಲ್ಲುಳ್ಳವರೂ ಸುಗುಣಗಳಿಂದ ಕೂಡಿದವರಾಗುವರು. ನೋಡುವುದಕ್ಕೆ ಭಯಂಕರವೂ, ದೂರದೂರವೂ, ಒರಟೂ ಆದ ಹಲ್ಲುಳ್ಳವರು ದುಃಖದಿಂದ ಜೀವಿಸುತ್ತಾರೆ.

ದ್ವಾತ್ರಿಂಶದ್ದಂತಾ ರಾಜಾನಃ ಏಕತ್ರಿಂಶಚ್ಚ ಭೋಗವಾನ್ ।
ತ್ರಿಂಶದ್ದಂತಾ ನರಾ ನಿತ್ಯಂ ಸುಖದುಃಖಿತ್ವಭಾಗಿನಃ ।
ಊನತ್ರಿಂಶೈಶ್ಚ ದಶನೈಃ ಪುರುಷಾ ದುಃಖಭಾಗಿನಃ ॥ ೫೬ ॥

ಕೃಷ್ಣಜಿಹ್ವೋ ಭವೇತ್ಪ್ರೇಷ್ಯಃ ಕುಂಡಲಿನ್ಯಾ ತು ಜಿಹ್ವಯಾ ।
ಭವೇತ್ಕೋಪಸ್ಯ ಕರ್ತಾ ಚ ಸ್ಥೂಲೋ ರೂಕ್ಷಶ್ಚ ಜಿಹ್ವಯಾ ॥ ೫೭ ॥

ಶ್ವೇತಜಿಹ್ವಾ ನರಾ ಜ್ಞೇಯಾಃ ಶೌಚಾಚಾರಸಮನ್ವಿತಾಃ ।
ಪದ್ಮಪತ್ರಸಮಾ ಜಿಹ್ವಾ ಸೂಕ್ಷ್ಮಾ ದೀರ್ಘಾ ಸು ಶೋಭನಾ ।
ಸ್ಥೂಲಾ ಚ ಸ ಚ ವಿಸ್ತೀರ್ಣಾ ಯೇಷಾಂ ತೇ ಮನುಜಾಧಿಪಾಃ ॥ ೫೮ ॥

ನಿಮ್ನಾ ಸ್ನಿಗ್ಧಾ ಚ ಹ್ರಸ್ವಾ ಚ ರಕ್ತಾಗ್ರಾ ರಸನಾ ಯದಿ ।
ಸರ್ವವಿದ್ಯಾಪ್ರವಕ್ತಾರಃ ತೇ ಭವಂತಿ ನ ಸಂಶಯಃ ॥ ೫೯ ॥

---

೫೬. ಮೂವತ್ತೆರಡು ಹಲ್ಲುಗಳುಳ್ಳವರು ರಾಜರಾಗುವರು. ಮೂವತ್ತೊಂದು ಹಲ್ಲು ಇರುವವರು ಸುಖಿಗಳಾಗುವರು. ಮೂವತ್ತು ಹಲ್ಲುಗಳು ಮಾತ್ರ ಇರುವವರಿಗೆ ಸುಖದುಃಖಗಳು ಬೆರಕೆಯಾಗಿರುತ್ತವೆ. ಮೂವತ್ತಕ್ಕಿಂತ ಕಡಮೆ ಹಲ್ಲುಳ್ಳವರು ಕೇವಲ ದುಃಖವನ್ನು ಹೊಂದತಕ್ಕವರು.

೫೭. ನಾಲಗೆ ಕಪ್ಪಾಗಿದ್ದವನು ಸೇವಕನಾಗುವನು. ನಾಲಗೆ ಸುರುಟಿಕೊಂಡು ಇರುವವನೂ, ದಪ್ಪವಾದ ನಾಲಗೆಯುವನೂ, ಒರಟು ನಾಲಗೆಯುವನೂ, ಕೋಪಶೀಲನಾಗುವನು.

೫೮. ಬಿಳಿಯ ನಾಲಗೆಯುಳ್ಳವರನ್ನು ಮಡಿ ಮುಂತಾದ ಆಚಾರವುಳ್ಳವರೆಂದು ತಿಳಿಯಬೇಕು. ತಾವರೆಯ ಎಸಳಿನಂತೆ ಸಮವಾಗಿಯೂ, ತೆಳ್ಳಗೂ, ಉದ್ದವಾಗಿಯೂ ಇರುವ ನಾಲಗೆಯು ಬಹಳ ಒಳ್ಳೆಯದೆಂದು ತಿಳಿಯಬೇಕು. ನಾಲಗೆಯು ಮಂದವಾಗಿಯೂ, ಅಗಲವಿಲ್ಲದೆಯೂ ಯಾರಿಗೆ ಇರುವುದೋ ಅವರು ರಾಜರು.

೫೯. ಯಾರ ನಾಲಗೆಯು ಹಳ್ಳವಾಗಿಯೂ ಮಿಂಚುತ್ತಲೂ ಮೋಟಾಗಿಯೂ ಕೆಂಪಾದ ತುದಿಯುಳ್ಳದ್ದಾಗಿಯೂ ಇರುವುದೋ, ಇವರು ಸಮಸ್ತ ವಿದ್ಯಾಬೋಧಕರಾಗುವರೆಂಬುವರಲ್ಲಿ ಸಂದೇಹವಿಲ್ಲ.

ವಿಕೃತಂ ಸ್ಫುಟಿತಂ ರೂಕ್ಷಂ ತಾಲುಕಂ ನ ಪ್ರಶಸ್ಯತೇ ।
ಸಿಂಹತಾಲುರ್ನರಪತಿಃ ಗಜತಾಲುಸ್ತಥೈವ ಚ ॥ ೬೦ ॥

ಪದ್ಮತಾಲುರ್ಭವೇದ್ರಾಜಾ ಶ್ವೇತತಾಲುರ್ಧನೇಶ್ವರಃ ।
ಕೃಷ್ಣತಾಲುರ್ನರೋ ಯಸ್ತು ಸ ಭವೇತ್ಕುಲನಾಶನಃ ।
ಸುಖಭಾಗೀ ದುಃಖಭಾಗೀ ಪೀತತಾಲುರ್ನರಾಧಿಪಃ ॥ ೬೧ ॥

ಹಂಸಸ್ವರಾ ನರಾ ಧನ್ಯಾ ಮೇಘಗಂಭೀರನಿಸ್ವನಾಃ ।
ಕ್ರೌಂಚಸ್ವನಾಶ್ಚ ರಾಜಾನಃ ಭೋಗವಂತೋ ಮಹಾಧನಾಃ ॥ ೬೨ ॥

ಚಕ್ರವಾಕಸ್ವನಾ ಧನ್ಯಾ ರಾಜಾನೋ ಧರ್ಮವತ್ಸಲಾಃ ।
ಕುಂಭಸ್ವನೋ ನರಪತಿಃ ದುಂದುಭಿಸ್ವನ ಏವ ಚ ।
ರೂಕ್ಷ ದೀರ್ಘಸ್ವರಾಃ ಕ್ರೂರಾಃ ಪಶೂನಾಂ ಸದೃಶಾ ನ ತು ॥ ೬೩ ॥

---

೬೦. ವಿಕಾರವಾದುದೂ, ಬಿರಿದುದೂ, ಕಠಿನವೂ, ಆದ ದವಡೆಯು ಪ್ರಶಸ್ತವಾದುದಲ್ಲ. ಸಿಂಹ, ಆನೆ, ಇವುಗಳ ದವಡೆಯಂತೆ ದವಡೆಯುಳ್ಳವನು ರಾಜನಾಗುವನು. ಕಮಲದ ಎಸಳಿನ ಬಣ್ಣದ ದವಡೆಯುಳ್ಳವನು ರಾಜನಾಗುವನು ಬಿಳಿಯ ದವಡೆಯುಳ್ಳವನು ಹಣಗಾರನಾಗುವನು.

೬೧. ಯಾವನಿಗೆ ದವಡೆಯು ಕಪ್ಪಾಗಿರುವುದೋ ಅವನು ವಂಶನಾಶಕ್ಕೆ ಕಾರಣನಾಗುವನು. ಯಾರ ದವಡೆಯು ಹಳದೀಬಣ್ಣವಾಗಿರ.ವುದೋ ಅವನು ಸುಖದುಃಖಗಳೆರಡಕ್ಕೂ ಭಾಗಿಯಾದ ರಾಜನಾಗುವನು.

೬೨. ಹಂಸದ ಧ್ವನಿಯಂತೆ ಧ್ವನಿಯುಕ್ತವಾದ ಕಂಠವುಳ್ಳವರು ಧನ್ಯರು. ಮೇಘದ ಗುಡುಗಿನಂತೆ ಗಂಭೀರಧ್ವನಿಯುಳ್ಳವರು ರಾಜರೋ, ಅಥವಾ ಧನಿಕರೋ ಆಗಿ ಸುಖವನ್ನು ಅನುಭವಿಸುತ್ತಾರೆ.

೬೩. ಚಕ್ರವಾಕಪಕ್ಷಿಯ ಧ್ವನಿಯಂತೆ ಧ್ವನಿಯುಳ್ಳವರು ಧರ್ಮಾಸಕ್ತಿಯುಳ್ಳವರಾಗಿ ಧನ್ಯರೆನಿಸಿದ ರಾಜರಾಗುವರು. ಘಟವಾದ್ಯದ ಧ್ವನಿಯುಳ್ಳವನೂ ನಗಾರಿಯಂತೆ ಧ್ವನಿಯುಳ್ಳವನೂ ಸಹ ರಾಜನೆನಿಸುವನು. ದೀರ್ಘವೂ ಕಠೋರವೂ ಆದ ಧ್ವನಿಯುಳ್ಳವನು ಕ್ರೂರನೆನಿಸುವನು. ಆದರೆ ಮೃಗಗಳ ಗುಂಪಿಗೆ ಸೇರಿಸುವಷ್ಟು ಕ್ರೂರನಲ್ಲ.

ಗುರ್ಗುರಸ್ವರಸಂಯುಕ್ತಾಃ ಪುರುಷಾಃ ಕ್ಲೇಶಭಾಗಿನಃ ।
ಚಾಪಸ್ವನಾ ಭಾಗ್ಯಯುತಾ ಭಿನ್ನಕಾಂಸ್ಯಸ್ವರಾಶ್ಚ ಯೇ ॥ ೬೪ ॥

ಕ್ಷೀಣಭಿನ್ನಸ್ವರಾ ಯೇ ಸ್ಯುಃ ಅಧಮಾಸ್ತೇ ಪ್ರಕೀರ್ತಿತಾಃ ।
ಪಾರ್ಥಿವಾಸ್ತನುನಾಸಾಶ್ಚ ದೀರ್ಘನಾಸಾಶ್ಚ ಭೋಗಿನಃ ।
ಹ್ರಸ್ವನಾಸಾ ನರಾ ಯೇ ತು ಧರ್ಮಶೀಲಾಸ್ತು ತೇ ಸ್ಮೃತಾಃ ॥ ೬೫ ॥

ಹಸ್ತ್ಯಶ್ವಸಿಂಹ ನಾಸಾಶ್ಚ ಸೂಚೀನಾಸಾಶ್ಚ ಯೇ ನರಾಃ ।
ತೇಷಾಂ ಸಿಧ್ಯತಿ ವಾಣಿಜ್ಯಂ ಹಯಾನಾಂ ಚೈವ ವಿಕ್ರಯಃ' ॥ ೬೬ ॥

ವಿಕೃತಾ ನಾಸಿಕಾ ಯಸ್ಯ ಸ್ಥೂಲಾಗ್ರಾ ರೂಪವರ್ಜಿತಾ ।
ಪಾಪಕರ್ಮಾ ಸ ವಿಜ್ಞೇಯಃ ಸಾಮುದ್ರವಚನಂ ಯಥಾ ॥ ೬೭ ॥

---

೬೪. ಗೊರಗುಟ್ಟುವ ಧ್ವನಿಯುಳ್ಳವರು ದುಃಖಕ್ಕೀಡಾಗುತ್ತಾರೆ. ಧನುಸ್ಸಿನ ಟಂಕಾರದ ಧ್ವನಿಯಂತೆ ಧ್ವನಿಯುಳ್ಳವರು ಭಾಗ್ಯಶಾಲಿಗಳಾಗುವರು. ಒಡಕಲು ಕಂಚಿನ ಧ್ವನಿಯಂತೆ ಧ್ವನಿಯುಳ್ಳವರು, ಕುಗ್ಗಿದ ಸ್ವರದವರು, ಒಡಕಲು ಧ್ವನಿಯವರು, ಇವರೆಲ್ಲಾ ಅಧಮವರ್ಗಕ್ಕೆ ಸೇರಿದವರು.

೬೫. ಮೂಗು ದಪ್ಪವಿಲ್ಲದೆ ಸಣ್ಣನಾಗಿರುವುದು ರಾಜಲಕ್ಷಣ. ಉದ್ದವಾದ ಮೂಗುಳ್ಳವರು ಸುಖವನ್ನು ಅನುಭವಿಸುತ್ತಾರೆ. ಮೋಟಕಾದ ಮೂಗು ಉಳ್ಳವರಾಗಿರುವುದು ಧರ್ಮಶೀಲರ ಲಕ್ಷಣವೆಂದು ತಿಳಿಯಬೇಕು.

೬೬. ಆನೆ, ಕುದುರೆ, ಸಿಂಹ ಇವುಗಳ ಮೂಗಿನಂತೆ ಮೂಗುಳ್ಳವರು, ಸೂಜಿಯಂತೆ ಮೊನಚಾದ ಮೂಗುಳ್ಳವರು, ಇವರಿಗೆ ವ್ಯಾಪಾರದಲ್ಲಿ ಪ್ರಯೋಜನವು ಸಿದ್ಧಿಸುವುದು. ಪ್ರಾಯಶಃ ಇವರುಗಳು ಕುದುರೆಗಳ ವ್ಯಾಪಾರ ಮಾಡುವರು.

೬೭. ಮೂಗಿನ ತುದಿಯು ದಪ್ಪವಾಗಿ ವಿಕಾರವಾಗಿದ್ದರೆ ಅವರು ಪಾಪಕಾರ್ಯವನ್ನು ಮಾಡುವರೆಂದು ಅಥವಾ ಪಾಪಕಾರ್ಯಗಳಲ್ಲಿ ಆಸಕ್ತರಾಗುವರೆಂದು ಸಾಮುದ್ರಿಕಾಶಾಸ್ತ್ರದಲ್ಲಿ ಹೇಳಿದೆ.

ದಾಡಿಮೀಪುಷ್ಪ ಸಂಕಾಶೇ ಭವೇತಾಂ ಯಸ್ಯ ಲೋಚನೇ ।
ಪುರುಷಃ ಸ ತು ವಿಜ್ಞೇಯಃ ಸಪ್ತದ್ವೀಪಾಧಿಪೋ ಗುಹ ॥ ೬೮ ॥

ವ್ಯಾಘ್ರಾಕ್ಷಾಃ ಕೋಪನಾ ಜ್ಞೇಯಾಃ ಕರ್ಕಟಾಕ್ಷಾಃ ಕಲಿಪ್ರಿಯಾಃ ।
ಬಿಡಾಲಹಂಸನೇತ್ರಾಶ್ಚ ಭವಂತಿ ಪುರುಷಾಧಮಾಃ ॥ ೬೯ ॥

ಮಯೂರನಕುಲಾಕ್ಷಾಶ್ಚ ನರಾಸ್ತೇ ಮಧ್ಯಮಾಃ ಸ್ಮೃತಾಃ ।
ನ ಶ್ರೀಸ್ತ್ಯಜತಿ ಸರ್ವಜ್ಞ ಪುರುಷಂ ಮಧುಪಿಂಗಳಂ ॥ ೭೦ ॥

ಆಪಿಂಗಲಾಕ್ಷಾ ರಾಜಾನಃ ಸರ್ವಭೋಗಸಮನ್ವಿತಾಃ ।
ರೋಚನಾ ಹರಿತಾಲಾಕ್ಷಾ ಗುಂಜಾಪಿಂಗಾ ಧನೇಶ್ವರಾಃ ।
ಬಲಸತ್ವಗುಣೋಪೇತಾಃ ಪೃಥಿವೀಚಕ್ರವರ್ತಿನಃ ॥ ೭೧ ॥

---

೬೮. ಅಯ್ಯಾ ಷಣ್ಮುಖನೇ! ಯಾವನ ಕಣ್ಣುಗಳು ದಾಳಿಂಬದ ಹೂವಿನ ಬಣ್ಣದಂತೆ ಬಣ್ಣವುಳ್ಳವಾಗಿರುವುವೋ ಅವನು ಸಪ್ತದ್ವೀಪಗಳಿಗೂ ಅಧಿಪತಿಯಾದ ರಾಜನಾಗುವನು.

೬೯. ಹುಲಿಯ ಕಣ್ಣಿನ ಬಣ್ಣದಂತೆ ಕಣ್ಬಣ್ಣವುಳ್ಳವನು ಕೋಪಶೀಲನಾಗುವನೆಂದು ತಿಳಿಯಬೇಕು. ಏಡಿಯ ಕಣ್ಣಿನಂತೆ ಕಣ್ಣುಳ್ಳವರು ಜಗಳದಲ್ಲಿ ಆಸಕ್ತರಾಗುವರು. ಬೆಕ್ಕಿನ ಕಣ್ಣು, ಹಂಸದ ಕಣ್ಣು ಇವುಗಳ ಬಣ್ಣದಂತಹ ಬಣ್ಣದ ಕಣ್ಣುಳ್ಳವರು ಅಧಮವರ್ಗದವರೆನಿಸುವರು.

೭೦. ನವಿಲು, ಮುಂಗುಸಿ ಇವುಗಳ ಕಣ್ಣಿನ ಬಣ್ಣದ ಕಣ್ಣುಳ್ಳವರು ಮಧ್ಯಮವರ್ಗದವರೆನಿಸುವರು. ಅಯ್ಯಾ ಸರ್ವಜ್ಞನೇ! ಜೇನುತುಪ್ಪದ ಬಣ್ಣದಂತೆ ಪಿಂಗಲವರ್ಣದ ಕಣ್ಣುಳ್ಳವನನ್ನು ಲಕ್ಷ್ಮಿಯು ಬಿಟ್ಟು ಕದಲುವುದಿಲ್ಲ ಎಂದರೆ ಅವನು ಸರ್ವದಾ ಧನಿಕನಾಗಿಯೇ ಇರುವನು.

೭೧. ರಾಜರುಗಳಿಗೆ ಸ್ವಲ್ಪ ಪಿಂಗಲವರ್ಣದ ಕಣ್ಣು ಇದ್ದರೆ ಸಮಸ್ತ ಭೋಗಗಳಿಂದಲೂ ಕೂಡಿದವರಾಗುವರು ಗೋರೋಚನ, ಅರಗು, ಗುಲಗುಂಜಿ, ಜೇನುತುಪ್ಪ ಇವುಗಳ ಬಣ್ಣದ ಕಣ್ಣುಳ್ಳವರೂ, ಬೆಕ್ಕಿನಕಣ್ಣಿನಂತೆ ಸ್ವಲ್ಪ ಹಸುರಾದ ಕಣ್ಣುಳ್ಳವರೂ ಹಣಗಾರರೋ, ಅಥವಾ ಶೌರ್ಯ ಪರಾಕ್ರಮದಿಂದ ಕೂಡಿದ ಚಕ್ರವರ್ತಿಗಳೋ ಆಗುವರು.

ದ್ವಿಮಾತ್ರಾವೀಕ್ಷಣಾ ನಿತ್ಯಂ ಜೀವಂತಿ ಪರಮಾಶ್ರಿತಾಃ ।
ತ್ರಿಮಾತ್ರಾಸ್ಯಂದಿನೋ ಜ್ಞೇಯಾಃ ಪುರುಷಾಃ ಸುಖಭಾಗಿನಃ ॥ ೭೨ ॥

ಚತುರ್ಮಾತ್ರಾನಿಮೇಷ್ಯೈಶ್ಚ ನಯನೈರೀಶ್ವರಾಃ ಸ್ಮೃತಾಃ ।
ದೀರ್ಘಾಯುಷೋಧರ್ಮರತಾಃ ಪಂಚಮಾತ್ರಾನಿಮೇಷಿಣಃ ॥ ೭೩ ॥

ಹ್ರಸ್ವಕರ್ಣಾ ಮಹಾಭಾಗಾ ಮಹಾಕರ್ಣಾಶ್ಚ ಯೇ ನರಾಃ ।
ಆವರ್ತಕರ್ಣಾ ಧನಿನಃ ಸ್ನಿಗ್ಧಕರ್ಣಾಸ್ತಥೈವ ಚ ॥ ೭೪ ॥

ದೀರ್ಘಾಯುಷಶ್ಶುಕ್ತಿಕರ್ಣಾಃ ಶಂಖಕರ್ಣಾ ಮಹಾಧನಾಃ ।
ದೀರ್ಘಾಯುಷೋ ದೀರ್ಘಕರ್ಣಾಃ ಲಂಬಕರ್ಣಾಸ್ತಪಸ್ವಿನಃ ॥ ೭೫ ॥

---

೭೨. ಎರಡು ಮಾತ್ರೆಗಳನ್ನುಚ್ಚರಿಸುವಷ್ಟು ಕಾಲ ಎವೆಯಿಕ್ಕದೆ ಇರುವವರು ಯಾವಾಗಲೂ ನಿರಾತಂಕದಿಂದ ಆಶ್ರಿತರಾಗಿ ಬಾಳುತ್ತಾರೆ. ಮೂರು ಮಾತ್ರೆಯನ್ನುಚ್ಚರಿಸುವಷ್ಟು ಕಾಲ ಎವೆಯಿಕ್ಕದೆ ಇರುವವರು ಸುಖವಾಗಿ ಬಾಳುವರು.

೭೩. ನಾಲ್ಕು ಮಾತ್ರೆಯಷ್ಟುಕಾಲ ಎವೆಯಿಕ್ಕದೆ ಇರುವ ಕಣ್ಣುಳ್ಳವರು ಅಧಿಕಾರಿಗಳಾಗುವರು. ಐದು ಮಾತ್ರೆಯನ್ನುಚ್ಚರಿಸುವಷ್ಟು ಕಾಲ ಎವೆಯಿಕ್ಕದವರು ಧರ್ಮಾಸಕ್ತರೂ ಬಹುಕಾಲ ಬದುಕತಕ್ಕವರೂ ಆಗುವರು.

೭೪. ಮೋಟಾದ ಕಿವಿಯುಳ್ಳವರು ಅದೃಷ್ಟಶಾಲಿಗಳು. ದೊಡ್ಡ ಕಿವಿಗಳನ್ನುಳ್ಳವರೂ, ಸುಳಿಯಂತಿರುವ ಕಿವಿಯುಳ್ಳವರೂ, ಮಿಂಚುತ್ತಿರುವ ಕಿವಿಯುಳ್ಳವರೂ ತುಂಬಾ ಹಣಗಾರರೆನಿಸುವರು.

೭೫. ಮುತ್ತಿನಚಿಪ್ಪಿನ ಆಕಾರದ ಕಿವಿಯುಳ್ಳವರು ತುಂಬಾ ಆಯಸ್ಸುಳ್ಳವರಾಗಿರುವರು. ಶಂಖದ ಒಳಭಾಗದಂತೆ ಸುರುಳಿಯಾದ ಕಿವಿಯುಳ್ಳವರು ತುಂಬಾ ಹಣಗಾರರಾಗುವರು. ಉದ್ದವಾದ ಕಿವಿಯುಳ್ಳವರು ತುಂಬಾ ಆಯಸ್ಸುಳ್ಳವರಾಗುವರು. ಜೋಲುಕಿವಿಯುಳ್ಳವರು ತಪಸ್ಸಿನಲ್ಲಿ ನಿರತರೆನಿಸಿಕೊಳ್ಳುವರು.

**ಲಲಾಟೇನಾರ್ಧಚಂದ್ರೇಣ ಭವಂತಿ ಪೃಥಿವೀಶ್ವರಾಃ ।**
**ವಿಪುಲೇನ ಲಲಾಟೇನ ಮಹಾಧನಪತಿಃ ಸ್ಮೃತಃ ।**
**ಸ್ವಲ್ಪೇನ ತು ಲಲಾಟೇನ ನರೋ ಧರ್ಮರತಃ ಸ್ಮೃತಃ　　॥ ೭೬ ॥**

**ರೇಖಾಃಪಂಚ ಲಲಾಟೇ ತು ಸ್ತ್ರಿಯಾ ವಾ ಪುರುಷಸ್ಯ ವಾ ।**
**ಶತಂ ಜೀವತಿ ವರ್ಷಾಣಾಮೈಶ್ವರ್ಯಂ ಚಾಧಿಗಚ್ಛತಿ　　॥ ೭೭ ॥**

**ಚತೂರೇಖಾಮಶೀತಿಂ ತು ತ್ರಿಭಿಸ್ಸಪ್ತತಿಮೇವ ಚ ।**
**ದ್ವಾಭ್ಯಾಂ ಷಷ್ಟಿಂ ತು ರೇಖಾಭ್ಯಾಂ ಚತ್ವಾರಿಂಶತ್ತಥೈಕಯಾ ।**
**ಅರೇಖೇನ ಲಲಾಟೇನ ವಿಜ್ಞೇಯಾ ಪಂಚವಿಂಶತಿಃ　　॥ ೭೮ ॥**

**ರೇಖಾಚ್ಛೇದೈಸ್ತು ವಿಜ್ಞೇಯಾ ಹೀನಮಧ್ಯೋತ್ತಮಾ ನರಾಃ ।**
**ಅಲ್ಪಾಯುಷಸ್ತಥಾಲ್ಪಾಭಿರ್ವ್ಯಾಧಿಭಿಃ ಪರಿಪೀಡಿತಾಃ　　॥ ೭೯ ॥**

---

೭೬. ಅರ್ಧಚಂದ್ರಾಕೃತಿಯಾದ ಹಣೆಯುಳ್ಳವರು ರಾಜರಾಗುತ್ತಾರೆ. ವಿಸ್ತಾರವಾದ ಹಣೆಯುಳ್ಳವನು ತುಂಬಾ ಧನವಂತನಾಗುತ್ತಾನೆಂದು ತಿಳಿಯಬೇಕು. ಕಿರಿದಾದ ಹಣೆಯುಳ್ಳವರು ಧರ್ಮದಲ್ಲಿ ಆಸಕ್ತರಾಗುವರೆಂದು ತಿಳಿಯಬೇಕು.

೭೭. ಹೆಂಗಸಿಗಾಗಲೀ ಗಂಡಸಿಗಾಗಲೀ ಹಣೆಯಲ್ಲಿ ಐದು ಗೆರೆಗಳಿದ್ದರೆ ನೂರು ವರ್ಷಗಳು ಬದುಕುವರು. ಅಲ್ಲದೆ ಐಶ್ವರ್ಯವನ್ನೂ ಸಂಪಾದಿಸುವರು.

೭೮. ಹಣೆಯಲ್ಲಿ ನಾಲ್ಕು ಗೆರೆಗಳಿದ್ದವರು ಎಂಭತ್ತು ವರ್ಷ ಜೀವಿಸುವರೆಂದೂ, ಮೂರು ರೇಖೆಗಳಿದ್ದವರಿಗೆ ಎಪ್ಪತ್ತುವರ್ಷ ಆಯಸ್ಸೆಂದೂ, ಹಣೆಯಲ್ಲಿ ಎರಡೇ ರೇಖೆಗಳಿದ್ದವರಿಗೆ ಅರವತ್ತುವರ್ಷ ಆಯಸ್ಸೆಂದೂ ಒಂದೇ ರೇಖೆಯಿದ್ದವರಿಗೆ ನಲವತ್ತುವರ್ಷ ಆಯಸ್ಸೆಂದೂ ಒಂದು ರೇಖೆಯೂ ಇಲ್ಲದಿರುವವರು ಇಪತ್ತೈದು ವರ್ಷ ಬದುಕುತ್ತಾರೆಂದೂ ತಿಳಿಯಬಹುದು.

೭೯. ಆ ರೇಖೆಗಳು ಮಧ್ಯೆ ಎಷ್ಟೆಷ್ಟು ತುಂಡು ಬಿದ್ದಂತಿರುವುದೋ ಅದರ ಮೇಲೆ ಅವರು ಹೀನರು, ಮಧ್ಯಮರು, ಉತ್ತಮರು, ಎಂಬುದನ್ನು ತಿಳಿಯಬೇಕು. ಈ ರೇಖೆ ಸಣ್ಣ ತುಂಡಾಗುವಂತೆ ಛೇದಿತವಾಗಿದ್ದರೆ ಅವರು ಆಯುಸ್ಸು ಕಡಮೆ ಉಳ್ಳವರೂ ರೋಗದಿಂದ ನರಳುವರೂ ಆಗುತ್ತಾರೆ.

ತ್ರಿಶೂಲಂ ಪಟ್ಟಿಶಂ ವಾಪಿ ಲಲಾಟೇ ಯಸ್ಯ ದೃಶ್ಯತೇ ।
ಈಶ್ವರಂ ತಂ ವಿಜಾನೀಯಾತ್ ಭೋಗಿನಂ ಕೀರ್ತಿಮಾಶ್ರಿತಂ ॥ ೮೦ ॥

ಉತ್ಕ್ರಾಂತನಿಮ್ನಂ ತು ಶಿರಃ ಸ್ವಲ್ಪೋಪಹತಮೇವ ಚ ।
ಚಂದ್ರಾಕಾರಂ ನರೇನ್ದ್ರಾಣಾಂ ಗವಾಢ್ಯಂ ಮಂಗಲಂ ಸ್ಮೃತಂ ॥ ೮೧ ॥

ವಿಷಮಂ ತು ದರಿದ್ರಾಣಾಂ ಶಿರೋದೀರ್ಘಂ ತು ದುಃಖಿನಾಃ ।
ನಾಗಕುಂಭನಿಭಂ ರಾಜ್ಞಃ ಸಮಂ ಸರ್ವತ್ರ ಭೋಗಿನಃ ॥ ೮೨ ॥

ಕಪಿಲೈಃ ಸ್ಫುಟಿತೈರೂಕ್ಷೈಃ ಸ್ಥೂಲೈಶ್ಚ ಶಿಖರೇಶಯೈಃ ।
ದುಃಖಿತಾಃ ಪುರುಷಾ ಜ್ಞೇಯಾ ರೋಮಶ್ಮಶ್ರುಭಿರೇವ ಚ ॥ ೮೩ ॥

---

೮೦. ಯಾರ ಹಣೆಯಲ್ಲಿ ತ್ರಿಶೂಲ, ಪಟ್ಟಬಂಧ, ಇವುಗಳ ಆಕಾರದ ರೇಖೆ ಇರುವುದೋ, ಆತನು ಕೀರ್ತಿವಂತನೂ ಸುಖಶಾಲಿಯೂ ಆದ ಅಧಿಕಾರಿಯಾಗುವನೆಂದು ತಿಳಿಯಬೇಕು.

೮೧. ಮೇಲಕ್ಕೆ ಉಬ್ಬಿದಂತಿದ್ದು ಹಳ್ಳವಾದುದೂ, ಸ್ವಲ್ಪ ತಟ್ಟಿದಂತಿರುವುದೂ, ಚಂದ್ರನಂತೆ ಗುಂಡಾಗಿರುವುದೂ, ಸುಂದರವಾದ ಕಣ್ಣು ಮೂಗು ಮುಂತಾದ ಇಂದ್ರಿಯಗಳಿಂದ ಕೂಡಿರುವುದೂ, ಆದ ಶಿರಸ್ಸು ರಾಜರಿಗೇ ಇರುವುದು. ಹಾಗಿರುವುದು ಅವರಿಗೆ ಮಂಗಳಕರ.

೮೨. ಯಾರ ತಲೆಯು ಬಟ್ಟಗೆ ಇರದೆ ಉಬ್ಬುತಗ್ಗಿನಿಂದ ಕೂಡಿರುವುದೋ ಅವರು ದರಿದ್ರರು. (ಸೌತೇಕಾಯಿಯಂತೆ) ಉದ್ದವಾದ ತಲೆಯವರು ಸದಾ ದುಃಖವನ್ನು ಅನುಭವಿಸುವರು. ಆನೆಯ ಕುಂಭಸ್ಥಳದಂತೆ ಉಬ್ಬಿ ಸರ್ವತ್ರ ಸಮವಾಗಿರುವ ತಲೆಯು ಸುಖಿಗಳಾದ ರಾಜರಿಗೆ ಇರುವುದು.

೮೩. ನೆತ್ತಿಯ (ತಲೆ) ಕೂದಲು, ಮೈಯ್ಯ ರೋಮ, ಮೀಸೆಯ ಕೂದಲು ಇವು ತುದಿಯಲ್ಲಿ ಬಗ್ಗಿಕೊಂಡು ಕಪಿಲವರ್ಣವಾಗಿಯೂ, ಕವಲೊಡೆದುಕೊಂಡೂ, ಒರಟಾಗಿಯೂ, ದಪ್ಪವಾಗಿಯೂ ಇರುವವರು ಕೇವಲ ದುಃಖಕ್ಕೆ ಗುರಿಯಾಗುವರೆಂದು ತಿಳಿಯಬೇಕು.

**ರೂಕ್ಷಾ ವಿವರ್ಣಾ ನಿಸ್ತೇಜಾಃ ಖರಾಃ ಸ್ಫುಟಿತಾಶ್ಚ ಮೂರ್ಧಜಾಃ ।**
**ನಾತಿಸ್ತೋಕಾ ನ ಬಹುಶೋ ಮೂರ್ಧಜಾ ದುಃಖಭಾಗಿನಃ ॥ ೮೮ ॥**

**ವಿರಲಾಶ್ಚ ಮೃದುಸ್ನಿಗ್ಧಾ ಭ್ರಮರಾಂಜನ ಸಪ್ರಭಾಃ ।**
**ಕೇಶಾ ಯಸ್ಯ ತು ದೃಶ್ಯಂತೇ ಸ ಭವೇತ್ ಪೃಥಿವೀಪತಿಃ ॥ ೮೯ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಚತುರ್ಥೀಕಲ್ಪೇ ಪುರುಷಲಕ್ಷಣವರ್ಣನಂನಾಮ ಷಡ್ವಿಂಶೋಽಧ್ಯಾಯಃ.**



---

೮೮. ಕೂದಲು ಒರಟಾಗಿಯೂ, ಮಾಸಲುಬಣ್ಣವಾಗಿಯೂ, ಕಾಂತಿಹೀನವಾಗಿಯೂ, ಮಿಂಚದೆಯೂ, ದಪ್ಪವಾಗಿಯೂ ಇದ್ದು, ಕೂದಲ ಗಂಟು ಅತಿಸಣ್ಣವಾಗಿದ್ದರೂ, ಅತಿ ದಪ್ಪವಾಗಿದ್ದರೂ ಅವರು ದುಃಖಕ್ಕೆ ಗುರಿಯಾಗುವರು.

೮೯. ಯಾವನ ಕೂದಲು ವಿರಳವಾಗಿಯೂ, ಮೆತ್ತಗೂ, ಮಿಂಚುತ್ತಲೂ, ಭ್ರಮರ, ಕಾಡಿಗೆ ಇವುಗಳಂತೆ ಕಪ್ಪುಬಣ್ಣವುಳ್ಳದ್ದೂ, ಆಗಿ ಕಾಣಿಸುವುದೋ ಆತನು ರಾಜನಾಗುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತವಿಂಶೋಽಧ್ಯಾಯಃ

---

॥ ಕಾರ್ತಿಕೇಯ ಉವಾಚ ॥

ಸಂಕ್ಷೇಪತೋ ಮಮ ವಿಭೋ ಲಕ್ಷಣಾನಿ ನೃಪಸ್ಯ ತು ।
ಶುಭಾನಿ ಚಾಂಗಜಾತಾನಿ ಬ್ರೂಹಿ ಮೇ ವದತಾಂ ವರ ॥ ೧ ॥

॥ ಬ್ರಹ್ಮೋವಾಚ ॥

ಶೃಣು ವಕ್ಷ್ಯೇಽಂಗಜಾತಾನಿ ಪಾರ್ಥಿವಸ್ಯ ಶುಭಾನಿ ಚ ।
ಪಾರ್ಥಿವೋ ಜ್ಞಾಯತೇ ಯೈಸ್ತು ನರಾಣಾಂ ಮಧ್ಯಭಾಗತಃ ॥ ೨ ॥

ತ್ರೀಣಿ ಯಸ್ಯ ಮಹಾಬಾಹೋ ವಿಪುಲಾನಿ ನರಸ್ಯ ತು ।
ಉನ್ನತಾನಿ ತಥಾ ಷಡ್ವೈ ಗಂಭೀರಾಣಿ ಚ ತ್ರೀಣಿ ಚ ॥ ೩ ॥

---

## ಇಪ್ಪತ್ತೇಳನೆಯ ಅಧ್ಯಾಯ

೧. ಷಣ್ಮುಖನು ಬ್ರಹ್ಮನನ್ನು ಪ್ರಶ್ನಿಸುತ್ತಾನೆ—ಸ್ವಾಮಿ ವಾಗ್ಮಿಶ್ರೇಷ್ಠನಾದ ವಿಭುವೆ! ರಾಜನ ಶುಭಲಕ್ಷಣಗಳನ್ನೂ ಶುಭಗಳಾದ ಅಂಗಗಳನ್ನೂ ಸಂಕ್ಷೇಪವಾಗಿ ಹೇಳು ಎಂದನು.

೨ ಬ್ರಹ್ಮನು ಹೇಳುತ್ತಾನೆ—ರಾಜನ ಶುಭಾಂಗಸಮುದಾಯಗಳನ್ನು ಹೇಳುವೆನು, ಕೇಳು. ಮನುಷ್ಯರಲ್ಲಿ ಯಾವ ಲಕ್ಷಣಗಳು ರಾಜಾರ್ಹಗಳೋ ಅವನ್ನೂ ಹೇಳುವೆನು.

೩. ಎಲೈ ಮಹಾಬಾಹುವೇ! ರಾಜರಾಗುವ ಮನುಷ್ಯರಿಗೆ ಮೂರು ಅಂಗಗಳು ಅಗಲವಾಗಿಯೂ ಆರು ಅಂಗಗಳು ಎತ್ತರವಾಗಿಯೂ ಮತ್ತು ವಿಸ್ತಾರವಾಗಿಯೂ ಮೂರು ಅಂಗಗಳು ಆಳವಾಗಿಯೂ ಇರಬೇಕು.

ಚತ್ವಾರಿ ಚಾಪಿ ಹ್ರಸ್ವಾನಿ ಸಪ್ತ ರಕ್ತಾನಿ ವಾ ವಿಭೋ ।
ದೀರ್ಘಾಣಿ ಚಾಪಿ ಸೂಕ್ಷ್ಮಾಣಿ ಭವಂತಿ ಯಸ್ಯ ಪಂಚ ವಾ ॥ ೪ ॥

ನಾಭಿಃ ಸಂಧಿಃ ಸ್ವನಶ್ಚೇತಿ ಗಂಭೀರಾಣಿ ಚ ತ್ರೀಣಿ ವೈ ।
ವದನಂ ಚ ಲಲಾಟಂ ಚ ದಂತೋತ್ತಮ ಉರಸ್ತಥಾ ॥ ೫ ॥

ವಿಸ್ತೀರ್ಣಮೇತತ್ತ್ರಿತಯಂ ವೀರ ಯಸ್ಯ ನರಸ್ಯ ತು ।
ಸ ರಾಜಾ ನಾತ್ರ ಸಂದೇಹಃ ಶೃಣುಷ್ವೋನ್ನತಾನಿ ಚ ॥ ೬ ॥

ಕೃಕಾಟಿಕಾ ತಥಾ ಚಾಸ್ಯಂ ನಖಾ ವಕ್ಷೋಽಥ ನಾಸಿಕಾ ।
ಕಕ್ಷೇ ಚಾಪಿ ಮಹಾಬಾಹೋ ಷಡೇತಾನಿ ವಿದುರ್ಬುಧಾಃ ॥ ೭ ॥

ಲಿಂಗಂ ಪೃಷ್ಠಂ ತಥಾ ಗ್ರೀವಾ ಜಂಘಾ ಹ್ರಸ್ವಾನಿ ಸುವ್ರತ ।
ನೇತ್ರಾಂತೇ ಹಸ್ತಪಾದೌ ತು ತಾಲ್ವೋಷ್ಠೌ ಚ ಸುರೋತ್ತಮ
ಜಿಹ್ವಾರಕ್ತಾನಖಾಶ್ಚೈವ ಸಪ್ತೈತಾನಿ ಮಹಾಮತೇ ॥ ೮ ॥

---

೪. ರಾಜನಿಗೆ ನಾಲ್ಕು ಅಂಗಗಳು ಮೋಟಾಗಿಯೂ, ಏಳು ಅಂಗಗಳು ಕೆಂಪಾಗಿಯೂ, ಐದು ಅಂಗಗಳು ಸಣ್ಣವಾಗಿಯೂ, ಇನ್ನೈದು ಅಂಗಗಳು ನೀಳ ವಾಗಿಯೂ ಇರಬೇಕು. (ಇದು ಸಂಗ್ರಹವಾದ ನಿರೂಪಣೆ ಇದರ ವಿವರವನ್ನು ಈ ಮುಂದೆ ಹೇಳಿದೆ.)

೫-೬. ಹೊಕ್ಕಳೂ ಎರಡೆರಡು ಅಂಗಗಳು ಸೇರುವ ಸಂಧಿಸ್ಥಳಗಳೂ, ಧ್ವನಿಯೂ, ಈ ಮೂರೂ ರಾಜರಿಗೆ ಗಂಭೀರವಾಗಿ ಇರಬೇಕಾದುವು. ಹೀಗಿದ್ದರೆ ಅವನು ರಾಜನು ಎಂಬುದರಲ್ಲಿ ಸಂಶಯವಿಲ್ಲ. ಇನ್ನು ಉನ್ನತವಾಗಿರಬೇಕಾದ ಅಂಗಗಳಾಗುವುದೆಂಬುದನ್ನು ಹೇಳುತ್ತೇನೆ ಕೇಳು.

೭. ಅಯ್ಯಾ ಮಹಾಬಾಹುವಾದ ಗುಹನೇ! ಕತ್ತಿನ ಹಿಂಭಾಗ (ಹೆಗ್ಗತ್ತು) ಮುಖ, ಉಗುರು, ಎದೆ, ಮೂಗು, ಎರಡುಕಂಕಳು ಈ ಆರೂ ರಾಜರಿಗೆ ಉನ್ನತ ವಾಗಿರಬೇಕಾದುವೆಂದು ವಿದ್ವಾಂಸರು ತಿಳಿದಿದ್ದಾರೆ.

೮. ಅಯ್ಯಾ ದೇವಶ್ರೇಷ್ಠನೆ! ಶಿಶ್ನ, ಬೆನ್ನು, ಕುತ್ತಿಗೆ, ಮೊಣಕಾಲು ಈ ನಾಲ್ಕೂ ಮೋಟಾಗಿರಬೇಕಾದ ಅವಯವಗಳು. ಕಡೆಗಣ್ಣುಗಳು, ಕೈಗಳು, ಕಾಲು ಗಳು, ಕೆನ್ನೆಗಳು, ತುಟಿಗಳು, ನಾಲಗೆ, ಉಗುರು ಇವು ಏಳೂ ಕೆಂಪಾಗಿರಬೇಕಾ ದುವು ಎಂದು ತಿಳಿಯಬೇಕು.

ತ್ವಚಃ ಕರರುಹಾಃ ಕೇಶಾಃ ದಶನಾ ರಶನಾ ತಥಾ ।
ಸೂಕ್ಷ್ಮಾಣ್ಯೇತಾನಿ ಚ ಗುಹ ಪಂಚ ಚಾಪಿ ವಿದುರ್ಬುಧಾಃ ॥ ೯ ॥

ನಾಸಿಕಾ ಲೋಚನೇ ಬಾಹೂ ಸ್ತನಯೋರಂತರಂ ಹನುಃ ।
ಇತಿ ದೀರ್ಘಮಿದಂ ಪ್ರೋಕ್ತಂ ಪಂಚಕಂ ಭೂಭುಜಾಂ ನೃಪ ॥ ೧೦ ॥

ಕ್ಷುತಂ ರಾಜ್ಞಾಂ ಸಕೃದ್ದ್ವಿಸ್ತ್ರಿರ್ನಾದಿತಂ ಹ್ರಾದಿತಂ ತಥಾ ।
ದೀರ್ಘಾಯುಷಾಂ ಪ್ರಯುಕ್ತಂ ತೇ ಹಸಿತಂ ಚ ವಿದುರ್ಬುಧಾಃ ॥ ೧೧ ॥

ಪದ್ಮಪತ್ರನಿಭೇ ನೇತ್ರೇ ಧನಿನಾಂ ಶಿವನಂದನ ।
ಭಾರ್ಗವೀಮಾಪ್ನುಯಾತ್ಸೋಽಪಿ ರಕ್ತಾಂತೇ ಯಸ್ಯ ಲೋಚನೇ ॥ ೧೨ ॥

ಮಧುಪಿಂಗೈರ್ಮಹಾತ್ಮಾನೋ ನರಾ ಜ್ಞೇಯಾ ಸುರಾಧಿಪ ।
ಭೀರವೋಹಿ ಕೃಶಾಕ್ಷಾಸ್ತು ಚೌರಾ ಮಂಡಲಚಕ್ರಕೈಃ ॥ ೧೩ ॥

---

೯. ಅಯ್ಯಾ ಋಭುಪುತ್ರಶ್ರೇಷ್ಠನಾದ ಗುಹನೇ! ಚರ್ಮ, ಉಗುರು, ಕೂದಲು, ಹಲ್ಲು ನಾಲಗೆ ಈ ಐದೂ ರಾಜರಿಗೆ ಸೂಕ್ಷ್ಮವಾಗಿರಬೇಕಾದುವು ಎಂದು ವಿದ್ವಾಂಸರ ಅಭಿಪ್ರಾಯ.

೧೦. ಅಯ್ಯಾ ಗುಹನೇ! ಮೂಗು, ಎರಡು ಕಣ್ಣುಗಳು, ಎರಡು ತೋಳುಗಳು, ಎರಡು ಸ್ತನಗಳಮಧ್ಯೆ ಇರುವ ಅಂತರ ಎಂದರೆ ಎದೆ, ಗಲ್ಲ, ಇವು ಐದೂ ರಾಜರಿಗೆ ದೀರ್ಘವಾಗಿರಬೇಕಾದ ಅವಯುವಗಳು.

೧೧. ಸಾಮಾನ್ಯ ಧ್ವನಿಯುಕ್ತವಾಗಿಯೋ ಮಹಾಶಬ್ದ ಯುಕ್ತವಾಗಿಯೋ ಇರುವ ಶೀನು ರಾಜರಿಗೆ ಒಂದುಸಲ, ಎರಡುಸಲ, ಅಥವಾ ಮೂರುಸಲ ಬರಬೇಕು. (ಇದಕ್ಕಿಂತ ಹೆಚ್ಚು ಬರತಕ್ಕದ್ದಲ್ಲ). ನಗುವೂ ಕೂಡ ಧ್ವನಿಯುಕ್ತವಾಗಿದ್ದರೆ ದೀರ್ಘಾಯಸ್ಸುಳ್ಳವನಾಗುತ್ತಾನೆಂದು ವಿದ್ವಾಂಸರು ತಿಳಿಯುತ್ತಾರೆ.

೧೨. ಅಯ್ಯಾ ಶಿವಸೂನುವೇ! ಕಣ್ಣೆರಡೂ ಕಮಲದ ಎಸಳುಗಳಂತೆ ಇರುತ್ತಾ ಕಣ್ಣಿನ ಒಂದು ತುದಿಯಲ್ಲಿ ಕೆಂಪಾಗಿರುವಂಥವನು ಧನಿಕರಲ್ಲಿ ಸಂಪೂರ್ಣ ಲಕ್ಷ್ಮೀಕಟಾಕ್ಷವನ್ನು ಪಡೆಯುತ್ತಾನೆ.

೧೩. ಅಯ್ಯಾ ದೇವಶ್ರೇಷ್ಠನೇ! ಜೇನು ತುಪ್ಪದಂತೆ ಹೊಂಬಣ್ಣದ ಕಣ್ಣುಳ್ಳವರು ಮಹಾತ್ಮರು ಎಂದು ತಿಳಿಯಬೇಕು. ಕಣ್ಣುಗಳು ಸಣ್ಣವಾಗಿದ್ದವರು ಅಂಜುಕುಳಿಗಳೂ, ಚಕ್ರದಂತೆ ದುಂಡಾದ ಕಣ್ಣುಳ್ಳವರು ಕಳ್ಳರೂ, ಆಗುವರು.

ಕ್ರೂರಾಃ ಕೇಕರನೇತ್ರಾಸ್ತು ಗಂಭೀರೈರರ್ಥಸಂಪದಃ ।
ಉತ್ಪಲಾಭೈರ್ವಿದ್ವಾಂಸೋ ಭೃಶಂ ಕೃಷ್ಣೈಸ್ತಥಾರ್ಥಿನಃ ।
ಮಂತ್ರಿತ್ವಂ ಸ್ಥೂಲಸದೃಶೋ ವದಂತಿ ಭುವಿ ತದ್ವಿದಃ ॥ ೧೪ ॥

ಶ್ಯಾಮಾಕ್ಷಾಃ ಸುಭಗಾ ಜ್ಞೇಯಾಃ ದೀನಾಕ್ಷೈಶ್ಚ ದರಿದ್ರತಾ ।
ವಿಸ್ತೀರ್ಣೈರ್ಭೋಗಿನೋ ಜ್ಞೇಯಾಃ ವಿಪುಲೈಶ್ಚ ತಥಾ ಗುಹ ॥ ೧೫ ॥

ಆಭ್ಯುನ್ನತಾಭಿರ್ಹ್ರಸ್ವಾಯುರ್ವಿಶಾಲಾಭಿಃ ಸುಖೀ ಭವೇತ್ ।
ದರಿದ್ರೋ ವಿಷಮಾಭಿಸ್ತು ತತೋ ಜ್ಞೇಯಃ ಸುರೋತ್ತಮ ॥ ೧೬ ॥

ಭ್ರುವೋ ಬಾಲೇಂದು ಸದೃಶಾ ಧನಿನಾಮಾರ್ಭವೋತ್ತಮ ।
ದೀರ್ಘಾಭಿರ್ನಿರ್ಧನೋ ಜ್ಞೇಯಃ ಸಂಸಕ್ತಾಭಿಸ್ತು ಸುವ್ರತ ॥ ೧೭ ॥

---

೧೪. ಆಶ್ಚರ್ಯಾದಿ ಭಾವಗಳಿಂದ ಕೂಡಿದವರಂತೆ ದುರುಗುಟ್ಟುವ (ಕೆಕ್ಕರಿಸಿ) ನೋಟವುಳ್ಳವರು ಕ್ರೂರರೆನಿಸುವರು. ನೋಟವು ಗಾಂಭೀರ್ಯದಿಂದ ಕೂಡಿದ್ದರೆ ಧನಸಂಪತ್ತುಳ್ಳವರಾಗುವರು. ಅಚ್ಚಕಪ್ಪು ಬಣ್ಣದ ಕರಿಯಗುಡ್ಡೆಯುಳ್ಳವರು ದ್ರವ್ಯವಂತರಾಗುವರು. ಸ್ಥೂಲವಾದ ಕಣ್ಣುಳ್ಳವರಾಗಿ ಒಳ್ಳೆಯ ದೃಷ್ಟಿಯುಳ್ಳವರು ಮಂತ್ರಿತ್ವವನ್ನು ಪಡೆಯುವರೆಂದು ತಿಳಿದವರು ಹೇಳುತ್ತಾರೆ.

೧೫. ಕರಿಯ ಗುಡ್ಡೆಯು ಅಚ್ಚಕಪ್ಪಗಿರುವವರು ಶುಭಲಕ್ಷಣರು ಎಂದು ತಿಳಿಯಬೇಕು. ದೈನ್ಯದ ನೋಟವು ಬಡವರ ಲಕ್ಷಣ. ಅಯ್ಯಾ ಗುಹನೇ ! ಕಣ್ಣುಗಳು ವಿಶಾಲವಾಗಿದ್ದವರು ಭೋಗಪಡತಕ್ಕವರೆಂದು ತಿಳಿಯಬೇಕು.

೧೬. ಅಯ್ಯಾ ದೇವಶ್ರೇಷ್ಠನೇ! ಕಣ್ಣುಗಳು ಉಬ್ಬಿಕೊಂಡು (ಗೆಡ್ಡೆಗಣ್ಣಾಗಿ) ಇದ್ದರೆ ಸ್ವಲ್ಪವೇ ಆಯುಸ್ಸುಳ್ಳವರಾಗುವರು. ಅಗಲವಾಗಿದ್ದರೆ ಸುಖಿಗಳಾಗುವರು. ಎರಡು ಕಣ್ಣುಗಳೂ ಒಂದೇ ಸಮವಾಗಿರದೆ ಒಂದು ದೊಡ್ಡದು ಒಂದು ಚಿಕ್ಕದು ಆಗಿದ್ದರೆ ಬಡವರಾಗುವರೆಂದು ತಿಳಿಯಬೇಕು.

೧೭. ಅಯ್ಯಾ ಸುವ್ರತನಾದ ಋಭುಪುತ್ರನೇ! ಧನಿಕರ ಹುಬ್ಬುಗಳು ಬಿದಿಗೆಯ ಚಂದ್ರನಂತೆ ಡೊಂಕಾಗಿರುತ್ತವೆ. ಹುಬ್ಬು ಅತಿ ನೀಳವಾಗಿದ್ದವರು ಧನಹೀನರು.

ಕ್ಷೀಣಾಭಿರರ್ಥಹೀನಾಃ ಸ್ಯುರ್ನರಾ ಜ್ಞೇಯಾ ಸುರೋತ್ತಮ ।
ಮಧ್ಯೇ ನತಭ್ರುವೋ ಯೇ ಚ ಪರದಾರರತಾಸ್ತು ತೇ ॥ ೧೮ ॥

ವಿರಲೈರುನ್ನತೈಃ ಶಂಖೈರ್ಧನ್ಯಾಃ ಸ್ಯುನ್ನಾತ್ರ ಸಂಶಯಃ ।
ನಿಮ್ನೈಃ ಸ್ತ್ರೀತ್ಯನ್ನಸಂಸಕ್ತಾ ಉನ್ನತೈಶ್ಚ ಜನಾಧಿಪಾಃ ॥ ೧೯ ॥

ವಿಷಮಲಲಾಟಾ ವಿಧನಾಃ ಸದಾ ಸ್ಯುರ್ದೇವಸತ್ತಮ ।
ಆಚಾರ್ಯಾಃ ಶುಕ್ತಿಸದೃಶೈರ್ನರಾಃ ಸ್ಯುರ್ನಾತ್ರ ಸಂಶಯಃ ॥ ೨೦ ॥

ಉನ್ನತಶಿರೋಭಿರಾಢ್ಯಾ ನರಾ ಜ್ಞೇಯಾಃ ಸದಾ ಗುಹ ।
ವಧಬಂಧಭಾಗಿನೋ ವೀರಾ ನರಾ ನಿಮ್ನಲಲಾಟಿನಃ ।
ಭೃಶಮುನ್ನತೈಶ್ಚ ಮೂರ್ಖಾಶ್ಚ ಕೃಪಣಾಶ್ಚ ತಥಾ ನತೈಃ ॥ ೨೧ ॥

---

೧೮. ಹುಬ್ಬುಗಳು ಒಂದಕ್ಕೊಂದು ಸೇರಿದ್ದರೂ, ತಗ್ಗಾಗಿ ಕೃಶವಾಗಿದ್ದರೂ, ದ್ರವ್ಯಹೀನರಾಗುವರು. ಯಾರ ಹುಬ್ಬುಗಳು ಮಧ್ಯದಲ್ಲಿ ತಗ್ಗಿರುವುದೋ ಅವನು ಪರಸ್ತ್ರೀಯರಲ್ಲಿ ಆಸಕ್ತನೆನಿಸುವನು.

೧೯. ಹುಬ್ಬಿನ ಕೂದಲು ದೂರದೂರವಾಗಿಯೂ, ಎತ್ತರವಾಗಿಯೂ, ಶಂಖ ದಂತೆ ಸುತ್ತಿಕೊಂಡೂ, ಇರುವವರು ಪುಣ್ಯಶಾಲಿಗಳೆಂಬುದರಲ್ಲಿ ಸಂಶಯವಿಲ್ಲ. ಹುಬ್ಬು ಕೆಳಗೆ ತಗ್ಗಿದಂತೆ ಇದ್ದರೆ ರಸಕವಳದಲ್ಲಿ ಆಸಕ್ತರೂ, ಉನ್ನತವಾಗಿದ್ದರೆ ರಾಜರೂ ಆಗುವರು

೨೦. ಅಯ್ಯಾ ದೇವಶ್ರೇಷ್ಠನೇ ! ಹಳ್ಳತಿಟ್ಟಾದ ಹಣೆಯುಳ್ಳವರು ಯಾವಾಗಲೂ ನಿರ್ಧನರಾಗಿರುವರು. ಕಪ್ಪೆಚಿಪ್ಪಿನಂತೆ ಇರುವ ಹಣೆಯುಳ್ಳವರು ಮಂತ್ರ ವ್ಯಾಖ್ಯಾತರಾದ ಆಚಾರ್ಯರಾಗುವರು ಎಂಬುದರಲ್ಲಿ ಸಂಶಯವಿಲ್ಲ.

೨೧. ಅಯ್ಯಾ ಗುಹನೇ ! ತಲೆ ಎತ್ತರವಾಗಿದ್ದ ಮನುಷ್ಯರು ಯಾವಾಗಲೂ ದ್ರವ್ಯ ಸಂಪತ್ತುಳ್ಳವರಾಗುವರು. ಹಳ್ಳವಾದ ಹಣೆಯುಳ್ಳಶೂರರು ಕೊಲೆಬಂಧನ ಇವುಗಳಿಗೆ ಒಳಗಾಗುತ್ತಾರೆ. ಹೀಗೆಂದು ತಲೆ ಬಹಳ ಎತ್ತರವಾಗಿದ್ದವರು ಮೂರ್ಖ ರಾಗುವರು. ತಲೆ ಯಾವಾಗಲೂ ಬಗ್ಗಿದ್ದರೆ ಕೃಪಣರಾಗುತ್ತಾರೆ.

**ಶುಭಾವಹಂ ಮನುಷ್ಯಾಣಾಂ ವದನಂ ಸ್ಯಾದ್ಯಥಾ ಶೃಣು ।**
**ಅದೀನಮಾನನಂ ಸ್ನಿಗ್ಧಂ ಸಸ್ಮಿತಂ ಚ ವಿಶೇಷತಃ ॥ ೨೨ ॥**

**ಸಾಶ್ರುದೀನಂ ತಥಾ ರೂಕ್ಷಮಸ್ನಿಗ್ಧಂ ನಿಂದಿತಂ ಗುಹ ।**
**ಅಸಂಭಾವ್ಯಂ ಮುಖಂ ಜ್ಞೇಯಂ ನರಾಣಾಂ ನಗದಾರಣ ॥ ೨೩ ॥**

**ಅಕಂಪಂ ಶುಭದಂ ಜ್ಞೇಯಂ ನರಾಣಾಂ ಹಸಿತಂ ಗುಹ ।**
**ನಿಮೀಲಿತಾಕ್ಷಂ ಪಾಪಸ್ಯ ಹಸಿತಂ ಚಾರ್ಭವೋತ್ತಮ ॥ ೨೪ ॥**

**ಆಮಂಡಲಂ ಶಿರೋ ಯಸ್ಯ ಸ ಗವಾಢ್ಯೋ ನರೋ ಭವೇತ್ ।**
**ಛತ್ರಾಕೃತಿ ಶಿರೋ ಯಸ್ಯ ಸ ಭವೇನ್ನೃಪತಿರ್ನರಃ ॥ ೨೫ ॥**

**ಚಿಪಿಟಾಕಾರಿತಶಿರಾ ಹನ್ಯಾದ್ವೈ ಪಿತರೌ ನರಃ ।**
**ಘಂಟಾಕೃತಿ ಶಿರೋಧ್ವಾನಮುಸಕೃತ್ ಸೇವತೇ ನರಃ ।**
**ನಿಮ್ನಂ ಶಿರೋಽನರ್ಥದಂ ಸ್ಯಾತ್ ನರಾಣಾಮಾರ್ಭವೋತ್ತಮ ॥ ೨೬ ॥**

---

೨೨. ಎಲೈ ಷಣ್ಮುಖನೇ! ಮನುಷ್ಯರ ಮುಖವು ಹೇಗಿದ್ದರೆ ಶುಭಕರವೋ ಅದನ್ನು ಹೇಳುತ್ತೇನೆ ಕೇಳು. ದೈನ್ಯವಿಲ್ಲದಿರುವ ಗೆಲುವಿನ ಮುಖವು ಮನೋಹರ ನಾಗಿರುವುದು. ಅದರಲ್ಲೂ ಮಂದಹಾಸಯುಕ್ತವಾಗಿ ಗೆಲುವಾಗಿರುವುದು ಬಹುಶ್ರೇಷ್ಠ.

೨೩. ಅಯ್ಯಾ ಕ್ರೌಂಚ ಪರ್ವತವನ್ನು ಸೀಳಿದ ಷಣ್ಮುಖನೇ! ಕಂಬನಿಗ ಳಿಂದ ಕೂಡಿಯೂ, ದೀನವಾಗಿಯೂ, ಒರಟಾಗಿಯೂ, ಮಿಂಚದೆಯೂ ನಿಂದಾರ್ಹ ವಾಗಿ ಅಸಹ್ಯಕರವಾಗಿಯೂ, ಇರುವ ಮುಖವು ಗೌರವಿಸಲು ಅನರ್ಹವಾದುದೆಂದು ತಿಳಿಯಬೇಕು.

೨೪. ಅಯ್ಯಾ ಋಭುಪುತ್ರಶ್ರೇಷ್ಠನೇ ಕೇಳು! ಮನುಷ್ಯರ ನಗುವಿನಲ್ಲಿ ನಡುಕವಿಲ್ಲದಿದ್ದರೆ ಶುಭಕರವೆಂದು ತಿಳಿಯಬೇಕು. ಕಣ್ಣುಮುಚ್ಚಿಕೊಂಡು ನಗು ವವನು ಪಾಪಿಷ್ಠನೆನಿಸುವನು.

೨೫. ಯಾರ ತಲೆಯು ಸರ್ವತಃ ಮಂಡಲಾಕಾರವಾಗಿರುವುದೋ ಅವನು ಬಹು ಗೋವುಗಳನ್ನುಳ್ಳವನಾಗುವನು. ಯಾವನ ತಲೆಯು ಛತ್ರಿಯ ಆಕಾರವಾಗಿ ರುವುದೋ ಅವನು ರಾಜನೆನಿಸುವನು.

೨೬. ಅವಲಕ್ಕಿಯಂತೆ ಚಪ್ಪಟೆಯಾದ ಶಿರಸ್ಸುಳ್ಳವನು ಮಾತಾಪಿತೃ ಘಾತಕ ನಾಗುವನು. ಗಂಟೆಯ ಆಕಾರದಂತೆ ತಲೆಯುಳ್ಳವನಾಗಿದ್ದರೆ ಪದೇ ಪದೇ ಮಾರ್ಗ

ಗುಡ್ಡೈಃ ಸ್ನಿಗ್ಧೈಸ್ತಥಾ ಕೃಷ್ಣೈರಭಿನ್ನಾಗ್ರೈಸ್ತಥೈವ ಹಿ ।
ಕೇಶೈರ್ನಚಾತಿ ವಿಪುಲೈರ್ಮೃದುಭಿಃ ಪಾರ್ಥಿವೋ ಭವೇತ್ ॥ ೨೭ ॥

ಬಹುಲಾಃ ಕಪಿಲಾಃ ಸ್ಥೂಲಾ ವಿಷಮಾ ಸ್ಫುಟಿತಾಸ್ತಥಾ ।
ಪರುಷಾ ಹ್ರಸ್ವಾತಿಕುಟಿಲಾ ದರಿದ್ರಾಣಾಂ ಕಚಾ ಘನಾಃ ॥ ೨೮ ॥

ಇತ್ಯುಕ್ತಂ ಲಕ್ಷಣಂ ನೃಣಾಂ ಶುಭಂ ವಾ ಶುಭಮೇವ ಚ ।
ಯೋಷಿತಾಂ ತದಿದಾನೀಂ ತೇ ಲಕ್ಷಣಂ ವಚ್ಮಿ ಭೀಮಜ ॥ ೨೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಚತುರ್ಥೀಕಲ್ಪೇ ಪುರುಷಲಕ್ಷಣ ವರ್ಣನಂ ನಾಮ ಸಪ್ತವಿಂಶೋಽಧ್ಯಾಯಃ.

---

ಪ್ರಯಾಣವೊದಗುವುದು. ಅಯ್ಯಾ ಋಭುಪುತ್ರ ಶ್ರೇಷ್ಠನೇ ! ತಲೆಯು ಹಳ್ಳವಾಗಿದ್ದವನಿಗೆ ಕೇಡುಂಟಾಗುತ್ತದೆ.

೨೭. ಬೆಲ್ಲದ ಬಣ್ಣವುಳ್ಳವೂ, ಮಿರಮಿರನೆ ಮಿಂಚುವುವೂ, ಕಪ್ಪಾಗಿರತಕ್ಕವೂ, ಕವಲು ಒಡೆಯದ ತುದಿಯುಳ್ಳವೂ, ಅತಿ ಹೆಚ್ಚು ಎನ್ನುವಂತೆ ಇರದವೂ, ಮೃದುವಾಗಿ ರೇಶ್ಮೆಯಂತಿರುವುವೂ ಆಗಿರುವ ಕೂದಲುಗಳಿಂದ ಕೂಡಿದವನು ರಾಜನಾಗುವನು.

೨೮. ಕೂದಲು ಅತಿತುಂಬಾಗಿಯೂ ಕಪಿಲವರ್ಣವಾಗಿಯೂ ಗಾತ್ರದಲ್ಲಿ ದಪ್ಪವೂ ವಿಷಮವಾಗಿಯೂ ತುದಿ ಒಡೆದುಕೊಂಡು ಒರಟಾಗಿಯೂ, ಬಹು ಗುಂಗುರಾಗಿಯೂ, ಇರುವವನು ದರಿದ್ರನಾಗುವನು.

೨೯. ಅಯ್ಯಾ ಭೀಮಪುತ್ರನಾದ ಷಣ್ಮುಖನೇ ! ಹೀಗೆ ಪುರುಷರ ಶುಭಲಕ್ಷಣ ಅಶುಭಲಕ್ಷಣಗಳನ್ನು ಹೇಳಿದುದಾಯಿತು. ಇನ್ನು ಹೆಂಗಸರ ಅಂಗಲಕ್ಷಣಗಳನ್ನು ಹೇಳುತ್ತೇನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಚತುರ್ಥೀ ಕಲ್ಪದಲ್ಲಿ ಪುರುಷಲಕ್ಷಣ ವರ್ಣನೆಯೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಾವಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಶೃಣ್ವಿದಾನೀಂ ಮಹಾಬಾಹೋ ಸ್ತ್ರೀಲಕ್ಷಣಮನುತ್ತಮಂ ।
ಯನ್ಮಯೋಕ್ತಂ ಪುರಾ ವೀರ ನಾರದಾಯ ಮಹಾತ್ಮನೇ ॥ ೧ ॥

ತತ್ತ್ವಂ ವಿಜ್ಞಾಯತೇ ಯೇನ ಶುಭಾ ಶುಭಮವಸ್ಥಿತಂ ।
ನಿಂದಿತಂ ಚ ಪ್ರಶಸ್ತಂ ಚ ಸ್ತ್ರೀಣಾಂ ವಕ್ಷ್ಯಾಮಿ ಲಕ್ಷಣಂ ॥ ೨ ॥

ಮಾತರಂ ಪಿತರಂ ಚೈವ ಭ್ರಾತರಂ ಮಾತುಲಂ ತಥಾ ।
ದ್ವೌ ತು ಬಿಂಬೌ ಪರೀಕ್ಷೇತ ಸಮುದ್ರಸ್ಯ ವಚೋ ಯಥಾ ॥ ೩ ॥

---

### ಇಪ್ಪತ್ತೆಂಟನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಅಯ್ಯಾ ಮಹಾಬಾಹುವೇ ! ಮಹಾತ್ಮನಾದ ನಾರದನಿಗೆ ಪೂರ್ವದಲ್ಲಿ ತಾನು ಶ್ರೇಷ್ಠವಾದ ಸ್ತ್ರೀ ಲಕ್ಷಣವನ್ನು ಹೇಳಿದ್ದೆನು. ಅದನ್ನೇ ಹೇಳುವೆನು ನೀನು ಈಗ ಕೇಳು.

೨. ಇದನ್ನು ಕೇಳಿದರೆ ಶುಭಲಕ್ಷಣ ಅಶುಭಲಕ್ಷಣಗಳ ಸ್ವರೂಪವು ತಿಳಿಯು ವುದಲ್ಲವೇ ? ಈಗ ಸ್ತ್ರೀಯರಲ್ಲಿ ಯಾವುದು ಉತ್ತಮ ಲಕ್ಷಣ ; ಯಾವುದು ದೂಷ್ಯ ಲಕ್ಷಣ ಎಂಬುದನ್ನು ಹೇಳುತ್ತೇನೆ.

೩. ಸ್ತ್ರೀಪರೀಕ್ಷೆ ಮಾಡಬೇಕಾದರೆ ತಾಯಿ, ತಂದೆ, ಸಹೋದರ, ಸೋದರ ಮಾವ, ಹೀಗೆ ಎರಡು ಕಡೆಯ ವ್ಯಕ್ತಿಗಳನ್ನೂ ಪರೀಕ್ಷಿಸಬೇಕು ಎಂದು ಸಾಮು ದ್ರಿಕಾ ಶಾಸ್ತ್ರದಲ್ಲಿ ಹೇಳಿದೆ.

ಮುಹೂರ್ತೇ ತಿಥಿಸಂಪನ್ನೇ ನಕ್ಷತ್ರೇ ಚಾಭಿಪೂಜಿತೇ ।
ದ್ವಿಜೈಸ್ತು ಸಹ ವಾ ಗತ್ವಾ ಕನ್ಯಾಂ ವೀಕ್ಷೇತ ಶಾಸ್ತ್ರವಿತ್ ॥ ೪ ॥

ಹಸ್ತೌ ಪಾದೌ ಪರೀಕ್ಷೇತ ಅಂಗುಲೀರ್ನಖಮೇವ ಚ ।
ಪಾಣಿಮೇವ ಚ ಜಂಘೇ ಚ ಕಟಿ ನಾಸೋರು ಏವ ಚ ॥ ೫ ॥

ಜಘನೋದರಪೃಷ್ಠಂ ಚ ಸ್ತನೌ ಕರ್ಣೌ ಭುಜೌ ತಥಾ ।
ಜಿಹ್ವಾಂ ಚೋಷ್ಠೌ ಚ ದಂತಾಶ್ಚ ಕಪೋಲಂ ಗಲಕಂ ತಥಾ ॥ ೬ ॥

ಚಕ್ಷುರ್ನಾಸಾ ಲಲಾಟಂ ಚ ಶಿರಃ ಕೇಶಾಂಸ್ತಥೈವ ಚ ।
ರೋಮರಾಜಿಂ ಸ್ವರಂ ವರ್ಣಮಾವರ್ತಾನಿ ತು ವಾ ಪುನಃ ॥ ೭ ॥

ಯಸ್ಯಾಸ್ತು ರೇಖಾ ಗ್ರೀವಾಯಾಂ ಯಾ ಚ ರಕ್ತಾಂತಲೋಚನಾ ।
ಯಸ್ಯ ಸಾ ಗೃಹಮಾಗಚ್ಛೇತ್ ತದ್ಗೃಹಂ ಸುಖಮೇಧತೇ ॥ ೮ ॥

ಲಲಾಟೇ ದೃಶ್ಯತೇ ಯಸ್ಯಾಃ ತ್ರಿಶೂಲಂ ದೇವನಿರ್ಮಿತಂ ।
ಬಹೂನಾಂ ಸ್ತ್ರೀ ಸಹಸ್ರಾಣಾಂ ಸ್ವಾಮಿನೀಂ ತಾಂ ವಿನಿರ್ದಿಶೇತ್ ॥ ೯ ॥

---

೪. ಶಾಸ್ತ್ರವನ್ನು ತಿಳಿದವನು ಶುಭತಿಥಿ, ವಾರ, ನಕ್ಷತ್ರಯುಕ್ತವಾದ ದಿನದ ಶುಭಲಗ್ನದಲ್ಲಿ ಬ್ರಾಹ್ಮಣರೊಡನೆ ಕೂಡಿ ಕನ್ಯೆ ಇರುವಲ್ಲಿಗೆ ಹೋಗಿ ಕನ್ಯಾಲಕ್ಷಣ ವನ್ನು ಪರೀಕ್ಷಿಸಬೇಕು.

೫–೭. ಎರಡುಕೈ, ಎರಡುಕಾಲು, ಇವುಗಳ ಬೆರಳುಗಳು, ಉಗುರು, ಕೈಯ್ಯ ಲ್ಲಿರುವ ಗೆರೆಗಳು, ಮೊಣಕಾಲು, ಸೊಂಟ, ಮೂಗು, ತೊಡೆ, ಕಿಬ್ಬೊಟ್ಟೆ, ಹೊಟ್ಟೆ, ಬೆನ್ನು, ಕುಚ, ಕಿವಿ. ಭುಜ, ನಾಲಗೆ, ಎರಡುತುಟಿಗಳು, ಹಲ್ಲುಗಳು, ಕೆನ್ನೆ, ಕುತ್ತಿಗೆ, ಕಣ್ಣು, ಮೂಗು, ಹಣೆ, ತಲೆ, ಕೂದಲು, ಮೈರೋಮ, ಕಂಠಧ್ವನಿ, ಮೈಬಣ್ಣ, ಸುಳಿ ಗಳು ಇವನ್ನೆಲ್ಲಾ ಪರೀಕ್ಷಿಸಬೇಕು.

೮. ಯಾವಳ ಕಂಠದಲ್ಲಿ ಗೆರೆಗಳಿರುವುವೋ, ಯಾವಳ ಕಡೆಗಣ್ಣು ಕೆಂಪಗಿರು ವುದೋ ಅವಳು ಯಾವನ ಮನೆಯನ್ನು ಸೇರಿದಾಗ್ಯೂ ಅವನು ಸುಖವಾಗಿ ವೃದ್ಧಿ ಯನ್ನು ಹೊಂದುವನು.

೯. ಯಾವಳ ಹಣೆಯಲ್ಲಿ ದೇವರು ತ್ರಿಶೂಲರೇಖೆಯನ್ನು ಕಲ್ಪಿಸಿ ಇರು ವನೋ ಅವಳು ಸಾವಿರಾರು ಸ್ತ್ರೀಯರಿಗೆ ಒಡತಿಯಾಗುವಳೆಂದು ಹೇಳುತ್ತಾರೆ.

**ರಾಜಹಂಸಗತಿರ್ಯಸ್ಯಾ ಮೃಗಾಕ್ಷೀ ಮೃಗವರ್ಣಿಕಾ ।**
**ಸಮಶುಕ್ಲಾಗ್ರದಂತಾ ಚ ಕನ್ಯಾಂ ತಾಮುತ್ತಮಾಂ ವಿದುಃ ॥ ೧೦ ॥**

**ಮಂಡೂಕಕುಕ್ಷೀ ಯಾ ಕನ್ಯಾ ನ್ಯಗ್ರೋಧಪರಿಮಂಡಲಾ ।**
**ಏಕಂ ಜನಯತೇ ಪುತ್ರಂ ಸೋಽಪಿ ರಾಜಾ ಭವಿಷ್ಯತಿ ॥ ೧೧ ॥**

**ಹಂಸಸ್ವರಾ ಮೃದುವಚಾ ಯಾ ಕನ್ಯಾ ಮಧುಪಿಂಗಲಾ ।**
**ಅಷ್ಟೌ ಜನಯತೇ ಪುತ್ರಾನ್ ಧನಧಾನ್ಯ ವಿವರ್ಧಿನೀ ॥ ೧೨ ॥**

**ಆಯತೌ ಶ್ರವಣೌ ಯಸ್ಯಾಃ ಸುರೂಪಾ ಚಾಪಿ ನಾಸಿಕಾ ।**
**ಭ್ರುವೌ ಚೇಂದ್ರಾಯುಧಾಕಾರೌ ಸಾತ್ಯಂತಂ ಸುಖಭಾಗಿನೀ ॥ ೧೩ ॥**

**ತನ್ವೀ ಶ್ಯಾಮಾ ತಥಾ ಕೃಷ್ಣಾ ಸ್ನಿಗ್ಧಾಂಗೀ ಮೃದುಭಾಷಿಣೀ ।**
**ಶಂಖಕುಂದೇಂದುದಶನಾ ಭವೇದೈಶ್ವರ್ಯಭೋಗಿನೀ ॥ ೧೪ ॥**

---

೧೦. ಯಾವಳ ನಡಗೆಯು ರಾಜಹಂಸದ ನಡಗೆಯಂತೆಯೂ, ಮೈಬಣ್ಣವು ಜಿಂಕೆಯ ಬಣ್ಣದ ಹಾಗೂ ಇರುವುದೋ, ಅಂತಹವಳು ಉತ್ತಮವಾದ ಕನ್ಯೆಯೆಂದು ತಿಳಿಯಬೇಕು.

೧೧. ಕಪ್ಪೆಯ ಹೊಟ್ಟೆಯಂತೆ ಹೊಟ್ಟೆಯುಳ್ಳವಳೂ, ಆಲದ ಮರವು ಹರಡಿಕೊಂಡಿರುವಂತೆ ಸುತ್ತಲೂ ವಿಸ್ತರಿಸಿದ ಅವಯವವುಳ್ಳವಳೂ, ಆದ ಯುವತಿಯು ರಾಜಲಕ್ಷಣವುಳ್ಳ ಮಗನನ್ನು ಪಡೆಯುವಳು. ಅವನು ರಾಜನಾಗುವನು.

೧೨. ಯಾವ ಕನ್ಯೆಯು ಹಂಸಧ್ವನಿಯಂತೆ ಧ್ವನಿಯುಳ್ಳವಳೂ, ಮೃದುವಾಗಿ ಮಾತನಾಡುವಳೂ, ಜೇನುತುಪ್ಪದ ಬಣ್ಣದಂತೆ ಮೈಬಣ್ಣವುಳ್ಳವಳೂ, ಆಗಿರುವಳೋ ಅವಳು ಎಂಟು ಗಂಡು ಮಕ್ಕನ್ನು ಹಡೆಯುತ್ತಾಳೆ. ಮತ್ತು ಅವಳಿಂದ ಧನಧಾನ್ಯಗಳು ಅಭಿವೃದ್ಧಿಯಾಗುತ್ತದೆ.

೧೩. ವಿಶಾಲವಾದ ಕಿವಿ, ಸುಂದರವಾದ ಮೂಗು, ಕಾಮನ ಬಿಲ್ಲಿನಂತಿರುವ ಹುಬ್ಬು ಇವನ್ನುಳ್ಳವಳು ಸುಖಪಡುತ್ತಾಳೆ

೧೪. ಎಷ್ಟುಮಟ್ಟಿಗೆ ಕೃಶವಾಗಿರುವುದು ಅಂದವೋ ಅಷ್ಟರಮಟ್ಟಿಗೆ ತೆಳ್ಳಗಿರುವ ಅವಯವವುಳ್ಳವಳೂ, ಯೌವನ ಮಧ್ಯಸ್ಥೆಯೂ, ಶ್ಯಾಮವರ್ಣದವಳೂ, ಮಿಂಚುವ ಮೈಯುಳ್ಳವಳೂ, ಮೃದುಧ್ವನಿಯಿಂದ ಮಾತಾಡುವವಳೂ, ಶಂಖ,

ವಿಸ್ತೀರ್ಣಂ ಜಘನಂ ಯಸ್ಯಾ ವೇದಿಮಧ್ಯಾ ತು ಯಾ ಭವೇತ್ ।
ಆಯತೇ ವಿಪುಲೇ ನೇತ್ರೇ ರಾಜಪತ್ನೀ ತು ಸಾ ಭವೇತ್ ॥ ೧೫ ॥

ಯಸ್ಯಾಃ ಪಯೋಧರೇ ವಾಮೇ ಹಸ್ತೇ ಕರ್ಣೇ ಗಲೇ ಪಿ ವಾ ।
ಮಶಕಂ ತಿಲಕಂ ವಾಪಿ ಸಾ ಪೂರ್ವಂ ಜನಯೇತ್ಸುತಂ ॥ ೧೬ ॥

ಗೂಢ ಗುಲ್ಫಾಂಗುಲಿಶಿರಾ ಅಲ್ಪಪಾರ್ಷ್ಣಿಃ ಸುಮಧ್ಯಮಾ ।
ರಕ್ತಾಕ್ಷೀ ರಕ್ತಚರಣಾ ಸಾತ್ಯಂತಂ ಸುಖಭಾಗಿನೀ ॥ ೧೭ ॥

ಕೂರ್ಮಪೃಷ್ಠಾಯತನಖೌ ಸಿಗ್ಧಭಾವವಿವರ್ಜಿತೌ ।
ವಕ್ರಾಂಗುಲಿತಲೌ ಪಾದೌ ಕನ್ಯಾಂ ತಾಂ ಪರಿವರ್ಜಯೇತ್ ॥ ೧೮ ॥

---

ಮಲ್ಲಿಗೆಯ ಹೂ, ಚಂದ್ರಬಿಂಬ ಇವುಗಳಂತೆ ಶುಭ್ರವಾದ ಹಲ್ಲುಳ್ಳವಳೂ ಆದ ಸ್ತ್ರೀಯು ತುಂಬಾ ಧನವತಿಯಾಗಿ ಬಾಳುವಳು.

೧೫. ಯಾವಳ ಕಿಬ್ಬೊಟ್ಟೆಯ ಪ್ರದೇಶವು ವಿಶಾಲವಾಗಿಯೂ ಜಘನವು ಮಧ್ಯೆ ದುಂಡಾದ ಅಗ್ನಿಕುಂಡದ ಜಗಲಿಯಂತೆಯೂ ಇರುವುದೋ ಮತ್ತು ಯಾವಳ ಕಣ್ಣು ನೀಳವಾಗಿಯೂ ಅಗಲವಾಗಿಯೂ ಇರುವುವೋ ಅವಳು ಮಹಾರಾಣಿ ಯಾಗುವಳು.

೧೬. ಯಾವಳ ಎಡಗಡೆಯಸ್ತನ, ಎಡಗೈ, ಎಡಗಿವಿ, ಕುತ್ತಿಗೆಯ ಎಡಪಾರ್ಶ್ವ ಇವುಗಳಲ್ಲಿ ಯಾವುದರಲ್ಲಾಗಲಿ ಸೊಳ್ಳೆಯ ಪ್ರಮಾಣದ ಚುಕ್ಕಿ (ಸಂಗಾತಿ) ಇರುತ್ತಿದ್ದರೆ ಅವಳು ಶ್ರೇಷ್ಠವಾದ ಗಂಡುಮಗುವನ್ನು ಪಡೆಯುತ್ತಾಳೆ.

೧೭. ಹರಡುಗಳು, ಬೆರಳ ತುಗುರುಗಳು ಇವು ಪ್ರಕಟವಾಗಿ ಕಾಣಿಸದಂತೆ ಅಡಗಿಕೊಂಡೂ, ಹಿಮ್ಮಡಿ, ಸೊಂಟ, ಇವು ಸಣ್ಣಗೆ ಚೆಲುವಾಗಿಯೂ, ಕಣ್ಣುಗಳೂ ಕಾಲೂ ಕೆಂಪಗೂ, ಇರುವವಳು ತುಂಬಾ ಸುಖಪಡುವಳು.

೧೮. ಯಾವಳ ಪಾದಗಳು ಆಮೆಯ ಬೆನ್ನಿನ ಮೇಲಿರುವ ಗೆರೆಯಂತೆ ಅಗಲವಾಗಿ ಮಿಂಚದೆ ಇರುವ ಉಗುರುಳ್ಳವೂ, ಡೊಂಕಾದ ಬೆರಳುಳ್ಳವೂ, ಆಗಿರುವುವೋ ಅಂತಹ ಕನ್ಯೆಯನ್ನು ಪರಿತ್ಯಾಗಮಾಡಬೇಕು.

**ಯೇನಕೇನಚಿದಂಶೇನ ಮಾಂಸಂ ಯಸ್ಯಾ ವಿವರ್ಧತೇ ।**
**ರಾಸಭೀಂ ತಾದೃಶೀಂ ವಿದ್ಯಾತ್ ನ ಸಾ ಕಲ್ಯಾಣಮರ್ಹತಿ ॥ ೧೯ ॥**

**ಪಾದೇ ಪ್ರದೇಶಿನೀ ಯಸ್ಯಾ ಅಂಗುಷ್ಠಂ ಸಮತಿಕ್ರಮೇತ್ ।**
**ದುಶ್ಶೀಲಾ ದುರ್ಭಗಾ ಜ್ಞೇಯಾ ಕನ್ಯಾಂ ತಾಂ ಪರಿವರ್ಜಯೇತ್ ॥ ೨೦ ॥**

**ಪಾದೇ ಮಧ್ಯಮಿಕಾ ಯಸ್ಯಾಃ ಕ್ಷಿತಿಂ ನ ಸ್ಪೃಶತೇ ಯದಿ ।**
**ರಮತೇ ಸಾ ನ ಕೌಮಾರೇ ಸ್ವಚ್ಛಂದಾ ಕಾಮಚಾರಿಣೀ ॥ ೨೧ ॥**

**ಪಾದೇ ಅನಾಮಿಕಾ ಯಸ್ಯಾಃ ಕ್ಷಿತಿಂ ನ ಸ್ಪೃಶತೇ ಯದಿ ।**
**ದ್ವಿತೀಯಂ ಪುರುಷಂ ಹತ್ವಾ ತೃತೀಯೇ ಸಾ ಪ್ರತಿಷ್ಠಿತಾ ॥ ೨೨ ॥**

**ಪಾದೇ ಕನಿಷ್ಠಾ ಯಸ್ಯಾಸ್ತು ಕ್ಷಿತಿಂ ನ ಸ್ಪೃಶತೇ ಯದಿ ।**
**ದ್ವಿತೀಯಂ ಪುರುಷಂ ಹತ್ವಾ ತೃತೀಯೇ ಸಾ ಪ್ರತಿಷ್ಠಿತಾ ॥ ೨೩ ॥**

---

೧೯. ಯಾವಳಿಗೆ ದೇಹದ ಯಾವುದಾದರೂ ಒಂದು ಭಾಗದಲ್ಲಿ ದುರ್ಮಾಂಸವು ಬೆಳೆದು ಬರುತ್ತಿರುವುದೋ ಅಂತಹವಳನ್ನು ಕತ್ತೆಯ ಸಮವೆಂದು ತಿಳಿಯಬೇಕು. ಅಂಥ ಕನ್ಯೆಯು ಮಂಗಳಕಾರ್ಯಕ್ಕೆ ಅರ್ಹಳಲ್ಲ

೨೦. ಯಾವಳ ಪಾದದಲ್ಲಿರುವ ಹೆಬ್ಬೆಟ್ಟಿನಪಕ್ಕದ ಬೆರಳು ಅಂಗುಷ್ಠವನ್ನು ಮೀರಿ ಮುಂದಕ್ಕೆ ಬಂದಿರುವುದೋ ಅವಳು ದುಸ್ಸ್ವಭಾವದವಳೆಂದೂ, ದುರದೃಷ್ಟ ಶಾಲಿನಿಯೆಂದೂ, ತಿಳಿದು ಪರಿತ್ಯಾಗಮಾಡಬೇಕು.

೨೧ ಯಾವಳ ಪಾದದ ಮಧ್ಯದ ಬೆರಳು ಭೂಮಿಗೆ ತಗುಲುವಂತಿರುವುದಿಲ್ಲವೋ ಆಕೆಯು ಕೌಮಾರ ವಯಸ್ಸಿನಲ್ಲೂ ಸುಖಪಡುವುದಿಲ್ಲ. ಮತ್ತು ಕಾಮ ಸುಖಕ್ಕಾಗಿ ತನ್ನ ಇಷ್ಟಬಂದಂತೆ ಹೊರಗೆ ಓಡಾಡುತ್ತಾಳೆ.

೨೨–೨೩. ಯಾವಳ ಕಾಲಿನ ನಾಲ್ಕನೆಯ ಮತ್ತು ಐದನೆಯ ಬೆರಳುಗಳು ಭೂಮಿಯನ್ನು ಸೋಕುವುದಿಲ್ಲವೋ ಆಕೆಯ ವಿವಾಹ ಪ್ರಸಕ್ತಿಮಾತ್ರದಿಂದಲೇ ಇಬ್ಬರು ಗಂಡಸರಿಗೆ ಮರಣ ಪ್ರಾಪ್ತಿಯಾಗಿ ಮೂರನೆಯವನಲ್ಲಿ ನೆಲೆಗೊಂಡಿರುವಳು.

ನ ದೇವಿಕಾ ನ ಧನಿಕಾ ನ ಧಾನ್ಯಪ್ರತಿನಾಮಿಕಾ ।
ಗುಲ್ಮವೃಕ್ಷ ಸನಾಮ್ನೀ ಚ ಕನ್ಯಾಂ ತಾಂ ಪರಿವರ್ಜಯೇತ್ ॥ ೨೪ ॥

ಇಂದ್ರಚಂದ್ರಾದಿಪುರುಷಸನಾಮ್ನೀ ಚ ಯದಾ ಭವೇತ್ ।
ನೈತಾಃಪತಿಷು ರಜ್ಯಂತೇ ಯಾಶ್ಚ ನಕ್ಷತ್ರನಾಮಿಕಾಃ ॥ ೨೫ ॥

ಆವರ್ತಃ ಪೃಷ್ಠತೋ ಯಸ್ಯಾ ನಾಭಿಂ ಸಮನುವಿಂದತಿ ।
ತದಪತ್ಯಂ ಭವೇದ್ಧ್ರಸ್ವಂ ಹಸ್ವಾಯುಶ್ಚ ವಿನಿರ್ದಿಶೇತ್ ॥ ೨೬ ॥

ಪೃಷ್ಠಾವರ್ತಾ ಪತಿಂ ಹಂತಿ ನಾಭ್ಯಾವರ್ತಾ ಪತಿವ್ರತಾ ।
ಕಟ್ಯಾವರ್ತಾ ತು ಸ್ವಚ್ಛಂದಾ ನ ಕದಾಚಿದ್ವಿರಜ್ಯತೇ ॥ ೨೭ ॥

ಯಸ್ಯಾಸ್ತು ಹಸಮಾನಾಯಾಃ ಗಂಡೇ ಜಾಯೇತ ಕೂಪಕಂ ।
ರಮತೇ ಸಾ ನ ಕೌಮಾರೇ ಸ್ವಚ್ಛಂದಾ ಕಾರ್ಯಕಾರಿಣೀ ॥ ೨೮ ॥

---

೨೪. ದೇವಿಕಾನದಿಯ ಹೆಸರನ್ನಿಟ್ಟುಕೊಂಡಿರುವವಳೂ, ಜೂಜುಗಾರಳೂ, ಧಾನ್ಯದ ಪ್ರತಿನಾಮವುಳ್ಳವಳೂ, ಹೆಂಡತಿಯಾಗಲು ಅರ್ಹಳಲ್ಲ. ಪೊದೆಗಳು, ವೃಕ್ಷಗಳು ಇವುಗಳ ಹೆಸರಿನವರನ್ನೂ ಮದುವೆಯಾಗಬಾರದು.

೨೫. ಇಂದ್ರ, ಚಂದ್ರ ಮೊದಲಾಗಿರುವ ಪುರುಷರ ನಾಮಗಳುಳ್ಳವರೂ ಪತಿಯಲ್ಲಿ ಅನುರಕ್ತರಾಗುವುದಿಲ್ಲ. ನಕ್ಷತ್ರದ ಹೆಸರನ್ನಿಟ್ಟುಕೊಂಡಿರುವವರೂ ಹಾಗೆಯೇ ಪತಿಯಲ್ಲಿ ಅನುರಕ್ತೆಯಲ್ಲ.

೨೬. ಯಾವಳಿಗೆ ಬೆನ್ನಿನಿಂದ ಸುಳಿಯು ಹೊರಟು ಹೊಕ್ಕಳನ್ನು ತಲಪುವುದೋ ಅವಳಿಗೆ ಮೋಟು ಮಕ್ಕಳೂ, ಅಲ್ಪಾಯುಗಳೂ, ಜನಿಸುವರು.

೨೭. ಪೃಷ್ಠದಲ್ಲಿ ಸುಳಿಯುಳ್ಳವಳು ಗಂಡನನ್ನು ಕಳೆದುಕೊಳ್ಳುವಳು. ಹೊಕ್ಕುಳಿನಲ್ಲಿ ಸುಳಿಯಿದ್ದರೆ ಪತಿವ್ರತೆಯಾಗುವಳು. ಸೊಂಟದಲ್ಲಿ ಸುಳಿಯುಳ್ಳವಳು ಮನಸ್ಸು ಬಂದ ಹಾಗೆ ನಡೆವಳು, ಎಂದಿಗೂ ಅವಳಿಗೆ ವೈರಾಗ್ಯವು ಹುಟ್ಟುವುದೇ ಇಲ್ಲ.

೨೮. ಯಾವಳು ನಗುತ್ತಿರುವಾಗ ಕೆನ್ನೆಯಲ್ಲಿ (ಹಳ್ಳ) ಗುಳಿಬೀಳುವುದೋ ಅವಳಿಗೆ ಕೌಮಾರ ವಯಸ್ಸಿನಲ್ಲಿ ನೆಮ್ಮದಿಯಿಲ್ಲ. ಸ್ವೇಚ್ಛಾಚಾರಿಣಿಯಾಗುವಳು.

**ಯಸ್ಯಾಸ್ತು ಗಚ್ಛಮಾನಾಯಾಶ್ಚಿಟ್ಟೇಕಾಯತಿ ಜಂಘಿಕಾ ।**
**ಪುತ್ರಂ ವ್ಯವಸ್ಯೇತ್ಸಾ ಕರ್ತುಂ ಪತಿತ್ವೇ ನಾತ್ರ ಸಂಶಯಃ　　॥ ೨೯ ॥**

**ಸ್ಥೂಲಪಾದಾ ಚ ಯಾ ಕನ್ಯಾ ಸರ್ವಾಂಗೇಷು ಚ ಲೋಮಶಾ ।**
**ಸ್ಥೂಲಹಸ್ತಾ ಚ ಯಾಸ್ಯಾದ್ವೈ ದಾಸೀಂ ತಾಂ ನಿರ್ದಿಶೇದ್ಬುಧಃ　　॥ ೩೦ ॥**

**ಯಸ್ಯಾಶ್ಚೋತ್ಕಟಿಕೌ ಪಾದೌ ಮುಖಂ ಚ ವಿಕೃತಂ ಭವೇತ್ ।**
**ಉತ್ತರೋಷ್ಠೇ ಚ ರೋಮಾಣಿ ಸಾಕ್ಷಿಪ್ರಂ ಭಕ್ಷಯೇತ್ಪತಿಂ　　॥ ೩೧ ॥**

**ತ್ರೀಣಿ ಯಸ್ಯಾಃ ಪ್ರಲಂಬಂತೇ ಲಲಾಟಮುದರಂ ಸ್ಫಿಚೌ ।**
**ತ್ರೀಣಿ ಭಕ್ಷಯತೇ ಸಾ ತು ದೇವರಂ ಶ್ವಶುರಂ ಪತಿಂ　　॥ ೩೨ ॥**

**ಸಮುದ್ಭೂಷಿತ ಚಾರಿತ್ರಾ ಗುರುಭಕ್ತಾ ಪತಿವ್ರತಾ ।**
**ದೇವಬ್ರಾಹ್ಮಣ ಭಕ್ತಾ ಚ ಮಾನುಷೀಂ ತಾಂ ವಿನಿರ್ದಿಶೇತ್　　॥ ೩೩ ॥**

---

೨೯. ನಡೆಯುತ್ತಿರುವಾಗ ಯಾವಳ ಮೊಣಕಾಲಿನಲ್ಲಿ ನೆಟ್ಟಿಗೆಗಳು ಬರುತ್ತವೆಯೋ ಅವಳು ಪುತ್ರನ ಸಂಗಡ ಕೂಡ ಸಮಾಗಮಮಾಡಬೇಕೆಂದು ಇಚ್ಛಿಸುತ್ತಾಳೆ. ಎಂದರೆ ಅಂತಹ ಕಾಮುಕಿಯಾಗುವಳು ಇದಕ್ಕೇನೂ ಸಂಶಯವಿಲ್ಲ.

೩೦. ಯಾವಳ ಪಾದಗಳು ದಪ್ಪವಾಗಿರುವುವೋ, ಯಾವಳಿಗೆ ಸರ್ವಾಂಗದಲ್ಲಿಯೂ ರೋಮಗಳಿರುವುವೋ, ಯಾವಳ ಕೈಗಳು ದಪ್ಪವಾಗಿರುವುವೋ, ಅವಳು ಸೇವಕಿಯಾಗುವಳೆಂದು ವಿದ್ವಾಂಸರು ತಿಳಿಯುತ್ತಾರೆ.

೩೧. ಯಾವಳ ಪಾದಗಳು ನಡುಗುತ್ತಾ ಕಾಲಿನಲ್ಲಿ ಹಾಕಿರುವ ಬಳೆಯನ್ನು ಹಾರಿಸುವುವೋ, ಮತ್ತು ಮುಖವೂ ವಿಕಾರವಾಗಿರುವುದೋ, ಯಾವಳ ಮೇಲ್ತುಟಿಯಲ್ಲಿ ರೋಮಗಳು (ಮೀಸೆ) ಹುಟ್ಟಿರುವುದೋ ಅವಳು ಬೇಗ ಪತಿವಿಹೀನೆಯಾಗುವಳು.

೩೨. ಹಣೆ, ಹೊಟ್ಟೆ, ಪಿರ್ರೆ (ರುಂಡಿ) ಈ ಮೂರೂ ಯಾವಳಿಗೆ ಜೋಲುತ್ತಿರುವುವೋ ಅವಳು ತನ್ನ ಗಂಡ, ಮೈದುನ, ಮಾವ ಇವರುಗಳನ್ನು ಕಳೆದುಕೊಳ್ಳುತ್ತಾಳೆ.

೩೩. ಅಲಂಕಾರಪ್ರಾಯವಾದ ಎಂದರೆ ಸರ್ವರಿಗೂ ಮೇಲ್ಪಂಕ್ತಿಯಾಗುವಷ್ಟು ಶ್ಲಾಘ್ಯವಾದ ನಡತೆಯುಳ್ಳವಳು, ಗುರುಹಿರಿಯರಲ್ಲಿಯೂ ದೇವರು ಬ್ರಾಹ್ಮಣರುಗಳಲ್ಲಿಯೂ ಭಕ್ತಿಯುಳ್ಳವಳು, ಪತಿವ್ರತೆ, ಈ ಗುಣಗಳುಳ್ಳವಳನ್ನು ಮನುಷ್ಯಸ್ತ್ರೀ ಎನ್ನಬಹುದು. ಸ್ತ್ರೀಗೆ ಈ ಗುಣಗಳಿಲ್ಲದೆ ಇದ್ದರೆ ಮನುಷ್ಯತ್ವವೇ ಇಲ್ಲ ಎಂದು ಭಾವ.

ನಿತ್ಯಂ ಸ್ನಾತಾ ಸುಗಂಧಾ ಚ ನಿತ್ಯಂ ಚ ಪ್ರಿಯವಾದಿನೀ ।
ಅಲ್ಪಾಶಿನ್ಯಲ್ಪದೋಷಾ ಚ ದೇವತಾಂ ತಾಂ ವಿನಿರ್ದಿಶೇತ್ ॥ ೩೪ ॥

ಪ್ರಚ್ಛನ್ನಂ ಕುರುತೇ ಪಾಪಮುಪವಾದಂ ಚ ರಕ್ಷತಿ ।
ಹೃದಯಂ ಸ್ಯಾಚ್ಚ ದುರ್ಗ್ರಾಹ್ಯಂ ಮಾರ್ಜಾರೀಂ ತಾಂ ವಿನಿರ್ದಿಶೇತ್ ॥೩೫॥

ಹಸತೇ ಕ್ರೀಡತೇ ಚೈವ ಕ್ರುದ್ಧಾ ಚೈವ ಪ್ರಸೀದತಿ ।
ನೀಚೇಷು ರಮತೇ ನಿತ್ಯಂ ರಾಸಭೀಂ ತಾಂ ವಿನಿರ್ದಿಶೇತ್ ॥ ೩೬ ॥

ಪ್ರತಿಕೂಲಕರೀ ನಿತ್ಯಂ ಬಂಧೂನಾಂ ಭರ್ತುರೇವ ಚ ।
ಸ್ವಚ್ಛಂದೇ ಲಲಿತಾಂ ಚೈವ ಆಸುರೀಂ ತಾಂ ವಿನಿರ್ದಿಶೇತ್ ॥ ೩೭ ॥

---

೩೪. ನಿತ್ಯವೂ ಸ್ನಾನಮಾಡಿ ಸುಗಂಧದ್ರವ್ಯಗಳನ್ನು ಧರಿಸುವುದು, ಯಾವಾಗಲೂ ಪ್ರಿಯವಚನಗಳನ್ನಾಡುವುದು, ಭೋಜನದಲ್ಲಿಯೂ ಮಿತ, ಸ್ವಲ್ಪಹೊತ್ತಿನೊಳಗೇ ಕೋಪವನ್ನು ನುಂಗಿಕೊಳ್ಳುವುದು ಈ ಸ್ವಭಾವದವಳನ್ನು ದೇವತಾಂಶವುಳ್ಳ ಸ್ತ್ರೀಯೆಂದು ಹೇಳಬೇಕು.

೩೫. ಗುಟ್ಟಾಗಿ ಪಾಪಕಾರ್ಯಮಾಡುವವಳೂ, ತನಗೆ ಹೊದ್ದಿದ ಅಪವಾದವನ್ನು ಹೋಗಲಾಡಿಸಿಕೊಳ್ಳದೆ ಮುಂದುವರಿಸುವವಳೂ, ಮನಸ್ಸಿನ ಸ್ಥಿತಿಯು ಹೇಗಿದೆ ಎಂದು ಇತರರಿಗೆ ತಿಳಿಯಲು ಸಾಧ್ಯವೇ ಇಲ್ಲದವಳೂ, ಆದ ಸ್ತ್ರೀಯನ್ನು ಬೆಕ್ಕಿನ ಸ್ವಭಾವದವಳೆಂದು ತಿಳಿಯಬೇಕು. (ಹೇಳಬೇಕು).

೩೬. ಎಲ್ಲರ ಎದುರಿಗೂ ಚೆಲ್ಲುಚೆಲ್ಲಾಗಿ ನಗುವುದು, ಮಕ್ಕಳಂತೆ ಆಟವಾಡುವುದು, ಕೋಪಿಸುವುದು, ಪ್ರಸನ್ನೆಯಾಗುವುದು, ಯಾವಾಗಲೂ ನೀಚರ ಸಹವಾಸದಲ್ಲಿ ಕ್ರೀಡಿಸುವುದು ಇತ್ಯಾದಿ ಗುಣಗಳುಳ್ಳವಳನ್ನು ಹೆಣ್ಣುಕತ್ತೆಯೆಂದು ತಿಳಿಯಬೇಕು.

೩೭. ಬಂಧುಗಳ ಅಧೀನದಲ್ಲಿರುವಾಗ ಅವರಿಗೆ ಕಿರುಕುಳ ಕೊಡುತ್ತಾ ಗಂಡನ ಅಧೀನವಲ್ಲಿರುವಾಗ ಯಾವಾಗಲೂ ಅವನಿಗೆ ತೊಂದರೆಕೊಡುತ್ತಾ ಇದ್ದು ತಾನು ಸ್ವೇಚ್ಛೆಯಾಗಿರುವಾಗ ವಿಹಿತವಾಗಿ ಮನೋಹರಳಾಗಿರುವವಳನ್ನು ಆಸುರೀ ಸ್ತ್ರೀ ಎಂದು ತಿಳಿಯಬೇಕು.

ಬಹ್ವಾಶೀ ಬಹುವಾಕ್ಯಾ ಚ ನಿತ್ಯಂ ಚಾಪ್ರಿಯವಾದಿನೀ ।
ಹಿನಸ್ತಿ ಸ್ವಪತಿಂ ಯಾ ತು ರಾಕ್ಷಸೀಂ ತಾಂ ವಿನಿರ್ದಿಶೇತ್ ॥ ೩೮ ॥

ಶೌಚಾಚಾರಪರಿಭ್ರಷ್ಟಾ ರೂಪಭ್ರಷ್ಟಾ ಭಯಂಕರಾ ।
ಪ್ರಸ್ವೇದಮಲಪಂಕಾ ಚ ಪಿಶಾಚೀಂ ತಾಂ ವಿನಿರ್ದಿಶೇತ್ ॥ ೩೯ ॥

ನಿತ್ಯಂ ಸ್ನಾತಾಂ ಸುಗಂಧಾಂ ಚ ಮಾಂಸಮದ್ಯಪ್ರಿಯಾದಿನೀಂ ।
ವೃಕ್ಷೋದ್ಯಾನಪ್ರಸಕ್ತಾಂ ಚ ಗಾಂಧರ್ವೀಂ ತಾಂ ವಿನಿರ್ದಿಶೇತ್ ॥ ೪೦ ॥

ಚಪಲಾ ಚಂಚಲಾ ಚೈವ ನಿತ್ಯಂ ಪಶ್ಯೇದ್ದಿಶಸ್ತಥಾ ।
ಚಲಸ್ವಭಾವಾ ಲುಬ್ಧಾ ಚ ವಾನರೀಂ ತಾಂ ವಿನಿರ್ದಿಶೇತ್ ॥ ೪೧ ॥

ಚಂದ್ರಾನನಾಂ ಶುಭಾಂಗೀಂ ತು ಮತ್ತವಾರಣಗಾಮಿನೀಂ ।
ಆರಕ್ತನಖ ಹಸ್ತಾಂ ತು ವಿದ್ಯಾದ್ವಿದ್ಯಾಧರೀಂ ಬುಧಃ ॥ ೪೨ ॥

---

೩೮ ಅತಿಯಾದ ಭೋಜನ, ಅತಿಮಾತು, ಅಪ್ರಿಯವಾದ ಮಾತು ಇವೆಲ್ಲಾ ಯಾವಳಲ್ಲಿ ಕಾಣುವುವೋ ಅವಳು ಬೇಗ ಪತಿವಿಹೀನೆಯಾಗುವಳು. ಅಂಥವಳನ್ನು ರಾಕ್ಷಸಿಯೆಂದು ಹೇಳಬೇಕು.

೩೯. ಮಡಿ, ಆಚಾರ ಇವುಗಳಿಲ್ಲದೆ ಕುರೂಪಿಣಿಯೂ, ಭಯಂಕರಿಯೂ ಆಗಿ ಯಾವಾಗಲೂ ಬೆವರು ಸುರಿಸುತ್ತಾ ಕೊಳೆ ಕೆಸರು ಇವುಗಳಿಂದ ಕೂಡಿ ಇರುವವಳನ್ನು ಪಿಶಾಚಸ್ತ್ರೀಯೆಂದು ತಿಳಿಯಬೇಕು.

೪೦. ನಿತ್ಯವೂ ಸ್ನಾನಮಾಡಿ ಸುಗಂಧದ್ರವ್ಯ ಲೇಪನಮಾಡಿಕೊಂಡು ಮಧ್ಯ ಮಾಂಸಗಳನ್ನು ಪ್ರೀತಿಯಿಂದ ಸೇವಿಸುತ್ತಾ ವೃಕ್ಷಗಳಿರುವ ಉದ್ಯಾನವನದಲ್ಲಿ ವಿಹಾರಾಸಕ್ತಳಾಗಿದ್ದರೆ ಅವಳನ್ನು ಗಾಂಧರ್ವ ಸ್ತ್ರೀಯೆಂದು ತಿಳಿಯಬೇಕು

೪೧. ಸ್ಥಿರಚಿತ್ತವಿಲ್ಲದೆ ಹಿಡಿದ ಕೆಲಸಗಳು ಯಾವುವನ್ನೂ ಸ್ಥಿರವಾಗಿ ನಡೆಸದೆ ಯಾವಾಗಲೂ ಸುಮ್ಮನೆ ದಿಕ್ಕುಗಳನ್ನು ನೋಡುತ್ತಾ ಸ್ಥಿರವಿಲ್ಲದ ಸ್ವಭಾವ ಉಳ್ಳವಳೂ ಕೋಪಶೀಲೆಯೂ ಆಗಿದ್ದರೆ ಅವಳನ್ನು ಕಪಿ ಜಾತಿಗೆ ಸೇರಿದವಳೆಂದು ತಿಳಿಯಬೇಕು.

೪೨. ಚಂದ್ರನಂತೆ ಮುಖವುಳ್ಳವಳೂ ಶುಭಕರಗಳಾದ ಅಂಗಗಳಿಂದ ಕೂಡಿದವಳೂ ಮದದಾನೆಯ ನಡಗೆಯಂತೆ ನಡಗೆಯುಳ್ಳವಳೂ, ಕೆಂಪಾದ ಕೈಯೂ, ಉಗುರೂ ಉಳ್ಳವಳೂ, ಆಗಿದ್ದರೆ ಅವಳನ್ನು ವಿದ್ಯಾಧರಿ ಎಂದು ತಿಳಿಯಬೇಕು.

ವೀಣಾ ವಾದಿತ್ರಶಬ್ದೇನ ವಂಶಗೀತರವೇಣ ಚ ।
ಪುಷ್ಪಧೂಪಪ್ರಸಕ್ತಾಂ ಚ ಗಾಂಧರ್ವೀಂ ತಾಂ ವಿನಿರ್ದಿಶೇತ್ ॥ ೪೩ ॥

॥ ಸುಮಂತುರುವಾಚ ॥

ಇತ್ಯೇವಮುಕ್ತ್ವಾ ಸ ಮಹಾನುಭಾವೋ
ಜಗಾಮ ವೇಧಾ ನಿಜಮಂದಿರಂ ವೈ ।
ಸ್ತ್ರೀಣಾಂ ತಥಾ ಪುಂಸ್ತ್ವವತಾಂ ಚ ವೀರ
ಯಲ್ಲಕ್ಷಣಂ ಪಾರ್ಥಿವ ಲೋಕಪೂಜ್ಯಂ ॥ ೪೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಚತುರ್ಥೀಕಲ್ಪೇ ಸ್ತ್ರೀಲಕ್ಷಣ ವರ್ಣನಂ ನಾಮ ಅಷ್ಟಾವಿಂಶೋಽಧ್ಯಾಯಃ.



೪೩. ವೀಣೆಯಧ್ವನಿ, ವಾದ್ಯಧ್ವನಿ, ಇವುಗಳನ್ನು ಕೇಳುವುದರಲ್ಲಿಯೂ, ಕೊಳಲಿನ ಗಾನವನ್ನು ಆಲಿಸುವುದರಲ್ಲಿಯೂ, ಆಸಕ್ತಿಯನ್ನೂ ; ಸುವಾಸನೆಯಾದ ಹೂಗಳಿಂದಲೂ ಹಾಲುಮಡ್ಡಿ ಹೊಗೆಯಿಂದಲೂ ದೇಹವನ್ನೂ ಬಟ್ಟೆಯನ್ನೂ ಸುವಾಸನೆ ಮಾಡಿಕೊಳ್ಳುವುದರಲ್ಲಿ ಆಸಕ್ತಿಯನ್ನೂ, ತೋರುವ ಸ್ತ್ರೀಯನ್ನು ಗಂಧರ್ವ ಸ್ತ್ರೀಯೆಂದು ತಿಳಿಯಬೇಕು ಎಂದು ಹೇಳಿದನು.

೪೪. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ ! ಮಹಾನುಭಾವನಾದ ಬ್ರಹ್ಮನು ಸ್ತ್ರೀಯರ ಮತ್ತು ಪುರುಷರ ಲಕ್ಷಣವನ್ನು ಈಪ್ರಕಾರ ಲೋಕ ಪೂಜ್ಯವಾಗಿರುವಂತೆ ಹೇಳಿ ತನ್ನ ನಿವಾಸಕ್ಕೆ ತೆರಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಚತುರ್ಥೀಕಲ್ಪ ಪ್ರಕರಣದಲ್ಲಿ ಸ್ತ್ರೀಲಕ್ಷಣ ವರ್ಣನೆ ಎಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕೋನತ್ರಿಂಶೋಽಧ್ಯಾಯಃ

---

॥ ಶತಾನೀಕ ಉವಾಚ ॥

ಗಕಾರಾಕ್ಷರ ದೇವಸ್ಯ ಗಣೇಶಸ್ಯ ಮಹಾತ್ಮನಃ ।
ಆರಾಧನವಿಧಿಂ ಬ್ರೂಹಿ ಸಾಂಗಂ ಮಂತ್ರಸಮನ್ವಿತಂ ॥ ೧ ॥

॥ ಸುಮಂತುರುವಾಚ ॥

ನ ತಿಥಿರ್ನ ಚ ನಕ್ಷತ್ರಂ ನೋಪವಾಸೋ ವಿಧೀಯತೇ ।
ಯಥೇಷ್ಟಂ ಚೇಷ್ಟತೇ ಸಿದ್ಧಿಃ ಸದಾ ಭವತಿ ಕಾಮಿಕಾ ॥ ೨ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಶತಾನೀಕರಾಜನು ಹೇಳುತ್ತಾನೆ—ಆಗ ಶತಾನೀಕನು ಸುಮಂತುವನ್ನು ಕುರಿತು ಮಹಾತ್ಮನಾದ ಗಕಾರ ಗಣಪತಿಯನ್ನು ಮಂತ್ರಪೂರ್ವಕವಾಗಿ ಸಾಂಗವಾಗಿ ಆರಾಧನಮಾಡುವ ವಿಧಿಯನ್ನು ಕೃಪೆಮಾಡಿ ಹೇಳು ಎಂದನು.

೨. ಸುಮಂತು ಮುನಿವರ್ಯರು ಹೇಳುತ್ತಾನೆ—ಈ ವ್ರತಮಾಡುವುದಕ್ಕೆ ತಿಥಿಯಾಗಲಿ, ನಕ್ಷತ್ರವಾಗಲಿ ಇಂಥಾದ್ದೇ ಆಗಿರಬೇಕೆಂಬ ನಿಯಮವಿಲ್ಲ. ಇದಕ್ಕಾಗಿ ಉಪವಾಸ ಮಾಡಬೇಕೆಂಬ ನಿಯಮವಿಲ್ಲ. ಇಷ್ಟಬಂದ ಕಾಲದಲ್ಲಿ ಇಷ್ಟಬಂದ ಹಾಗೆ ಪೂಜಿಸಿದರೂ ಯಾವಾಗಲೂ ಇಷ್ಟಾರ್ಥ ಸಿದ್ಧಿಯಾಗುವುದು.

ಶ್ವೇತಾರ್ಕಮೂಲಂ ಸಂಗೃಹ್ಯ ಕುರ್ಯಾದ್ಗಣಪತಿಂ ಬುಧಃ ।
ಅಂಗುಷ್ಠ ಪರ್ವಮಾತ್ರಂ ತು ಪದ್ಮಾಸನಗತಂ ತಥಾ ॥ ೩ ॥

ಚತುರ್ಭುಜಂ ತ್ರಿನೇತ್ರಂ ಚ ಸರ್ವಾಭರಣಭೂಷಿತಂ ।
ನಾಗಯಜ್ಞೋಪವೀತಾಂಗಂ ಶಶಾಂಕಕೃತಶೇಖರಂ ॥ ೪ ॥

ದಂತಂ ಸವ್ಯೇ ಕರೇ ದದ್ಯಾತ್ ದ್ವಿತೀಯೇ ಚಾಕ್ಷಸೂತ್ರಕಂ ।
ತೃತೀಯೇ ಪರಶುಂ ದದ್ಯಾತ್ ಚತುರ್ಥೇ ಮೋದಕಂ ನ್ಯಸೇತ್ ॥ ೫ ॥

ಕುಂಕುಮಂ ಚಂದನಂ ಚಾಪಿ ಸಮಾಲಂಭನಮುಚ್ಯತೇ ।
ವಾಸೋಭಿರ್ಭೂಷಣೈ ರಕ್ತೈ ರ್ಮಾಲ್ಯೈಶ್ಚಾರಾಧಯೇತ್ ಗಣಂ ॥ ೬ ॥

ಧೂಪೇನ ಚ ಸುಗಂಧೇನ ಮೋದಕೈಶ್ಚಾಪಿ ಪೂಜಯೇತ್ ।
ಏವಂ ಪೂಜ್ಯಾಗ್ರತಸ್ತಸ್ಯ ಭೋಜಯೇದ್ಬ್ರಾಹ್ಮಣಂ ಬುಧಃ ॥ ೭ ॥

---

೩-೪. ಬಿಳಿಯ ಎಕ್ಕದ ಗಿಡದ ಬೇರಿನಲ್ಲಿ ಹೆಬ್ಬೆರಳಿನ ಗಿಣ್ಣಿನಷ್ಟು ಪ್ರಮಾಣ ಪ್ರಕ್ಷಸ್ಥಾದ ಗಣಪತಿಯ ಪ್ರತಿಮೆಯನ್ನು ಮಾಡಬೇಕು. ತಾವರೆಯ ಹೂವಿನಮೇಲೆ ಕುಳಿತಿರುವಂತೆಯೂ ನಾಲ್ಕು ತೋಳುಗಳೂ ಮೂರು ಕಣ್ಣುಗಳೂ ಉಳ್ಳಂತೆಯೂ, ಸಮಸ್ತ ಆಭರಣಗಳಿಂದ ಶೃಂಗರಿಸಿರುವಂತೆಯೂ, ನಾಗಯಜ್ಞೋಪವೀತವನ್ನು ಧರಿಸಿರುವಂತೆಯೂ, ಚಂದ್ರರೇಖೆಯನ್ನು ಶಿರಸ್ಸಿನಲ್ಲಿ ಧರಿಸಿರುವಂತೆಯೂ ಆ ಪ್ರತಿಮೆಯನ್ನು ರಚಿಸಬೇಕು.

೫. ಆ ಪ್ರತಿಮೆಯ ಎಡಗೈಯಲ್ಲಿ ದಂತವನ್ನೂ ಬಲಗೈಯಲ್ಲಿ ಜಪಮಾಲೆಯನ್ನೂ ಇನ್ನೊಂದು ಕೈಯಲ್ಲಿ ಪರಶುವನ್ನೂ ನಾಲ್ಕನೆಯ ಕೈಯಲ್ಲಿ ಮೋದಕವನ್ನೂ ಹಿಡಿದಿರುವಂತೆ ಮಾಡಬೇಕು.

೬. ಆ ಗಣಪತಿ ಪ್ರತಿಮೆಗೆ ಕುಂಕುಮ ಕೇಸರಿ ಶ್ರೀಗಂಧ ಇವುಗಳನ್ನು ಲೇಪಿಸಬೇಕು. ಅನಂತರ ವಸ್ತ್ರಾಭರಣಗಳಿಂದಲೂ ಕೆಂಪು ಹೂವಿನ ಮಾಲೆಗಳಿಂದಲೂ ಪೂಜಿಸಬೇಕು.

೭. ಸುವಾಸನೆಯಾದ ಧೂಪವನ್ನು ಬೆಳಗಿ ಮೋದಕಗಳನ್ನು ಸಮರ್ಪಿಸಿ ತೃಪ್ತಿಪಡಿಸಬೇಕು. ಹೀಗೆ ಪೂಜೆ ಮಾಡಿದಮೇಲೆ ಆ ಗಣಪತಿಯ ಸಮ್ಮುಖದಲ್ಲಿ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು.

ವಾಮನಂ ಕುಬ್ಜಕಂ ಚಾಪಿ ಭೋಜಯೇತ್ಪುರತೋ ದ್ವಿಜಂ ।
ಆಶೀರ್ವಾದಂ ತತಸ್ತಸ್ಮಾತ್ ಪ್ರಾಪ್ಯ ಸಿದ್ಧಿಮವಾಪ್ನುಯಾತ್ ॥ ೮ ॥

ಭಕ್ತ್ಯಾ ಕುರುಕುಲಶ್ರೇಷ್ಠ ಶೃಣು ಮಂತ್ರಪದಾನಿ ವೈ ।
ಗಂ ಸ್ವಾಹಾ ಮೂಲಮಂತ್ರೋಽಯಂ ಪ್ರಣವೇನ ಸಮನ್ವಿತಃ ॥ ೯ ॥

ಗಾಂ ನಮೋ ಹೃದಯಂ ಜ್ಞೇಯಂ ಗೀಂ ಶಿರಃ ಪರಿಕೀರ್ತಿತಃ ।
ಶಿಖಾ ಚ ಗೂಂ ನಮೋ ಜ್ಞೇಯೋ ಗೈಂ ನಮಃ ಕವಚಂ ಸ್ಮೃತಂ॥ ೧೦ ॥

ಗೌಂ ನಮೋ ನೇತ್ರಮುದ್ದಿಷ್ಟಂ ಗಃ ಫಟ್ ಕಾಮಾಸ್ತ್ರಮುಚ್ಯತೇ ।
ಆಗಚ್ಛೋಲ್ಕಾಮುಖಾಯೇತಿ ಮಂತ್ರ ಆವಾಹನೇ ಹ್ಯಯಂ ॥ ೧೧ ॥

ಗಂ ಗಣೇಶಾಯ ನಮೋ ಗಂಧಮಂತ್ರಃ ಪ್ರಕೀರ್ತಿತಃ ।
ಪುಷ್ಪೋಲ್ಕಾಯ ನಮಃ ಪುಷ್ಪಮಂತ್ರ ಏಷ ಪ್ರಕೀರ್ತಿತಃ ॥ ೧೨ ॥

---

೮. ಕುಳ್ಳನೋ ಗೂನುಬೆನ್ನಿನವನೋ ಆದ ಬ್ರಾಹ್ಮಣನನ್ನು ಭೋಜನಕ್ಕೆ ಕರೆಯಬೇಕು. ಭೋಜನಾನಂತರ ಅವನಿಂದ ಆಶೀರ್ವಾದವನ್ನು ಪಡೆದವನು ಸಮಸ್ತ ಕಾರ್ಯಗಳಲ್ಲಿಯೂ ಸಿದ್ಧಿಯನ್ನು ಪಡೆಯುವನು.

೯. ಎಲೈ ಕುರುಕುಲೋತ್ತಮನೇ! ಗಣಪತಿಯ ಪೂಜೆಗೆ ಉಪಯುಕ್ತಗಳಾದ ಮಂತ್ರಪದಗಳನ್ನು ಭಕ್ತಿಯಿಂದ ಕೇಳು, ಪ್ರಣವದಿಂದ ಯುಕ್ತವಾದ ಗಂ ಸ್ವಾಹಾ ಎಂಬುದು ಮೂಲಮಂತ್ರವು (ಓಂಗಂ ಸ್ವಾಹಾ).

೧೦. ಓಂ ಗಾಂ ಹೃದಯಾಯ ನಮಃ, ಓಂ ಗೀಂ ಶಿರಸೇ ಸ್ವಾಹಾ, ಓಂ ಗೂಂ ಶಿಖಾಯೈ ವಷಟ್, ಓಂ ಗೈಂ ಕವಚಾಯ ಹುಂ, ಓಂ ಗಾಂ ನೇತ್ರಾತ್ರಯಾಯ ವೌಷಟ್, ಓಂ ಗಃ ಅಸ್ತ್ರಾಯ ಫಟ್, ಎಂದು ಹೇಳಬೇಕು. ಇದೇ ಮಂತ್ರ ಹೇಳುವ ಕ್ರಮ.

೧೧. ಆವಾಹನೆಮಾಡುವಾಗ "ಆಗಚ್ಛ ಉಲ್ಕಾಮುಖಾಯ ನಮಃ, ಆವಾಹನಂ ಸಮರ್ಪಯಾಮಿ" ಎಂಬ ಮಂತ್ರವನ್ನು ಉಪಯೋಗಿಸಬೇಕು.

೧೨. ಓಂ ಗಂ ಗಣೇಶಾಯನಮಃ ಗಂಧಂ ಕಲ್ಪಯಾಮಿ ಎಂದೂ, ಓಂ ಪ್ರಂ ಪುಷ್ಪೋಲ್ಕಾಯ ನಮಃ ಪುಷ್ಪಂ ಸಮರ್ಪಯಾಮಿ ಎಂದೂ ಹೇಳಬೇಕು.

ಧೂಪೋಲ್ಕಾಯ ನಮೋ ಧೂಪಮಂತ್ರ ಏಷ ಪ್ರಕೀರ್ತಿತಃ ।
ದೀಪೋಲ್ಕಾಯ ನಮೋ ದೀಪಮಂತ್ರ ಏಷ ಪ್ರಕೀರ್ತಿತಃ ॥ ೧೩ ॥

ಓಂ ಗಂ ಮಹೋಲ್ಕಾಯ ನಮೋ ಬಲಿಮಂತ್ರಃ ಪ್ರಕೀರ್ತಿತಃ ।
ಓಂ ಸಂ ಸಿದ್ಧೋಲ್ಕಾಯ ನಮೋ ಮಂತ್ರಶ್ಚಾಯಂ ವಿಸರ್ಜನೇ ॥ ೧೪ ॥

ಓಂ ಮಹಾಕರ್ಣಾಯ ವಿದ್ಮಹೇ ವಕ್ರತುಂಡಾಯ ಧೀಮಹೀ ।
ತನ್ನೋ ದಂತಿಃ ಪ್ರಚೋದಯಾತ್ ಗಾಯತ್ರೀಜಪ ಪೂರ್ವಕಃ ॥ ೧೫ ॥

ಮಹಾಗಣಪತಯೇ ವೀರ ಸ್ವಾಹಾ ದಕ್ಷಿಣತಃ ಸದಾ ।
ಮಹೋಲ್ಕಾಯ ಪಶ್ಚಿಮತಃ ಕೂಶ್ಮಾಂಡಾಯೋತ್ತರೇಣ ತು ।
ಏಕದಂತ ತ್ರಿಪುರಾಂತಕಾಯ ಆಗ್ನೇಯ್ಯಾಂ ವೀರ ನಿರ್ದಿಶೇತ್ ॥ ೧೬ ॥

ಓಂ ಶಿವದತ್ತ ವಿಕಟಹರಹಾಸಪ್ರಾಣಾಯಸ್ವಾಹಾ ನೈಋುತ್ಯಾಂ ।
ತುಲಂಬನಾತ್ಯಚಲದಂತಕಾಯ ಸ್ವಾಹಾ ವಾಯವ್ಯಾಂ ॥ ೧೭ ॥

---

೧೩. ಓಂ ಧುಂ ಧೂಪೋಲ್ಕಾಯ ನಮಃ ಧೂಪಂ ಕಲ್ಪಯಾಮಿ, ಎಂದೂ ಓಂ ದಿಂ ದೀಪೋಲ್ಕಾಯ ನಮಃ ದೀಪಂ ಕಲ್ಪಯಾಮಿ ಎಂದೂ, ಈ ಮಂತ್ರಗಳನ್ನು ಹೇಳಬೇಕು.

೧೪. ಓಂ ಗಂ ಮಹೋಲ್ಕಾಯ ನಮಃ ಬಲಿಂ (ನೈವೇದ್ಯಂ) ಕಲ್ಪಯಾಮಿ ಎಂದೂ ಓಂ ಸಂ ಸಿಧ್ದೋಲ್ಕಾಯ ನಮಃ ಸರ್ವೋಪಚಾರ ಪೂಜಾಂ ಸಮರ್ಪ ಯಾಮಿ ಎಂದೂ, ಪಂಚೋಪಚಾರ ಪೂಜೆಮಾಡಬೇಕು.

೧೫. ಆಮೇಲೆ " ಮಹಾಕರ್ಣಾಯ ವಿದ್ಮಹೇ ವಕ್ರತುಂಡಾಯ ಧೀಮಹೀ ತನ್ನೋದಂತಿಃ ಪ್ರಚೋದಯಾತ್ " ಎಂಬ ಇದೇ ಗಣಪತಿ ಗಾಯತ್ರೀ ಮಂತ್ರ, ಈ ಮಂತ್ರ ಜಪಮಾಡಿ ವಿಸರ್ಜನಮಾಡಬೇಕು.

೧೬-೧೭. ಅನಂತರ ಅಗ್ನಿಪ್ರತಿಷ್ಠಾಪನೆಮಾಡಿ ಮಹಾಗಣಪತಯೇ ಸ್ವಾಹಾ ಎಂದು ದಕ್ಷಿಣದಲ್ಲಿಯೂ, ಮಹೋಲ್ಕಾಯ ಸ್ವಾಹಾ ಎಂದು ಪಶ್ಚಿಮದಲ್ಲಿಯೂ, ಕೂಶ್ಮಾಂಡಾಯ ಸ್ವಾಹಾ ಎಂದು ಉತ್ತರದಲ್ಲೂ, ಏಕದಂತತ್ರಿಪುರಾಂತಕಾಯ ಸ್ವಾಹಾ ಎಂದು ಆಗ್ನೇಯ ಭಾಗದಲ್ಲಿಯೂ, ಶಿವದತ್ತ........ಸ್ವಾಹಾ ಎಂದು ನೈಋುತ್ಯಭಾಗ ದಲ್ಲೂ, ತುಲಂಬನಾತ್ಯಚಲ ದಂತಕಾಯ ಸ್ವಾಹಾ ಎಂದು ವಾಯವ್ಯಭಾಗದಲ್ಲೂ,

ಪದ್ಮದಂಷ್ಟ್ರಾಯ ನರಾಯೇತಿ ಐಶಾನ್ಯಾಂ ಹೋಮಯೇದ್ಬುಧಃ ।
ಹುಂಫಟ್ ಹುಂಫಟ್ ಹಸ್ತ ತಾಲಧ್ವನಿರ್ಹಸನ ಕುರ್ದನೇ　　॥ ೧೮ ॥

ಮೃದ ನರ್ತನ ಗಣಪತಿರ್ದೇವಸ್ಯ ಮುದ್ರಾಂ ತತೋ ಹೋಮಂ ಸಮಾಚರೇತ್ ।
ನ ಯದಾ ವಶ್ಯಾ ಭವತಿ ಕೃಷ್ಣ ತಿಲಾಹುತಿಮಷ್ಟಸಹಸ್ರಂ ।
ಜುಹುಯಾತ್ ತ್ರಿರಾತ್ರೇಣ ರಾಜಾ ವಶ್ಯೋ ಭವತಿ　　॥ ೧೯ ॥

ತಿಲ ಯವ ಹೋಮೇನ ಸರ್ವೇ ಜನಪದಾ ವಶ್ಯಾ ಭವಂತಿ ।
ಅತಿರೂಪವತೀ ಕನ್ಯಾ ಗಚ್ಛಂತಮನುಗಚ್ಛತಿ　　॥ ೨೦ ॥

ಚಣತಂಡುಲಹೋಮೇನಾಜಿತೋ ಭವೇತ್ ।
ನಿಂಬಪತ್ರಸಮ್ಯೈಃ ತೈಲೈಃ ವಿದ್ವೇಷಣಂ ಕರೋತಿ　　॥ ೨೧ ॥

---

೧೮. ಪದ್ಮದಂಷ್ಟ್ರಾಯ ಸ್ವಾಹಾ ಎಂದು ಈಶಾನ್ಯಭಾಗದಲ್ಲೂ, ನರಾಯ ಸ್ವಾಹಾ ಎಂದು ಹೋಮಮಾಡುವಾಗ ನಿರ್ದೇಶಮಾಡಿ ಆಜ್ಯಾಹುತಿಕೊಡಬೇಕು.

೧೯. ಕೈಚಪ್ಪಾಳೆ, ನಗುವುದು, ಕ್ರೀಡಿಸುವುದು ಇವುಗಳಿಂದಕೂಡಿ ಗಣಪತಿ ದೇವನುಮೃದುವಾಗಿ ನರ್ತನಮಾಡುತ್ತಿರುವನೆಂದುಮುದ್ರಾದರ್ಶನಮಾಡಿ, ಭಾವಿಸಿ ಅನಂತರ ಹೋಮಮಾಡಬೇಕು. ಈ ಹೋಮದಿಂದ ಪೂರ್ತಿವಶವಾದಂತೆ ತೋರದೆ ಹೋದಾಗ ಕಪ್ಪು ಎಳ್ಳನ್ನು ಎಂಟು ಸಹಸ್ರ ಆಹುತಿಯಿಂದ ಹೋಮಮಾಡಬೇಕು. ಹೀಗೆ ಮೂರುದಿನ ಮಾಡುವುದರೊಳಗೆ ರಾಜನು ವಶನಾಗುವನು.

೨೦. ಯವ (ಗೋಧಿ) ತಿಲಗಳನ್ನು ಬೆರಸಿ ಹೋಮಮಾಡಿದರೆ ಎಲ್ಲಾ ದೇಶಗಳೂ ವಶವಾಗುವುವು. ಅತಿ ಸುಂದರಿಯಾದ ಕನ್ಯೆಯು ಇವನನ್ನು ಅನುಸರಿಸಿ ಬರುತ್ತಾಳೆ.

೨೧ ಕಡಲೇಕಾಳು, ಅಕ್ಕಿ, ಇವನ್ನು ಬೆರಸಿ ಹೋಮಮಾಡುವುದರಿಂದ ಇವನನ್ನು ಯಾರೂ ಜಯಿಸಲಾರರು. ಬೇವಿನ ಎಲೆಯ ಅಗಲದಷ್ಟು ಎಣ್ಣೆಯನ್ನು ಹೋಮಮಾಡಿದರೆ ಶತ್ರುನಿಗ್ರಹವಾಗುವುವು.

ಸೋಮಗ್ರಹಣೇ ಉದಕಮಧ್ಯೇ ಅವತೀರ್ಯ ಅಷ್ಟಸಹಸ್ರಂ ಜಪೇತ್ ।
ಸಂಗ್ರಾಮೇ ಅಪರಾಜಿತೋ ಭವತಿ। ಓಂ ಲಂಬರಾಜ್ಞೇನಮಃ ಆದಿತ್ಯಾ॥೨೨॥

ಭಿ ಮುಖೋ ಭೂತ್ವಾಷ್ಟಸಹಸ್ರಂ ಜಪೇತ್ । ಆದಿತ್ಯೋವರದೋ ಭವತಿ ।
ಶುಕ್ಲ ಚತುರ್ಥ್ಯಾಮುಪೋಷ್ಯ ಗಂಧಪುಷ್ಪಾದಿಭಿರರ್ಚಯಿತ್ವಾ ತಿಲ
ತಂಡುಲಾನ್ ಜುಹುಯಾತ್ ಶಿರಸಾ ಧಾರಯಂಸ್ತೈರಪರಾಜಿತೋ
ಭವತಿ ॥ ೨೩ ॥

ಅಪಾಮಾರ್ಗಸಮಿದ್ಭಿರಗ್ನಿಂ ಪ್ರಜ್ವಾಲ್ಯ ಏಕವಿಂಶತ್ಯಾ ಹುತೀ
ಯೋಃ ಜುಹುಯಾತ್ ತ್ರಿರಾತ್ರಾಚ್ಛತ್ರುಂ ವ್ಯಾಪಾದಯತಿ ॥ ೨೪ ॥

॥ ಅಥೋತ್ತರೇಣ ಮಂತ್ರಂ ವ್ಯಾಖ್ಯಾಸ್ಯೇ ॥

ವೃಕ್ಷಮೂಲೇ ಕಜ್ಜಲಂ ಸಂಗೃಹ್ಯ ಸಪ್ತಭಿರ್ಮಂತ್ರಿತಂ ಕೃತ್ವಾ ।
ನೇತ್ರಾಣ್ಯಂಜಯೇದ್ಯಂ ಪಶ್ಯತಿ ಸ ವಶೀ ಭವತಿ ॥ ೨೫ ॥

---

೨೨. ಚಂದ್ರಗ್ರಹಣದದಿನ ನೀರಿನಲ್ಲಿಳಿದು ಆದಿತ್ಯಬಿಂಬಾಭಿಮುಖವಾಗಿ ನಿಂತು 'ಲಂಬ ರಾಜ್ಞೇನಮಃ' ಎಂಬ ಮಂತ್ರವನ್ನು ಎಂಟುಸಾವಿರ ಸಾರಿ ಜಪಿಸಿದರೆ ಗ್ರಹಾಧಿಪನು ಸುಪ್ರಸನ್ನನಾಗುತ್ತಾನೆ. ಆಗ ಇವನು ಯಾರಿಗೂ ಸೋಲದವನಾಗುತ್ತಾನೆ.

೨೩-೨೪. ಶುಕ್ಲಪಕ್ಷದ ಚತುರ್ಥಿಯದಿವಸ ಉಪವಾಸವಿದ್ದು ಗಂಧ, ಹೂ, ಮುಂತಾದುವುಗಳಿಂದ ಪೂಜಿಸಿ ಅನಂತರ ಅಕ್ಕಿ, ಎಳ್ಳು, ಇವನ್ನು ಮಿಶ್ರಮಾಡಿ ಹೋಮಮಾಡಿ ಹೋಮಶೇಷವನ್ನು ತಲೆಯಮೇಲೆ ಧರಿಸಿದರೆ ಯಾರಿಗೂ ಸೋಲದವನಾಗುವನು. ಅಗ್ನಿಯನ್ನು ಪ್ರಜ್ವಲಿಸುವಂತೆಮಾಡಿ ಇಪ್ಪತ್ತೊಂದುಸಲ ಉತ್ತರಣೆಯ ಸಮಿತ್ತುಗಳನ್ನು ಹೋಮಮಾಡಬೇಕು. ಮೂರು ರಾತ್ರಿಯಲ್ಲೂ ಯಾರು ಹೀಗೆ ಮಾಡುವರೋ ಅವರಿಗೆ ಶತ್ರುನಾಶವಾಗುವುದು.

೨೫. ಇಲ್ಲಿಂದ ಮುಂದೆ ಮಂತ್ರಸಿದ್ಧಿಯನ್ನು ಹೇಳುತ್ತೇನೆ—ಮರದ ಬುಡದಲ್ಲಿ ಕಾಡಿಗೆಯನ್ನು ಸಂಗ್ರಹಿಸಿ ಅದನ್ನು ಏಳುಸಾರಿ ಅಭಿಮಂತ್ರಿಸಿ ಕಣ್ಣಿಗೆ ಹಚ್ಚಿಕೊಂಡರೆ ಯಾರ್‍ಯಾರನ್ನು ನೋಡುವೆವೋ ಅವರೆಲ್ಲ ವಶರಾಗುತ್ತಾರೆ.

**ಪುಷ್ಪಂ ಫಲಂ ಮೂಲಂ ಚಾ ಷ್ಟಸಹಸ್ರಾಭಿಮಂತ್ರಿತಂ ಕೃತ್ವಾ ।**
**ಯಸ್ಮೈ ದದಾತಿ ಸ ವಶ್ಯೋ ಭವತಿ ॥ ೨೬ ॥**

**ಯತ್ಕಿಂಚಿನ್ಮೂಲಮಂತ್ರೇಣ ಕರೋತಿ ತತ್ಸಿಧ್ಯತಿ ಸರ್ವೇಗ್ರಹಾಃ ಸುಪ್ರೀತಾ ।**
**ಭವಂತಿ ನಗರದ್ವಾರಂ ಗತ್ವಾ ಅಷ್ಟಸಹಸ್ರವಾರಂ ನಿರೂಪಯೇತ್ ॥ ೨೭ ॥**

**ಪುರಂ ದ್ವಾರೇಣ ಗೃಹ್ಯತೇ ಪ್ರಾಙ್ಮುಖೋ ಯಜತಿ ಸ ಉಚ್ಚಾಟಯತಿ ।**
**ಸಮ್ಮುಖೋ ಜಪತಿ ಚೋರಾನ್ ವಿದ್ರಾವಯತಿ ॥ ೨೮ ॥**

**ತೃಣಾನಿ ಲೂನಯತಿ ಕಾಷ್ಠಾನಿ ಚ್ಛೇದಯತಿ ॥ ೨೯ ॥**

**ಗಜರಾಜೇನ ಯುದ್ಧಯತಿ ಜಲಮಧ್ಯೇ ಸಪ್ತರಾತ್ರಂ ಜಪೇತ್ ।**
**ಅಕಾಲೇ ವರ್ಷಯತಿ ಕೂಪತಡಾಗಾನ್ ಶೋಷಯತಿ ಪ್ರತಿಮಾಂ**

---

೨೬. ಹೂವನ್ನಾಗಲಿ ಹಣ್ಣನ್ನಾಗಲಿ ಗೆಣಸನ್ನಾಗಲಿ ಎಂಟುಸಾವಿರಸಲ ಅಭಿಮಂತ್ರಿಸಿ ಉದ್ದಿಷ್ಟರಾದವರಿಗೆ ಕೊಟ್ಟರೆ ಅವರೇ ಮೂಲಮಂತ್ರದಿಂದ ಬಲದಿಂದ ವಶರಾಗುವರು.

ಮೂಲಮಂತ್ರದಿಂದ ಏನೊಂದು ಕೊಂಚವನ್ನು ಮಾಡಿದರೂ ಅದೆಲ್ಲಾ ಸಿದ್ಧಿಸುವುದು. ಸೂರ್ಯಾದಿ ಸಮಸ್ತಗ್ರಹಗಳೂ ಸುಪ್ರೀತರಾಗುತ್ತಾರೆ.

೨೭–೨೯. ಊರುಬಾಗಿಲಿಗೆ ಹೋಗಿ ಎಂಟುಸಾವಿರ ಸಾರಿ ಈ ಮಂತ್ರೋಚ್ಚಾರಮಾಡಬೇಕು. ಆಗ ಊರುಬಾಗಿಲು ಕಟ್ಟಿಹೋಗುತ್ತದೆ. ಜಪಪ್ರಭಾವದಿಂದ ಬೆಳೆದ ಹುಲ್ಲೆಲ್ಲಾ ಕತ್ತರಿಸಿಹೋಗುವುದಲ್ಲದೆ ಕಡ್ಡಿಗಳೂ ಸಹ ಕತ್ತರಿಸಿ ಹೋಗುತ್ತವೆ. ಎದುರಿಗೆ ನಿಂತು ಜಪಮಾಡಿದರೆ ಕಳ್ಳರು ಓಡಿಹೋಗುತ್ತಾರೆ.

೩೦. ದೊಡ್ಡ ಆನೆಗಳ ಸಂಗಡ ಹೋರಾಡುವ ಶಕ್ತಿಬರುವುದು, ಏಳುರಾತ್ರಿಗಳು ಜಲಮಧ್ಯದಲ್ಲಿ ನಿಂತು ಅವಿಚಿನ್ನವಾಗಿ ಜಪಿಸಿದರೆ ಬೇಕೆಂದಕಡೆ ಅಕಾಲದಲ್ಲಿ ಮಳೆ ಹುಯ್ಯಿಸಬಹುದು, ಬೇಡದೇ ಇದ್ದಾಗ ಭಾವಿ ಕೆರೆ ಮೊದಲಾದುವುಗಳಲ್ಲಿ ಇದ್ದ ನೀರನ್ನೆಲ್ಲಾ ಬತ್ತಿಸಿಬಿಡಬಹುದು. ಮಂತ್ರಪ್ರಭಾವದಿಂದ ಬೊಂಬೆಗಳನ್ನು

ನೃತ್ಯಯತಿ ಆಕರ್ಷಯತಿ ಸ್ತಂಭಯತಿ ಯೋಜನ ಶತಾತ್ ಸ್ತ್ರೀ
ಪುರುಷಾನಾಕರ್ಷತಿ ॥ ೩೦ ॥

ಗೋರೋಚನಾಂ ಚ ಸಹಸ್ರಾಭಿ ಮಂತ್ರಿತಾಂ ಕೃತ್ವಾ ಹಸ್ತೇ ।
ಬದ್ಧ್ವಾ ಯೋಜನಶತಸಹಸ್ರಂ ಗತ್ವಾ ಪುನರಾಗಚ್ಛತಿ ॥ ೩೧ ॥

ಅಥ ಮಾರಯಿತುಕಾಮಃ ಖಾದಿರ ಕೀಲಕಂ ಕೃತ್ವಾ ಸ್ತ್ರೀಪುರುಷಂ ।
ವಿಚಿಂತ್ಯ ಹೃದಯೇ ನಿಖನಯೇತ್ ಕ್ಷಣಾದೇವ ಮ್ರಿಯತೇ ॥ ೩೨ ॥

ಸರ್ವಪಾತಕ ವಿಮುಕ್ತೋಭವತಿ ಅಗ್ನಿತೇಜಾಃ ಸರ್ವೇಭ್ಯೋ ಅಪ
ರಾಜಿತೋ ಭವತಿ ॥ ೩೩ ॥

ಓಂ ವಕ್ರತುಂಡಾಯ ಸ್ವಾಹಾ । ಓಂ ಏಕದಂಷ್ಟ್ರಾಯ ಸ್ವಾಹಾ
ಓಂ ಕೃತಕೃಷ್ಣಾಯ ಸ್ವಾಹಾ । ಓಂ ಗಜಕರ್ಣಾಯ ಸ್ವಾಹಾ
ಓಂ ಲಂಬೋದರಾಯ ಸ್ವಾಹಾ । ಓಂ ವಿಕಟಾಯ ಸ್ವಾಹಾ
ಓಂ ಧೂಮ್ರವರ್ಣಾಯ ಸ್ವಾಹಾ । ಓಂ ಗಗನಕೋಜಾಯ ಸ್ವಾಹಾ

---

ಕುಣಿಸಬಹುದು. ತನ್ನ ಇಚ್ಛೆಯಂತೆ ಯಾರನ್ನು ಬೇಕಾದರೂ ಸಮೀಪಕ್ಕೆ ಸೆಳೆಯ ಬಹುದು, ಚಲಿಸದಂತೆ ನಿಲ್ಲಿಸಬಹುದು, ನೂರುಗಾವುದ ದೂರದಲ್ಲಿರುವ ಸ್ತ್ರೀಪುರುಷ ರನ್ನು ಮಂತ್ರಭಾವದಿಂದ ಸಮೀಪಕ್ಕೆ ಎಳೆದುಕೊಳ್ಳಬಹುದು.

೩೧. ಈ ಮಂತ್ರದಿಂದ ಸಾವಿರಸಾರಿ ಅಭಿಮಂತ್ರಿಸಿದ ಗೋರೋಚನನ್ನು ಕೈಯ್ಯಲ್ಲಿ ಕಟ್ಟಿಕೊಂಡರೆ ಸಾವಿರಗಾವುದ ದೂರ ಹೋಗಿ ಹಿಂತಿರುಗಿ ಬರಬಹುದು.

೩೨–೩೩. ಯಾರನ್ನಾದರೂ ಸಾಯಿಸಬೇಕೆಂಬ ಇಚ್ಛೆಯುಳ್ಳವನು ತನ್ನ ಸೇಡು ತೀರಿಸಿಕೊಳ್ಳುವ ಸ್ತ್ರೀಯನ್ನೋ ಪುರುಷನನ್ನೋ ಉದ್ದೇಶಿಸಿ ಪ್ರತಿಮೆಯನ್ನು ಮಾಡಿ ಅದರ ಹೃದಯದಲ್ಲಿ ಕಗ್ಗಲಿಗೂಟವನ್ನು ನಾಟಬೇಕು. ಹೀಗೆ ಮಾಡಿದರೆ ಉದ್ದಿಷ್ಟ ವ್ಯಕ್ತಿ ತಾನು ಕೂಡಲೇ ಮೃತನಾಗುತ್ತಾನೆ. ಸರ್ವಪಾಪಗಳಿಂದ ಬಿಡಲ್ಪಡು ತ್ತಾನೆ. ಅಗ್ನಿಯಂತೆ ತೇಜಸ್ವಿಯಾಗಿ ಯಾರಿಗೂ ಸೋಲದವನಾಗುತ್ತಾನೆ.

ಓಂ ವಿನಾಯಕಾಯಸ್ವಾಹಾ । ಓಂ ಗಣಪತಯೇ ಸ್ವಾಹಾ
ಓಂ ಹಸ್ತಿಮುಖಾಯಸ್ವಾಹಾ

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಚತುರ್ಥೀ
ಕಲ್ಪೇ ಗಣಪತಿಕಲ್ಪವರ್ಣನಂ ನಾಮ ಏಕೋನ
ತ್ರಿಂಶೋಽಧ್ಯಾಯಃ.



---

ಈ ಮೇರೆಗೆ ಬರೆದಿರುವ ಮಂತ್ರಗಳಿಂದ ಹೋಮಮಾಡಬೇಕು.

ಇಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಗಣಪತಿ ಕಲ್ಪವರ್ಣನೆಯೆಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಂಶೋಽಧ್ಯಾಯಃ

---

ನಿಂಬ ಮಯಮಂಗುಷ್ಠ ಪರ್ವಮಾತ್ರಂ ಗಣಪತಿಂ ಕೃತ್ವಾ ನಿತ್ಯ
ಧೂಪ ಗಂಧಾಭಿರರ್ಚಯಿತ್ವಾ ಪ್ರಚ್ಛನ್ನಂ ಶಿರಸಿ ಬಧ್ವಾ ಗಚ್ಛೇತ್ ॥
ಸರ್ವಜನಪ್ರಿಯೋ ಭವತಿ ॥ ೧ ॥

ಶ್ವೇತಾರ್ಕಮೂಲಾಂಗುಷ್ಠಮಾತ್ರಂ ಗಣಪತಿಂ ಕೃತ್ವಾ ಧೂಪಾದಿ
ಭಿರರ್ಚಯಿತ್ವಾ ಸರ್ವಾನ್ ವರ್ಣಾನ್ ವಶಮಾನಯತಿ ॥ ೨ ॥

---

### ಮೂವತ್ತನೆಯ ಅಧ್ಯಾಯವು.

೧. ಬೇವಿನಮರದ ತುಂಡಿನಲ್ಲಿ ಹೆಬ್ಬೆರಳ ಒಂದು ಗಿಣ್ಣಿನಷ್ಟು ಪರಿಮಾಣದ ಗಣಪತಿಯನ್ನು ಮಾಡಿ ನಿತ್ಯವೂ ಗಂಧ ಹೂ ಧೂಪ ಮೊದಲಾದುವುಗಳಿಂದ ಪೂಜಿಸಿ ಹೊರಕ್ಕೆ ಕಾಣಿಸದಂತೆ ತಲೆಯಲ್ಲಿ ಕಟ್ಟಿಕೊಂಡಿರುವವನು ಸಮಸ್ತಜನರಿಗೂ ಬೇಕಾದವನಾಗುತ್ತಾನೆ.

೨. ಬಿಳಿಯ ಎಕ್ಕದ ಬೇರಿನಿಂದ ಹೆಬ್ಬೆರಳಗಿಣ್ಣಿನ ಗಾತ್ರದ ಗಣಪತಿಯನ್ನು ಮಾಡಿ ಧೂಪ ಮೊದಲಾದುವುಗಳಿಂದ ಪೂಜಿಸಿದರೆ ಸಮಸ್ತಜಾತಿಯವರನ್ನೂ ಸ್ವಾಧೀನಮಾಡಿಕೊಳ್ಳಬಲ್ಲನು.

ಶ್ವೇತಚಂದನಮಂಗುಷ್ಠಪರ್ವಮಾತ್ರಂ ಗಣಪತಿಂ ಕೃತ್ವಾ ।
ಪುಷ್ಪಗಂಧಾದಿಭಿರರ್ಚಯಿತ್ವಾ ಶುಕ್ಲ ಚತುರ್ಥ್ಯಾಂ ಅಷ್ಟಮ್ಯಾಂ ವಾ ಬಲಿಂ
ಕುರ್ಯಾದಷ್ಟ ಸಹಸ್ರಂ ಜುಹುಯ್ಯಾದ್ಧಧ್ನಾ ಪಾಯಸೇನ ರಾಜಾನಂ ವಶ
ಮಾನಯತಿ ॥ ೩ ॥

ರಕ್ತ ಚಂದನಮಯಂ ಗಣಪತಿಂ ಅಂಗುಷ್ಠಮಾತ್ರಂ ಕೃತ್ವಾ ।
ಭೌತಿಕಂ ಬಲಿಂ ದದ್ಯಾದ್ಧಧಿ ಮಧು ಘೃತಾಹುತೀನಾಂ ಗಣಪತಿಂ ಅಷ್ಟ
ಸಹಸ್ರಂ ಜಹುಯಾದಾತ್ಮ ಪ್ರಾಪಿಕಾಂ ಪ್ರಜಾಂ ವಶಮಾನಯತಿ ॥ ೪ ॥

ರಕ್ತಕರವೀರಮೂಲಾಂಗುಷ್ಠಪರ್ವಮಾತ್ರಂ ಗಣಪತಿಂ ಕಾರಯೇತ್ ।
ರಕ್ತಪುಷ್ಪ ಗಂಧೋಪಹಾರೈಃ ಬಲಿಂ ದದ್ಯಾತ್ ।
ತಿಲಲವಣಘೃತೇನಾಷ್ಟಸಹಸ್ರಂ ಜಹುಯಾತ್ ।
ದಶಗ್ರಾಮಾನ್ ವಶಮಾನಯತಿ ॥ ೫ ॥

---

೩. ಶ್ರೀಗಂಧದ ಮರದಲ್ಲಿ ಹೆಬ್ಬೆರಳ ಗಿಣ್ಣಿನಷ್ಟು ಗಾತ್ರದ ಗಣಪತಿಯನ್ನು ಮಾಡಿ, ಗಂಧ, ಹೂ ಮುಂತಾದುವುಗಳಿಂದ ಪೂಜಿಸುತ್ತಿದ್ದು ಶುಕ್ಲಪಕ್ಷದ ಚತುರ್ಥಿಯದಿವಸವೋ, ಅಥವಾ ಅಷ್ಟಮಿಯ ದಿನವೋ ಪಾಯಸ, ಮೊಸರು, ಇವುಗಳಿಂದ ಬಲಿನಿವೇದನ ಮಾಡಬೇಕು. ಎಂಟುಸಹಸ್ರ ಆಹುತಿ ಹೋಮಮಾಡಿದರೆ ರಾಜರನ್ನು ವಶಪಡಿಸಿಕೊಳ್ಳಬಹುದು.

೪. ಕೆಂಪು ಚಂದನಮರದಿಂದ ಹೆಬ್ಬೆರಳ ಗಿಣ್ಣಿನಗಾತ್ರ ಗಣಪತಿಯನ್ನು ಮಾಡಿ ಪೂಜಿಸಿ, ಗಣಪತಿ ಪ್ರೀತಿಯಾಗಲೆಂದು ಮೊಸರು, ತುಪ್ಪ, ಜೇನುತುಪ್ಪಗಳಿಂದ ಭೂತಬಲಿಯನ್ನು ಅರ್ಪಿಸಿ ಎಂಟುಸಾವಿರಸಾರಿ ಆಹುತಿ ಕೊಡಬೇಕು. ಹೀಗೆ ಮಾಡಿದರೆ ಆತ್ಮಜ್ಞಾನವನ್ನುಂಟುಮಾಡುವ ಜನವನ್ನು ವಶಪಡಿಸಿಕೊಳ್ಳುವನು.

೫. ಕೆಂಪು ಕಣಗಿಲಗಿಡದ ಬೇರಿನಲ್ಲಿ ಹೆಬ್ಬೆರಳ ಗಿಣ್ಣಿನ ಪ್ರಮಾಣದ ಗಣಪತಿಯನ್ನು ಮಾಡಿಸಿ, ಕೆಂಪು ಗಂಧ, ಕೆಂಪು ಹೂಗಳಿಂದ ಪೂಜಿಸಿ, ರಕ್ತವರ್ಣದ ಅನ್ನವನ್ನು ಬಲಿಸಮರ್ಪಣೆಮಾಡಿ, ಉಪ್ಪು ತುಪ್ಪ ಎಳ್ಳು ಇವುಗಳಿಂದ ಎಂಟುಸಾವಿರ ಆಹುತಿಗಳನ್ನು ಹೋಮಮಾಡಬೇಕು. ಹತ್ತಾರುಗ್ರಾಮದ ಜನರನ್ನು ವಶಪಡಿಸಿಕೊಳ್ಳುವನು.

ಶ್ವೇತಕರವೀರಾಂಗುಷ್ಠಪರ್ವಮಾತ್ರಂ ಗಣಪತಿಂ ಕೃತ್ವಾ ।
ತಿಲಪಿಷ್ಟ ದಧಿಘೃತ ಕ್ಷೀರ ಹರಿದ್ರಾಮಿಶ್ರೇಣ ಅಷ್ಟಸಹಸ್ರಂ ಜುಹುಯಾತ್ ।
ವೇಶ್ಯಾಂ ವಶಮಾನಯತಿ ॥ ೬ ॥

ಅಶ್ವತ್ಥಮೂಲಾಂಗುಷ್ಠಪರ್ವಮಾತ್ರಂ ಗಣಪತಿಂ ಕೃತ್ವಾ ।
ಗಂಧ ಪುಷ್ಪ ಧೂಪ ಬಲಿಂ ದತ್ವಾ ।
ಶತಂ ಜುಹುಯಾತ್ । ಶತ್ರುಂ ವಶಮಾನಯತಿ ॥ ೭ ॥

ಅರ್ಕಮೂಲಾಂಗುಷ್ಠಪರ್ವಮಾತ್ರಂ ಗಣಪತಿಂ ಕೃತ್ವಾ ।
ಗಂಧ ಪುಷ್ಪ ಧೂಪ ಬಲೀನ್ ದದ್ಯಾತ್ ।
ತಿಂದುಕಾಷ್ಟಶತಂ ಜುಹುಯಾತ್ । ಶತ್ರುಂ ವಶಮಾನಯತಿ ॥ ೮ ॥

ಬಿಲ್ವಮೂಲಮಯಮಂಗುಷ್ಠಪರ್ವಮಾತ್ರಂ ಗಣಪತಿಂ ಕೃತ್ವಾ ।
ಗಂಧ ಪುಷ್ಪ ಧೂಪಾರ್ಚಿತಂ ಕೃತ್ವಾ । ತ್ರಿಮಧ್ವಕ್ತಾನಾಂ
ಅಷ್ಟಸಹಸ್ರಂ ಜುಹುಯಾತ್ । ರಾಜಾಮಾತ್ಯಾನ್ ವಶಮಾನಯತಿ ॥ ೯ ॥

---

೬. ಬಿಳಿಯ ಕಣಿಗಿಲೆಯಗಿಡದ ಬೇರಿನಲ್ಲಿ ಹೆಬ್ಬೆರಳ ಗಿಣ್ಣಿನಷ್ಟು ಗಾತ್ರದ ಗಣಪತಿಯನ್ನು ಮಾಡಿ; ಎಳ್ಳುಹುಡಿ, ಮೊಸರು, ತುಪ್ಪ, ಹಾಲು, ಅರಿಶಿನ ಇವುಗಳನ್ನು ಬೆರಸಿದ ಹವಿಸ್ಸನ್ನು ಎಂಟುಸಾವಿರ ಆಹುತಿಗಳನ್ನು ಹೋಮಮಾಡಿದರೆ ವೇಶ್ಯಾಸ್ತ್ರೀಯನ್ನು ಸ್ವಾಧೀನಪಡಿಸಿಕೊಳ್ಳುವನು.

೭. ಅರಳಿಯಮರದ ಬೇರಿನಲ್ಲಿ ಹೆಬ್ಬೆರಳ ಗಿಣ್ಣಿನಗಾತ್ರದ ಗಣಪತಿಯನ್ನು ಮಾಡಿ ಗಂಧ, ಹೂ, ಧೂಪ ಮೊದಲಾದವುಗಳಿಂದ ಪೂಜಿಸಿ ಬಲಿಸಮರ್ಪಣೆಮಾಡಿ ಅರಳಿಯಸಮಿತ್ತನ್ನು ನೂರು ಆಹುತಿ ಹೋಮಮಾಡಿದರೆ ಶತ್ರುವು ವಶವಾಗುತ್ತಾನೆ.

೮. ಎಕ್ಕದಗಿಡದ ಬೇರಿನಲ್ಲಿ ಹೆಬ್ಬೆರಳಿನ ಗಿಣ್ಣಿನಗಾತ್ರ ಗಣಪತಿಯನ್ನು ಮಾಡಿ; ಹೂ, ಗಂಧ, ಧೂಪ ಮುಂತಾದವುಗಳಿಂದ ಪೂಜಿಸಿ ಬಲಿಯನ್ನು ಸಮರ್ಪಣೆ ಮಾಡಬೇಕು. ತೂಪರಗಿಡದ ನೂರು ಸಮಿತ್ತುಗಳನ್ನು ಹೋಮಮಾಡಿದರೆ ಶತ್ರುವು ವಶವಾಗುತ್ತಾನೆ.

೯. ಬಿಲ್ವಪತ್ರೆಗಿಡದ ಬೇರಿನಲ್ಲಿ ಹೆಬ್ಬೆರಳ ಗಿಣ್ಣಿನಗಾತ್ರದ ಗಣಪತಿಯನ್ನು ಮಾಡಿಸಿ ಗಂಧ, ಹೂ, ಧೂಪ ಮೊದಲಾದುವುಗಳಿಂದ ಪೂಜಿಸಿ ಮೂರು ಮಧುವನ್ನು ಎಂದರೆ ತುಪ್ಪ, ಸಕ್ಕರೆ, ಜೇನು ಇವುಗಳ ಮಿಶ್ರಣದ ಆಹುತಿಯನ್ನು, ಎಂಟುಸಾವಿರ

**ಶಿರಸಿ ಧೂಪಾನ್ ಧೃತ್ವಾ ಗಚ್ಛೇದ್ರಾಜದ್ವಾರಂ ವಿಗ್ರಹೇ**
**ಜಯೋಽಭವತಿ ॥ ೧೦ ॥**

**ಹಸ್ತಿದಂತಮೃತ್ತಿಕಾಮಯಮಂಗುಷ್ಟಪರ್ವಮಾತ್ರಂ ಗಣಪತಿಂ**
**ಕಾರಯೇತ್ । ಗಂಧಪುಷ್ಪ ಧೂಪಾರ್ಜಿತಂ ಕೃತ್ವಾ ।**
**ಕೃಷ್ಣಚತುರ್ಥ್ಯಾಂ ನಗ್ನೋ ಭೂತ್ವಾಭ್ಯರ್ಚಯೇತ್ ।**
**ಸಪ್ತವಾರಾನ್ ಜಪೇನ್ನಿತ್ಯಂ ನಾರೀಣಾಂ ಸುಭಗೋ ಭವತಿ ॥ ೧೧ ॥**

**ವೃಷಭಶೃಂಗಮೃತ್ತಿಕಾಂಗುಷ್ಠ ಪರ್ವಮಾತ್ರಂ ಗಣಪತಿಂ ಕಾರಯೇತ್ ।**
**ಗಂಧಪುಷ್ಪಾರ್ಚಿತಂ ಕೃತ್ವಾ ಗುಗ್ಗುಲಧೂಪಂ ದದ್ಯಾತ್ ।**
**ಘೋಷಪತಿಂ ವಶಮಾನಯತಿ ॥ ೧೨ ॥**

**ಅಥವಾ ವಲ್ಮೀಕಮೃತ್ತಿಕಾಂಗುಷ್ಠ ಪರ್ವಮಾತ್ರಂ ಗಣಪತಿಂ**
**ಕಾರಯೇತ್ । ಕಟುಕತೈಲೇನ ಪ್ರತಿಮಾಂ ಲೇಪಯೇತ್ ।**
**ಉನ್ಮತ್ತಕಕಾಷ್ಠೇನಾಗ್ನಿಂ ಪ್ರಜ್ವಾಲ್ಯ । ಆಹುತೀನಾಮಷ್ಟಸಹಸ್ರಂ**

---

ಸಾರಿ ಹೋಮಮಾಡಬೇಕು. ಹೀಗೆ ಮಾಡಿದರೆ ಮಂತ್ರಿಗಳನ್ನು ವಶಪಡಿಸಿಕೊಳ್ಳುವನು.

೧೦. ತಲೆಯಮೇಲೆ ಧೂಪಕುಂಡವನ್ನು ಇಟ್ಟುಕೊಂಡು ಅರಮನೆಯ ಬಾಗಿಲಿಗೆ ಹೋದರೆ ಯುದ್ಧದಲ್ಲಿ ಜಯಪ್ರಾಪ್ತಿಯಾಗುವುದು.

೧೧. ಆನೆಯ ಕೊಂಬಿನಿಂದ ಎದ್ದ ಮಣ್ಣಿನಿಂದ ಹೆಬ್ಬೆರಳಗಿಣ್ಣಿನಷ್ಟು ಗಾತ್ರದ ಗಣಪತಿಯನ್ನು ಮಾಡಿಸಿ, ಹೂವು, ಗಂಧ, ಧೂಪ ಮುಂತಾದುವುಗಳಿಂದ ಪೂಜೆಗೆ ಸಿದ್ಧನಾಗಿ ಕೃಷ್ಣಪಕ್ಷದ ಚೌತಿಯದಿವಸ ನಿರ್ವಾಣದಿಂದ ಪೂಜಿಸಬೇಕು. ಈ ಪ್ರಕಾರ ಏಳುವಾರಗಳ ಪರ್ಯಂತ ಆಚರಿಸಿದರೆ ನಾರಿಯರ ದೃಷ್ಟಿಗೆ ಬಹುಸುಂದರನಾಗಿ ಕಾಣುತ್ತಾನೆ.

೧೨. ಎತ್ತುಗಳು ಕೋಡಿನಿಂದ ಗುದ್ದರಿಸಲಾಗಿ ಎದ್ದಮಣ್ಣಿನಿಂದ ಹೆಬ್ಬೆರಳಗಿಣ್ಣಿನಗಾತ್ರ ಗಣಪತಿಯನ್ನುಮಾಡಿ, ಹೂ ಗಂಧ ಮುಂತಾದುವುಗಳಿಂದ ಪೂಜಿಸಿ, ಗುಗ್ಗುಲ ಧೂಪವನ್ನು ಹಾಕಬೇಕು. ಗೊಲ್ಲರಹಳ್ಳಿಯ ಪ್ರಮುಖನನ್ನು ಸ್ವಾಧೀನಪಡಿಸಿಕೊಳ್ಳುವನು.

ಜಹುಯಾತ್ । ತಿಲಸರ್ಷಪ ಮಿಶ್ರೇಣ ಸರ್ವಧೂಪಂ ದದ್ಯಾತ್ ।
ತ್ರಿಕಟುಕೇನ ಲೇಪಯೇತ್ । ಅಗರುಧೂಪಂ ದದ್ಯಾತ್ ।
ರಾಜಾನಂ ವಶಮಾನಯತಿ । ಪರೇಷಾಂ ಚ ವಲ್ಲಭೋ ಭವತಿ ॥ ೧೩ ॥

ರಕ್ತಚಂದನೇನಾತ್ಮಾನಂ ಧೂಪಯೇತ್ಸುಭಗೋ ಭವತಿ ।
ಓಂ ಗಣಪತಯೇ ವಕ್ರತುಂಡಾಯ ಗಜದಂತಾಯ
ಗುಲಗುಲೇತಿ ನಿನಾದಾಯ ಚತುರ್ಭುಜಾಯ ತ್ರಿನೇತ್ರಾಯ
ಮುಸಲ ಪಾಶ ವಜ್ರಹಸ್ತಾಯ ಸರ್ವಭೂತದಮನಾಯ
ಸರ್ವಲೋಕ ವಶಂಕರಾಯ ಸರ್ವದುಷ್ಟೋಪಘಾತಜನನಾಯ
ಸರ್ವಶತ್ರುವಿಮರ್ದನಾಯ ಸರ್ವರಾಜ್ಯಸಮೀಹನಾಯ
ರಾಜಾನಮಿಹ ವಶಮಾನಯ ಹನಹನ ಪಚಪಚ
ವಜ್ರಾಂಕುಶೇನ ಗಣೇಶ ಫಟ್ ಸ್ವಾಹಾ
ಓಂ ಗಾಂ ಗೀಂ ಗೂಂ ಗೈಂ ಗೌಂ ಗಃ ಸ್ವಾಹಾ ನಮಃ ಹೃದಯ ಮೂಲ ಮಂತ್ರಸ್ಯ
ಓಂ ಕಃ ಶಿರಃ । ಓಂ ಖಃ ಶಿಖಾ । ಓಂ ಗಃ ಹೃದಯಂ । ಓಂ ಗುಃ ವಕ್ತ್ರಂ ।
ಓಂ ಗೈಂ ನೇತ್ರಂ । ಓಂ ಘಃ ಕವಚಂ । ಓಂ ಜ ಆವಾಹನಂ । ಹೃದಯಸ್ಯ ಆವಾಹನಾಂಗಾನಿ ಭವಂತಿ ॥ ೧೪ ॥

ಓಂ ನಮಃ ಹೃದಯಂ, ಮೂಲಮಂತ್ರಸ್ಯ, ಓಂ ಗಾಃ ಶಿರಃ, ಓಂ ಗೈಃ
ನಮಃ ಶಿಖಾ, ಓಂ ಗೌಃ ನಮಃ ಕವಚಂ, ಓಂ ಗಂ ನಮಃ ನೇತ್ರೇ,

---

೧೩. ಹುತ್ತದ ಮಣ್ಣಿನಿಂದ ಹೆಬ್ಬೆರಳ ಗಿಣ್ಣಿನಗಾತ್ರದ ಗಣಪತಿಯನ್ನು ಮಾಡಿಸಿ, ಕಹಿ ಎಣ್ಣೆಯನ್ನು ಪ್ರತಿಮೆಗೆಲ್ಲಾ ಬಳಿಯಬೇಕು. ಉಮ್ಮತ್ತದ ಕಡ್ಡಿಯಿಂದಲೂ, ಎಳ್ಳು ಸಾಸುವೆಗಳಿಂದಲೂ, ಎಂಟುಸಾವಿರ ಆಹುತಿಗಳನ್ನು ಉರಿಯುತ್ತಿರುವ ಅಗ್ನಿಗೆ ಸಮರ್ಪಿಸಬೇಕು. ಎಳ್ಳು, ಸಾಸುವೆ ಇವುಗಳ ಧೂಪವನ್ನೂ ಹಾಕಬೇಕು. ಶುಂಠಿ, ಮೆಣಸು, ಹಿಪ್ಪಲಿ ಇವುಗಳನ್ನು ಕೈಯಿಂದ ಅಂಗಕ್ಕೆ ಸವರಬೇಕು. ಮತ್ತು ಅಗುರು ಧೂಪವನ್ನು ಸಮರ್ಪಿಸಿದರೆ ರಾಜರು ವಶವಾಗುವರು. ಇತರ ಸ್ತ್ರೀಯರಿಗೆಲ್ಲಾ ಬಹು ಮನೋಹರನಾಗಿ ಕಾಣುತ್ತಾನೆ.

ಓಂ ಗಂ ಫಟ್ ಅಸ್ತ್ರಂ, ಓಂ ಅಂಗುಷ್ಠೋಲ್ಕಾಯ ಸ್ವಾಹಾ, ಆವಾಹನಂ, ಹೃದಯಸ್ಯ ಸ್ವಾಹಾ, ವಿಸರ್ಜನಂ, ಹೃದಯಸ್ಯ, ಓಂ ಗಂಧೋಲ್ಕಾಯ ಸ್ವಾಹಾ, ಗಂಧಮಂತ್ರಃ, ಓಂ ಧರ್ಮಭೂತೋಲ್ಕಾಯ ಸ್ವಾಹಾ, ಪುಷ್ಪಮಂತ್ರಃ

ದುರ್ಜಯಾಯ ಪೂರ್ವೇಣ ಓಂ ಧೂರ್ಜಟಯೇ ದಕ್ಷಿಣೇ ಓಂ ಲಂಬೋದರಾಯ ಪಶ್ಚಿಮತ
ಓಂ ಗಣಪತಯೇ ಉತ್ತರತಃ ಓಂ ಗಣಾಧಿಪತಯೇ ಐಶಾನ್ಯಾಂ
ಓಂ ಮಹಾಗಣಪತಯೇ ಆಗ್ನೇಯ್ಯಾಂ ಓಂ ಕೂಶ್ಮಾಂಡಾಯ ನೈಋತ್ಯಾಂ
ಓಂ ಏಕದಂತ ತ್ರಿಪುರಘಾತಿನೇ ತ್ರಿನೇತ್ರಾಯ ವಾಯವ್ಯಾಂ

ಓಂ ಮಹಾಗಣಪತಯೇ ವಿದ್ಮಹೇ ವಕ್ರತುಂಡಾಯ ಧೀಮಹೀ
ತನ್ನೋ ದಂತಿಃ ಪ್ರಚೋದಯಾತ್ । ಗಾಯತ್ರೀ
ಪದ್ಮದಂಷ್ಟ್ರಾ ಮಾಲಾಪ್ರಕರ್ಷಿಣೀ ಪರಶ್ವಂಕುಶ ಪಾಶಪಟಹ
ಮುದ್ರಾ ಅಷ್ಟೌ ಮುದ್ರಾ ದರ್ಶಯಿತ್ವಾ ತತಃ ಕರ್ಮಣಿಕಾರಯೇತ್

---

೧೪-೧೫. ದುರ್ಜಯಾಯ ಸ್ವಾಹಾ ಎಂದು ಪೂರ್ವದಿಕ್ಕಿನಲ್ಲೂ, ಧೂರ್ಜಟಯೇ ಸ್ವಾಹಾ ಎಂದು ದಕ್ಷಿಣದಕಡೆಯೂ, ಲಂಬೋದರಾಯ ಸ್ವಾಹಾ ಎಂದು ಪಶ್ಚಿಮ ದಿಕ್ಕಿನಲ್ಲೂ, ಗಣಪತಯೇ ಸ್ವಾಹಾ ಎಂದು ಉತ್ತರ ದಿಕ್ಕಿನಲ್ಲೂ, ಗಣಾಧಿಪತಯೇ ಸ್ವಾಹಾ ಎಂದು ಈಶಾನ್ಯದಲ್ಲೂ, ಮಹಾಗಣಪತಯೇ ಸ್ವಾಹಾ ಎಂದು ಆಗ್ನೇಯ ದಲ್ಲೂ, ಕೂಶ್ಮಾಂಡಾಯ ಸ್ವಾಹಾ ಎಂದು ನೈಋತ್ಯ ದಿಕ್ಕಿನಲ್ಲೂ, ಏಕದಂತ ತ್ರಿಪುರ ದಹನ ತ್ರಿನೇತ್ರಾಯ ಸ್ವಾಹಾ ಎಂದು ವಾಯವ್ಯದಲ್ಲಿಯೂ, ನಿರ್ದೇಶಿಸಿ ಮೇಲೆ ಹೇಳಿರುವ ಗಣಪತಿ ಗಾಯತ್ರೀ ಮಂತ್ರವನ್ನು ಜಪಮಾಡಬೇಕು. ಪದ್ಮ ಮುದ್ರೆ, ದಂಷ್ಟ್ರಾಮುದ್ರೆ, ಮಾಲಾಮುದ್ರೆ, ಪ್ರಕರ್ಷಿಣೀ, ಪರಶು, ಅಂಕುಶ, ಪಾಶ, ಪಟಹ ಎಂಬೀ ಎಂಟು ಮುದ್ರೆಗಳನ್ನು ತೋರಿಸಿ ಅನಂತರ ಮುಂದಿನ ಕೆಲಸಗಳನ್ನು ಮಾಡಬೇಕು.

ಕರಿಯ ಎಳ್ಳನ್ನು ಎಂಟುಸಾವಿರಸಾರಿ ಆಹುತಿಯಾಗಿ ಹೋಮಮಾಡಬೇಕು. ಹೀಗೆ ಮಾಡಿದರೆ ರಾಜರನ್ನು ವಶಮಾಡಿಕೊಳ್ಳುತ್ತಾನೆ. ಆವಾಹನ ಕಾಲದಲ್ಲಿ ಮುದ್ರೆ

ಕೃಷ್ಣ ತಿಲಾಹುತೀನಾಂ ಅಷ್ಟಸಹಸ್ರಂ ಜಹುಯಾತ್ ರಾಜಾನಂ
ವಶಮಾನಯೇತ್
ಆವಾಹನಾದಿ ಏಕಾದಶಮುದ್ರಾ ನೈವೇದ್ಯಾಂತಂ ಕ್ರಮಾದ್ದರ್ಶ
ಯೇತ್ ॥ ೧೫ ॥

ಆರಾಧಯೇದ್ಯೇನ ವಿಧಿನಾ ತ್ರಿನೇತ್ರಂ ಶೂಲಿನಂ ಹರಂ ।
ತೇನೈವಾರಾಧಯೇದ್ದೇವಂ ವಿಘ್ನೇಶಂ ಗಣಪಂ ನೃಪ ॥ ೧೬ ॥

ತದೇವ ಮಂಡಲಂ ಚಾಸ್ಯ ಅಂಗನ್ಯಾಸಸ್ತಥೈವ ಚ ।
ಋತೇ ಮಂತ್ರಪದಾನೀಹ ಸಮಾನಂ ಸರ್ವ ಏವ ಹಿ ॥ ೧೭ ॥

ಪೂಜಯೇದ್ಯಸ್ತು ವಿಘ್ನೇಶಂ ಏಕದಂತಮುಮಾಸುತಂ ।
ನಶ್ಯಂತಿ ತಸ್ಯ ವಿಘ್ನಾನಿ ನಚಾರಿಷ್ಟಂ ಕದಾಚನ ॥ ೧೮ ॥

---

ಗಳನ್ನು ತೋರಿಸಿದಂತೆಯೇ ಹನ್ನೊಂದು ಮುದ್ರೆಗಳು ಎಂದರೆ ಹಿಂದಿನ ಎಂಟರ ಜೊತೆಗೆ ಶಂಖ, ಚಕ್ರ, ಧೇನು, ಎಂಬ ಮೂರು ಬೇರೆ ಮುದ್ರೆಗಳನ್ನು ನೈವೇದ್ಯದ ವರೆಗೆ ಕ್ರಮವಾಗಿ ತೋರಿಸಬೇಕು.

೧೬. ಅಯ್ಯಾ ಗುಹನೇ ! ಯಾವ ವಿಧಿಯಿಂದ ತ್ರಿನೇತ್ರನನ್ನು ಪೂಜಿಸು ವೆವೋ ಅದೇ ಮಂತ್ರ ವಿಧಿಯಿಂದ ಗಣಪತಿಯನ್ನೂ ಪೂಜಿಸಬೇಕು.

೧೭. ಶಿವಮೂರ್ತಿಯನ್ನು ಸ್ಥಾಪಿಸುವಾಗ ಯಾವ ಮಂಡಲವನ್ನು ರಚಿಸು ವೆವೋ ಯಾವ ಅಂಗನ್ಯಾಸ ಕರನ್ಯಾಸ ಮೊದಲಾದುವನ್ನು ಮಾಡುವೆವೋ ಅವನ್ನೇ ಗಣಪತಿಯ ಪೂಜೆಯಲ್ಲೂ ಮಾಡಬೇಕು. ಮಂತ್ರಪದಗಳು ಮಾತ್ರ ಹೊರತಾಗಿ ಮಿಕ್ಕವೆಲ್ಲವೂ ಶಿವನಿಗೂ ಗಣಪತಿಗೂ ಸಮಾನವಾಗಿಯೇ ಇರುತ್ತವೆ.

೧೮. ಏಕದಂತನೂ ಉಮಾ (ಪಾರ್ವತೀ) ಸುತನೂ ಆದ ವಿಘ್ನೇಶನನ್ನು ಯಾವನು ಪೂಜಿಸುವನೋ ಅವನಿಗೆ ಬಂದ ವಿಘ್ನವೆಲ್ಲವೂ ನಾಶವಾಗಿ ಯಾವಾಗಲೂ ಯಾವ ಕೇಡೂ ಬರುವುದಿಲ್ಲ.

ಯಶ್ಶೋಪವಾಸಂ ಕೃತ್ವಾ ತು ಚತುರ್ಥ್ಯಾಂ ಪೂಜಯೇನ್ನರಃ ।
ಸರ್ವೇ ತಸ್ಯ ಸಮಾರಂಭಾಃ ಸಿದ್ಧ್ಯೇಯುರ್ನಾತ್ರ ಸಂಶಯಃ ॥ ೧೯ ॥

ಯಸ್ಯಾನುಕೂಲೋ ವಿಘ್ನೇಶಃ ಶಿವಯೋಃ ಕುಲನಂದನಃ ।
ತಸ್ಯಾನುಕೂಲಂ ಸರ್ವಂ ಸ್ಯಾತ್ ಜಗದ್ವೈ ಸರ್ವಕರ್ಮಸು ॥ ೨೦ ॥

ತಸ್ಮಾದಾರಾಧಯೇದೇನಂ ಭಕ್ತಿಶ್ರದ್ಧಾ ಸಮನ್ವಿತಃ ।
ಕುಂಕುಮಾಗುರುಧೂಪೇನ ತಥೈವೋಂಡೇರಕಸ್ರಜಾ ।
ಪಲಲಾನ್ನವಿಕಾರೈಶ್ಚ ಜಾತಿಕೋನ್ಮಾದಕೈಸ್ತಥಾ ॥ ೨೧ ॥

ಶುಕ್ಲಪಕ್ಷೇ ಚತುರ್ಥ್ಯಾಂ ತು ವಿಧಿನಾನೇನ ಪೂಜಯೇತ್ ।
ತಸ್ಯ ಸಿಧ್ಯತಿ ನಿರ್ವಿಘ್ನಂ ಸರ್ವಕರ್ಮ ನ ಸಂಶಯಃ ॥ ೨೨ ॥

ಏಕದಂತೇ ಜಗನ್ನಾಥೇ ಗಣೇಶೇ ತುಷ್ಟಿಮಾಗತೇ ।
ಪಿತೃದೇವಮನುಷ್ಯಾದ್ಯಾಃ ಸರ್ವೇ ತುಷ್ಯಂತಿ ಭಾರತ ॥ ೨೩ ॥

---

೧೯. ಯಾವನು ಶುಕ್ಲಚತುರ್ಥಿಯಲ್ಲಿ ಉಪವಾಸವಿದ್ದು ಗಣಪತಿಯನ್ನು ಪೂಜಿಸುವನೋ ಅವನ ಕಾರ್ಯಗಳೆಲ್ಲವೂ ಸಿದ್ಧಿಸುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

೨೦. ಉಮಾಮಹೇಶ್ವರರಿಗೆ ಪ್ರಿಯಪುತ್ರನಾದ ವಿಘ್ನೇಶನು ಯಾರಿಗೆ ಪ್ರಸನ್ನನೋ ಅವರಿಗೆ ಸಮಸ್ತಲೋಕಗಳಲ್ಲಿಯೂ ಸಮಸ್ತಕಾರ್ಯಗಳಲ್ಲಿಯೂ ಅನುಕೂಲವೇ ಆಗುವುದು.

೨೧. ಆದುದರಿಂದ ಈ ಗಣೇಶನನ್ನು ಭಕ್ತಿಶ್ರದ್ಧೆಯಿಂದ ಕೂಡಿ ಕೇಸರಿ ಅಗಿಲು ಇವುಗಳ ಧೂಪದಿಂದಲೂ, ಉಂಡೇರಿಕಾ (ಉಂಡಲಿಗೆ) ಸರದಿಂದಲೂ (ವಡೆ ಯಸರದಂತೆ) ಮಾಂಸ ಮಿಶ್ರವಾದ ಅನ್ನವಿಶೇಷದಿಂದಲೂ ನಾನಾಜಾತಿಯ ಮೋದಕ ದ್ರವ್ಯಾದಿಗಳಿಂದಲೂ ತೃಪ್ತಿಪಡಿಸಿ ಪೂಜಿಸಬೇಕು.

೨೨. ಶುಕ್ಲಪಕ್ಷದ ಚತುರ್ಥಿಯಲ್ಲಿ ಈ ವಿಧಾನದಿಂದ ಗಣಪತಿಯನ್ನು ಪೂಜಿಸಬೇಕು. ಹೀಗೆ ಪೂಜಿಸಿದವನ ಎಲ್ಲ ಕೆಲಸಗಳೂ ನಿರ್ವಿಘ್ನವಾಗಿ ಸಿದ್ಧಿಸುವುದರಲ್ಲಿ ಸಂಶಯವಿಲ್ಲ.

೨೩. ಅಯ್ಯಾ ಭರತವಂಶಜನೇ! ಏಕದಂತನೂ ಜಗನ್ನಾಥನೂ ಆದ ಗಣೇಶನು ತೃಪ್ತನಾದರೆ ಪಿತೃಗಳು, ದೇವತೆಗಳು, ಮನುಷ್ಯಗೂ ಮೊದಲಾದ ಎಲ್ಲರೂ ತೃಪ್ತರಾಗುವರು.

ತಸ್ಮಾದಾರಾಧಯೇದೇನಂ ಸದಾ ಭಕ್ತಿಪುರಸ್ಸರಂ ।
ಕರ್ಣಲೇಪೈಃ ತುಂಡಿಕಾಭಿಃ ಮೋದಕೈಶ್ಚ ಮಹೀಪತೇ
ಪೂಜಯೇತ್ಸತತಂ ದೇವ ವಿಘ್ನನಾಶಾಯ ದಂತಿನಂ ॥ ೨೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಚತುರ್ಥೀಕಲ್ಪೇ ವಿನಾಯಕ ಪೂಜಾವಿಧಿ ನಿರೂಪಣಂ ನಾಮ ತ್ರಿಂಶೋಽಧ್ಯಾಯಃ



---

೨೪. ಆದ್ದರಿಂದ ಇವನನ್ನು ಯಾವಾಗಲೂ ಭಕ್ತಿಯಿಂದ ಪೂಜಿಸಬೇಕು. ಅಯ್ಯಾ ರಾಜನೇ ! ಕರ್ಣಾಕೃತಿಯಾಗಿ ಸಕ್ಕರೆ ಲೇಪಯುಕ್ತವಾದ (ಜಿಲೇಬಿ) ತುಕಡಿ (ತುಂಡಿಕಾ) ಎಂಬ ಭಕ್ಷ್ಯ, ಕಡುಬು ಇವುಗಳ ನೈವೇದ್ಯದಿಂದ ಪೂಜಿಸಬೇಕು. ವಿಘ್ನನಿವಾರಣೆಗಾಗಿ ಗಜಮುಖನಾದ ಆ ದೇವನನ್ನು ಯಾವಾಗಲೂ ಪೂಜಿಸಬೇಕು.

ಇಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ವಿನಾಯಕ ಪೂಜಾವಿಧಿ ನಿರೂಪಣ ಎಂಬ ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕತ್ರಿಂಶೋಽಧ್ಯಾಯಃ

॥ ಸುಮಂತುರುವಾಚ ॥

ಶಿವಾ ಶಾಂತಾ ಸುಖಾ ರಾಜನ್ ಚತುರ್ಥೀ ತ್ರಿವಿಧಾ ಸ್ಮೃತಾ ।
ಮಾಸಿ ಭಾದ್ರಪದೇ ಶುಕ್ಲಾ ಶಿವಾ ಲೋಕೇಷು ಪೂಜಿತಾ ॥ ೧ ॥

ತಸ್ಯಾಂ ಸ್ನಾನಂ ತಥಾ ದಾನಂ ಉಪವಾಸೋ ಜಪಸ್ತಥಾ ।
ಕ್ರಿಯಮಾಣಂ ಶತಗುಣಂ ಪ್ರಸಾದಾದ್ದಂತಿನೋ ನೃಪ ॥ ೨ ॥

ಗುಡಲವಣಘೃತಾನಾಂ ತು ದಾನಂ ಶುಭಕರಂ ಸ್ಮೃತಾ ।
ಗುಡಾಪೂಪೈಃ ತಥಾವೀರ ಪುಣ್ಯಂ ಬ್ರಾಹ್ಮಣಭೋಜನಂ ॥ ೩ ॥

---

## ಮೂವತ್ತೊಂದನೆಯ ಅಧ್ಯಾಯವು

೧. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ! ಚತುರ್ಥೀ ತಿಥಿಯು ಶಿವಾ, ಶಾಂತಾ, ಸುಖಾ ಎಂದು ಮೂರು ಬಗೆಯಾಗಿದೆ. ಭಾದ್ರಪದ ಶುಕ್ಲ ಪಕ್ಷದಲ್ಲಿ ಬರುವ ಚತುರ್ಥಿಯು ಶಿವಾ ಎಂಬುದು; ಇದು ಲೋಕಪೂಜಿತವಾದುದು

೨. ಎಲೈ ರಾಜನೇ! ಆ ಚತುರ್ಥಿಯ ದಿನದಲ್ಲಿ ಮಾಡುವ ಸ್ನಾನ, ದಾನ, ಜಪಗಳು ವಿನಾಯಕನ ಅನುಗ್ರಹದಿಂದ ಒಂದಕ್ಕೆ ನೂರ್ಮಡಿ ಹೆಚ್ಚುವುವೆನ್ನುವರು.

೩. ಬೆಲ್ಲ, ಉಪ್ಪು, ತುಪ್ಪ ಇವನ್ನು ಆದಿನ ದಾನಮಾಡಿದರೆ ಶುಭವಾಗುವು ದೆನ್ನುವರು. ಒಬ್ಬಟ್ಟು, ಎರೆಯಪ್ಪ ಮೊದಲಾದ ಬೆಲ್ಲದ ಭಕ್ಷ್ಯಗಳಿಂದ ಬ್ರಾಹ್ಮಣ ಭೋಜನಮಾಡಿಸುವುದು ಪುಣ್ಯಕರ.

ಯಾಸ್ತಸ್ಯಾಂ ನರಶಾರ್ದೂಲ ಪೂಜಯಂತಿ ಸದಾ ಸ್ತ್ರಿಯಃ ।
ಗುಡಲವಣ ಪೂಪೈಶ್ಚ ಶ್ವಶ್ರೂಂ ಶ್ವಶುರಮೇವ ಚ ॥ ೪ ॥

ತಾಃ ಸರ್ವಾಃ ಸುಭಗಾ ಸ್ಯುರ್ವೈ ವಿಘ್ನೇಶಸ್ಯಾನುಮೋದನಾತ್ ।
ಕನ್ಯಕಾ ತು ವಿಶೇಷೇಣ ವಿಧಿನಾನೇನ ಪೂಜಯೇತ್ ॥ ೫ ॥

॥ ಸುಮಂತುರುವಾಚ ॥

ಮಾಘೇ ಮಾಸಿ ತಥಾ ಶುಕ್ಲಾ ಯಾ ಚತುರ್ಥೀ ಮಹೀಪತೇ ।
ಸಾ ಶಾಂತಾ ಶಾಂತಿದಾ ನಿತ್ಯಂ ಶಾಂತಿಂ ಕುರ್ಯಾತ್ಸದೈವ ಹಿ ॥ ೬ ॥

ಸ್ನಾನದಾನಾದಿಕಂ ಕರ್ಮ ಸರ್ವಮಸ್ಯಾಂ ಕೃತಂ ವಿಭೋ ।
ಭವೇತ್ಸಹಸ್ರಗುಣಿತಂ ಪ್ರಸಾದಾತ್ತಸ್ಯ ದಂತಿನಃ ॥ ೭ ॥

ಕೃತೋಪವಾಸೋ ಯಸ್ತಸ್ಯಾಂ ಪೂಜಯೇದ್ವಿಘ್ನನಾಯಕಂ ।
ತಸ್ಯ ಹೋಮಾದಿಕಂ ಕರ್ಮ ಭವೇತ್ಸಾಹಸ್ರಿಕಂ ನೃಪ ॥ ೮ ॥

---

೪. ಯಾವ ಹೆಂಗಸರು ಅತ್ತೆಮಾವಂದಿರಿಗೆ ಬೆಲ್ಲದ ಭಕ್ಷ್ಯಗಳನ್ನು ಉಪ್ಪು ಹಾಕಿದ ಚಕ್ಕುಲಿ ಮೊದಲಾದುವುಗಳನ್ನು ಕೊಟ್ಟು ಪೂಜಿಸುವರೋ,

೫. ಅವರೆಲ್ಲರೂ ವಿಘ್ನೇಶನ ಪ್ರಸನ್ನತೆಯಿಂದ ಸುಭಗೆಯರೆನಿಸುವರು. ಮದುವೆಯಾಗದ ಕನ್ಯೆಯೂಕೂಡ ಈ ಮೇಲೆ ಹೇಳಿದ ವಿಧಿಯಿಂದ ಚೆನ್ನಾಗಿ ಪೂಜಿಸಬೇಕು.

೬. ಸುಮಂತಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ ! ಮಾಘಮಾಸದ ಚತುರ್ಥಿಯು ಯಾವಾಗಲೂ ಶಾಂತಿಕರವಾದುದರಿಂದ ಶಾಂತಾ ಎನಿಸಿಕೊಂಡು ಸದಾ ಶಾಂತಿಯನ್ನುಂಟುಮಾಡುವುದು.

೭. ಈ ಚತುರ್ಥಿಯಲ್ಲಿ ನಡೆಯಿಸಿದ ಸ್ನಾನ, ದಾನ, ಮೊದಲಾದ ಸಮಸ್ತ ಕರ್ಮಗಳೂ ಗಜಮುಖನಾದ ವಿಘ್ನೇಶ್ವರನ ಪ್ರಸಾದದಿಂದ ಒಂದಕ್ಕೆ ಸಾವಿರದಷ್ಟು ಫಲಪ್ರದವಾಗುವುವು.

೮. ಅಯ್ಯಾ ಭರತವಂಶಜನೇ ! ಯಾವನು ಆ ಚತುರ್ಥಿಯಲ್ಲಿ ಉಪವಾಸ ಮಾಡಿ ವಿನಾಯಕನನ್ನು ಪೂಜಿಸುವನೋ; ಅವನು ಮಾಡಿದ ಹೋಮ ಮೊದಲಾದ ಕರ್ಮವೆಲ್ಲವೂ ಒಂದಕ್ಕೆ ಸಾವಿರದಷ್ಟು ಫಲಪ್ರದವಾಗುವುದು.

ಲವಣಂ ಚ ಗುಡಂ ಶಾಕಂ ಗುಡಪೂಪಾಂಶ್ಚ ಭಾರತ ।
ದತ್ವಾ ಭಕ್ತ್ಯಾ ತು ವಿಪ್ರೇಭ್ಯಃ ಫಲಂ ಸಾಹಸ್ರಿಕಂ ಭವೇತ್ ॥ ೯ ॥

ವಿಶೇಷತಃ ಸ್ತ್ರಿಯೋ ರಾಜನ್ ಪೂಜಯಂತ್ಯೋ ಗುಹಂ ನೃಪ ।
ಗುಡಲವಣ ಘೃತೈರ್ವೀರ ಸದಾ ಸ್ಯುರ್ಭಾಗ್ಯಸಂಯುತಾಃ ॥ ೧೦ ॥

ಇತಿ ಶಾಂತಾಕಲ್ಪಃ

॥ ಸುಮಂತುರುವಾಚ ॥

ಸುಖಾವಹಾ ಚ ಸುಸುಖಾ ಸೌಭಾಗ್ಯಕರಣೀ ಪರಂ ॥ ೧೧ ॥

ಚತುರ್ಥೀ ಕುರುಶಾರ್ದೂಲ ರೂಪಸೌಭಾಗ್ಯದಾ ಶುಭಾ ।
ಸುಖಾವ್ರತಂ ಮಹಾಪುಣ್ಯಂ ರೂಪದಂ ಭಾಗ್ಯದಂ ತಥಾ ॥ ೧೨ ॥

---

೯. ಅಯ್ಯಾ ಭರತವಂಶಜನೇ ! ಬ್ರಾಹ್ಮಣರಿಗೆ ಉಪ್ಪು, ಬೆಲ್ಲ, ಕಾಯಿಪಲ್ಯ, ಗಳು ಬೆಲ್ಲಹಾಕಿದ ಭಕ್ಷ್ಯಗಳು ಇವುಗಳನ್ನು ಭಕ್ತಿಯಾಗಿ ದಾನಮಾಡುವುದರಿಂದ ಬರುವ ಫಲವು ಒಂದಕ್ಕೆ ಸಾವಿರದಷ್ಟಾಗುವುದು.

೧೦. ಅಯ್ಯಾ ನರಪತಿಯೇ ! ಬೆಲ್ಲ, ತುಪ್ಪ, ಉಪ್ಪು, ತುಪ್ಪ ಮುಂತಾದು ವನ್ನು ಗುರುವಿಗೆ ಸಮರ್ಪಿಸಿ ವಿಶೇಷವಾಗಿ ಪೂಜಿಸುವ ಸ್ತ್ರೀಯರು ಸದಾ ಸೌಭಾಗ್ಯ ವತಿಯರಾಗುತ್ತಾರೆ. ಇದು ಶಾಂತಕಲ್ಪವು.

೧೧. ಸುಮಂತಮುನಿವರ್ಯರು ಹೇಳುತ್ತಾರೆ—ಅಯ್ಯಾ ಕುರುಶ್ರೇಷ್ಠನೇ ! ಸುಖಾ ಎಂಬ ಚತುರ್ಥೀಕಲ್ಪವ್ರತವು ಸುಖವನ್ನು ಉಂಟುಮಾಡತಕ್ಕದ್ದು. ವಿಶೇಷ ಸುಖರೂಪವಾಗಿ ಇರತಕ್ಕದ್ದು. ಹೆಚ್ಚಾದ ಸೌಭಾಗ್ಯವನ್ನು ಉಂಟುಮಾಡತಕ್ಕದ್ದು ಮತ್ತು ಮಂಗಳಕರವೂ ಆಗಿರುತ್ತದೆ.

೧೨. ಅಯ್ಯಾ ಕುರುಶಾರ್ದೂಲನೇ ! ಸುಖಾ ಎಂಬ ಚತುರ್ಥೀ ಕಲ್ಪವ್ರತವು ಮಹಾಪುಣ್ಯಕರವೂ, ಸೌಂದರ್ಯಪ್ರದವೂ, ಭಾಗ್ಯವನ್ನು ಕೊಡತಕ್ಕದ್ದೂ, ಶುಭಕರವೂ ಆಗಿದೆ.

ಸುಸೂಕ್ಷ್ಮಂ ಸುಕರಂ ಧನ್ಯಮಿಹಪುಣ್ಯಸುಖಾವಹಂ ।
ಪರತ್ರ ಫಲದಂ ವೀರ ದಿವ್ಯರೂಪಪ್ರದಾಯಕಂ ॥ ೧೩ ॥

ಹಸಿತಂ ಲಲಿತಂ ಚೋಕ್ತಂ ಚೇಷ್ಟಿತಂ ಚ ಸುಖಾವಹಂ ।
ಸವಿಲಾಸಭುಜಕ್ಷೇಪಶ್ಚಂಕ್ರಮಶ್ಚೇಷ್ಟಿತಂ ಶುಭಂ ॥ ೧೪ ॥

ಸುಖಾವ್ರತೇನ ಸರ್ವೇಷಾಂ ಸುಖಂ ಕುರುಕುಲೋದ್ವಹ ।
ಕೃತ್ಯೇನ ಪೂಜಿತೇ ಚೇಶೇ ವಿಘ್ನೇಶೇ ಶಿವಯೋಃ ಸುತೇ ॥ ೧೫ ॥

ಯದಾ ಶುಕ್ಲಚತುರ್ಥ್ಯಾಂ ತು ವಾರೋ ಭೌಮಸ್ಯ ವೈ ಭವೇತ್ ।
ತದಾ ಸಾ ಸುಖದಾ ಜ್ಞೇಯಾ ಚತುರ್ಥೀ ವೈ ಸುಖೇತಿ ಚ ॥ ೧೬ ॥

---

೧೩. ಈ ವ್ರತವು ಹೆಚ್ಚು ವೆಚ್ಚವಿಲ್ಲದೆ ಸೂಕ್ಷ್ಮವಾಗಿ ಮಾಡಬಹುದಾದುದೂ ನಡೆಯಿಸುವುದಕ್ಕೆ ಕಷ್ಟವಿಲ್ಲದೆಯೂ, ಪುಣ್ಯಕರವಾಗಿಯೂ ಇರುವುದಲ್ಲದೆ ಇಹಲೋಕದಲ್ಲಿ ವಿಶೇಷ ಪುಣ್ಯವನ್ನೂ ಸುಖವನ್ನೂ ಉಂಟುಮಾಡುವುದು, ಮತ್ತು ಪರಲೋಕದಲ್ಲಿ ಆಗಬೇಕಾದ ಫಲವನ್ನು ಕೊಡುವುದಲ್ಲದೆ ದಿವ್ಯವಾದ ರೂಪವನ್ನೂ ಕೊಡತಕ್ಕದ್ದಾಗಿದೆ.

೧೪. ಈ ಚತುರ್ಥೀ ವ್ರತಾಚರಣ ಪ್ರಭಾವದಿಂದ ಸಂತೋಷಭರಿತವಾದ ನಗುವೂ, ಲಲಿತಾ ಎಂಬ ಶೃಂಗಾರಚೇಷ್ಠೆಯೂ, ಬೆಡಗಿನಿಂದ ಕೂಡಿ ಭುಜವನ್ನು ಕುಣಿಸುವುದು ಬೆಡಗಿನ ನಡಗೆ ಮುಂತಾದ ಶುಭಕರವಾದ ಚೇಷ್ಟೆಗಳು ವ್ರತಿಗಳಲ್ಲಿ ಉಂಟಾಗುವುದು.

೧೫–೧೬. ಅಯ್ಯಾ ಕುರುವಂಶಜನೇ! ಸುಖಾವ್ರತವನ್ನು ಆಚರಿಸಿದ ಎಲ್ಲರಿಗೂ ಸುಖವುಂಟಾಗುವುದು. ಪಾರ್ವತೀ ಪರಮೇಶ್ವರರ ಪುತ್ರನಾದ ವಿಘ್ನೇಶನನ್ನು ಪೂರ್ವೋಕ್ತ ಪೂಜಾಕಲ್ಪಗಳಲ್ಲಿ ಹೇಳಿರುವ ವಿಧಾನದಿಂದ ಪೂಜಿಸುವ ಶುಕ್ಲ ಚತುರ್ಥೀ ದಿನಕ್ಕೆ ಮಂಗಳವಾರವೂ ಸೇರಿಕೊಂಡಿದ್ದರೆ ಆಗ ಅದಕ್ಕೆ ಸುಖಾ ಎಂಬ ಅಂಕಿತದ ಚತುರ್ಥೀಕಲ್ಪ ಎಂದು ಹೆಸರು. ಇದು ಸುಖವನ್ನು ಕೊಡತಕ್ಕದ್ದು.

ಪುರಾ ಮೈಥುನಮಾಶ್ರಿತ್ಯ ಸ್ಥಿತಾಭ್ಯಾಂ ತು ಹಿಮಾಚಲೇ ।
ಭೀಮೋಮಾಭ್ಯಾಂ ಮಹಾಬಾಹೋ ರಕ್ತಬಿಂದುಶ್ಚ್ಯುತಃ ಕ್ಷಿತೌ ॥ ೧೭ ॥

ಮೇದಿನ್ಯಾ ಸ ಪ್ರಯತ್ನೇನ ಸುಖೇನ ವಿಧೃತೋಽನಯಾ ।
ಜಾತೋಽಸ್ಯಾಃ ಸ ಕುಜೋ ವೀರ ರಕ್ತೋ ರಕ್ತಸಮುದ್ಭವಃ ॥ ೧೮ ॥

ಮಮಾಂಗತೋ ಯದುತ್ಪನ್ನಃ ತಸ್ಮಾದಂಗಾರಕೋ ಹ್ಯಯಂ ।
ಅಂಗದೋಂಗೋಪಕಾರಶ್ಚ ಅಂಗಾನಾಂ ತು ಪ್ರದೋ ನೃಣಾಂ ॥ ೧೯ ॥

ಸೌಭಾಗ್ಯಾದಿಕರೋ ಯಸ್ಮಾತ್ ತಸ್ಮಾದಂಗಾರಕೋ ಮತಃ ।
ಭಕ್ತ್ಯಾ ಚತುರ್ಥ್ಯಾಂ ನಕ್ತಂ ತು ಯೋ ವೈ ಶ್ರದ್ಧಾಸಮನ್ವಿತಃ ॥ ೨೦ ॥

ಉಪಪತ್ಸ್ಯತಿ ನಾ ರಾಜನ್ ನಾರೀ ವಾ ನಾನ್ಯಮಾನಸಾ ।
ಪೂಜಯೇಚ್ಚ ಕುಜಂ ಭಕ್ತ್ಯಾ ರಕ್ತಪುಷ್ಪವಿಲೇಪನೈಃ ॥ ೨೧ ॥

---

೧೭. ಪೂರ್ವದಲ್ಲಿ ಹಿಮವತ್ಪರ್ವತದಲ್ಲಿ ಪಾರ್ವತೀ ಪರಮೇಶ್ವರರು ಮೈಥುನದಲ್ಲಿ ಆಸಕ್ತರಾಗಿದ್ದಾಗ ಒಂದು ರಕ್ತಬಿಂದುವು ಜಾರಿ ನೆಲದಮೇಲೆ ಬಿತ್ತು.

೧೮. ಆಗ ಈ ಭೂದೇವಿಯು ಆ ಬಿಂದುವನ್ನು ಅನಾಯಾಸವಾಗಿ ಸುಖದಿಂದ ಧರಿಸಿದಳು. ಎಲೈ ವೀರನೇ ! ಆ ರೀತಿ ಧರಿಸಿದ ರಕ್ತದಿಂದ ಭೂದೇವಿಯಲ್ಲಿ ಕುಜನು ಜನಿಸಿ ರಕ್ತವರ್ಣವುಳ್ಳವನಾದನು.

೧೯. ಆಗ ಶಿವನು ಅವನನ್ನು ನೋಡಿ "ನನ್ನ ಅಂಗದಿಂದ ಜನಿಸಿದುದರಿಂದ ಇವನಿಗೆ ಅಂಗಾರಕನೆಂದು ಹೆಸರಾಗಲಿ ; ಇವನು ಪ್ರಸನ್ನನಾದರೆ ಅಂಗಗಳಿಗೆ ಒಳ್ಳೆಯದನ್ನು ಮಾಡತಕ್ಕವನೂ, ಕುಪಿತನಾದರೆ ಅಂಗವನ್ನು ವಿಕಾರಮಾಡತಕ್ಕವನೂ, ಭಜಕರಿಗೆ ನ್ಯೂನವಾದ ಅಂಗಗಳನ್ನು ಪೂರ್ಣಮಾಡಿಕೊಡತಕ್ಕ ಸಮರ್ಥನೂ, ಆಗುವನು" ಎಂದನು.

೨೦-೨೧. ಹೀಗೆ ಅಂಗ ಸೌಭಾಗ್ಯ ಮೊದಲಾದುವನ್ನು ಉಂಟುಮಾಡತಕ್ಕವನಾದಕಾರಣ ಅವನನ್ನು ಅಂಗಾರಕನೆಂದು ಜನಗಳು ತಿಳಿದರು ಚತುರ್ಥೀದಿನ ರಾತ್ರಿಯಲ್ಲಿ ಭಕ್ತಿಯಿಂದಲೂ ಆಸ್ತಿಕ್ಯಬುದ್ಧಿಯಿಂದಲೂ ಕೂಡಿ ಸ್ತ್ರೀಯಾಗಲಿ ಪುರುಷನಾಗಲಿ ಮನಸ್ಸನ್ನು ಅನ್ಯತ್ರ ಹರಿಯಬಿಡದೆ ಉಪವಾಸಮಾಡಿ, ಕೆಂಪುಬಣ್ಣದ, ಗಂಧ,

ಗಣೇಶಂ ಪ್ರಥಮಂ ಭಕ್ತ್ಯಾ ಯೋಽರ್ಚಯೇಚ್ಛ್ರದ್ಧಯಾನ್ವಿತಃ ।
ತಸ್ಯ ತುಷ್ಟಃ ಪ್ರಯಚ್ಛೇತ್ಸ ಸೌಭಾಗ್ಯಂ ರೂಪಸಂಪದಂ ॥ ೨೨ ॥

ಪೂರ್ವಂ ಚ ಕೃತಸಂಕಲ್ಪಃ ಸ್ನಾನಂ ಕೃತ್ವಾ ಯಥಾವಿಧಿ ।
ಗೃಹೀತ್ವಾ ಮೃತ್ತಿಕಾಂ ವಂದೇನ್ಮಂತ್ರೇಣಾನೇನ ಭಾರತ ॥ ೨೩ ॥

ಇಹ ತ್ವಂ ವಂದಿತಾ ಪೂರ್ವಂ ಕೃಷ್ಣೇನೋದ್ಧರತಾಕಿಲ ।
ತಸ್ಮಾನ್ಮೇ ದಹ ಪಾಪ್ಮಾನಂ ಯನ್ಮಯಾ ಪೂರ್ವಸಂಚಿತಂ ॥ ೨೪ ॥

ಇಮಂ ಮಂತ್ರಂ ಪಠನ್ ವೀರ ಆದಿತ್ಯಾಯ ಪ್ರದರ್ಶಯೇತ್ ।
ಆದಿತ್ಯರಶ್ಮಿಸಂಪೂತಾಂ ಗಂಗಾಜಲಕಣೋಕ್ಷಿತಾಂ ॥ ೨೫ ॥

---

ಪುಷ್ಪಗಳಿಂದ ಭಕ್ತಿಪೂರ್ವಕವಾಗಿ ಕುಜನ ಪ್ರತಿಮೆಯನ್ನು ಪೂಜಿಸುವನಾಗಿ ತತ್ಪೂರ್ವದಲ್ಲಿ ಶ್ರದ್ಧಾಯುಕ್ತರಾಗಿ ಗಣೇಶನನ್ನು ಪೂಜಿಸಿರುತ್ತಾನೆಯೋ ಅವನಿಗೆ ಆ ಕುಜನು ತುಷ್ಟನಾಗಿ ಸೌಭಾಗ್ಯವನ್ನು ಮತ್ತು ರೂಪಸಂಪತ್ತಿಯನ್ನು ಕೊಡುವನು.

೨೩. ಎಲೈ ಭರತಕುಲೋತ್ಪನ್ನನೇ ! ಮೊದಲು ಸಂಕಲ್ಪಮಾಡಿ ವಿಧಿಯಂತೆ ಮಲಾಪಕರ್ಷಣ ಸ್ನಾನಮಾಡಿ ಮೃತ್ತಿಗೆಯನ್ನು ಕೈಗೆ ತೆಗೆದುಕೊಂಡು ಮುಂದೆ ಹೇಳುವ ಮಂತ್ರದಿಂದ ಆ ಮೃತ್ತಿಗೆಗೆ ನಮಸ್ಕಾರಮಾಡಬೇಕು. ನಾರಾಯಣೋಪನಿಷತ್ತಿನಲ್ಲಿ ಮೃತ್ತಿಕಾವಂದನ ಕ್ರಮವನ್ನು ಈರೀತಿ ಹೇಳಿದೆ.

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ।
ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥

ಇದರ ಅಭಿಪ್ರಾಯವೇ ಇಲ್ಲಿಯ ಶ್ಲೋಕದಲ್ಲಿಯೂ ಹೇಳಿದೆ.

೨೪. ಕೃಷ್ಣನು ಪೂರ್ವದಲ್ಲಿ ನಿನ್ನನ್ನು ಮೇಲಕ್ಕೆ ಎತ್ತುವಾಗ ನಿನಗೆ ನಮಸ್ಕಾರಮಾಡಿದ್ದನು ಆದ್ದರಿಂದ ನಾನೂ ನಮಿಸುತ್ತೇನೆ. ಹಿಂದೆಮಾಡಿದ ನನ್ನ ಪಾಪಗಳನ್ನೆಲ್ಲಾ ಧ್ವಂಸಮಾಡು.

೨೫–೨೬. ಅಯ್ಯಾ ವೀರನೆ ! ಈ ಮಂತ್ರವನ್ನು ಹೇಳಿಕೊಂಡು ಅದನ್ನು ಸೂರ್ಯನಿಗೆ ತೋರಿಸಬೇಕು. ಸೂರ್ಯಕಿರಣಗಳಿಂದ ಪರಿಶುದ್ಧವಾದ ಆ ಮೃತ್ತಿಗೆಗೆ ಗಂಗಾಜಲವನ್ನು ಪ್ರೋಕ್ಷಿಸಿ ಆ ಮೃತ್ತಿಗೆಯನ್ನು ತನ್ನ ತಲೆಯಮೇಲೆ ಇಟ್ಟುಕೊಂಡು

**ದತ್ವಾ ಮೃದಂ ಶಿರಸಿ ತಾಂ ಸರ್ವಾಂಗೇಷು ಚ ಯೋಜಯೇತ್ ।**
**ತತಃ ಸ್ನಾನಂ ಪ್ರಕುರ್ವೀತ ಮಂತ್ರಯೇತ ಜಲಂ ಪುನಃ ॥ ೨೬ ॥**

**ತ್ವಮಾಪೋ ಯೋನಿಃ ಸರ್ವೇಷಾಂ ದೈತ್ಯದಾನವದ್ಯೌಕಸಾಂ ।**
**ಸ್ವೇದಾಂಡಜೋದ್ಭಿದಾಂ ಚೈವ ರಸಾನಾಂ ಪತಯೇ ನಮಃ ॥ ೨೭ ॥**

**ಸ್ನಾತೋಽಹಂ ಸರ್ವತೀರ್ಥೇಷು ಸರ್ವಪ್ರಸ್ರವಣೇಷು ಚ ।**
**ತಡಾಗೇಷು ಚ ಸರ್ವೇಷು ಮಾನಸಾದಿ ಸರಸ್ಸು ಚ ॥ ೨೮ ॥**

**ನದೀಷು ದೇವಖಾತೇಷು ಸುತೀರ್ಥೇಷು ಹ್ರದೇಷು ವೈ ।**
**ಧ್ಯಾಯನ್ ಪಠನ್ನಿಮಂ ಮಂತ್ರಂ ತತಃ ಸ್ನಾನಂ ಸಮಾಚರೇತ್ ॥ ೨೯ ॥**

**ತತಃ ಸ್ನಾತ್ವಾ ಶುಚಿರ್ಭೂತ್ವಾ ಗೃಹಮಾಗತ್ಯ ವೈ ಸ್ಪೃಶೇತ್ ।**
**ದೂರ್ವಾಶ್ವತ್ಥೌ ಶಮೀಂ ದೃಷ್ಟ್ವಾ ಗಾಂ ಚ ಮಂತ್ರೇಣ ಮಂತ್ರವಿತ್॥೩೦॥**

---

ಅನಂತರ ಇತರ ಎಲ್ಲಾ ಅಂಗಗಳಿಗೂ ಲೇಪನಮಾಡಿಕೊಂಡು ಸ್ನಾನಮಾಡಬೇಕು ಮತ್ತೆ ಸ್ನಾನಕ್ಕಾಗಿ ಜಲವನ್ನು ಅಭಿಮಂತ್ರಣಮಾಡಬೇಕು.

೨೭. ಎಲೈ ಜಲವೇ ! ನೀನು ದೈತ್ಯರು ದಾನವರು ದೇವತೆಗಳು ಎಂಬ ಸರ್ವರ ಉತ್ಪತ್ತಿಗೂ ಕಾರಣವು. ಸ್ವೇದಜ, ಅಂಡಜ, ಉದ್ಭಿಜ ಎಂಬ ಪ್ರಾಣಿಗಳನ್ನು ಉಂಟುಮಾಡುವ ರಸಗಳಿಗೆ ಉತ್ಪಾದಕವು. ಇಂಥಾ ನಿನಗೆ ನಮಸ್ಕಾರ.

೨೮-೨೯. ಸ್ನಾನಕಾಲದಲ್ಲಿ "ನಾನು ಸರ್ವತೀರ್ಥಗಳಲ್ಲೂ ಎಲ್ಲಾ ಜಲಪಾತಗಳಲ್ಲೂ ಧನುಷ್ಕೋಟಿಗಳಲ್ಲಿಯೂ ಮಾನಸ ಸರಸ್ಸೇ ಮೊದಲಾದ ಸಮಸ್ತ ಸರೋವರಗಳಲ್ಲೂ, ಸಮಸ್ತ ನದಿಗಳಲ್ಲೂ ದೇವತೆಗಳಿಂದ ಅಗೆಯಲ್ಪಟ್ಟು ಶ್ರೇಷ್ಠವಾದ ತೀರ್ಥಗಳಿಂದ ತುಂಬಿದ ಪುಷ್ಕರಿಣಿ (ಮಡು) ಗಳಲ್ಲಿಯೂ ಸ್ನಾನಮಾಡುವೆನು" ಎಂಬ ಭಾವನೆಯಿರಬೇಕು. ಈ ಮುಂದಿನ ಮಂತ್ರವನ್ನು ಹೇಳುತ್ತಾ ಪೂರ್ವೋಕ್ತರೀತಿ ಧ್ಯಾನಮಾಡುತ್ತಾ ಸ್ನಾನಮಾಡಬೇಕು.

೩೦. ಮಂತ್ರಜ್ಞನಾದವನು ಸ್ನಾನಜನಿತ ಶುಚಿತ್ವ ಉಂಟಾದಮೇಲೆ ಮನೆಗೆ ಬಂದು ಹಲ್ಲುಗರಿಕೆ, ಅರಳಿಯಮರ, ಶಮೀವೃಕ್ಷ ಭೂಮಿ ಇವುಗಳನ್ನು ಮಂತ್ರದ ಉಚ್ಚಾರಣಪೂರ್ವಕವಾಗಿ ಸ್ಪರ್ಶಮಾಡಬೇಕು.

ದೂರ್ವಾಂ ನಮಸ್ಯ ಮಂತ್ರೇಣ ಶುಚೌಭೂಮೌ ಸಮುತ್ಥಿತಾಂ ।
ತ್ವಂ ದೂರ್ವೇ ವ್ಯೃತನಾಮಾಸಿ ಸರ್ವದೇವೈಸ್ತು ವಂದಿತಾ ॥ ೩೧ ॥

ವಂದಿತಾ ದಹ ತತ್ಸರ್ವಂ ದುರಿತಂ ಯನ್ಮಯಾ ಕೃತಂ ।
ಶಮೀಮಂತ್ರಂ ಪ್ರವಕ್ಷ್ಯಾಮಿ ತನ್ನಿಬೋಧ ಮಹೀಪತೇ ॥ ೩೨ ॥

ಪವಿತ್ರಾಣಾಂ ಪವಿತ್ರಾ ತ್ವಂ ಕಾಶ್ಯಪೀ ಪ್ರಥಿತಾ ಶ್ರುತೌ ।
ಶಮೀ ಶಮಯ ಮೇ ಪಾಪಂ ನೂನಂ ವೇತ್ಸಿ ಪರಾವರಾನ್ ॥ ೩೩ ॥

ಅಶ್ವತ್ಥಾಲಂಭನೇ ವೀರ ಮಂತ್ರಮೇತಂ ನಿಬೋಧ ಮೇ ।
ನೇತ್ರಸ್ಪಂದಾದಿಜಂ ದುಃಖಂ ದುಸ್ವಪ್ನಂ ದುರ್ವಿಚಿಂತನಂ ।
ಶಕ್ತಾನಾಂ ಚ ಸಮುದ್ಯೋಗಮಶ್ವತ್ಥ ತ್ವಂ ಕ್ಷಮಸ್ವ ಮೇ ॥ ೩೪ ॥

---

೩೧. ನಿರ್ಮಲವಾದ ಸ್ಥಳದಲ್ಲಿ ಬೆಳೆದಿರುವ ಗರಿಕೆಯನ್ನು ಕಿತ್ತು ಕೈಯ್ಯಲ್ಲಿ ಹಿಡಿದುಕೊಂಡು ಹೀಗೆ ಪ್ರಾರ್ಥಿಸಬೇಕು. ಎಲೈ ದೂರ್ವೆಯೇ ನೀನು ಮೋಕ್ಷ ಪ್ರದವಾದ ಹೆಸರುಳ್ಳದ್ದೂ ಎಲ್ಲಾ ದೇವತೆಗಳಿಂದ ನಮಸ್ಕರಿಸಲ್ಪಡತಕ್ಕದ್ದೂ ಆಗಿದ್ದೀ.

೩೨. ಹೀಗೆ ನನ್ನಿಂದ ನಮಸ್ಕರಿಸಲ್ಪಟ್ಟ ನೀನು ನಾನುಮಾಡಿದ ಪಾಪವೆಲ್ಲ ವನ್ನೂ ದಹಿಸು. ಈರೀತಿ ಪ್ರಾರ್ಥಿಸಬೇಕು. ಎಲೈ ರಾಜನೇ ! ಶಮೀಪ್ರಾರ್ಥನೆ ಮಾಡುವ ಮಂತ್ರವನ್ನು ಹೇಳುವೆನು ಕೇಳು.

೩೩. ಎಲೈ ಶಮಿಯೇ ! ನೀನು ಪರಿಶುದ್ಧವಸ್ತು. ಕಾಶ್ಯಪರಿಂದ ಅಭಿಮಂತ್ರಿ ಸಲ್ಪಟ್ಟ ನೀನು ಕಾಶ್ಯಪಿಯೆಂದು ವೇದದಲ್ಲಿ ಪ್ರಸಿದ್ಧಳಾಗಿರುವೆ. ಉತ್ತಮವಾವುದು, ನೀಚವಾವುದು ಎಂಬುದನ್ನು ನೀನು ಬಲ್ಲೆ. ಅಂತಹ ನೀನು ನನ್ನ ಪಾಪವನ್ನು ಶಮನಮಾಡು ಎಂದು ಶಮೀವೃಕ್ಷವನ್ನು ನಮಸ್ಕರಿಸಿ ಸ್ಪರ್ಶಮಾಡಬೇಕು.

೩೪. ಎಲೈ ವೀರನಾದ ರಾಜನೇ ! ಅಶ್ವತ್ಥಸ್ಪರ್ಶಮಾಡುವಾಗ ಹೇಳ ಬೇಕಾದ ಮಂತ್ರವನ್ನು ತಿಳಿದುಕೋ. ಎಲೈ ವೃಕ್ಷವೇ ! ಕಣ್ಣು ಅದಿರುವುದು ಮುಂತಾದ ದುಃಶಕುನದ ಕ್ಲೇಶವನ್ನು ಪರಿಹರಿಸು. ಶಕ್ತರಾದವರು ಬಂದು ನಿನ್ನಲ್ಲಿ ಪ್ರಹಾರರೂಪವಾಗಿ ಮಾಡುವ ಉದ್ಯೋಗಾದಿಗಳನ್ನೂ ಕ್ಷಮಿಸು.

ಇಮಂ ಮಂತ್ರಂ ಪಠನ್ ವೀರ ಕುರ್ಯಾದ್ವೃಕ್ಷ ಸ್ಪರ್ಶಗಂ ಬುಧಃ ।
ತತೋ ದೇವ್ಯೈತು ಗಾಂ ದದ್ಯಾತ್ ವೀರಂ ಕೃತ್ವಾ ಪ್ರದಕ್ಷಿಣಾಂ ।
ಸಮಾಲಭ್ಯ ತು ಹಸ್ತೇನ ತತೋ ಮಂತ್ರಮುದೀರಯೇತ್ ॥ ೩೫ ॥

ಸರ್ವದೇವಮಯೀ ದೇವಿ ಮುನಿಭಿಸ್ತು ಸುಪೂಜಿತಾ ।
ತಸ್ಮಾತ್ ಸ್ಪೃಶಾಮಿ ವಂದೇ ತ್ವಾಂ ವಂದಿತಾ ಪಾಪಸೂದ್ಭವ ॥ ೩೬ ॥

ಪ್ರದಕ್ಷಿಣಂ ತು ಯಃ ಕುರ್ಯಾದಶ್ವತ್ಥಂ ಕುರುನಂದನ ।
ಪ್ರದಕ್ಷಿಣೀ ಕೃತಾ ತೇನ ಪೃಥಿವೀ ಸ್ಯಾನ್ನ ಸಂಶಯಃ ॥ ೩೭ ॥

ಏವಂ ಮೌನೇನ ಚಾಗತ್ಯ ತತೋ ವಹ್ನಿಗೃಹಂ ವ್ರಜೇತ್ ।
ಪ್ರಕ್ಷಾಳ್ಯ ಚ ಮೃದಾ ಪಾದಾವಾಚಾಂತೋಽಗ್ನಿಗೃಹಂ ವಿಶೇತ್ ।
ಹೋಮಂ ತತ್ರ ಪ್ರಕುರ್ವೀತ ವಿಭಿರ್ಮಂತ್ರಪದೈರ್ವರೈಃ ॥ ೩೮ ॥

---

೩೫. ತಿಳಿದವನು ಈ ಮಂತ್ರವನ್ನು ಹೇಳುತ್ತಾ ಅಶ್ವತ್ಥಸ್ಪರ್ಶಮಾಡಬೇಕು. ಅಯ್ಯಾ ವೀರನೇ! ಅಶ್ವತ್ಥವನ್ನು ಪ್ರದಕ್ಷಿಣೆಮಾಡಿ ಅಶ್ವತ್ಥಾಭಿಮಾನಿ ದೇವಿಯನ್ನುದ್ದೇಶಿಸಿ ವಿಪ್ರರಿಗೆ ಗೋದಾನಮಾಡಬೇಕು.

೩೬. ಅನಂತರ ಕೈಯಿಂದ ಮರವನ್ನು ಮುಟ್ಟಿಕೊಂಡು "ಎಲೈ ಅಶ್ವತ್ಥವೇ! ನೀನು ಸರ್ವದೇವಮಯಿಯೂ ಮುನಿಗಳಿಂದ ಪೂಜಿತಳೂ ಆಗಿರುವೆ. ಅದ್ದರಿಂದ ನಾನು ನಿನ್ನನ್ನು ಸ್ಪರ್ಶಮಾಡುವೆನು. ವಂದಿತೆಯಾದ ನೀನು ನನ್ನ ಪಾಪಗಳನ್ನು ಹೋಗಲಾಡಿಸು" ಎಂಬ ಅರ್ಥವುಳ್ಳ ಈ ಮಂತ್ರವನ್ನು ಉಚ್ಚರಿಸಬೇಕು.

೩೭. ಅಯ್ಯಾ ಕುರುನಂದನನೇ! ಈ ಮಂತ್ರವನ್ನು ಹೇಳುತ್ತಾ ಶ್ರದ್ಧೆಗೂಡಿ ಅಶ್ವತ್ಥಪ್ರದಕ್ಷಿಣೆ ಮಾಡುವವನು ಭೂಪ್ರದಕ್ಷಿಣೆಯನ್ನೇ ಮಾಡಿದಷ್ಟು ಫಲವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೩೮. ಅಶ್ವತ್ಥಪ್ರದಕ್ಷಿಣೆ ಮಾಡಿದಮೇಲೆ ಮೌನವಾಗಿ ಮನೆಗೆ ಬಂದು ಕಾಲಿಗೆ ಮೃತ್ತಿಗೆ ಹಚ್ಚಿ ತೊಳೆದುಕೊಂಡು ಆಚಮನಮಾಡಿ ಅಗ್ನಿಹೋತ್ರದ ಮನೆಯನ್ನು ಪ್ರವೇಶಿಸಬೇಕು. ಅಲ್ಲಿ ಮುಂದೆ ಹೇಳುವ ಶ್ರೇಷ್ಠವಾದ ಮಂತ್ರಗಳಿಂದ ಅಗ್ನಿಗೆ ಹೋಮಮಾಡಬೇಕು.

ಶರ್ವಾಯ ಶರ್ವಪುತ್ರಾಯ ಕ್ಷೋಣ್ಯುತ್ಸಂಗಭವಾಯ ಚ ।
ಕುಜಾಯ ಲಲಿತಾಂಗಾಯ ಲೋಹಿತಾಂಗಾಯ ವೈ ತಥಾ ॥ ೩೯ ॥

ಓಂಕಾರಪೂರ್ವಕೈರ್ಮಂತ್ರೈಃ ಸ್ವಾಹಾಕಾರಸಮನ್ವಿತೈಃ ।
ಅಷ್ಟೋತ್ತರಶತಂ ವೀರ ಅರ್ಧಾರ್ಧಮರ್ಧಮೇವ ಚ ॥ ೪೦ ॥

ಏತೈರ್ಮಂತ್ರಪದೈರ್ಭಕ್ತ್ಯಾ ಶಕ್ತ್ಯಾ ವಾ ಕಾಮತೋ ನೃಪ ।
ಖಾದಿರೈಃ ಸುಸಮಿದ್ಭಿಸ್ತು ಚಾಜ್ಯದುಗ್ಧೈರ್ಯವೈಸ್ತಿಲೈಃ ॥ ೪೧ ॥

ಭಕ್ಷ್ಯೈರ್ನಾನಾವಿಧೈಶ್ಚಾನ್ನೈಃ ಶಕ್ತ್ಯಾ ಭಕ್ತ್ಯಾ ಸಮನ್ವಿತಃ ।
ಹುತ್ವಾಹುತೀಸ್ತತೋ ವೀರ ದೇವಂ ಸಂಸ್ಥಾಪಯೇತ್ ಕ್ಷಿತೌ ॥ ೪೨ ॥

ಸೌವರ್ಣಂ ರಾಜತಂ ವಾಪಿ ಶಕ್ತ್ಯಾ ದಾರುಮಯಂ ನೃಪ ।
ದೇವದಾರುಮಯಂ ವಾಪಿ ಶ್ರೀಖಂಡಚಂದನೈರಪಿ ॥ ೪೩ ॥

---

೩೯–೪೦. ಓಂಕಾರವು ಮೊದಲಲ್ಲಿ ಸೇರುವಂತೆಯೂ, ಸ್ವಾಹಾ ಶಬ್ದವು ಕೊನೆಯಲ್ಲಿರುವಂತೆಯೂ ಆಯಾ ದೇವತೆಗಳ ಹೆಸರನ್ನುಚ್ಚರಿಸಿ ತುಪ್ಪದಿಂದ ನೂರೆಂಟು ಹೋಮವನ್ನು ಮಾಡಬೇಕು. ಅಷ್ಟು ಶಕ್ತಿ ಇಲ್ಲದಿದ್ದರೆ ಅದರ ಅರ್ಧವನ್ನೋ, ಅದೂ ಸಾಗದಿದ್ದರೆ ಅದರ ಅರ್ಧವನ್ನೋ, ಅದೂ ಆಗದಿದ್ದರೆ ಕೈಯ್ಯಲ್ಲಿ ಎಷ್ಟು ಸಾಧ್ಯವಾದರೆ ಅಷ್ಟು ಸಾರಿಯೋ ಹೋಮಮಾಡಬೇಕು.

೪೧–೪೨. ಅಯ್ಯಾ ವೀರನೆ! ಕಗ್ಗಲಿಯ ಸಮಿತ್ತು, ತುಪ್ಪ, ಹಾಲು, ಯವ, ಎಳ್ಳು ಈ ಹೋಮದ್ರವ್ಯಗಳಿಂದಲೂ, ಬಗೆಬಗೆಯಾದ ಇತರ ಭಕ್ಷ್ಯಗಳಿಂದಲೂ, ಬಗೆಬಗೆಯ ಅನ್ನಗಳಿಂದಲೂ, ಶಕ್ತ್ಯನುಸಾರ ಭಕ್ತಿಯಿಂದ ಕೂಡಿ ಹೋಮಮಾಡಿ, ಆಮೇಲೆ ಆ ದೇವತಾಪ್ರತಿಮೆಯನ್ನು ಭೂಮಿಯಲ್ಲಿ ಸ್ಥಾಪಿಸಬೇಕು.

೪೩–೪೪. ಅಯ್ಯಾ ನೃಪೋತ್ತಮನೇ! ಚಿನ್ನವೋ, ಬೆಳ್ಳಿಯೋ, ಮರವೋ, ದೇವದಾರುಮರವೋ ಇವು ಯಾವುದರಿಂದಲಾದರೂ ಅಂಗಾರಕ ಪ್ರತಿಮೆಯನ್ನು ಮಾಡಿಕೊಂಡು ಅವನಿಗೆ ಪ್ರಿಯವಾದ ತಾಮ್ರದ ಪಾತ್ರೆಯಲ್ಲೋ ಅಥವಾ ಬೆಳ್ಳಿಯ ಪಾತ್ರೆಯಲ್ಲೋ ಇಟ್ಟು ಕುಂಕುಮಕೇಸರಿ, ತುಪ್ಪ ಇವುಗಳನ್ನು ಮಿಶ್ರಮಾಡಿ

ತಾಮ್ರೇ ಪಾತ್ರೇ ರೌಪ್ಯಮಯೇ ಚಾಜ್ಯಕುಂಕುಮಕೇಸರೈಃ ।
ಅನ್ಯೈರ್ವಾ ಲೋಹಿತೈರ್ವಾಪಿ ಪುಷ್ಪೈಃ ಪತ್ರೈಃ ಫಲೈರಪಿ ।
ರಕ್ತೈಶ್ಚ ವಿವಿಧೈರ್ವೀರ ಅಥವಾ ಶಕ್ತಿತೋಽರ್ಚಯೇತ್ ॥ ೪೪ ॥

ಯಾವದ್ವಿಸೃಜತೇ ವಿತ್ತಂ ವಿತ್ತವಾನ್ ವೀರ ಭಕ್ತಿತಃ ।
ತಾವದ್ವಿವರ್ಧತೇ ಪುಣ್ಯಂ ದಾತುಃ ಶತಸಹಸ್ರಿಕಂ ॥ ೪೫ ॥

ಅನ್ಯೇ ತಾಮ್ರಮಯೇ ಪಾತ್ರೇ ವಂಶಜೇ ಮೃಣ್ಮಯೇಽಪಿ ವಾ ।
ಪೂಜಯಂತಿ ನರಾಃ ಶಕ್ತ್ಯಾ ಕೃತ್ವಾ ಕುಂಕುಮಕೇಸರೈಃ ।
ಪುರುಷಾಕೃತಿಕೃತಂ ಪಾತ್ರ ಇಮಂ ಮಂತ್ರೈಃ ಸಮರ್ಚಯೇತ್ ॥ ೪೬ ॥

ಅಗ್ನಿರ್ಮೂರ್ಧೇತಿ ಮಂತ್ರೇಣ ಗಂಧಪುಷ್ಪಾದಿಭಿಸ್ತಥಾ ।
ಧೂಪೈರಭ್ಯರ್ಚ್ಯ ವಿಧಿವತ್ ಬ್ರಾಹ್ಮಣಾಯ ಪ್ರದೀಯತೇ ॥ ೪೭ ॥

---

ಅದನ್ನೂ, ಶ್ರೀಗಂಧವನ್ನೂ ಪ್ರತಿಮೆಗೆ ಲೇಪಮಾಡಿ ಕೆಂಪಾದ ಹೂ, ಪತ್ರೆ, ಹಣ್ಣು ಇವುಗಳಿಂದ ಶಕ್ತ್ಯನುಸಾರ ಪೂಜೆಮಾಡಬೇಕು.

೪೫. ದ್ರವ್ಯವಂತನಾದವನು ಈ ಕೆಲಸಕ್ಕಾಗಿ ಭಕ್ತಿಯಿಂದ ಎಷ್ಟು ದ್ರವ್ಯವನ್ನು ವೆಚ್ಚಮಾಡುವನೋ ಅದರ ನೂರುಪಾಲಿನಷ್ಟೋ ಸಾವಿರಪಾಲಿನಷ್ಟೋ ಪುಣ್ಯವು ಹೆಚ್ಚುತ್ತದೆ.

೪೬. ಇತರ ಜನರು ತ್ರಾಮದ ಪಾತ್ರೆಯಲ್ಲಿಯಾಗಲಿ ಬಿದರಿನ ಅಂಡೆಯಲ್ಲಾಗಲೀ ಮಣ್ಣಿನ ಪಾತ್ರೆಯಲ್ಲಾಗಲೀ ಪ್ರತಿಮೆಯನ್ನಿಟ್ಟು ಶಕ್ತ್ಯನುಸಾರ ಕೇಸರಿ, ಗಂಧ ಮುಂತಾದುವುಗಳಿಂದ ಪೂಜಿಸಬೇಕು. ಈ ಪಾತ್ರೆಯನ್ನೇ ಆರಾಧ್ಯನಾದ ದಿವ್ಯಪುರುಷನ ಆಕೃತಿಯುಳ್ಳದ್ದೆಂದು ಭಾವನೆಮಾಡಿ ಯಥೋಕ್ತ ಮಂತ್ರಗಳಿಂದ ಪೂಜಿಸಬೇಕು.

೪೭–೪೯. "ಅಗ್ನಿರ್ಮೂರ್ಧಾ........" ಎಂಬ ಮಂತ್ರದಿಂದ ಅಂಗಾರಕನನ್ನು ಆವಾಹನೆ ಮಾಡಿ ಗಂಧ, ಪುಷ್ಪ, ಧೂಪ, ದೀಪ ಮುಂತಾದುವುಗಳಿಂದ ವಿಧಿಪ್ರಕಾರ ಪೂಜಿಸಿ, ಬ್ರಾಹ್ಮಣನಿಗೆ ಬೆಲ್ಲದ ಅನ್ನ, ತುಪ್ಪ, ಹಾಲು, ಗೋದುವೆ, ಅಕ್ಕಿ ಇವು

**ಗುಡೋದನಂ ಘೃತಂ ಕ್ಷೀರಂ ಗೋಧೂಮಾನ್ ಶಾಲಿತಂಡುಲಾನ್ ।**
**ಅವೇಕ್ಷ್ಯ ಶಕ್ತಿಂ ದದ್ಯಾದ್ವೈ ದರಿದ್ರೋ ವಿತ್ತವಾಂಸ್ತಥಾ ॥ ೪೮ ॥**

**ವಿತ್ತಶಾಠ್ಯಂ ನ ಕರ್ತವ್ಯಂ ವಿದ್ಯಮಾನೇ ಧನೇ ನೃಪ ।**
**ವಿತ್ತಶಾಠ್ಯಂ ಹಿ ಕುರ್ವಾಣೋ ನಾಮುತ್ರ ಫಲಭಾಗ್ಭವೇತ್ ॥ ೪೯ ॥**

**॥ ಶತಾನೀಕ ಉವಾಚ ॥**

**ಅಂಗಾರಕೇಣ ಸಂಯುಕ್ತಾ ಚತುರ್ಥೀ ನಕ್ತಭೋಜನೈಃ ।**
**ಉಪೋಷ್ಯ ಬಹುವಾರಂ ತು ಉತಾಹೋ ಸಕೃದೇವ ತು ॥ ೫೦ ॥**

**॥ ಸುಮಂತುರುವಾಚ ॥**

**ಚತುರ್ಥೀ ಸಾ ಚತುರ್ಥೀ ತು ಯದಾಂಗಾರಕ ಸಂಯುತಾ ।**
**ಉಪೋಷ್ಯ ತತ್ರ ತತ್ರೈವ ಪ್ರದೇಯೋ ವಿಧಿವದ್ಗುಡಃ ॥ ೫೧ ॥**

---

ಗಳನ್ನು ದಾನಮಾಡಬೇಕು. ಧನಿಕನಾಗಲಿ, ದರಿದ್ರನಾಗಲಿ ತನ್ನ ಶಕ್ತಿಗೆ ಸಾಧ್ಯವಾದಷ್ಟನ್ನು ದಾನಮಾಡಬೇಕು. ಅಯ್ಯಾ ರಾಜನೇ! ಬೇಕಾದಷ್ಟು ಹಣವಿದ್ದರೂ ಖರ್ಚುಮಾಡದೆ ವಂಚನೆಮಾಡಬಾರದು. ಹೀಗೆ ವಂಚನೆಮಾಡಿದವನಿಗೆ ಪರಲೋಕದಲ್ಲಿ ಫಲವಾಗುವುದಿಲ್ಲ ಎಂದನು.

೫೦. ಶತಾನೀಕರಾಜನು ಕೇಳುತ್ತಾನೆ—ಶುಕ್ಲ ಚತುರ್ಥೀಯುಕ್ತವಾದ ಮಂಗಳವಾರದಲ್ಲಿ ಹಗಲ್ಲೆಲ್ಲಾ ಉಪವಾಸವಿದ್ದು ರಾತ್ರಿ ಭೋಜನಮಾಡಬೇಕು ಎಂಬ ಕ್ರಮದ ಈ ವ್ರತವನ್ನು ಅವನ ಜೀವಮಾನದಲ್ಲಿ ಅನೇಕಸಾರಿ ಬಂದರೂ ಮಾಡಬೇಕೇ ಅಥವಾ ಒಂದುಸಲ ಮಾಡಿದರೂ ಸಾಕೆ? " ಎಂದನು.

೫೧. ಸುಮಂತುಮುನಿವರ್ಯರು ಹೇಳುತ್ತಾರೆ—ಚತುರ್ಥೀಯೆಂದರೆ ಮಂಗಳವಾರಯುಕ್ತವಾದ ಶುಕ್ಲ ಚತುರ್ಥಿಯೇ ಎಂದು ಇಲ್ಲಿ ಉದ್ದೇಶ್ಯವೇ ಹೊರತು ಬೇರೆಯಿಲ್ಲ. ಹೀಗೆ ಯಾವ ಯಾವ ಶುಕ್ಲ ಚತುರ್ಥಿಯಲ್ಲಿ ಮಂಗಳವಾರದ ಸಂಬಂಧವಿದೆಯೋ ಆಯಾ ಚತುರ್ಥಿಯ ದಿನ ಉಪವಾಸವನ್ನೂ ಗುಡದಾನವನ್ನೂ ಮಾಡಬೇಕು.

**ಉಪೋಷ್ಯ ನಕ್ತೇನ ವಿಭೋ ಚತಸ್ರಃ ಕುಜಸಂಯುತಾಃ ।**
**ಚತುರ್ಥ್ಯಾಂ ಚ ಚತುರ್ಥ್ಯಾಂ ಚ ವಿಧಾನಂ ಶೃಣು ಯಾದೃಶಂ ॥ ೫೨ ॥**

**ಸೌವರ್ಣಂ ತು ಕುಜಂ ಕೃತ್ವಾ ಸ ವಿನಾಯಕಮಾದರಾತ್ ।**
**ದಶಸೌವರ್ಣಿಕಂ ಮುಖ್ಯಂ ದಶಾರ್ಧಮರ್ಧಮೇವ ಚ ॥ ೫೩ ॥**

**ಸೌವರ್ಣಪಾತ್ರೇ ಕಾಪ್ಯೇವಾ ಭಕ್ತ್ಯಾ ತಾಮ್ರಮಯೇಽಪಿವಾ ।**
**ಕಾಪ್ಯಮಾನಂ ಪಲಂ ಕಾರ್ಯಂ ಪಲಾರ್ಧಮರ್ಧಮೇವ ಚ ।**
**ವಿಂಶತ್ಪಲಾನಿ ಪಾತ್ರಾಣಿ ವಿಂಶತ್ಯರ್ಧಪಲಾನಿ ವಾ ।**
**ವಿಂಶತ್ಕರ್ಷಾಣಿ ವಾ ವೀರ ವಿಂಶದರ್ಧಾರ್ಧಮೇವ ಚ ॥ ೫೪ ॥**

**ವಿತ್ತಶಕ್ತ್ಯಾ ಚ ಭಕ್ತ್ಯಾ ಚ ಪಾತ್ರೇ ತಾಮ್ರಮಯೇಽಪಿ ಚ ।**
**ಪ್ರತಿಷ್ಠಾಪ್ಯ ಗ್ರಹೇಶಂ ವೈ ವಸ್ತ್ರೈಃ ಸಂಪರಿವೇಷ್ಟಿತಂ ।**
**ವಿವಿಧೈಃ ಸಾಧಕೈ ರಕ್ತೈಃ ಪುಷ್ಪೈ ರಕ್ತೈಃ ಸಮನ್ವಿತಂ ॥ ೫೫ ॥**

---

೫೨–೫೩. ಮಂಗಳವಾರಯುಕ್ತವಾದ ನಾಲ್ಕು ಶುಕ್ಲ ಚತುರ್ಥಿಗಳಲ್ಲಿ ಹಗಲು ಉಪವಾಸಮಾಡಿ ರಾತ್ರಿ ಭೋಜನವನ್ನು ಮಾಡಿ ಈ ವ್ರತವನ್ನು ಮುಗಿಸಬೇಕು. ಪ್ರತಿಯೊಂದು ಚತುರ್ಥಿಯಲ್ಲೂ ಯಾವ ವಿಧಾನವನ್ನನುಸರಿಸಬೇಕೆಂಬುದನ್ನು ಹೇಳುವೆನು ಕೇಳು. ವಿನಾಯಕ ಪ್ರತಿಮೆ, ಅಂಗಾರಕ ಪ್ರತಿಮೆ ಇವೆರಡನ್ನೂ ಹತ್ತು ಸಾಗದಿದ್ದರೆ ಎರಡೂವರೆ ಹಣ ತೂಕದ ಚಿನ್ನದಿಂದ ಮಾಡಿಸಬೇಕು. ಅಷ್ಟಿಲ್ಲದಿದ್ದರೆ ಐದುಹಣವೋ ಅದೂ ಹಣ ತೂಕವಾದರೂ ಇರಬಹುದು.

೫೪. ಚಿನ್ನದ ಪಾತ್ರೆಯಲ್ಲಿಯೋ ಬೆಳ್ಳಿಯ ಪಾತ್ರೆಯಲ್ಲಿಯೋ ಅಥವಾ ತಾಮ್ರದ ಪಾತ್ರೆಯಲ್ಲಿಯೋ ಪ್ರತಿಮೆಯನ್ನು ಸ್ಥಾಪಿಸಬೇಕು. ಈ ಪಾತ್ರೆಗಳ ತೂಕವು ಇಪ್ಪತ್ತು ಪಲ, ಅಥವಾ ಅದರ ಅರ್ಧ ಎಂದರೆ ಹತ್ತು ಪಲವಾಗಲಿ, ಅಥವಾ ಇಪ್ಪತ್ತು ಕರ್ಷ, ಅದರ ಅರ್ಧ ಹತ್ತು ಕರ್ಷ, ಅಥವಾ ಅದರ ಕಾಲುಭಾಗ ಐದು ಕರ್ಷವಾಗಲಿ ಇರಬೇಕು.

೫೫–೫೬. ಬೆಳ್ಳಿಯ ಪಾತ್ರೆಯಾದರೆ ತೂಕ ಒಂದುಪಲ, ಅರ್ಧಪಲ, ಕಾಲು ಪಲ ಹೀಗೆ ತನಗಿರುವ ದ್ರವ್ಯಶಕ್ತಿಗನುಸಾರವಾಗಿ ಮಾಡಿಸಬೇಕು. ಅಯ್ಯಾ ರಾಜನೇ! ಮತ್ತೇನೆಂದರೆ ತಾಮ್ರದ ಪಾತ್ರೆಯಲ್ಲಿ ಅಂಗಾರಕ ಪ್ರತಿಮೆಯನ್ನು ಸ್ಥಾಪಿಸಿ ಅದಕ್ಕೆ

ಬ್ರಾಹ್ಮಣಾಯ ಸದಾ ದದ್ಯಾದ್ದಕ್ಷಿಣಾಸಹಿತಂ ನೃಪ ।
ವಾಚಕಾಯ ಮಹಾಬಾಹೋ ಗುಣಿನೇ ಶ್ರೇಯಸೇ ನೃಪ ॥ ೫೬ ॥

ಇತಿ ತೇ ಕಥಿತಾ ಪುಣ್ಯಾ ತಿಥೀನಾಮುತ್ತಮಾ ತಿಥಿಃ ।
ಯಾಮುಪೋಷ್ಯ ನರೋ ರೂಪಂ ದಿವ್ಯಮಾಪ್ನೋತಿ ಭಾರತ ॥ ೫೭ ॥

ಕಾಂತ್ಯಾ ಶ್ರೇಯಸಮಂ ವೀರ ತೇಜಸಾ ರವಿಸನ್ನಿಭಃ ।
ಪ್ರಭಯಾ ರವಿಕಲ್ಪಂ ಚ ಸಮೀರಬಲಸಂಶ್ರಿತಂ ॥ ೫೮ ॥

ಈದೃಗ್ರೂಪಂ ಸಮಾಪ್ಯೇಹ ಯಾತಿ ಭೌಮಸದೋ ನೃಪ ।
ಪ್ರಸಾದಾದ್ವಿಘ್ನನಾಥಸ್ಯ ತಥಾ ಗ್ರಹಪತೇರ್ನೃಪ ॥ ೫೯ ॥

---

ವಸ್ತ್ರವನ್ನು ಹೊದ್ದಿಸಿ ನಾನಾಬಗೆಯ ಕೆಂಪುಹೂ, ಪತ್ರೆ ಮುಂತಾದ ಪೂಜಾಸಾಮಗ್ರಿಗಳಿಂದ ಪೂಜಿಸಿ ಆ ಪೂಜಾದ್ರವ್ಯ ವಸ್ತ್ರ ಸಮೇತವಾಗಿಯೇ ಆ ಪ್ರತಿಮೆಯನ್ನು ಸದಕ್ಷಿಣಾಕವಾಗಿ ಗುಣವಂತನೂ ಕಲ್ಪವಿಧಿಯನ್ನು ಉಪದೇಶಮಾಡುವನೂ ಆದ ವಿಪ್ರನಿಗೆ ದಾನಮಾಡಬೇಕು.

೫೭. ಹೀಗೆ ತಿಥಿಗಳಲ್ಲೆಲ್ಲಾ ಉತ್ತಮವಾದ ಸುಖಾಕಲ್ಪಚತುರ್ಥಿಯ ವಿಷಯವನ್ನು ನಿನಗೆ ಹೇಳಿದ್ದಾಯಿತು ಆ ತಿಥಿಯಲ್ಲಿ ಉಪವಾಸಮಾಡಿದವನು ದಿವ್ಯವಾದ ರೂಪವನ್ನು ಹೊಂದುತ್ತಾನೆ.

೫೮. ಅಯ್ಯಾ ರಾಜನೇ ! ಈ ವ್ರತವನ್ನು ಮಾಡಿದವನು ಕಾಂತಿಯಲ್ಲಿ ಚಂದ್ರನಿಗೆ ಸಮಾನನೂ, ಪರಾಕ್ರಮದಲ್ಲಿಯೂ ಕಾಂತಿಯಲ್ಲಿಯೂ ಸೂರ್ಯನಿಗೆ ಸಮಾನನೂ, ಬಲದಲ್ಲಿ ವಾಯುದೇವನಿಗೆ ಸಮಾನನೂ ಆಗುವನು.

೫೯–೬೦. ಇಂತಹ ಉತ್ತಮವಾದ ರೂಪವನ್ನು ಪಡೆದು ಇಹಲೋಕ ಸುಖಾನುಭವ ಮಾಡಿದ ಮೇಲೆ ಅಂಗಾರಕನ ಲೋಕದಲ್ಲಿ ಅವನ ಸಭೆಗೆ ಹೋಗುತ್ತಾನೆ. ವಿಘ್ನೇಶನ ಮತ್ತು ಅಂಗಾರಕನ ಪ್ರಸಾದರೂಪವಾದ ಈ ಕಥೆಯನ್ನು ಹೇಳುವವರಿಗೂ ಓದುವವರಿಗೂ ಲಾಲಿಸುವವರಿಗೂ ಯಥೋಕ್ತ ವಿಧಾನದಿಂದ ಕಾರ್ಯವನ್ನು

**ಪಠತಾಂ ಶೃಣ್ವತಾಂ ರಾಜನ್ ಕುರ್ವತಾಂ ಚ ವಿಶೇಷತಃ ।**
**ಬ್ರಹ್ಮಹತ್ಯಾದಿ ಪಾಪಾನಿ ಕ್ಷೀಯಂತೇ ನಾತ್ರ ಸಂಶಯಃ ।**
**ಬುದ್ಧಿಂ ವೃದ್ಧಿಂ ತಥಾ ಲಕ್ಷ್ಮೀಂ ಲಭತೇ ನಾತ್ರ ಸಂಶಯಃ ॥ ೬೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಚತುರ್ಥೀಕಲ್ಪೇ ಸುಖಾವ ಹಾಂಗಾರಕ ಚತುರ್ಥೀ ವ್ರತ ನಿರೂಪಣಂ ನಾಮ ಏಕತ್ರಿಂಶೋಽಧ್ಯಾಯಃ.**

**ಸಮಾಪ್ತಶ್ಚಾಯಂ ಚತುರ್ಥೀಕಲ್ಪಃ**



ಮಾಡತಕ್ಕವರಿಗೂ ಸಮಸ್ತಪಾಪಗಳೂ ವಿಶೇಷವಾಗಿ ಬ್ರಹ್ಮಹತ್ಯಾದಿ ಪಾಪಗಳೂ ನಾಶವಾಗುವುದರಲ್ಲಿ ಸಂಶಯವಿಲ್ಲ. ಆತನು ಅತಿಶಯವಾದ ವೃದ್ಧಿಯನ್ನೂ ಸಂಪತ್ತನ್ನೂ ಹೊಂದುತ್ತಾನೆ.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಚತುರ್ಥೀಕಲ್ಪದಲ್ಲಿ ಸುಖಾವಹಾಂಗಾರಕ ಚತುರ್ಥೀವ್ರತ ನಿರೂಪಣೆಯೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

ಚತುರ್ಥೀಕಲ್ಪವು ಸಮಾಪ್ತಿಯಾಯಿತು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವಾತ್ರಿಂಶೋಽಧ್ಯಾಯಃ

॥ ಸುಮಂತುರುವಾಚ ॥

ಪಂಚಮೀ ದಯಿತಾ ರಾಜನ್ ನಾಗಾನಾಂ ನಂದಿವರ್ಧಿನೀ ।
ಪಂಚಮ್ಯಾಂ ಕಿಲ ನಾಗಾನಾಂ ಭವತೀತ್ಯುತ್ಸವೋ ಮಹಾನ್ ॥ ೧ ॥

ವಾಸುಕೀ ತಕ್ಷಕಶ್ಚೈವ ಕಾಲೀಯೋ ಮಣಿಭದ್ರಕಃ ।
ಐರಾವತೋ ಧೃತರಾಷ್ಟ್ರಃ ಕರ್ಕೋಟಕಧನಂಜಯೌ
ಏತೇ ಪ್ರಯಚ್ಛಂತ್ಯಭಯಂ ಪ್ರಾಣಿನಾಂ ಪ್ರಾಣಜೀವಿತಾಂ ॥ ೨ ॥

ಪಂಚಮ್ಯಾಂ ಸ್ನಪಯಂತೀಹ ನಾಗಾನ್ ಕ್ಷೀರೇಣ ಯೋ ನರಾಃ ।
ತೇಷಾಂ ಕುಲೇ ಪ್ರಯಚ್ಛಂತಿ ತೇಽಭಯಂ ಪ್ರಾಣದಕ್ಷಿಣಾಂ ॥ ೩ ॥

---

## ಮೂವತ್ತೆರಡನೆಯ ಅಧ್ಯಾಯವು

೧. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ! ಸಂತೋಷ ವೃದ್ಧಿಕರವಾದ ಪಂಚಮೀ ತಿಥಿಯು ಸರ್ಪಗಳಿಗೆ ಪ್ರಿಯವಾದುದು. ಪಂಚಮಿಯು ಸರ್ಪಗಳಿಗೆ ದೊಡ್ಡ ಉತ್ಸವದ ದಿನವಾಗಿದೆ.

೨. ಇದನ್ನು ಆಚರಿಸಿದರೆ ವಾಸುಕಿ, ತಕ್ಷಕ, ಕಾಲಿಯ, ಮಣಿಭದ್ರಕ, ಐರಾವತ, ಧೃತರಾಷ್ಟ್ರ, ಕರ್ಕೋಟಕ, ಧನಂಜಯ ಎಂಬ ಈ ನಾಗಗಳು ಪ್ರಾಣಿಗಳ ಪ್ರಾಣಗಳನ್ನು ಬದುಕಿಸಿ ಅಭಯವನ್ನು ಕೊಡುತ್ತವೆ.

೩. ಪಂಚಮಿಯ ದಿನ ಯಾವ ಮನುಷ್ಯರು ನಾಗಪ್ರಮುಖರಿಗೆ ಹಾಲಿನಿಂದ ಅಭಿಷೇಕ ಮಾಡುವರೋ ಅವರ ಕುಲದವರಿಗೆಲ್ಲಾ ಆ ನಾಗರು ಹೆದರಬೇಡಿರೆಂಬ ಅಭಯದಕ್ಷಿಣೆಯನ್ನೂ ಪ್ರಾಣವುಳಿಸುವುದೆಂಬ ಪ್ರಾಣದಕ್ಷಿಣೆಯನ್ನೂ ಕೊಡುವರು.

ಶಪ್ತಾನ್ಮಾಗಾ೯ ಯಥಾ ಮಾತ್ರಾ ದಹ್ಯಮಾನಾ ದಿವಾನಿಶಂ ।
ನಿರ್ವಾಪಯಂತಿ ಸ್ನಪನ್ಯೈಃ ಗವಾಂ ಕ್ಷೀರೇಣ ವರ್ಧಿತೈಃ ॥ ೪ ॥

ಯೇ ಸ್ನಾಪಯಂತಿ ವೈ ನಾಗಾನ್ ಭಕ್ತ್ಯಾ ಶ್ರದ್ಧಾ ಸಮನ್ವಿತಾಃ ।
ತೇಷಾಂ ಕುಲೇ ಸರ್ಪಭಯಂ ನಭವೇದಿತಿ ನಿಶ್ಚಯಃ ॥ ೫ ॥

॥ ಶತಾನೀಕ ಉವಾಚ ॥

ಮಾತ್ರಾ ಶಪ್ತಾಃ ಕಥಂ ನಾಗಾಃ ಕಿಂ ಸಮುದ್ದಿಶ್ಯ ಕಾರಣಂ ।
ಕಥಂ ಚಾನಂದಕರಣಂ ಕಸ್ಯ ವಾ ಸಂಪ್ರಸಾದಜಂ ॥ ೬ ॥

॥ ಸುಮಂತುರುವಾಚ ॥

ಉಚ್ಚೈಃಶ್ರವಾ ಅಶ್ವರತ್ನಂ ಶ್ವೇತೋ ಜಾತೋಽಮೃತೋದ್ಭವಃ ।
ತಂ ದೃಷ್ಟ್ವಾ ಚಾಬ್ರವೀತ್ ಕದ್ರೂಃ ನಾಗಾನಾಂ ಜನನೀ ಸ್ವಸಾಂ ॥ ೭ ॥

---

೪-೫. ತಾಯಿಯಿಂದ ಶಾಪಹೊಂದಿ, ಹಗಲೂ ರಾತ್ರಿ ದುಃಖದಿಂದ ಬೇಯುತ್ತಿರುವ ಸರ್ಪಗಳಿಗೆ ಹಾಲು, ನೀರುಗಳಿಂದ ತನಿ ಎರೆದು ಯಾರು ಅವುಗಳ ದುಃಖ ಶಮನಮಾಡುವರೋ ಅಂತಹ ಭಕ್ತಿಶ್ರದ್ಧೆಯಿಂದ ಯುಕ್ತರಾದವರ ಕುಲದಲ್ಲಿ ಸರ್ಪಭಯ ಉಂಟಾಗುವುದಿಲ್ಲ ಎಂಬುದು ನಿಶ್ಚಯ.

೬. ಶತಾನೀಕರಾಜನು ಕೇಳುತ್ತಾನೆ—ಯಾವ ಕಾರಣವನ್ನುದ್ದೇಶಿಸಿ ತಾಯಿಯು ಸರ್ಪಗಳನ್ನು ಏನೆಂದು ಶಪಿಸಿದಳು? ಅವರಿಗೆ ಆನಂದವುಂಟಾಗುವುದು ಯಾರ ಅನುಗ್ರಹದಿಂದ? ಅದನ್ನು ಹೇಳು ಎಂದನು.

೭. ಸುಮಂತುಮುನಿವರ್ಯರು ಹೇಳುತ್ತಾರೆ—ಕ್ಷೀರಸಮುದ್ರದಲ್ಲಿ ಹುಟ್ಟಿದ ಉಚ್ಚೈಃಶ್ರವಸ್ಸೆಂಬ ಶ್ರೇಷ್ಠವಾದ ಕುದುರೆಯು ಬಿಳಿಯ ಬಣ್ಣ ಉಳ್ಳದ್ದಾಗಿತ್ತು. ಸರ್ಪಗಳ ತಾಯಿಯಾದ ಕದ್ರುವು ಅದನ್ನು ನೋಡಿ ಸವತಿಯಾದ ವಿನಿತೆಯನ್ನು ಕುರಿತು,

ಅಶ್ವರತ್ನಮಿದಂ ಶ್ವೇತಂ ಸಂಪ್ರೇಕ್ಷ್ಯೇಽಮೃತ ಸಂಭವಂ ।
ಕೃಷ್ಣಾಂಶ್ಚ ವೀಕ್ಷಸೇ ವಾಲಾನ್ ಸರ್ವಂ ಶ್ವೇತಮುತಾಂಬ ರೇ ॥ ೮ ॥

॥ ವಿನತೋವಾಚ ॥

ಸರ್ವಶ್ವೇತೋ ಹಯವರೋ ನಾಸ್ಯ ಕೃಷ್ಣೋ ನ ಲೋಹಿತಃ ।
ಕಥಂ ಪಶ್ಯಸಿ ಕೃಷ್ಣಂ ತ್ವಂ ವಿನತೋವಾಚ ತಾಂ ಸ್ವಸಾಂ ॥ ೯ ॥

॥ ಕದರುವಾಚ ॥

ವೀಕ್ಷೇಹಮೇಕನಯನಾ ಕೃಷ್ಣವಾಲ ಸಮನ್ವಿತಂ ।
ದ್ವಿನೇತ್ರಾ ತ್ವಂ ತು ವಿನತೇ ನ ಪಶ್ಯಸಿ ಪಣಂ ಕುರು ॥ ೧೦ ॥

॥ ವಿನತೋವಾಚ ॥

ಅಹಂ ದಾಸೀ ಭವಿತ್ರೀ ತೇ ಕೃಷ್ಣೇ ಕೇಶೇ ಪ್ರದರ್ಶಿತೇ ।
ನಚೇದ್ದರ್ಶಯಸೇ ಕದ್ರು ಮಮ ದಾಸೀ ಭವಿಷ್ಯಸಿ ॥ ೧೧ ॥

---

೮. "ಅಮೃತಸಮುದ್ರದಲ್ಲಿ (ಹಾಲಿನ ಸಮುದ್ರದಲ್ಲಿ) ಹುಟ್ಟಿದ ಈ ಶ್ರೇಷ್ಠವಾದ ಕುದುರೆ ಅಚ್ಚಬೆಳ್ಳಗೆ ಇರುವುದನ್ನು ನಾನು ನೋಡುತ್ತೇನೆ—"ಎಲಾ ಅಮ್ಮಾ ಇದೇನು ನೀನು ಬಾಲವು ಕಪ್ಪಗೆ ಕಾಣುವುದೆನ್ನುವೆ! ಹಾಗಿಲ್ಲ; ಸಂಪೂರ್ಣವಾಗಿ ಬೆಳ್ಳಗೇ ಇರುವುದು." ಎಂದಳು.

೯. "ಕುದುರೆಯು ಸರ್ವಾಂಗವೂ ಬೆಳ್ಳಗೇ ಇರುವುದು. ಇದರ ಅಂಗಗಳಲ್ಲಿ ಕಪ್ಪಾದುದಾಗಲಿ, ಕೆಂಪಾದುದಾಗಲಿ ಯಾವುದೂ ಇಲ್ಲ. ನಿನಗೆ ಕಪ್ಪಗೆ ಕಂಡುದು ಹೇಗೆ?" ಎಂದು ವಿನತೆಯು ಆ ತನ್ನ ತಂಗಿಯಾದ ಕದ್ರುವನ್ನೇ ಕೇಳಿದಳು.

೧೦. "ಒಂದು ಕಣ್ಣುಳ್ಳ ನನಗೇ ಇದರ ಬಾಲ ಕಪ್ಪಗೆ ಕಾಣುವುದು. ವಿನತೇ! ನಿನಗೆ ಎರಡು ಕಣ್ಣುಗಳಿದ್ದೂ ಕಾಣುವುದಿಲ್ಲವೇ. ಆದುದರಿಂದ ಈಗ ಈ ವಿಷಯದಲ್ಲಿ ಹಟವನ್ನು ಕಟ್ಟು" ಎಂದು ಕದ್ರುವು ತಂಗಿಗೆ ಹೇಳಿದಳು.

೧೧. ಆಗ ವಿನತೆಯು ಹೇಳುತ್ತಾಳೆ—"ಎಲೌ ಕದ್ರುವೇ! ನೀನು ಅದರ ದೇಹದಲ್ಲಿ ಕರೀಕೂದಲನ್ನು ತೋರಿಸಿದರೆ ನಾನು ನಿನ್ನ ದಾಸಿಯಾಗುವೆನು. ನೀನು ತೋರಿಸದಿದ್ದರೆ ನೀನೇ ನನ್ನ ದಾಸಿಯಾಗಬೇಕು. ಹಟಕಟ್ಟು." ಎಂದಳು.

ಏವಂ ತೇ ವಿಪಣಂ ಕೃತ್ವಾ ಗತೇ ಕ್ರೋಧಸಮನ್ವಿತೇ ।
ವಿನತಾ ಶಯನೇ ಸುಪ್ತಾ ಕದ್ರೂ ಜಿಹ್ಮಮಚಿಂತಯತ್ ॥ ೧೨ ॥

ಆಹೂಯ ಪುತ್ರಾನ್ ಪ್ರೋವಾಚ ವಾಲಾ ಭೂತ್ವಾ ಹಯೋತ್ತಮೇ ।
ತಿಷ್ಠಧ್ವಂ ವಿಪಣೇ ಜೇಷ್ಯೇ ವಿನತಾಂ ಜಯಗರ್ಧಿನೀಂ ॥ ೧೩ ॥

ಪ್ರೋಚುಸ್ತೇ ಜಿಹ್ಮಬುದ್ಧಿಂ ತಾಂ ನಾಗಾಂ ಮಾತಾಂ ವಿಗೃಹ್ಯ ತು ।
ಅಧರ್ಮ್ಯಮೇತನ್ಮಾತಸ್ತೇ ನ ಕರಿಷ್ಯಾಮ ತೇ ವಚಃ ॥ ೧೪ ॥

ತಾನ್ ಶಶಾಪ ರುಷಾ ಕದ್ರೂಃ ಪಾವಕೋ ವಃ ಪ್ರಧಕ್ಷ್ಯತಿ ।
ಗತೇ ಬಹುತಿಥೇ ಕಾಲೇ ಪಾಂಡವೋ ಜನಮೇಜಯಃ ॥ ೧೫ ॥

ಸರ್ಪಸತ್ರಂ ತು ಕರ್ತಾ ವೈ ಭುವಿ ಹ್ಯನ್ಯೈಃ ಸುದುಷ್ಕರಂ ।
ತಸ್ಮಿನ್ ಸತ್ರೇ ಸ ತಿಗ್ಮಾಂಶುಃ ಪಾವಕೋ ವಃ ಪ್ರಧಕ್ಷ್ಯತಿ ॥ ೧೬ ॥

---

೧೨. ಹೀಗೆ ಅವರಿಬ್ಬರೂ ಜೂಜುಕಟ್ಟಿಕೊಂಡು ಕೋಪದಿಂದ ಹೊರಟು ಹೋದರು. ವಿನತೆಯು ಶಾಂತಚಿತ್ತಳಾಗಿ ಹಾಸಿಗೆಯಲ್ಲಿ ಮಲಗಿಕೊಂಡಳು. ಕದ್ರುವು ಮನದಲ್ಲಿ ಒಂದು ಕುಟಿಲವನ್ನು ಚಿಂತಿಸಿದಳು.

೧೩. ಕೂಡಲೆ ತನ್ನ ಮಕ್ಕಳಾದ ನಾಗರನ್ನು ಕರೆದು, " ನೀವೆಲ್ಲರೂ ಸೇರಿ ಕುದುರೆಯ ಬಾಲದಲ್ಲಿ ಕರಿಯಕೂದಲಾಗಿ ನೆಲಸಿ. ನೀವು ಇಷ್ಟುಮಾಡಿದರೆ ಜಯದಿಂದ ಜಂಬ ಕೊಚ್ಚಿಕೊಳ್ಳುವ ವಿನತೆಯನ್ನು ಜೂಜಿನಲ್ಲಿ ಗೆಲ್ಲುವೆನು " ಎಂದಳು.

೧೪. ವಕ್ರಬುದ್ಧಿಯುಳ್ಳ ತಮ್ಮ ತಾಯಿಯನ್ನು ನೋಡಿ ನಾಗರು ಜಗಳ ಮಾಡಿ " ತಾಯೇ ಇದು ನಿನಗೆ ಧರ್ಮವಲ್ಲ. ನಿನ್ನ ಮಾತಿನಂತೆ ನಾವು ನಡೆಯುವುದಿಲ್ಲ" ಎಂದರು.

೧೫. ಆಗ ಕದ್ರುವು ಕೋಪದಿಂದ ಶಪಿಸುವವಳಾಗಿ " ನಿಮಗೆ ಬೆಂಕಿ ತಗಲಿ ನಿಮ್ಮನ್ನು ಸುಡಲಿ. ಇನ್ನು ಕೆಲವು ದಿನಗಳು ಕಳೆಯಲು ಪಾಂಡವರ ವಂಶದಲ್ಲಿ ಜನಮೇಜಯನೆಂಬವನು ಜನಿಸುವನು.

೧೬. ಆ ಮಹಾರಾಜನು ಇತರರು ಮಾಡಲು ಅಸಾಧ್ಯವಾದ ಸರ್ಪಯಾಗವನ್ನು ಮಾಡುವನು. ಆ ಯಾಗದಲ್ಲಿ ತೀಕ್ಷ್ಣವಾದ ಪ್ರಕಾಶವುಳ್ಳ ಅಗ್ನಿಯು ನಿಮ್ಮನ್ನು ಸುಡುವನು " ಎಂದಳು.

ಏವಂ ಶಪ್ತ್ವಾ ರುಷಾ ಕದ್ರೂಃ ಕಿಂಚಿನ್ನೋಕ್ತವತೀ ತು ಸಾ ।
ಮಾತ್ರಾ ಶಪ್ತಾಸ್ತಥಾ ನಾಗಾಃ ಕರ್ತವ್ಯಂ ನಾನ್ವಪದ್ಯತ ॥ ೧೭ ॥

ವಾಸುಕಿಂ ದುಃಖಿತಂ ಜ್ಞಾತ್ವಾ ಬ್ರಹ್ಮಾ ಪ್ರೋವಾಚ ಸಾಂತ್ವಯನ್ ।
ಮಾ ಶುಚೋ ವಾಸುಕೇತ್ಯರ್ಥಂ ಶೃಣು ಮದ್ವಚನಂ ಪರಂ ॥ ೧೮ ॥

ಯಯಾವರಕುಲೇ ಜಾತೋ ಜರತ್ಕಾರುರಿತಿ ದ್ವಿಜಃ ।
ಭವಿಷ್ಯತಿ ಮಹಾತೇಜಾಃ ತಸ್ಮಿನ್ ಕಾಲೇ ತಪೋನಿಧಿಃ ॥ ೧೯ ॥

ಭಗಿನೀಂ ಚ ಜರತ್ಕಾರುಂ ತಸ್ಮೈ ತ್ವಂ ಪ್ರತಿದಾಸ್ಯಸಿ ।
ಭವಿತಾ ತಸ್ಯ ಪುತ್ರೋಽಸೌ ಆಸ್ತೀಕ ಇತಿ ವಿಶ್ರುತಃ ॥ ೨೦ ॥

ಸ ತತ್ಸತ್ರಂ ಪ್ರವೃದ್ಧಂ ವೈ ನಾಗಾನಾಂ ಭಯದಂ ಮಹತ್ ।
ನಿಷೇಧ್ಯೈಃ ಸುಮತಿರ್ವಾಗ್ಭಿಃ ಅಗ್ರ್ಯಾಭಿಸ್ತಂ ನವಿಷ್ಯತಿ ॥ ೨೧ ॥

---

೧೭. ಹೀಗೆಂಬದಾಗಿ ಕದ್ರುವು ಕೋಪದಿಂದ ಶಪಿಸಿ ಮುಂದೆ ಏನೂ ಮಾತಾಡದೆ ಸಮ್ಮನಾದಳು. ತಾಯಿಯು ಶಾಪಕೊಟ್ಟರೂ ಸರ್ಪಗಳು (ದಿಗಿಲುಬಿದ್ದು) ತಮಗೆ ಆಜ್ಞಾಪಿಸಿದ ಕೆಲಸವನ್ನು ಮಾಡುವುದಕ್ಕೆ ಒಪ್ಪಲಿಲ್ಲ.

೧೮. ಆಗ ಕದ್ರುಪುತ್ರರಲ್ಲಿ ಮುಖ್ಯನಾದ ವಾಸುಕಿಯು ದುಃಖಿತನಾದುದನ್ನು ತಿಳಿದು ಬ್ರಹ್ಮನು ಅವನನ್ನು ಸಂತೈಸುತ್ತಾ ಹೀಗೆ ಹೇಳಿದನು. "ಅಯ್ಯಾ ವಾಸುಕಿಯೇ, ಸುಮ್ಮನೇ ದುಃಖಿಸಬೇಡ. ಶ್ರೇಷ್ಠವಾದ ನನ್ನ ಮಾತನ್ನು ಕೇಳು.

೧೯-೨೦. ಆ ಜನಮೇಜಯನ ಕಾಲಕ್ಕೆ ಯಾಯಾವರ ಎಂಬ ಕುಲದಲ್ಲಿ ಜರತ್ಕಾರು ಎಂಬ ಬ್ರಾಹ್ಮಣನು ಜನಿಸುವನು. ಅವನು ತಪೋನಿಧಿಯೂ ಮಹಾತೇಜಸ್ವಿಯೂ ಆಗಿರುವನು. ನಿನ್ನ ತಂಗಿಯಾದ ಜರತ್ಕಾರುವನ್ನು ಆ ಜರತ್ಕಾರು ಮುನಿಗೆ ಕೊಡುತ್ತೀಯೆ. ಈರೀತಿ ಕನ್ಯಾಪರಿಗ್ರಹಮಾಡಿದ ಆ ಜರತ್ಕಾರುವಿಗೆ ನಿನ್ನ ತಂಗಿಯಾದ ಜರತ್ಕಾರುವಿನಲ್ಲಿ ಆಸ್ತೀಕನೆಂಬ ಮಗನು ಹುಟ್ಟುವನು.

೨೧. ಇದಾದ ಕೆಲವು ದಿನಗಳ ಮೇಲೆ ನಾಗಗಳಿಗೆ ಭಯಂಕರವಾದ ಸರ್ಪಯಾಗ ಒಂದು ದೊಡ್ಡದಾಗಿ ನಡೆಯುವುದು. ಸರ್ಪಯಾಗ ಮಾಡುತ್ತಲಿರುವ ಜನಮೇಜಯನನ್ನು ಆ ಸುಮತಿಯಾದ ಆಸ್ತೀಕನು "ನಿನ್ನಂಥ ಮಹಾತ್ಮನಿಗೆ ಇದು ತರವಲ್ಲ ಎಂದು ಮುಂತಾದ ನಿಷೇಧವಾಕ್ಯಗಳಿಂದ ಸ್ತುತಿಸಿ, (ಮುಂದುವರಿಯಗೊಡುವುದಿಲ್ಲ.)

**ತದಿಮಾಂ ಭಗಿನೀಂ ರಾಜನ್ ತಸ್ಯ ತ್ವಂ ಪ್ರತಿದಾಸ್ಯಸಿ ।**
**ಜರತ್ಕಾರುಂ ಜರತ್ಕಾರೋಃ ಪ್ರದದ್ಯಾ ಅವಿಚಾರಯನ್ ॥ ೨೨ ॥**

**ಯದಾ ಸಾ ಪ್ರಾರ್ಥತೇsರಣ್ಯೇ ಯತ್ಕಿಂಚಿದ್ಧಿ ವದಿಷ್ಯತಿ ।**
**ತತ್ಕರ್ತವ್ಯಮಶಂಕೇನ ಯದೀಚ್ಛೇಃ ಶ್ರೇಯ ಆತ್ಮನಃ ॥ ೨೩ ॥**

**ಪಿತಾಮಹವಚಃ ಶ್ರುತ್ವಾ ವಾಸುಕಿಃ ಪ್ರಣಿಪತ್ಯ ಚ ।**
**ತಥಾಕರೋತ್ ಯಥಾ ಚೋಕ್ತಂ ಯತ್ನಂ ಚ ಪರಮಂ ಸ್ಥಿತಃ ॥ ೨೪ ॥**

**ತಚ್ಛ್ರುತ್ವಾ ಪನ್ನಗಾಃ ಸರ್ವೇ ಪ್ರಹರ್ಷೋತ್ಫುಲ್ಲಲೋಚನಾಃ ।**
**ಪುನರ್ಜಾತಮಿವಾತ್ಮಾನಂ ಮೇನಿರೇ ಭುಜಗೋತ್ತಮಾಃ ॥ ೨೫ ॥**

**ತತ್ರ ಸತ್ರಂ ಮಹಾಬಾಹೋ ತವ ಪಿತ್ರಾ ಪ್ರವರ್ತಿತಂ ।**
**ಋತ್ವಿಗ್ಭಿಃ ಸ ಹಿ ತೇನೇಹ ಸರ್ವಲೋಕೇಷು ದುಷ್ಕರಂ ॥ ೨೬ ॥**

---

೨೨. "ನೀನು ಮಾತ್ರ ನಿನ್ನ ತಂಗಿಯಾದ ಜರತ್ಕಾರುವನ್ನು ಕೊಡೆಂದು ಅರಣ್ಯವಾಸಿಯಾದ ಆ ಮುನಿವರ್ಯಜರತ್ಕಾರುವು ಸ್ವಲ್ಪ ಸೂಚನೆಯಾಗಿ ಪ್ರಾರ್ಥಿಸಿದರೂ ಆಗ ವಿಚಾರ ಮಾಡದೆ ಕೊಟ್ಟುಬಿಡಬೇಕು"

೨೩. "ನಿನಗೆ ಶ್ರೇಯಸ್ಸಾಗಬೇಕೆಂಬ ಅಪೇಕ್ಷೆಯಿದ್ದರೆ ನಾನು ಹೇಳಿದ ಈ ಕೆಲಸವನ್ನು ಸಂಶಯಪಡದೆ ಮಾಡು." ಎಂದು ಹೇಳಿದನು.

೨೪. ಈರೀತಿಯಾಗಿ ಬ್ರಹ್ಮನು ಹೇಳಿದುದನ್ನು ಕೇಳಿದಮೇಲೆ ವಾಸುಕಿಯು ಬ್ರಹ್ಮನಿಗೆ ನಮಸ್ಕರಿಸಿ ಮಹಾಪ್ರಯತ್ನದಿಂದ ಬ್ರಹ್ಮನು ಹೇಳಿದ ಪ್ರಕಾರವೇ ಒಪ್ಪಿದನು.

೨೫. ಈ ವಿಚಾರವನ್ನು ಕೇಳಿ ಸಂತೋಷಹೊಂದಿದ ಮಹಾಸರ್ಪಗಳ ಕಣ್ಣುಗಳೆಲ್ಲವೂ ಅರಳಿದವು. ಮತ್ತು ತಮಗೆ ಪುನರ್ಜನ್ಮ ಬಂದಿತೆಂದುಕೊಂಡುವು.

೨೬. ಅಯ್ಯಾ ಮಹಾನುಭಾವನಾದ ಶತಾನೀಕ! ನಿನ್ನ ತಂದೆಯಾದ ಜನಮೇಜಯನು ಸರ್ಪಯಾಗವನ್ನು ಮಾಡತೊಡಗಿ ಬೇಕಾದಷ್ಟು ಮಂದಿ ಋತ್ವಿಕ್ಕುಗಳಿಂದ ಕೂಡಿದವನಾಗಿ ಇದು ದುಷ್ಕರವಾದ ಯಾಗವೆಂದು ಎಲ್ಲಾ ಲೋಕಗಳಲ್ಲಿಯೂ ಖ್ಯಾತವಾಗುವಂತೆ ವಿಸ್ತಾರವಾಗಿ ನಡೆಸುವನು.

ಪ್ರೋಕ್ತಂ ಚ ವಿಷ್ಣುನಾ ಪೂರ್ವಂ ಧರ್ಮಪುತ್ರಸ್ಯ ಧೀಮತಃ ।
ಅವಶ್ಯಂ ತಸ್ಯ ಭವಿತಾ ನಾಗಾನಾಂ ಭಯಕಾರಕಂ ॥ ೨೭ ॥

ತಸ್ಮಾತ್ ಕಾಲಾಂತರಾತ್ ರಾಜನ್ ಸಾಗ್ರೇ ವರ್ಷಶತೇ ಗತೇ ।
ತತ್ಸತ್ರಂ ಭವಿತಾ ಘೋರಂ ನಾಗಾನಾಂ ಕ್ಷಯಕಾರಕಂ ॥ ೨೮ ॥

ಯಾಸ್ಯಂತ್ಯಧರ್ಮಭರಿತಾ ದಂದಶೂಕಾ ವಿಷೋಲ್ಬಣಾಃ ।
ಕೋಟಿಸಂಖ್ಯಾ ಮಹಾರಾಜ ನಿಪತಿಷ್ಯಂತ್ಯಹರ್ನಿಶಂ ॥ ೨೯ ॥

ಅಪೂರ್ವೇ ತು ನಿಮಗ್ನಾನಾಂ ಘೋರೇ ರೌದ್ರಾಗ್ನಿಸಾಗರೇ ।
ಆಸ್ತೀಕಸ್ತತ್ರ ಭವಿತಾ ತೇಷಾಂ ನೌರ್ವಹ್ನಿಸಾಗರೇ ॥ ೩೦ ॥

ಶ್ರುತ್ವಾಸಚಾಗ್ನಿಂ ರಾಜಾನಂ ಋತ್ವಿಜಸ್ತದನಂತರಂ ।
ನಿವರ್ತಯಿಷ್ಯತೇ ಯಾಗಂ ನಾಗಾನಾಂ ಮೋಹನಂ ಪರಂ ॥ ೩೧ ॥

---

೨೭. ಈ ವಿಚಾರವನ್ನು ಪೂರ್ವದಲ್ಲಿ ಕೃಷ್ಣಪರಮಾತ್ಮನು ಬುದ್ಧಿಶಾಲಿಯಾದ ಧರ್ಮರಾಜನಿಗೆ ಹೇಳಿದ್ದನು. ಇದು ಪರಮಾತ್ಮನ ವಾಣಿಯಾದ್ದರಿಂದ ನಾಗಗಳಿಗೆಲ್ಲಾ ಭಯಂಕರವಾದ ಸರ್ಪಯಾಗವು ಮುಂದೇ ನಡೆದೇ ನಡೆಯುವುದು.

೨೮-೨೯. ಆದುದರಿಂದ ಎಲೈ ರಾಜನೇ ! ನೂರಾರುವರ್ಷಗಳು ಕಳೆದಮೇಲೆ ಸರ್ಪಗಳ ಕ್ಷೀಣತೆಗೆ ಕಾರಣವಾದ ಆ ಸರ್ಪಯಾಗವು ನಡೆಯುವುದು. ಆಗ ಅಧರ್ಮ ಕೃತ್ಯಗಳನ್ನು ಸಮೃದ್ಧಿಯಾಗಿ ಮಾಡಿದವೂ, ಕ್ರೂರವಿಷಉಳ್ಳವೂ ಆದ ನಾಗಗಳು ಕೋಟಿಗಟ್ಟಲೆಯಾಗಿ ಬಂದು ಹಗಲೂ ರಾತ್ರಿಯೂ ಆ ಯಾಗದ ಅಗ್ನಿಯಲ್ಲಿ ಬೀಳುತ್ತವೆ.

೩೦. ಅಪೂರ್ವವೂ ಸಮುದ್ರದಂತೆ ವಿಸ್ತಾರವೂ ಭಯಂಕರವೂ ಆಗಿರುವ ಆ ಅಗ್ನಿಸಮುದ್ರದಲ್ಲಿ ಮುಳುಗಿರುವ ಸರ್ಪಗಳಿಗೆ ಈ ಜರತ್ಕಾರುವಿನ ಪುತ್ರನಾದ ಆಸ್ತಿಕನು ಅಗ್ನಿಸಮುದ್ರವನ್ನು ದಾಟುವುದಕ್ಕಾಗಿ ಉಪಯೋಗಿಸಬೇಕಾದ ನಾವೆಯು ಸದೃಶನಾಗುವನು.

೩೧. ಆ ಆಸ್ತಿಕನು ಈ ವಿಚಾರ ತಿಳಿದು ಯಜ್ಞಾಗ್ನಿಯನ್ನೂ, ಯಾಗ ಮಾಡುವ ರಾಜನನ್ನೂ, ಆ ಮೇಲೆ ಯಾಗದಲ್ಲಿ ಸಹಾಯಕರಾಗಿ ಕೆಲಸಮಾಡುವ ಋತ್ವಿಕ್ ಜನರನ್ನೂ ತಡೆದು ಸರ್ಪಗಳಿಗೆಲ್ಲಾ ಪ್ರಜ್ಞೆತಪ್ಪುವಂತಿದ್ದ ಆ ಸರ್ಪಯಾಗವನ್ನು ನಿಲ್ಲಿಸುವನು.

**ಪಂಚಮ್ಯಾಂ ತತ್ರಭವತಾ ಬ್ರಹ್ಮಣೋಕ್ತಾಃ ಭುಜಂಗಮಾಃ ।**
**ತಸ್ಮಾದಿಯಂ ಮಹಾಬಾಹೋ ಪಂಚಮೀ ದಯಿತಾ ಸದಾ ।**
**ನಾಗಾನಾಮಾನಂದಕರೀ ದತ್ತಾ ವೈ ಬ್ರಹ್ಮಣಾ ಪುರಾ ॥ ೩೨ ॥**

**ಕೃತ್ವಾ ತು ಭೋಜನಂ ಪೂರ್ವಂ ಬ್ರಾಹ್ಮಣಾನಾಂ ತು ಕಾಮತಃ ।**
**ವಿಸೃಜ್ಯ ನಾಗಾಃ ಪ್ರೀಯಂತಾಂ ಯೇ ಕೇಚಿತ್ಪೃಥಿವೀತಲೇ ॥ ೩೩ ॥**

**ಯೇ ಚ ಹೇಲಿಮರೀಚಿಸ್ಥಾಃ ಯೇಂತರೇ ದಿವಿ ಸಂಸ್ಥಿತಾಃ ।**
**ಯೇ ನದೀಷು ಮಹಾನಾಗಾ ಯೇ ಸರಸ್ವತಿಗಾಮಿನಃ ।**
**ಯೇ ಚ ವಾಪೀ ತಡಾಗೇಷು ತೇಷು ಸರ್ವೇಷು ವೈ ನಮಃ ॥ ೩೪ ॥**

**ನಾಗಾನ್ ವಿಪ್ರಾಂಶ್ಚ ಸಂಪೂಜ್ಯ ವಿಸೃಜ್ಯ ಚ ಯಥಾರ್ಥತಃ ।**
**ತತಃ ಪಶ್ಚಾತ್ತು ಭುಂಜೀತ ಸಹ ಭೃತ್ಯೈರ್ನರಾಧಿಪ ॥ ೩೫ ॥**

---

೮೦. ಪೂಜ್ಯನಾದ ಬ್ರಹ್ಮನು ಪಂಚಮಿಯಲ್ಲಿ ಸರ್ಪಗಳಿಗೆ ಇದನ್ನು ಹೇಳಿದನು. ಆದ್ದರಿಂದ ಎಲೈ ಮಹಾಬಾಹುವೇ! ಈ ಪಂಚಮಿಯು ಯಾವಾಗಲೂ ಸರ್ಪಗಳಿಗೆ ಪ್ರಿಯವೂ ಆನಂದಕರವೂ ಆಗಲೆಂದು ಬ್ರಹ್ಮನು ಪೂರ್ವದಲ್ಲಿ ಅನುಗ್ರಹಿಸಿ ಕೊಟ್ಟನು.

೩೩. ಪೂಜಾನಂತರ ವಿಸರ್ಜಿಸುವ ಮೊದಲು ಸಂತುಷ್ಟಿಯಾಗುವಂತೆ ಬ್ರಾಹ್ಮಣರಿಗೆ ಭೋಜನಮಾಡಿಸಿ "ಈ ಭೋಜನ ಅರ್ಚನಾದಿಗಳಿಂದ ಭೂಮಂಡಲದಲ್ಲಿರುವ ಸರ್ಪಗಳೆಲ್ಲವೂ ಸುಪ್ರೀತವಾಗಲಿ" ಎಂದು ಹೇಳಿ ಆಮೇಲೆ ವಿಸರ್ಜನೆ ಮಾಡಬೇಕು.

೩೪. ಸೂರ್ಯಕಿರಣಗಳಲ್ಲಿರುವ ಸರ್ಪಗಳು, ಅಂತರಿಕ್ಷ ಮಧ್ಯದಲ್ಲಿರುವ ಸರ್ಪಗಳು, ನದಿಗಳಲ್ಲಿರತಕ್ಕವು. ಸಮುದ್ರದಲ್ಲಿ ಹೊಕ್ಕಿರುವುವು, ಭಾವಿ, ಕೆರೆ, ಇವುಗಳಲ್ಲಿರತಕ್ಕವು, ಮುಂತಾದ ಎಲ್ಲ ಸರ್ಪಗಳಿಗೂ ನಮಸ್ಕಾರ ಎಂದು ಹೇಳಬೇಕು.

೩೫. ಎಲೈ ಶತಾನೀಕನೇ! ಬ್ರಾಹ್ಮಣರನ್ನು ಚೆನ್ನಾಗಿ ಸತ್ಕರಿಸಿ ಯಥಾರ್ಥವಾಗಿ ವಿಸರ್ಜನೆಮಾಡಬೇಕು. (ಎಂದರೆ ಅವರ ಮನೆಗಳಿಗೆ ಕಳುಹಿಸಬೇಕು). ಅನಂತರ ತಾನೂ ತನ್ನ ಸೇವಕರೂ ಭೋಜನಮಾಡಬೇಕು.

ಪೂರ್ವಂ ಮಧುರಮಶ್ನೀಯಾತ್ ತತೋ ಭುಂಜೀತ ಕಾಮತಃ ।
ಏವಂ ನಿಯಮಯುಕ್ತಸ್ಯ ಯತ್ಫಲಂ ತನ್ನಿಬೋಧ ಮೇ ॥ ೩೬ ॥

ಮೃತೋ ನಾಗಪುರಂ ಯಾತಿ ಪೂಜ್ಯಮಾನೋಽಪ್ಸರೋಗಣೈಃ ।
ವಿಮಾನವರಮಾರೂಢೋ ರಮತೇ ಕಾಲಮೀಪ್ಸಿತಂ ॥ ೩೭ ॥

ಇಹ ಚಾಗತ್ಯ ರಾಜಾಸೌ ವಸುಧಾಯಾಃ ವರೋ ಭವೇತ್ ।
ಸರ್ವರತ್ನಸಮೃದ್ಧಃ ಸ್ಯಾತ್ ವಾಹನಾಢ್ಯಶ್ಚ ಜಾಯತೇ ॥ ೩೮ ॥

ಪಂಚಜನ್ಮಾನ್ಯಸೌ ರಾಜಾ ದ್ವಾಪರೇ ದ್ವಾಪರೋ ಭವೇತ್ ।
ಆದಿವ್ಯಾಧಿವಿನಿರ್ಮುಕ್ತಃ ಪತ್ನೀಪುತ್ರಸಹಾಯವಾನ್ ॥ ೩೯ ॥

---

೩೬. ಭೋಜನಕ್ಕೆ ಕುಳಿತಾಗ ಮೊದಲು ಮಧುರವಾದ ಪಾಯಸ ಮುಂತಾದುವನ್ನು ಸವಿದು ಅನಂತರ ಬೇಕಾದ್ದನ್ನು ಭೋಜನಮಾಡಬೇಕು. ಈರೀತಿ ನಿಯಮವನ್ನು ಅನುಸರಿಸಿ ನಡೆದವನಿಗೆ ಬರುವ ಫಲವೇನೆಂಬುದನ್ನು ಕೇಳು.

೩೭. ಈ ನಿಯಮಿಷ್ಠನು ದೇಹತ್ಯಾಗಾನಂತರ ಅಪ್ಸರಸ್ತ್ರೀಯರಿಂದ ಪೂಜಿತನಾಗಿ ನಾಗಲೋಕಕ್ಕೆ ಹೋಗುತ್ತಾನೆ. ಅಲ್ಲಿ ಶ್ರೇಷ್ಠವಾದ ವಿಮಾನವನ್ನೇರಿ ಇಷ್ಟಬಂದಷ್ಟು ಕಾಲದವರೆಗೆ ಕ್ರೀಡಿಸುತ್ತಾನೆ. ಆಮೇಲೆ ಮತ್ತೆ ಈ ಲೋಕಕ್ಕೆ ಬಂದು ಶ್ರೇಷ್ಠನಾದ ಭೂಪತಿಯಾಗುತ್ತಾನೆ.

೩೮. ಹಾಗೆಂದರೆ ಸರ್ವರತ್ನಗಳನ್ನೂ ಸಮೃದ್ಧಿಯಾಗಿ ಹೊಂದಿದವನೂ ಆನೆ ಕುದುರೆ ಮುಂತಾದ ಅನೇಕ ವಾಹನಗಳಿಂದ ಕೂಡಿದವನೂ ಅನೇಕ ರಾಜರುಗಳಿಗೆ ಅಧಿರಾಜನೂ ಆಗುವನು.

೩೯. ದ್ವಾಪರಯುಗದಲ್ಲಿಯಾದರೆ ಐದು ಜನ್ಮಗಳ ಪರ್ಯಂತ ರಾಜನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ಹೀಗೆ ಈ ವ್ರತಿಯು ಮನೋವ್ಯಥೆಯೂ ದೇಹವ್ಯಾಧಿಗಳೂ ಇಲ್ಲದವನಾಗಿ ಪತ್ನೀಪುತ್ರರ ಸಹಾಯವನ್ನು ಪಡೆದು ಸುಖವಾಗಿರುತ್ತಾನೆ. ಆದುದರಿಂದ ಘೃತಯುಕ್ತವಾದ ಪಾಯಸವನ್ನು ನಾಗಗಳಿಗೆ ಅರ್ಪಿಸಿ ಗುಗ್ಗುಳದ ಧೂಪಹಾಕಿ ಪೂಜಿಸಬೇಕು.

॥ ಶತಾನೀಕ ಉವಾಚ ॥

**ದಶಂತಿ ಯೇ ನರಂ ವಿಪ್ರ ನಾಗಾಃ ಕ್ರೋಧಸಮನ್ವಿತಾಃ ।**
**ಭವೇತ್ಕಿಂ ತಸ್ಯ ದಷ್ಟಸ್ಯ ವಿಸ್ತರಾದ್ಬ್ರೂಹಿ ಮೇ ದ್ವಿಜ ॥ ೪೦ ॥**

॥ ಸುಮಂತುರುವಾಚ ॥

**ನಾಗದಷ್ಟೋ ನರೋ ರಾಜನ್ ಪ್ರಾಪ್ಯ ಮೃತ್ಯುಂ ವ್ರಜತ್ಯಧಃ ।**
**ಅಧೋ ಗತ್ವಾ ಭವೇತ್ಸರ್ಪೋ ನಿರ್ವಿಷೋ ನಾತ್ರ ಸಂಶಯಃ ॥ ೪೧ ॥**

॥ ಶತಾನೀಕ ಉವಾಚ ॥

**ನಾಗದಷ್ಟಃ ಪಿತಾ ಯಸ್ಯ ಭ್ರಾತಾ ವಾ ದುಹಿತಾಪಿ ವಾ ।**
**ಮಾತಾ ಪುತ್ರೋಥ ವಾ ಭಾರ್ಯಾ ಕಿಂ ಕರ್ತವ್ಯಂ ವದಸ್ವ ಮೇ ॥ ೪೨ ॥**

**ಮೋಕ್ಷಾಯ ತಸ್ಯ ವಿಪ್ರೇಂದ್ರ ದಾನಂ ವ್ರತಮುಪೋಷಣಂ ।**
**ಬ್ರೂಹಿ ತದ್ದ್ವಿಜಶಾರ್ದೂಲ ಯೇನ ತದ್ವೈ ಕರೋಮ್ಯಹಂ ॥ ೪೩ ॥**

---

೪೦　ಶತಾನೀಕರಾಜನು ಹೇಳುತ್ತಾನೆ—ಅಯ್ಯಾ ವಿಪ್ರಶ್ರೇಷ್ಠರೇ ! ಈ ಸರ್ಪಗಳು ಕೋಪಗೊಂಡವುಗಳಾಗಿ ಮನುಷ್ಯನನ್ನು ಕಡಿದಾಗ, ಹಾಗೆ ಹಾವು ಕಡಿದವನಿಗೆ ಮುಂದಿನಗತಿ ಏನಾಗುವುದೆಂಬುದನ್ನು ವಿಸ್ತಾರವಾಗಿ ಹೇಳಿ.

೪೧.　ಸುಮಂತುಮುನಿವರ್ಯರು ಹೇಳುತ್ತಾರೆ—ಹಾವು ಕಚ್ಚಿದ ಮನುಷ್ಯನು ವಿಷವೇರಿ ಪ್ರಜ್ಞೆತಪ್ಪಿ ಕೆಳಗೆ ಬಿದ್ದು ಮೃತನಾಗುತ್ತಾನೆ. ಅಯ್ಯಾ ರಾಜನೇ ! ಹೀಗೆ ಸತ್ತವನು ಅಧೋಲೋಕದಲ್ಲಿ ವಿಷವಿಲ್ಲದ ಹಾವಾಗಿ ಹುಟ್ಟುವನು. ಇದರಲ್ಲಿ ಸಂಶಯವಿಲ್ಲ.

೪೨–೪೩.　ಶತಾನೀಕರಾಜನು ಕೇಳುತ್ತಾನೆ—ಅಯ್ಯಾ ವಿಪ್ರನೇ ! ಯಾವನಾದರೊಬ್ಬನ ಸಂಸಾರದಲ್ಲಿ ತಂದೆ, ತಾಯಿ, ಹೆಂಡತಿ; ಮಗ, ಮಗಳು, ಸಹೋದರ ಮುಂತಾದ ಯಾರಿಗಾದರೂ ಸರ್ಪ ಕಚ್ಚಿದರೆ ಸದ್ಯ ಆ ದೋಷದಿಂದ ಬಿಡುಗಡೆಯಾಗಿ ಮುಂದೆ ಸಂಭವಿಸದಂತೆ ಇರುವುದಕ್ಕಾಗಿ ಯಾವ ಉಪವಾಸ, ದಾನ, ವ್ರತ ಇವುಗಳನ್ನು ಮಾಡಬೇಕು ? ಎಂಬುದನ್ನು ದಯವಿಟ್ಟು ಹೇಳು. ನಾನೂ ಮಾಡುತ್ತೇನೆ" ಎಂದು ಹೇಳಿದನು.

॥ ಸುಮಂತುರುವಾಚ ॥

ಉಪೋಷ್ಯ ಪಂಚಮೀ ರಾಜನ್ ನಾಗಾನಾಂ ಪುಷ್ಟಿವರ್ಧಿನೀ ।
ತ್ವಮೇವಮೇಕಂ ರಾಜೇಂದ್ರ ವಿಧಾನಂ ಶೃಣು ಭಾರತ ॥ ೪೪ ॥

ಮಾಸಿ ಭಾದ್ರಪದೇ ಯಾ ತು ಕೃಷ್ಣಪಕ್ಷೇ ಮಹೀಪತೇ ।
ಮಹಾಪುಣ್ಯಾ ತು ಸಾ ಪ್ರೋಕ್ತಾ ಗ್ರಾಹ್ಯಾಪಿ ಚ ಮಹೀಪತೇ ॥ ೪೫ ॥

ಜ್ಞೇಯಾ ದ್ವಾದಶಪಂಚಮ್ಯೋ ಹಾಯನೇ ಭರತರ್ಷಭ ।
ಚತುರ್ಥ್ಯಾಂತ್ವೇಕಭುಕ್ತಂ ತು ತಸ್ಯಾಂ ನಕ್ತಂ ಪ್ರಕೀರ್ತಿತಂ ॥ ೪೬ ॥

ಭುವಿ ಚಿತ್ರಮಯಾನ್ ನಾಗಾನ್ ಅಥವಾ ಕಲಧೌತಕಾನ್ ।
ಕೃತ್ವಾ ದಾರುಮಯಾನ್ ವಾಪಿ ಅಥವಾ ಮೃಣ್ಮಯಾನ್ನೃಪ ॥ ೪೭ ॥

ಪಂಚಮ್ಯಾಮರ್ಚಯೇದ್ಭಕ್ತ್ಯಾ ನಾಗಾನಾಂ ಪಂಚಕಂ ನೃಪ ।
ಕರವೀರೈಃ ಶತಪತ್ರೈಃ ಜಾತೀಪುಷ್ಪೈಶ್ಚ ಸುವ್ರತ ॥ ೪೮ ॥

---

೪೪. ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ಭರತಕುಲೋತ್ಪನ್ನನೇ! ನಾಗಗಳಿಗೆ ಪುಷ್ಟಿಯನ್ನು ಹೆಚ್ಚಿಸುವ ಈ ಪಂಚಮಿಯಲ್ಲಿ ಮುಖ್ಯವಾಗಿ ಉಪವಾಸಮಾಡಬೇಕು. ಅಯ್ಯಾ ರಾಜೇಂದ್ರನೇ! ಆ ಉಪವಾಸ ವಿಧಾನವನ್ನು ಹೇಳುವೆನು ಕೇಳು.

೪೫. ಅಯ್ಯಾ ರಾಜನೇ! ಭಾದ್ರಪದಮಾಸದ ಕೃಷ್ಣಪಕ್ಷದ ಪಂಚಮಿಯು ಮಹಾಪುಣ್ಯಕರವಾದುದು. ಹೊಸದಾಗಿ ವ್ರತಹಿಡಿಯುವುದಕ್ಕೂ ಸಹ ತಕ್ಕದಿನವಾಗಿದೆ.

೪೬. ಓ ಭರತಶ್ರೇಷ್ಠನೇ! ಈ ರೀತಿಯಾದ ಕೃಷ್ಣಪಂಚಮಿಗಳು ವರ್ಷದಲ್ಲಿ ಹನ್ನೆರಡು ಬರುತ್ತವೆ. ಈ ಪಂಚಮೀ ವ್ರತಹಿಡಿಯುವವನು ಚತುರ್ಥಿಯಲ್ಲಿ ಹಗಲು ಆಹಾರವೇನನ್ನೂ ಸೇವಿಸದೆ ರಾತ್ರಿ ಒಪ್ಪತ್ತು ಊಟಮಾಡತಕ್ಕುದೆಂದು ಹೇಳಿದೆ.

೪೭. ನೆಲದ ಮೇಲೆ ಬಣ್ಣದಲ್ಲಿ ಅಥವಾ ರಂಗವಲ್ಲಿಯಲ್ಲಿ ನಾಗಪ್ರತಿಮೆಯನ್ನು ಬರೆವುದು. ಅಥವಾ ಚಿನ್ನದಿಂದಲೋ, ಬೆಳ್ಳಿಯಿಂದಲೋ, ಮರದಿಂದಲೋ, ಮಣ್ಣಿನಿಂದಲೋ ಸರ್ಪಾಕೃತಿಯನ್ನು ರಚಿಸಬೇಕು.

೪೮-೪೯. ಅಯ್ಯಾ ರಾಜನೇ! ಪಂಚಮಿಯ ದಿನ ಭಕ್ತಿಯಿಂದ ಐದು ಮುಖ್ಯ ನಾಗರುಗಳನ್ನೂ ಗಂಧ, ಕಣಿಗಲೆಹೂ, ಧೂಪ, ಇವುಗಳಿಂದ ಪೂಜಿಸಿ,

**ತಥಾ ಗಂಧೈಶ್ಚ ಧೂಪೈಶ್ಚ ಪೂಜ್ಯಂ ಪಂಚಕಮುತ್ತಮಂ ।**
**ದ್ವಿಜಾನಾಂ ಭೋಜಯೇತ್ ಪಶ್ಚಾತ್ ಘೃತಪಾಯಸಮೋದಕೈಃ ॥ ೪೯ ॥**

**ಅನಂತೋ ವಾಸುಕಿಃ ಶಂಖಃ ಪದ್ಮಃ ಕಂಬಳ ಏವ ಚ ।**
**ತಥಾ ಕರ್ಕೋಟಕೋ ನಾಗೋ ನಾಗೋಽಶ್ವತರೋ ನೃಪ ॥ ೫೦ ॥**

**ಧೃತರಾಷ್ಟ್ರಃ ಶಂಖಪಾಲಃ ಕಾಲೀಯಸ್ತಕ್ಷಕಸ್ತಥಾ ।**
**ಪಿಂಗಲಶ್ಚ ತಥಾ ನಾಗೋ ಮಾಸಿ ಮಾಸಿ ಪ್ರಕೀರ್ತಿತಾಃ ॥ ೫೧ ॥**

**ವರ್ಷಾಂತೇ ಪಾರಣಂ ಕುರ್ಯಾತ್ ಬ್ರಾಹ್ಮಣಾನ್ ಭೋಜಯೇದ್ಬಹು ।**
**ಇತಿಹಾಸವಿದೇ ನಾಗಂ ಗೈರಿಕೇಣ ಕೃತಂ ನೃಪ ।**
**ತಥಾರ್ಚನಾ ಪ್ರದಾತವ್ಯಾ ವಾಚಕಾಯ ಮಹೀಪತೇ ॥ ೫೨ ॥**

**ಏಷ ವೈ ನಾಗಪಂಚಮ್ಯಾ ವಿಧಿಃ ಪ್ರೋಕ್ತೋ ಬುಧೈರ್ನೃಪ ।**
**ತವ ಪಿತ್ರಾ ಕೃತಶ್ಚೈವ ಪಿತುರ್ಮೋಕ್ಷಾಯ ಭಾರತ ॥ ೫೩ ॥**

---

ಆಮೇಲೆ ಶ್ರೋತ್ರಿಯೋತ್ತಮರಾದ ಐದುಮಂದಿ ಬ್ರಾಹ್ಮಣರಿಗೆ ತುಪ್ಪ, ಪಾಯಸ, ಕಡುಬು ಇವುಗಳಿಂದ ತುಷ್ಟಿಯಾಗುವಂತೆ ಭೋಜನಮಾಡಿಸಬೇಕು.

೫೦–೫೧. ಅಯ್ಯಾ ರಾಜನೇ ! ವರ್ಷದ ಹನ್ನೆರಡು ತಿಂಗಳಲ್ಲೂ ಕ್ರಮವಾಗಿ ಅನಂತ, ವಾಸುಕಿ, ಶಂಖ, ಪದ್ಮ, ಕಂಬಳ, ಕರ್ಕೋಟಕ, ಅಶ್ವತರ, ಧೃತರಾಷ್ಟ್ರ, ಶಂಖಪಾಲ, ಕಾಲಿಯ, ತಕ್ಷಕ, ಪಿಂಗಳ, ಎಂಬ ಹೆಸರಿನ ನಾಗಗಳನ್ನು ಅರ್ಚಿಸಬೇಕು. ಹೀಗೆ ಒಂದುವರ್ಷ ನಡೆಯಿಸಿ ಪಾರಣೆಮಾಡುವಾಗ ಬಹುಮಂದಿ ಬ್ರಾಹ್ಮಣರನ್ನು ಕರೆದು ಭೋಜನಮಾಡಿಸಬೇಕು.

೫೨. ಭಾರತಾದಿ ಇತಿಹಾಸವನ್ನು ತಿಳಿದು ಅದನ್ನು ವಾಚನ ಮಾಡುವವನಿಗೆ ಬಣ್ಣದ ಮಣ್ಣಿನಿಂದ ರಚಿಸಿದ ನಾಗಪ್ರತಿಮೆಯನ್ನು ವಿಧಿಪೂರ್ವಕವಾಗಿ ಅರ್ಚನೆ ಮಾಡಿ, ಪೂಜೆಗೆ ಉಪಯೋಗಿಸಿದ ವಸ್ತ್ರಾಭರಣ ಮೊದಲಾದ ಸಾಮಗ್ರಿಯೊಡನೆ ದಾನಮಾಡಬೇಕು.

೫೩. ಈ ನಾಗಪಂಚಮೀ ಪೂಜಾವಿಧಾನವು ವಿದ್ವಾಂಸರಿಂದ ಈರೀತಿಯಾಗಿ ಹೇಳಲ್ಪಟ್ಟಿದೆ. ಅಯ್ಯಾ ಭರತವಂಶಜನಾದ ವೀರನೇ ! ನಿನ್ನ ತಂದೆಯು ತನ್ನ ತಂದೆಯ ಮೋಕ್ಷಪ್ರಾಪ್ತಿಗಾಗಿ ಇದನ್ನು ಮಾಡಿದನು.

ತ್ವನೇಕಮೇಕಂ ವೈ ವೀರ ಪಂಚಮ್ಯಾಂ ಭರತರ್ಷಭ ।
ಸುವರ್ಣಭಾರನಿಷ್ಪನ್ನಂ ನಾಗಂ ದತ್ವಾ ತಥಾ ಚ ಗಾಂ ॥ ೫೪ ॥

ವ್ಯಾಸಾಯ ಕುರುಶಾರ್ದೂಲ ಪಿತುರಾನೃಣ್ಯಮಾಪ್ನುಯಾಃ ।
ತವ ಪಿತ್ರಾ ಕೃತಾ ಹ್ಯೇವಂ ಪಂಚಮ್ಯೋಪಾಸನಾ ನೃಪ ॥ ೫೫ ॥

ವಿಸೃಜ್ಯ ನಾಗತಾಂ ವೀರ ತವ ಪೂರ್ವಪಿತಾಮಹಃ ।
ಪುಷ್ಪೋತ್ತರಂ ಸದೋ ಗತ್ವಾ ತಥಾ ಪುಷ್ಪಸದೋ ನೃಪ ॥ ೫೬ ॥

ಸುನಾಸೀರಸದೋ ಗತ್ವಾ ತಥಾ ಭರ್ಗಸದೋ ಗತಃ ।
ಸ್ವಭೂಸದೋ ತತೋ ಗತ್ವಾ ಕಂಜಜಸ್ಯ ಸದೋ ನೃಪ ॥ ೫೭ ॥

ಅನ್ಯೇಽಪಿ ಯೇ ಕರಿಷ್ಯಂತಿ ಇದಂ ವ್ರತಮನುತ್ತಮಂ ।
ದಷ್ಟಕೋ ನೋಕ್ಷ್ಯತೇ ತೇಷಾಂ ಶುಭಂ ಸ್ಥಾನಮವಾಪ್ಸ್ಯತಿ ॥ ೫೮ ॥

---

೫೪-೫೫. ಅಯ್ಯಾ ವೀರನೇ! ಒಂದೊಂದು ಪಂಚಮಿಯಲ್ಲಿ ಒಂದೊಂದು ಭಾರ ತೂಕದ ಚಿನ್ನದಿಂದಮಾಡಿದ ಸರ್ಪವನ್ನೂ, ಒಂದು ಗೋವನ್ನೂ ವ್ಯಾಸ ಸ್ವರೂಪನಾದ ದ್ವಿಜನಿಗೆ ಸಮರ್ಪಣೆಮಾಡಿದರೆ ಪಿತೃಋಣದಿಂದ ವಿಮುಕ್ತಿಹೊಂದು ವನು.

೫೬-೫೭. ಅಯ್ಯಾ ರಾಜನೇ! ನಿಮ್ಮ ತಂದೆಯು ಇದೇ ರೀತಿಯಲ್ಲಿ ಪಂಚ ಮೀನಿಮಿತ್ತವಾದ ಉಪಾಸನೆಮಾಡಿದನು. ಇದರಿಂದ ನಿಮ್ಮ ಅಜ್ಜನು ಸರ್ಪದಂಶನ ದಿಂದ ತನಗೆ ಪ್ರಾಪ್ತವಾಗಿದ್ದ ಸರ್ಪಜನ್ಮವನ್ನು ತೊರೆದು ಪುಷ್ಪೋತ್ತರ ಸದಸ್ಸಿಗೆ ಹೋಗಿ, ಅನಂತರ ಪುಷ್ಪಸದಸ್ಸಿಗೂ, ಅಲ್ಲಿಂದ ಇಂದ್ರಸದಸ್ಸಿಗೂ, ಹಾಗೆಯೇ ಶಿವನ ಸಭೆಗೂ, ಬಳಿಕ ವಿಷ್ಣುವಿನ ಸಭೆಗೂ, ಆಮೇಲೆ ಬ್ರಹ್ಮನ ಸಭೆಗೂ ಪ್ರವೇಶಿಸಿದನು.

೫೮. ಈ ಶ್ರೇಷ್ಠವಾದ ವ್ರತವನ್ನು ಇತರರು ಯಾರು ಮಾಡಿದಾಗ್ಯೂ ಅವರು ಈ ಸರ್ಪದಂಶದಿಂದ ಉಂಟಾದ ದೋಷದಿಂದ ತಪ್ಪಿಸಿಕೊಂಡು ಶುಭಕರವಾದ ಪದವಿ ಯನ್ನು ಹೊಂದುತ್ತಾರೆ.

**ಯಶ್ಚೇದಂ ಶೃಣುಯಾನ್ನಿತ್ಯಂ ನರಃ ಶ್ರದ್ಧಾಸಮನ್ವಿತಃ ।**
**ಕುಲೇ ತಸ್ಯ ನ ನಾಗೇಭ್ಯೋ ಭಯಂ ಭವತಿ ಕುತ್ರಚಿತ್ ॥ ೫೯ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಪಂಚಮೀಕಲ್ಪೇ ನಾಗಪಂಚಮೀವ್ರತ ನಿರೂಪಣಂ ನಾಮ ದ್ವಾತ್ರಿಂಶೋಽಧ್ಯಾಯಃ**



---

೫೯. ಇದನ್ನು ಭಕ್ತಿಯಿಂದ ಯಾವನು ನಿತ್ಯವೂ ಕೇಳುತ್ತಾನೆಯೋ ಅವನ ವಂಶದವರಿಗೆ ಎಲ್ಲಿಯೂ ಯಾವಾಗಲೂ ಸರ್ಪದ ಭಯವಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ನಾಗಪಂಚಮೀವ್ರತ ನಿರೂಪಣವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಯಸ್ತ್ರಿಂಶೋಽಧ್ಯಾಯಃ

॥ ಶತಾನೀಕ ಉವಾಚ ॥

ಸರ್ಪಾಣಾಂ ಕತಿ ರೂಪಾಣಿ ಕೇ ವರ್ಣಾಃ ಕಿಂಚ ಲಕ್ಷಣಂ ।
ಕಾ ಜಾತಿಸ್ತು ಭವೇತ್ತೇಷಾಂ ಕೇಷು ಯೋನಿಕುಲೇಷು ವಾ ॥ ೧ ॥

॥ ಸುಮಂತುರುವಾಚ ॥

ಪುರಾ ಮೇರೌ ನಗವರೇ ಕಶ್ಯಪಂ ತಪಸಾಂ ನಿಧಿಂ ।
ಪ್ರಣಮ್ಯ ಶಿರಸಾ ಭಕ್ತ್ಯಾ ಗೌತಮೋ ವಾಕ್ಯಮಬ್ರವೀತ್ ॥ ೨ ॥

ಸರ್ಪಾಣಾಂ ಕತಿ ರೂಪಾಣಿ ಕಿಂ ಚಿಹ್ನಂ ಕಿಂ ಚ ಲಕ್ಷಣಂ ।
ಜಾತಿಂ ಕುಲಂ ತಥಾ ವರ್ಣಾನ್ ಬ್ರೂಹಿ ಸರ್ವಂ ಪ್ರಜಾಪತೇ ॥ ೩ ॥

---

## ಮೂವತ್ತಮೂರನೆಯ ಅಧ್ಯಾಯವು

೧. ಶತಾನೀಕರಾಜನು ಕೇಳುತ್ತಾನೆ—ಸರ್ಪಗಳಿಗೆ ಎಷ್ಟು ಬಗೆಯ ಆಕಾರಗಳಿವೆ. ಅವುಗಳ ಬಣ್ಣಗಳು ಯಾವುವು ? ಅವುಗಳ ಲಕ್ಷಣಗಳೇನು ? ಅವುಗಳ ಜಾತಿಗಳಾವುವು ? ಎಂದು ಕೇಳಲು,

೨. ಸುಮಂತುಮುನಿವರ್ಯರು ಹೇಳುತ್ತಾರೆ—ಪೂರ್ವಕಾಲದಲ್ಲಿ ಶ್ರೇಷ್ಠವಾದ ಮೇರುಪರ್ವತದಲ್ಲಿದ್ದ ತಪೋನಿಧಿಯಾದ ಕಶ್ಯಪಬ್ರಹ್ಮನಿಗೆ ಗೌತಮಋಷಿಯು ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿ, ಈ ಮಾತನ್ನು ಹೇಳಿದನು.

೩. ಎಲೈ ಕೃಪಾನಿಧಿಯಾದ ಪ್ರಜಾಪತಿಯೇ ! ಸರ್ಪಗಳಿಗೆ ಎಷ್ಟು ಆಕಾರಗಳಿವೆ ? ಅವುಗಳ ಚಿಹ್ನೆಗಳೇನು ? ಲಕ್ಷಣ ಯಾವುದು ? ಅವುಗಳ ಜಾತಿ ಕುಲ ಬಣ್ಣಗಳು ಇವುಗಳೆಲ್ಲವನ್ನೂ ಹೇಳು.

**ಕಥಂ ವಾ ಜಾಯತೇ ಸರ್ಪಃ ಕಥಂ ಮುಂಚೇದ್ವಿಷಂ ಪ್ರಭೋ ।**
**ವಿಷವೇಗಾಃ ಕತಿ ಪ್ರೋಕ್ತಾಃ ಕತ್ಯೇವ ವಿಷನಾಡಿಕಾಃ ॥ ೪ ॥**

**ದಂಷ್ಟ್ರಾಃ ಕತಿವಿಧಾಃ ಪ್ರೋಕ್ತಾಃ ಕಿಂ ಪ್ರಮಾಣಂ ವಿಷಾಗಮೇ ।**
**ಗೃಹ್ಣೀತೇ ತು ಕದಾ ಗರ್ಭಂ ಕಥಂ ಚೇಹ ಪ್ರಸೂಯತೇ ॥ ೫ ॥**

**ಕೀದೃಶೀ ಸ್ತ್ರೀ ಪುಮಾಂಶ್ಚೈವ ಕೀದೃಶಶ್ಚ ನಪುಂಸಕಃ ।**
**ಕಿಂ ನಾಮ ದಂಶನಂ ಚೈವ ಏತತ್ ಕಥಯ ಸುವ್ರತ ॥ ೬ ॥**

**ತಸ್ಯ ತದ್ವಚನಂ ಶ್ರುತ್ವಾ ಕಾಶ್ಯಪಃ ಪ್ರತ್ಯಭಾಷತ ।**
**ಶೃಣು ಗೌತಮ ತತ್ವೇನ ಸರ್ಪಾಣಾಮಿಹ ಲಕ್ಷಣಂ ॥ ೭ ॥**

**ಮಾಸ್ಯಾಷಾಢೇ ತಥಾ ಜ್ಯೇಷ್ಠೇ ಪ್ರಮಾದ್ಯಂತಿ ಭುಜಂಗಮಾಃ ।**
**ತತೋ ನಾಗೋಥ ನಾಗೀ ಚ ಮೈಥುನೇ ಸಂಪ್ರಪದ್ಯತೇ ॥ ೮ ॥**

---

೪. "ಸುವ್ರತನಾದ ಎಲೈ ಪ್ರಭುವೇ! ಸರ್ಪವು ಹೇಗೆ ಹುಟ್ಟುವುದು? ಅದು ವಿಷವನ್ನು ಸುರಿಸುವುದು ಹೇಗೆ? ವಿಷವೇಗಗಳು ಎಷ್ಟು ಬಗೆ? ಮತ್ತು ವಿಷ ಹರಿಯುವ ನಾಡಿಗಳು ಎಷ್ಟಿವೆ?

೫. ಅವುಗಳ ಕೋರೆದಾಡೆಗಳು ಎಷ್ಟು ಬಗೆಯಾಗಿವೆ? ವಿಷವು ದಾಡೆಗಳೊಳಗಿಂದ ಹೊರಗೆ ಬರುವಾಗ ಯಾವ ಪ್ರಮಾಣದಲ್ಲಿ ಬರುತ್ತದೆ? ಸರ್ಪಜಾತಿಯು ಗರ್ಭಧಾರಣೆಮಾಡುವ ಮತ್ತು ಪ್ರಸುವಿಸುವ ಕ್ರಮವಾವುದು?

೬. ಅವುಗಳಲ್ಲಿ ಪುರುಷಸರ್ಪ, ಸ್ತ್ರೀಸರ್ಪ, ನಪುಂಸಕ ಸರ್ಪಗಳು ಹೇಗೆ ಹೇಗೆ ಇರುತ್ತವೆ? ಅವು ಕಚ್ಚುವ ಪ್ರಕಾರವಾವುದು? ಇವೆಲ್ಲವನ್ನೂ ಹೇಳಬೇಕು" ಎಂದು ಕೇಳಿಕೊಂಡನು.

೭. ಆಗ ಕಶ್ಯಪಬ್ರಹ್ಮನು ಗೌತಮನ ಈ ಮಾತನ್ನು ಕೇಳಿ ಪ್ರತ್ಯುತ್ತರವಾಗಿ "ಎಲೈ ಗೌತಮನೇ! ಇಲ್ಲಿರುವ ಸರ್ಪಗಳ ಲಕ್ಷಣವನ್ನು (ಅವುಗಳ ತತ್ವವನ್ನು) ಕೇಳು.

೮. ಸಾಮಾನ್ಯವಾಗಿ ಸರ್ಪಗಳು ಆಷಾಢಮಾಸದಲ್ಲೂ, ಜ್ಯೇಷ್ಠಮಾಸದಲ್ಲೂ ಶರೀರದಮೇಲೆ ಎಚ್ಚರತಪ್ಪಿ ಮದವೇರಿರುತ್ತವೆ. ಆಗ ಗಂಡು ಹಾವೂ, ಹೆಣ್ಣು ಹಾವೂ, ಮೈಥುನಕ್ಕೆ ಪ್ರಾರಂಭಿಸುತ್ತವೆ.

ಚತುರೋ ವಾರ್ಷಿಕಾನ್ ಮಾಸಾನ್ ನಾಗೀ ಗರ್ಭಮಧಾರಯತ್ ।
ತತಃ ಕಾರ್ತಿಕಮಾಸೇ ತು ಅಂಡಕಾನಿ ಪ್ರಸೂಯತೇ ॥ ೯ ॥

ಅಂಡಕಾನಾಂ ತು ವಿಜ್ಞೇಯೋ ದ್ವೇ ಶತೇ ದ್ವೇ ಚ ವಿಂಶತೀ ।
ತಾನ್ಯೇವ ಭಕ್ಷಯೇತ್ಸಾ ತು ಭಾಗೈಕಂ ಘೃಣಯಾ ತ್ಯಜೇತ್ ॥ ೧೦ ॥

ಸ್ವರ್ಣಾರ್ಕವರ್ಣಾದೇತಸ್ಮಾತ್ ಪುಮಾನ್ ಸಂಜಾಯತೇಽಂಡಕಾತ್ ।
ತಾನ್ಯೇವ ಖಾದತೇ ಸರ್ಪ ಅಹೋರಾತ್ರಾಣಿ ವಿಂಶತಿಂ ॥ ೧೧ ॥

ಸ್ವರ್ಣಕೇತಕವರ್ಣಾಭಾತ್ ದೀರ್ಘರಾಜೀವಸನ್ನಿಭಾತ್ ।
ತಸ್ಮಾದುತ್ಪದ್ಯತೇ ಸ್ತ್ರೀ ವೈ ಅಂಡಾದ್ಬ್ರಾಹ್ಮಣಸತ್ತಮ ॥ ೧೨ ॥

ಶಿರೀಷಪುಷ್ಪವರ್ಣಾಭಾತ್ ಅಂಡಕಾತ್ ಸ್ಯಾತ್ ನಪುಂಸಕಃ ।
ತತೋ ಭಿನತ್ತಿ ಚಾಂಡಾನಿ ಷಣ್ಮಾಸೇನ ತು ಗೌತಮ ॥ ೧೩ ॥

---

೯. ವರ್ಷದಲ್ಲಿ ನಾಲ್ಕು ತಿಂಗಳಕಾಲ ಹೆಣ್ಣುಹಾವು ಗರ್ಭಧರಿಸುತ್ತದೆ. ಆ ಮೇಲೆ ಕಾರ್ತಿಕಮಾಸದಲ್ಲಿ ಅದು ಇನ್ನೂರನಲವತ್ತರವರೆಗೂ ಮೊಟ್ಟೆಗಳನ್ನು ಇಡುವುದು.

೧೦. ಆ ಹೆಣ್ಣು ಹಾವು ತನ್ನ ಮೊಟ್ಟೆಗಳನ್ನು ತಾನೇ ನುಂಗುತ್ತಾ ಹಿಂದಕ್ಕೆ ಬರುತ್ತದೆ. ಕಡೆಗೆ ಕೃಪೆಯಿಂದ ಒಂದು ಭಾಗವನ್ನು ತಿನ್ನದೆ ಉಳಿಸುವುದು.

೧೧. ಚಿನ್ನದ ಬಣ್ಣವುಳ್ಳದ್ದಾಗಿ ಸೂರ್ಯನಂತೆ ಪ್ರಕಾಶಿಸುವ ಮೊಟ್ಟೆಯಿಂದ ಗಂಡು ಮರಿ ಹುಟ್ಟುತ್ತದೆ. ಗಂಡು ಸರ್ಪವು ಹೆಣ್ಣು ಹಾವು ತಿಂದು ಉಳಿಸಿದ ಒಂದು ಭಾಗದ ಕೆಲವು ಮೊಟ್ಟೆಯನ್ನು ಇಪ್ಪತ್ತು ದಿನಗಳವರೆಗೂ, ಹಗಲಲ್ಲೋ ರಾತ್ರಿಯಲ್ಲೋ ತಿನ್ನುತ್ತದೆ.

೧೨. ಗಂಡು ಹಾವು ಹೀಗೆ ನುಂಗುವುದರಲ್ಲಿ ತಪ್ಪಿಹೋಗಿ ಉಳಿದ ಮೊಟ್ಟೆಯು ಅರಿಶಿನತಾಳೆಹೂ, ಮತ್ತು ಉದ್ದವಾದ ಕಮಲ ಇವುಗಳ ಬಣ್ಣದಂತೆ ಬಣ್ಣವುಳ್ಳದ್ದಾಗಿದ್ದರೆ ಅದರಿಂದ ಹೆಣ್ಣುಸರ್ಪ ಹುಟ್ಟುವುದು.

೧೩. ಬಾಗೆಯ ಹೂವಿನ ಬಣ್ಣದ ಮೊಟ್ಟೆಯಿಂದ ನಪುಂಸಕಸರ್ಪವು ಹುಟ್ಟುವುದು. ಅಯ್ಯಾ ಗೌತಮನೇ ! ನುಂಗದೇ ಉಳಿದ ಮೊಟ್ಟೆಗಳು ಒಡೆಯಬೇಕಾದರೆ ಆರುತಿಂಗಳಕಾಲ ಹಿಡಿಯುವುದು.

**ತತಸ್ತೇ ಪ್ರೀತಿಸಂಬಂಧಾತ್ ಸ್ನೇಹಂ ಬಧ್ನಂತಿ ಬಾಲಕಾಃ ।**
**ತತೋಽಸೌ ಸಪ್ತರಾತ್ರೇಣ ಕೃಷ್ಣೋ ಭವತಿ ಪನ್ನಗಃ ॥ ೧೪ ॥**

**ಆಯುಃ ಪ್ರಮಾಣಂ ಸರ್ಪಾಣಾಂ ಶತಂ ವಿಂಶೋತ್ತರಂ ಸ್ಮೃತಂ ।**
**ಮೃತ್ಯುಶ್ಚಾಷ್ಟವಿಧೋ ಜ್ಞೇಯಃ ಶೃಣುಷ್ವಾತ್ರ ಯಥಾಕ್ರಮಂ ॥ ೧೫ ॥**

**ಮಯೂರಾನ್ಮಾನುಷಾಚ್ಚಾಽಪಿ ಚಕೋರಾತ್ ಗೋಖುರಾತ್ತಥಾ ।**
**ಬಿಡಾಲಾನ್ನಕುಲಾಚ್ಚೈವ ವರಾಹಾತ್ ವೃಶ್ಚಿಕಾತ್ತಥಾ ।**
**ಏತೇಷಾಂ ಯದಿ ಮುಚ್ಯೇತ ಜೀವೇದ್ವಿಂಶೋತ್ತರಂ ಶತಂ ॥ ೧೬ ॥**

**ಸಪ್ತಾಹೇ ತು ತತಃ ಪೂರ್ಣೇ ದಂಷ್ಟ್ರಾಣಾಂಚಾಧಿರೋಹಣಂ ।**
**ವಿಷಸ್ಯಾಗಮನಂ ತತ್ರ ನಿಕ್ಷಿಪೇಚ್ಚ ಪುನಃ ಪುನಃ ॥ ೧೭ ॥**

---

೧೪. ಹೀಗೆ ಮೊಟ್ಟೆಯೊಡೆದುಕೊಂಡು ಹುಟ್ಟಿದ ಬಾಲಸರ್ಪಗಳು ತಮ್ಮ ಮಾತಾಪಿತೃಗಳಲ್ಲಿ ತುಂಬಾ ಪ್ರೀತಿ ತೋರಿಸುತ್ತವೆ. ಮೊಟ್ಟೆಯೊಡೆದ ಮೇಲೆ ಏಳು ರಾತ್ರಿಗಳಲ್ಲಿ ಅವು ಕರಿಯಬಣ್ಣಕ್ಕೆ ತಿರುಗುತ್ತವೆ.

೧೫. ಸರ್ಪಗಳ ಆಯುಃಪ್ರಮಾಣವು ನೂರಇಪ್ಪತ್ತು ವರ್ಷಗಳೆಂದು ತಿಳಿಯಬೇಕು. ಈ ಸರ್ಪಗಳಿಗೆ ಎಂಟು ಬಗೆಗಳಲ್ಲಿ ಮೃತ್ಯು ಸಂಭವಿಸುತ್ತದೆ. ಅವನ್ನು ಕ್ರಮವಾಗಿ ಹೇಳುತ್ತೇನೆ ಕೇಳು.

೧೬. ನವಿಲುಗಳು, ಮನುಷ್ಯರು, ಚಕೋರಪಕ್ಷಿಗಳು, ಹಸುವಿನ ಕಾಲಗೊರಸಿನತುಳಿತ, ಬೆಕ್ಕುಗಳು, ಮುಂಗುಸಿಗಳು, ಹಂದಿ, ಚೇಳುಗಳು, ಇವು ಸರ್ಪಗಳಿಗೆ ಮರಣವನ್ನುಂಟುಮಾಡುವುವು. ಇವುಗಳಿಗೆ ಸಿಕ್ಕದಂತೆ ತಪ್ಪಿಸಿಕೊಂಡರೆ ನೂರಇಪ್ಪತ್ತು ವರ್ಷಗಳು ಬದುಕೀತು.

೧೭. ಮೊಟ್ಟೆಯೊಡೆದು ಮರಿಯಾದ ಏಳು ದಿವಸಗಳಲ್ಲಿ ಅದಕ್ಕೆ ಕೋರೆಹಲ್ಲುಗಳು ಹುಟ್ಟುತ್ತವೆ. ಹಾವುಗಳಲ್ಲಿ ಉತ್ಪತ್ತಿಯಾದ ವಿಷವು ಮೇಲೆ ಮೇಲೆ ಬಂದು ಅದರಲ್ಲಿ ಶೇಖರವಾಗುವುದು.

ಏವಂ ಜ್ಞಾತ್ವಾ ತು ತತ್ತ್ವೇನ ವಿಷಕರ್ಮಾರಭೇತ ವೈ ।
ಏಕವಿಂಶತಿರಾತ್ರೇಣ ವಿಷಂ ದಂಷ್ಟ್ರಾಸು ಪೂರ್ಯತೇ ।
ನಾಗೀಪಾರ್ಶ್ವಸಮಾವರ್ತೀ ಬಾಲಸರ್ಪಃ ಸ ಉಚ್ಯತೇ ॥ ೧೮ ॥

ಪಂಚವಿಂಶತಿರಾತ್ರಸ್ತು ಸದ್ಯಃ ಪ್ರಾಣಹರೋ ಭವೇತ್ ।
ಷಣ್ಮಾಸಾಜ್ಜಾತಮಾತ್ರಸ್ತು ಕಂಚುಕಂ ವೈ ಪ್ರಮುಂಚತಿ ॥ ೧೯ ॥

ಪಾದಾನಾಂ ಚಾಪ್ಯಪಿ ವಿಜ್ಞೇಯೇ ದ್ವೇ ಶತೇ ದ್ವೇ ಚ ವಿಂಶತೀ ।
ಗೋಲೋಮಸದೃಶಾಃ ಪಾದಾಃ ಪ್ರವಿಶಂತಿ ಕ್ರಮಂತಿ ಚ ॥ ೨೦ ॥

ಸಂಧೀನಾಂ ಚಾಸ್ಯ ವಿಜ್ಞೇಯೇ ದ್ವೇಶತೇ ವಿಂಶತೀ ತಥಾ ।
ಅಂಗುಲ್ಯಶ್ಚಾಪಿ ವಿಜ್ಞೇಯಾ ದ್ವೇ ಶತೇ ವಿಂಶತೀ ತಥಾ ॥ ೨೧ ॥

---

೧೮. ಹೀಗೆ ಅವುಗಳ ತತ್ತ್ವವನ್ನು ತಿಳಿದು ವಿಷನಿರ್ಹರಣಕ್ಕೆ ಪ್ರಯತ್ನಿಸ ಬೇಕು. ಇಪ್ಪತ್ತೊಂದು ದಿನಗಳು ತುಂಬುವುದರೊಳಗೆ ಅವುಗಳ ದಾಡೆಯಲ್ಲಿ ವಿಷವು ಪೂರ್ಣವಾಗುತ್ತದೆ. ಹೆಣ್ಣುಹಾವಿನ ಜೊತೆಯಲ್ಲಿಯೇ ಓಡಾಡುವುದನ್ನು ಮರಿ ಹಾವೆಂದು ತಿಳಿಯಬೇಕು.

೧೯. ವಿಷೋತ್ಪತ್ತಿಯಾದ ಇಪ್ಪತ್ತೈದು ದಿನಗಳು ಕಳೆದಮೇಲೆ ಆ ಸರ್ಪಕ್ಕೆ ಕಡಿದಕೂಡಲೇ ಪ್ರಾಣಹರಣಮಾಡುವ ಶಕ್ತಿಯುಂಟಾಗುತ್ತದೆ. ಹುಟ್ಟಿದ ಆರು ತಿಂಗಳಮೇಲೆ ಪೊರೆ ಬಿಡುವುದಕ್ಕೆ ಮೊದಲು ಮಾಡುತ್ತದೆ.

೨೦. ಹಾವುಗಳಿಗೆ ಇನ್ನೂರನಲವತ್ತು ಕಾಲುಗಳು (ಆದರೆ ಅವು ನಡೆಯು ವುದಕ್ಕೆ ಸಹಾಯಕಗಳಾಗಿಲ್ಲ) ಹಸುವಿನ ರೋಮಗಳಂತೆ ಇವು ಸೂಕ್ಷ್ಮಗಳಾಗಿ ಇರು ವುವು. ಹಾವು ಚಲಿಸುವಾಗ ಈ ಕಾಲುಗಳು ಸರ್ಪಶರೀರದ ಒಳಗೆ ಹೋಗುವುದು, ಹೊರಕ್ಕೆ ಬರುವುದು, ಹೀಗೆ ಆಗುತ್ತಿರುತ್ತವೆ.

೨೧. ಈ ಇನ್ನೂರನಲವತ್ತು ಸೂಕ್ಷ್ಮಾವಯವವನ್ನು ಅವುಗಳ ಕೀಲು (ಸಂಧಿಸ್ಥಾನ) ಎಂದು ಕೆಲವರೂ, ಬೆರಳುಗಳು ಎಂದು ಕೆಲವರೂ ವ್ಯವಹರಿಸುತ್ತಾರೆ.

**ಅಕಾಲಜಾತಾ ಯೇ ಸರ್ಪಾಃ ನಿರ್ವಿಷಾಸ್ತೇ ಪ್ರಕೀರ್ತಿತಾಃ ।**
**ಪಂಚಸಪ್ತತಿವರ್ಷಾಣಿ ಆಯುಸ್ತೇಷಾಂ ಪ್ರಕೀರ್ತಿತಂ ॥ ೨೨ ॥**

**ರಕ್ತಪೀತಾಃ ಶುಕ್ಲದಂತಾ ಅನೀಲಾ ಮಂದವೇಗಿನಃ ।**
**ಏತೇ ಅಲ್ಪಾಯುಷೋ ಜ್ಞೇಯಾ ಅನ್ಯೇ ಚ ಭೀರವಃ ಸ್ಮೃತಾಃ ॥ ೨೩ ॥**

**ಏಕಂ ಚಾಸ್ಯಸ್ಯ ಭವೇದ್ವಕ್ತ್ರಂ ದ್ವೇ ಜಿಹ್ವೇ ಚ ಪ್ರಕೀರ್ತಿತೇ ।**
**ದ್ವಾತ್ರಿಂಶದ್ದಶನಾಃ ಪ್ರೋಕ್ತಾ ಪನ್ನಗಾನಾಂ ನ ಸಂಶಯಃ ॥ ೨೪ ॥**

**ತೇಷಾಂ ಮಧ್ಯೇ ಚತಸ್ರಸ್ತು ದಂಷ್ಟ್ರಾಯಾಃ ಸುವಿಷಾವಹಾಃ ।**
**ಮಕರೀ ಕರಾಲೀ ಕಾಳರಾತ್ರೀ ಯಮದೂತೀ ತಥೈವ ಚ ॥ ೨೫ ॥**

**ಸರ್ವಾಸಾಂ ಚೈವ ದಂಷ್ಟ್ರಾಣಾಂ ದೇವತಾಃ ಪರಿಕೀರ್ತಿತಾಃ ।**
**ಪ್ರಥಮಾ ಬ್ರಹ್ಮದೇವತ್ಯಾ ದ್ವಿತೀಯಾ ವಿಷ್ಣುದೇವತಾ ।**
**ತೃತೀಯಾ ರುದ್ರದೇವತ್ಯಾ ಚತುರ್ಥೀ ಯಮದೇವತಾ ॥ ೨೬ ॥**

---

೨೨. ಆ ಜಾತಿಗೆ ಉಕ್ತವಾದ ಕಾಲದಲ್ಲಿ ಗರ್ಭಧರಿಸಿ ಹುಟ್ಟದೆ ಇರುವ ಎಂದರೆ ಅಕಾಲದಲ್ಲಿ ಹುಟ್ಟಿದ ಸರ್ಪಗಳಿಗೆ ವಿಷವು ಇರುವುದೇಇಲ್ಲ. ಅಂಥವಕ್ಕೆ ಎಪ್ಪತ್ತೈದು ವರ್ಷಗಳು ಮಾತ್ರ ಆಯುಸ್ಸು ಎಂದು ಹೇಳಿದೆ.

೨೩. ಕೆಂಪುಬಣ್ಣದ ಹಲ್ಲು, ಹಳದೀಬಣ್ಣದ ಹಲ್ಲು, ಬಿಳೀಬಣ್ಣದ ಹಲ್ಲು, ಕಪ್ಪುಬಣ್ಣವಲ್ಲದಹಲ್ಲು ಉಳ್ಳ ಸರ್ಪಗಳಿಗೆ ವೇಗವು ಬಹಳ ಕಡಿಮೆ. ಈ ಬಗೆಯ ಸರ್ಪಗಳು ಅಲ್ಪಾಯುಸ್ಸುಗಳೆಂದು ತಿಳಿಯಬೇಕು. ಇತರ ಸರ್ಪಗಳು ಭಯಶಾಲಿಗಳೆಂದು ತಿಳಿಯಬೇಕು.

೨೪. ಸರ್ಪಗಳಿಗೆ ಒಂದು ಮುಖ ಎರಡು (ಕವಲಾದ) ನಾಲಗೆ ಇರುತ್ತವೆ. ಹಾವುಗಳಿಗೆ ಮೂವತ್ತೆರಡು ಹಲ್ಲುಗಳೆಂಬುದರಲ್ಲಿ ಸಂಶಯವಿಲ್ಲ.

೨೫. ಇವುಗಳಲ್ಲಿ ನಾಲ್ಕು ದೊಡ್ಡ ಕೋರೆಹಲ್ಲು ತುಂಬಾ ವಿಷಭರಿತವಾದುವು. ಮಕರೀ, ಕರಾಳೀ, ಕಾಳರಾತ್ರೀ, ಯಮದೂತೀ, ಇವೇ ಆ ನಾಲ್ಕು ಕೋರೆಹಲ್ಲುಗಳು. ಈ ನಾಲ್ಕಕ್ಕೂ ಒಂದೊಂದು ಕೋರೆಹಲ್ಲಿಗೆ ಒಂದೊಂದರಂತೆ ಬೇರೆ ಬೇರೆ ಅಭಿಮಾನ ದೇವತೆಗಳಿರುವರು.

೨೬. ಒಂದನೆಯ ಕೋರೆಹಲ್ಲಿಗೆ ಬ್ರಹ್ಮನು ದೇವತೆ. ಎರಡನೆಯ ಕೋರೆ

**ಹೀನಾಃ ಪ್ರಮಾಣತಃ ಸಾ ತು ವಾಮನೇತ್ರಂ ಸಮಾಶ್ರಿತಾಃ ।**
**ನಾಸ್ಯಾಂ ಮಂತ್ರಾಃ ಪ್ರಯೋಕ್ತವ್ಯಾ ನೌಷಧಂ ನೈವ ಭೇಷಜಂ ॥ ೨೭ ॥**

**ವೈದ್ಯಃ ಪರಾಙ್ಮುಖೋ ಯಾತಿ ಮೃತ್ಯೋಸ್ತಸ್ಯಾವಿಲೇಖನಾತ್ ।**
**ಚಿಕಿತ್ಸಾ ನ ಬುಧೈಃ ಕಾರ್ಯಾ ತದಂತಂ ತಸ್ಯ ಜೀವಿತಂ ॥ ೨೮ ॥**

**ಮಕರೀಂ ಮಾಸಿಕಾಂ ವಿದ್ಯಾತ್ ಕರಾಲೀ ಚ ದ್ವಿಮಾಸಿಕಾ ।**
**ಕಾಳರಾತ್ರೀ ಭವೇತ್ತ್ರೀಣಿ ಚತುರೋ ಯಮದೂತಿಕಾ ॥ ೨೯ ॥**

**ಮಕರೀಂ ಗುಡೌದನಂ ದದ್ಯಾತ್ ಕಷಾಯಾನ್ನಂ ಕರಾಲಿಕಾಂ ।**
**ಕಾಳರಾತ್ರೀಂ ಕಟುಯುತಾಂ ದೂತೀಂ ವೈ ಸಾನ್ನಿಪಾತಿಕಂ ॥ ೩೦ ॥**

---

ಹಲ್ಲಿಗೆ ವಿಷ್ಣುವು ದೇವತೆ. ಮೂರನೆಯ ಕೋರೆ ಹಲ್ಲಿಗೆ ರುದ್ರನು ದೇವತೆ, ನಾಲ್ಕನೆಯ ಕೋರೆಹಲ್ಲಿಗೆ ಯಮನು ದೇವತೆ. ಹೀಗೆ ಅಧಿದೇವತೆಗಳು ಇದ್ದಾರೆ.

೨೭. ಪರಿಮಾಣದಲ್ಲಿ ಬಹು ಸಣ್ಣನಾಗಿರುವ ವಿಷನಾಡಿಯು ಎಡಗಣ್ಣನ್ನು ಆಶ್ರಯಿಸಿ ಇರುವುದು. ಈ ತೀಕ್ಷ್ಣ ವಿಷನಾಡಿಯಿಂದ ವಿಷಸುರಿದಾಗ ವಿಷನಿವಾರಣೆಯ ಮಂತ್ರವನ್ನು ಪ್ರಯೋಗಿಸುವುದು ಉಪಯೋಗವಿಲ್ಲ. ಅಂದರೆ ಫಲಿಸುವುದಿಲ್ಲ. ಏನೇ ಔಷಧಮಾಡಿದರೂ ಕೆಂದುವುದಿಲ್ಲ.

೨೮. ಚಿಕಿತ್ಸೆಗಾಗಿ ಬಂದ ವೈದ್ಯನು ಮೃತ್ಯುಪರಿಹಾರವಾಗುವುದೆಂಬುದನ್ನು ನಿಶ್ಚೈಸಲಾರದವನಾಗಿ ಹಿಂದಿರುಗುವನು. ಎಂದರೆ ಎಡಗಣ್ಣಿನ ಸಮಿಾಪದ ನಾಡಿಯುಸುರಿದ ವಿಷವ್ಯಾಪನ ಸಂದರ್ಭದಲ್ಲಿ ಚಿಕಿತ್ಸೆಮಾಡಿದರೂ ಪ್ರಯೋಜನಕರವಾಗುವುದಿಲ್ಲ. ಆ ವಿಷಸೋಂಕಿದಮೇಲೆ ಬದುಕುವ ಆಶೆಯಿಲ್ಲ.

೨೯. ಮಕರೀನಾಡೆಯಲ್ಲಿ ಹರಿದು ಬಂದ ವಿಷ ವ್ಯಾಪಿಸಿದರೆ ಅದರ ವೇಗವು ಒಂದು ತಿಂಗಳವರೆಗೆ ಕೆಲಸ ಮಾಡುತ್ತದೆ. ಕಾಳರಾತ್ರೀದಾಡೆಯ ವಿಷ ವ್ಯಾಪಿಸಿದರೆ ಅದರ ವೇಗವು ಮೂರು ತಿಂಗಳವರೆಗೆ ಕೆಲಸಮಾಡುತ್ತದೆ. ಯಮದೂತೀದಾಡೆಯ ವಿಷವು ವ್ಯಾಪಿಸಿದರೆ ಅದರ ವೇಗವು ನಾಲ್ಕುತಿಂಗಳವರೆಗೆ ಕೆಲಸಮಾಡುತ್ತದೆ.

೩೦. ಒಂದುವೇಳೆ ಚಿಕಿತ್ಸೆಮಾಡಬೇಕಾದರೆ ಮಕರೀ ಎಂಬ ಕೋರೆಹಲ್ಲಿನ ವಿಷ ವ್ಯಾಪಿಸಿದಾಗ ಸರ್ಪದಷ್ಟರಿಗೆ ಬೆಲ್ಲದ ಅನ್ನವನ್ನೇ ಕೊಡಬೇಕು. ಕರಾಳೀ ಹಲ್ಲಿನ ವಿಷ ವ್ಯಾಪಿಸಿದಾಗ ಕಹಿಯಾದ ಆಹಾರವನ್ನೂ, ಕಾಳರಾತ್ರೀದಾಡೆಯ ವಿಷ

**ಮಕರೀ ಶಸ್ತ್ರಕಂ ವಿದ್ಯಾತ್ ಕರಾಳೀ ಕಾಕಪಾದಿಕಾ ।**
**ಕರಾಕೃತಿಃ ಕಾಳರಾತ್ರಿಃ ಯಾಮ್ಯಾ ಕೂರ್ಮಾಕೃತಿಃ ಸ್ಮೃತಾ　॥ ೩೧ ॥**

**ಮಕರೀ ವಾತುಲಾ ಜ್ಞೇಯಾ ಕರಾಳೀ ಪೈತ್ತಿಕೀ ಸ್ಮೃತಾ ।**
**ಕಫಾತ್ಮಿಕಾ ಕಾಳರಾತ್ರೀ ಯಮದೂತೀ ಸಾನ್ನಿಪಾತಕೀ　॥ ೩೨ ॥**

**ಶುಕ್ಲಾ ತು ಮಕರೀ ಜ್ಞೇಯಾ ಕರಾಲೀ ರಕ್ತಸನ್ನಿಭಾ ।**
**ಕಾಳರಾತ್ರೀ ಭವೇತ್ಪೀತಾ ಕೃಷ್ಣಾ ಚ ಯಮದೂತಿಕಾ　॥ ೩೩ ॥**

**ವಾಮಾ ಶುಕ್ಲಾ ಚ ಕೃಷ್ಣಾ ಚ ರಕ್ತಾ ಪೀತಾ ಚ ದಕ್ಷಿಣಾ ।**
**ಸಮಾಸೇನ ತು ವಕ್ಷ್ಯಾಮಿ ಯಥೈತಾ ವರ್ಣತಃ ಸ್ಮೃತಾಃ　॥ ೩೪ ॥**

---

ವ್ಯಾಪಿಸಿದಾಗ ಕಾರದ ಆಹಾರವನ್ನೂ ಯಮದೂತೀಹಲ್ಲಿನ ವಿಷವ್ಯಾಪನೆಯಾದಾಗ ಜ್ಞಾನತಪ್ಪಿಸಿ ಕೆಡಹುವ ಆಹಾರವನ್ನೂ ಕೊಡಬೇಕು.

೩೧. ಮಕರೀ ಎಂಬ ದಾಡೆಯ ವಿಷ ವ್ಯಾಪಿಸಿದಾಗ ಶಸ್ತ್ರದಿಂದ ಆ ಜಾಗವನ್ನು ಚುಚ್ಚಬೇಕು. ಕರಾಳೀ ಎಂಬ ದಾಡೆಯ ವಿಷ ವ್ಯಾಪಿಸಿದಾಗ ಕಾಗೆಯ ಕಾಲು ಬೆರಳಿನ ಆಕಾರವಾಗಿ ಸೀಳಬೇಕು. ಕಾಳರಾತ್ರಿ ದಾಡೆಯ ವಿಷ ವ್ಯಾಪಿಸಿದಾಗ ಕೈಯ ಬೆರಳಿನ ಆಕಾರವಾಗಿ ಸೀಳಬೇಕು. ಯಮದೂತೀ ಎಂಬ ಹಲ್ಲಿನ ವಿಷವು ವ್ಯಾಪಿಸಿದಾಗ ಆಮೆಯ ಆಕಾರವಾಗಿ ಸೀಳಬೇಕು.

೩೨. ಮಕರೀ ವಿಷವ್ಯಾಪ್ತಿಯು ವಾತರೋಗವನ್ನು ಉಂಟುಮಾಡುವುದು. ಕರಾಳೀ ವಿಷವ್ಯಾಪ್ತಿಯು ಪಿತ್ತರೋಗವನ್ನೂ, ಕಾಳರಾತ್ರೀ ವಿಷವ್ಯಾಪ್ತಿಯು ಕಫರೋಗವನ್ನೂ, ಯಮದೂತೀ ವಿಷವ್ಯಾಪ್ತಿಯು ಸನ್ನಿಪಾತ ಜ್ವರವನ್ನೂ ಉಂಟು ಮಾಡುವುದು.

೩೩. ಮಕರೀವಿಷದ ಬಣ್ಣ ಬಿಳುಪು, ಕರಾಳಿಯ ಬಣ್ಣ ಕೆಂಪು, ಕಾಳರಾತ್ರಿಯಬಣ್ಣ ಹಳದಿ, ಯಮದೂತಿಯ ಬಣ್ಣ ಕಪ್ಪು.

೩೪. ಒಟ್ಟಿನಲ್ಲಿ ಎಡಭಾಗದ ಎರಡು ದಾಡೆಗಳ ವಿಷವು ಬಿಳುಪು, ಕೆಂಪು, ಬಣ್ಣವುಳ್ಳದ್ದು. ಬಲಭಾಗದ ಎರಡು ಕೋರೆಹಲ್ಲುಗಳ ವಿಷವು ಕಪ್ಪು ಮತ್ತು ಹಳದಿ ಬಣ್ಣವುಳ್ಳದ್ದು ಎಂದು ತಿಳಿಯಬೇಕು.

ಶುಕ್ಲಾ ತು ಬ್ರಾಹ್ಮಣೀ ಜ್ಞೇಯಾ ರಕ್ತಾ ತು ಕ್ಷತ್ರಿಯಾ ಸ್ಮೃತಾ ।
ವೈಶ್ಯಾ ತು ಪೀತಿಕಾ ಜ್ಞೇಯಾ ಕೃಷ್ಣಾ ಶೂದ್ರಾ ತು ಕಥ್ಯತೇ ।
ಅತಃಪರಂ ಪ್ರವಕ್ಷ್ಯಾಮಿ ದಂಷ್ಟ್ರಾಣಾಂ ವಿಷಲಕ್ಷಣಂ ॥ ೩೪ ॥

ದಂಷ್ಟ್ರಾಣಾಂ ತು ವಿಷಂ ನಾಸ್ತಿ ಸರ್ವತ್ರೈವ ಭುಜಂಗಮೇ ।
ದಕ್ಷಿಣಂ ನೇತ್ರಮಾಸಾದ್ಯ ವಿಷಂ ಸರ್ಪಸ್ಯ ತಿಷ್ಠತಿ ॥ ೩೬ ॥

ಸಂಕ್ರುದ್ಧಸ್ಯೇಹ ಸರ್ಪಸ್ಯ ವಿಷಂ ಗಚ್ಛತಿ ಮಸ್ತಕೇ ।
ಮಸ್ತಕಾದ್ಧಮನೀಂ ಯಾತಿ ತತೋ ನಾಡೀಷು ಗಚ್ಛತಿ ॥ ೩೭ ॥

ನಾಡೀಭ್ಯಃ ಪದ್ಯತೇ ದಂಷ್ಟ್ರಾಂ ವಿಷಂ ತತ್ರ ಪ್ರವರ್ತತೇ ।
ತತ್ಸರ್ವಂ ಕಥಯಿಷ್ಯಾಮಿ ಯಥಾವದನುಪೂರ್ವಶಃ ॥ ೩೮ ॥

ಅಷ್ಟಭಿಃ ಕಾರಣೈಃ ಸರ್ಪೋ ದಶತೇ ನಾತ್ರ ಸಂಶಯಃ ।
ಆಕ್ರಾಂತೋ ದಶತೇ ಪೂರ್ವಂ ದ್ವಿತೀಯಂ ಪೂರ್ವವೈರಿಣಂ ॥ ೩೯ ॥

---

೩೫. ಬಿಳೀಬಣ್ಣದ ವಿಷವು ಬ್ರಾಹ್ಮಣ ಜಾತಿಯದು, ಕೆಂಪುಬಣ್ಣದ ವಿಷವು ಕ್ಷತ್ರಿಯ ಜಾತಿಯದು, ಹಳದಿಬಣ್ಣದ ವಿಷವು ವೈಶ್ಯಜಾತಿಯದು, ಕರಿಯಬಣ್ಣದ್ದು ಶೂದ್ರಜಾತಿಯದು. ಇನ್ನು ಆ ದಾಡೆಗಳಲ್ಲಿ ವಿಷಹರಿಯುವ ಲಕ್ಷಣವನ್ನು ಹೇಳುತ್ತೇನೆ.

೩೬. ಸರ್ಪದ ದಾಡೆಗಳಲ್ಲಿ ಎಲ್ಲೆಡೆಗಳಲ್ಲಿಯೂ ವಿಷವಿರುವುದಿಲ್ಲ. ಬಲಗಣ್ಣನ್ನು ಅನುಸರಿಸಿದ ನಾಡಿಯಲ್ಲಿ ವಿಷವಿರುತ್ತದೆ.

೩೭. ಬಹಳ ರೇಗಿದಾಗ ವಿಷವು ನೆತ್ತಿಗೆ ಏರುತ್ತದೆ, ಅಲ್ಲಿಂದ ತಲೆಯ ಮೂಲಕ ದಪ್ಪನಾಡಿಗಳಿಗೂ, ಅಲ್ಲಿಂದ ಸಣ್ಣನಾಳಗಳ ಮೂಲಕವೂ ಪ್ರವಹಿಸುತ್ತದೆ.

೩೮. ವಿಷವು ನಾಡಿಯಮೂಲಕವೇ ಕೋರೆಹಲ್ಲಿಗೂ ಹರಡುವುದು. ಅದೆಲ್ಲವನ್ನೂ ಕ್ರಮವಾಗಿ ಹೇಳುವೆನು ಕೇಳು. ಸರ್ಪವು ಯಾರನ್ನಾದರೂ ಕಚ್ಚಬೇಕಾದರೆ ಈ ಮುಂದೆ ಹೇಳುವ ಕಾರಣಗಳಲ್ಲಿ ಯಾವುದಾದರೂ ಒಂದು ಇರಬೇಕು.

೩೯-೪೦. ತನ್ನನ್ನು ಹಿಡಿಯುವುದಕ್ಕೆ ಬಂದಾಗಲೂ, ಇವನು ಈ ಮೊದಲು ತನಗೆ ಕೇಡುಮಾಡಿದ್ದವನು ಎಂದು ಹಿಂದಿನದ್ವೇಷ ತಿಳಿದು ಬಂದಾಗಲೂ, ತನಗೇ

ತೃತೀಯಂ ದಶತೇ ಭೀತಃ ಚತುರ್ಥಂ ಮದದರ್ಪಿತಃ ।
ಪಂಚಮಂ ತು ಕ್ಷುಧಾವಿಷ್ಟಃ ಷಷ್ಠಂಚೇಹ ವಿಷೋಲ್ಬಣಃ ।
ಸಪ್ತಮಂ ಪುತ್ರರಕ್ಷಾರ್ಥಂ ಅಷ್ಟಮಂ ಕಾಲಚೋದಿತಃ　　॥ ೪೦ ॥

ಯಸ್ತು ಸರ್ಪೋ ದಶಿತ್ವಾ ತು ಉದರಂ ಪರಿವರ್ತಯೇತ್ ।
ಬಲಭುಗ್ನಾಕೃತಿಂ ದಂಷ್ಟ್ರಾಮಾಕ್ರಾಂತಂ ತಂ ವಿನಿರ್ದಿಶೇತ್　　॥ ೪೧ ॥

ಯಸ್ಯ ಸರ್ಪೇಣ ದಷ್ಟಸ್ಯ ಗಭೀರಂ ದೃಶ್ಯತೇ ವ್ರಣಂ ।
ವೈರದಷ್ಟಂ ವಿಜಾನೀಯಾತ್ ಕಶ್ಯಪಸ್ಯ ವಚೋ ಯಥಾ　　॥ ೪೨ ॥

ಏಕಂ ದಂಷ್ಟ್ರಾಪದಂ ಯಸ್ಯ ಅವ್ಯಕ್ತಂ ನ ಚ ಕಲ್ಪಿತಂ ।
ಭೀತದಷ್ಟಂ ವಿಜಾನೀಯಾತ್ ಯಥೋವಾಚ ಪ್ರಜಾಪತಿಃ　　॥ ೪೩ ॥

ಯಸ್ಯ ಸರ್ಪೇಣ ದಷ್ಟಸ್ಯ ರೇಖಾ ದಂತಸ್ಯ ಜಾಯತೇ ।
ಮದದಷ್ಟಂ ವಿಜಾನೀಯಾತ್ ಕಶ್ಯಪಸ್ಯ ವಚೋ ಯಥಾ　　॥ ೪೪ ॥

---

ಹೆದರಿಕೆಯಾದಾಗಲೂ, ಕೊಬ್ಬಿ ಗರ್ವಪಟ್ಟಿರುವಾಗಲೂ, ಬಹಳ ಹಸಿವಿನಿಂದ ಕೂಡಿರುವಾಗಲೂ, ಇತರರಿಂದ ತನ್ನ ಮರಿಗಳಿಗೆ ಉಂಟಾಗುವ ಹಿಂಸೆಯನ್ನು ತಪ್ಪಿಸುವಾಗಲೂ, ಕಾಲಪುರುಷನ ಪ್ರೇರಣೆಯಾದಾಗಲೂ, ಪ್ರಾಯಶಃ ಹಾವು ಕಚ್ಚುವುದು.

೪೧. ಯಾವ ಸರ್ಪವು ಕಚ್ಚಿದಕೂಡಲೇ ತನ್ನ ಹೊಟ್ಟೆಯನ್ನು ಬಲಾತ್ಕಾರವಾಗಿ ಡೊಂಕುಮಾಡಿ ದಾಡೆಯನ್ನು ಹೊರಳಿಸುವುದೋ ಆಗ ಹಾವು ಕಚ್ಚಿದಳನು ಆಕ್ರಾಂತನೆಂದು ತಿಳಿಯಬೇಕು.

೪೨. ಯಾವನಿಗೆ ಹಾವು ಕಚ್ಚಿದ ಗಾಯವು ಬಹಳ ಆಳವಾಗಿರುವುದೋ ಆಗ ಹಾವು ಪೂರ್ವವೈರದಿಂದ ಕಡಿದಿದೆ ಎಂದು ತಿಳಿಯಬೇಕು. ಕಶ್ಯಪರು ಹೀಗೆ ಹೇಳಿದಾರೆ.

೪೩. ಹಾವು ಕಚ್ಚಿದಾಗ ಒಂದು ಹಲ್ಲು ಚನ್ನಾಗಿ ಊರದೆ ಅಸ್ಪಷ್ಟವಾಗಿದ್ದರೆ ಆಗ ಅದು ತನ್ನನ್ನು ಹೊಡೆಯುತ್ತಾರೆ ಎಂಬ ಭೀತಿಯಿಂದ ಕಚ್ಚಿತೆಂದು ತಿಳಿಯಬಹುದಾಗಿ ಕಶ್ಯಪಪ್ರಜಾಪತಿಯು ಹೇಳುತ್ತಾನೆ.

೪೪. ಹಾವು ಕಚ್ಚಿದವನ ಶರೀರದಲ್ಲಿ ಅದರ ಹಲ್ಲಿನ ಗೀರುಗಳು ಕಾಣುತ್ತಿದ್ದರೆ ಆಗ ಹಾವು ಶರೀರದಮೇಲೆ ಎಚ್ಚರವಿಲ್ಲದೆ ಮದದಿಂದ ಕಚ್ಚಿದೆಯೆಂದು ತಿಳಿಯಬೇಕು ಇದು ಕಶ್ಯಪಬ್ರಹ್ಮನ ಉಕ್ತಿ.

ದ್ವೇ ಚ ದಂಷ್ಟ್ರಾಪದೇ ಯಸ್ಯ ದೃಶ್ಯಂತೇ ಚ ಮಹಾಕ್ಷತಂ ।
ಕ್ಷುಧಾವಿಷ್ಟಂ ವಿಜಾನೀಯಾತ್ ಯಥೋವಾಚ ಪ್ರಜಾಪತಿಃ ॥ ೪೫ ॥

ದ್ವೇ ದಂಷ್ಟ್ರೇ ಯಸ್ಯ ದೃಶ್ಯೇತೇ ಕ್ವಚಿದ್ರುಧಿರ ಸಂಕುಲೇ ।
ವಿಷೋಲ್ಬಣಂ ವಿಜಾನೀಯಾತ್ ದಂಶಂ ತಂ ನಾತ್ರ ಸಂಶಯಃ ॥ ೪೬ ॥

ಅಪತ್ಯರಕ್ಷಣಾರ್ಥಾಯ ಜಾನೀಯಾತ್ತಂ ನ ಸಂಶಯಃ ।
ಯತ್ತು ಕಾಕಪದಾಕಾರಂ ತ್ರಿಭಿರ್ದಂತೈಸ್ತು ಲಕ್ಷಿತಂ ॥ ೪೭ ॥

ಮಹಾನಾಗ ಇತಿಪ್ರೋಕ್ತಂ ಕಾಲದಷ್ಟಂ ವಿನಿರ್ದಿಶೇತ್ ।
ತ್ರಿವಿಧಂ ದಷ್ಟಜಾತ್ಯೈಸ್ತು ಲಕ್ಷಣಂ ಸಮುದಾಹೃತಂ ॥ ೪೮ ॥

ದಷ್ಟಾನುಪೀತಂ ವಿಜ್ಞೇಯಂ ಕಶ್ಯಪಸ್ಯ ವಚೋ ಯಥಾ ।
ವಿಷಭಾಗಾತ್ತು ಸರ್ಪಸ್ಯ ತ್ರಿಭಾಗಸ್ತತ್ರ ಸಂಕ್ರಮೇತ್ ॥ ೪೯ ॥

---

೪೫. ಹಾವು ಕಚ್ಚಿದಾಗ ಎರಡು ಕೋರೆಹಲ್ಲುಗಳಿಂದ ಕಚ್ಚಿದ ದೊಡ್ಡಗಾಯವಾಗಿದ್ದರೆ ಆ ಹಾವಿಗೆ ಬಹಳ ಹಸಿವೆ ಆಗಿತ್ತೆಂದು ತಿಳಿಯಬೇಕು. ಇದು ಕಶ್ಯಪ ಪ್ರಜಾಪತಿಯ ಮತ.

೪೬. ಹಾವು ಕಚ್ಚಿದಾಗ ಕೋರೆಹಲ್ಲಿನಿಂದಾದ ಎರಡು ಗುರುತೂ ರಕ್ತದಿಂದ ಕೂಡಿದ್ದರೆ ಅದನ್ನು ಉಲ್ಬಣವಾದ ವಿಷದಿಂದ ಕೂಡಿದೆಯೆಂದು ತಿಳಿಯಬೇಕು.

೪೭. ತನ್ನ ಮರಿಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಹಾವು ಕಚ್ಚಿದಾಗ ಕಾಗೆಯ ಕಾಲಬೆರಳಿನ ಆಕೃತಿಯಲ್ಲಿ ಮೂರು ಹಲ್ಲುಗಳು ಊರಿ ಗಾಯವಾಗಿರುತ್ತವೆ.

೪೮. ಕಾಲಮೃತ್ಯುವು ಪ್ರೇರಿತವಾಗಿ ಹಾವು ಕಚ್ಚುವುದನ್ನು ಮಹಾನಾಗವೆಂದು ತಿಳಿಯಬೇಕು. ಹೀಗೆ ಬಗೆ ಬಗೆಯಾಗಿ ಕಚ್ಚುವುದರಿಂದಾದ ಮೂರು ಬಗೆಯ ಗಾಯಗಳ ಲಕ್ಷಣವನ್ನೂ ಹೇಳುವೆನು.

೪೯. ಸರ್ಪದ ವಿಷವಿರುವ ಪ್ರದೇಶದಿಂದ ಮೂರುಪಾಲು ವಿಷವು ಗಾಯದ ರಕ್ತದಲ್ಲಿ ಸೇರಿದರೆ ಅದನ್ನು ದಷ್ಟಾನುಪೀತವೆಂದು ತಿಳಿಯಬೇಕು ಎಂದು ಕಶ್ಯಪರು ಹೇಳಿದ್ದಾರೆ.

ಉದರಂ ದರ್ಶಯೇದ್ಯಸ್ತು ಉದ್ಧತಂ ತಂ ವಿನಿರ್ದಿಶೇತ್ ।
ವರ್ಧಿತಂ ವಿಷವೇಗೇನ ನಿರ್ವಿಷಃ ಪನ್ನಗೋ ಭವೇತ್ ॥ ೫೦ ॥

ಅಸಾಧ್ಯಶ್ಚಾಪಿ ವಿಜ್ಞೇಯಃ ಚತುರ್ದಂಷ್ಟ್ರಾಭಿಪೀಡಿತಃ ।
ಗ್ರೀವಾಭಂಗೋ ಭವೇತ್ಕಿಂಚಿತ್ ಸಂದಷ್ಟೋ ವಿಷಯೋಗತಃ ।
ಇತೋ ದಂಶಸ್ತತಃ ಶುದ್ಧೋ ವ್ಯಂತರಃ ಪರಿಕೀರ್ತಿತಃ ॥ ೫೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಪಂಚಮೀ
ಕಲ್ಪೇ ಸರ್ಪದಂಷ್ಟ್ರಾವರ್ಣನಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ.



೫೦. ಹಾವು ಕಡಿದಮೇಲೆ ಹೊರಳಿ ಹೊಟ್ಟೆಯನ್ನು ತೋರಿಸಿದರೆ ಉದ್ಧತ ದಂಶನವೆಂದು ತಿಳಿಯಬೇಕು. ಕಚ್ಚಿದಕೂಡಲೇ ವಿಷವೇಗದಿಂದ ವಮನವಾದರೆ ಅವನಿಗೆ ವಿಷದ ವ್ಯಾಪನೆಯಾಗುವುದಿಲ್ಲ.

೫೧. ನಾಲ್ಕು ಹಲ್ಲುಗಳನ್ನೂ ಊರಿ ಕಚ್ಚಿದರೆ ಕಚ್ಚಿದಕೂಡಲೇ ವಿಷದ ವ್ಯಾಪನೆಯಿಂದ ಕುತ್ತಿಗೆ ನೆಟ್ಟಗೆ ನಿಲ್ಲದೇ ಜೋಲುಬೀಳುವುದು. ಅಂತಹವನಿಗೆ ಚಿಕಿತ್ಸೆಮಾಡಿ ಬದುಕಿಸುವುದು ಅಸಾಧ್ಯವೆಂದು ತಿಳಿಯಬೇಕು. ಹಾವು ಕಚ್ಚಿ ಆ ಕೂಡಲೇ ಚಿಕಿತ್ಸೆಯಿಂದ ವಿಷವು ಪರಿಹೃತವಾಗಿ ಶುದ್ಧವಾದರೆ ಆ ಸರ್ಪವು ವ್ಯಂತರ ಜಾತಿಯೆಂದು ತಿಳಿಯಬೇಕು.

ಇಲ್ಲಿಗೆ ಶ್ರೀ ಭವಿಷ್ಯಪುರಾಣದ ಬ್ರಾಹ್ಮಪರ್ವದ ಪಂಚಮೀಕಲ್ಪದಲ್ಲಿ ಸರ್ಪಗಳ
ಕೋರೆಹಲ್ಲಿನ ವರ್ಣನೆ ಎಂಬ ಮೂವತ್ತಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ।

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುಸ್ತ್ರಿಂಶೋಽಧ್ಯಾಯಃ

॥ ಕಶ್ಯಪ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಕಾಲದಷ್ಟಸ್ಯ ಲಕ್ಷಣಂ ।
ಶೃಣು ಗೌತಮ ತತ್ವೇನ ಯಾದೃಶೋ ಭವತೇ ನರಃ ॥ ೧ ॥

ಜಿಹ್ವಾ ಭಂಗೋಥ ಹೃಚ್ಛೂಲಂ ಚಕ್ಷುರ್ಭ್ಯಾಂ ಚ ನ ಪಶ್ಯತಿ ।
ದಂಶಂ ಚ ದಗ್ಧಸಂಕಾಶಂ ಪಕ್ವಜಂಬೂಫಲೋಪಮಂ ॥ ೨ ॥

ವೈವರ್ಣ್ಯಂ ಚೈವ ದಂತಾನಾಂ ಶ್ಯಾಮೋ ಭವತಿ ವರ್ಣತಃ ।
ಸರ್ವೇಷ್ವಂಗೇಷು ಶೈಥಿಲ್ಯಂ ಪುರೀಷಸ್ಯ ಚ ಭೇದನಂ ॥ ೩ ॥

---

### ಮೂವತ್ತನಾಲ್ಕನೆಯ ಅಧ್ಯಾಯವು

೧. ಕಶ್ಯಪಬ್ರಹ್ಮನು ಹೇಳುತ್ತಾನೆ—ಇಲ್ಲಿಂದ ಮುಂದೆ ಕಾಲಸರ್ಪದಿಂದ ಕಚ್ಚಲ್ಪಟ್ಟವನ ಲಕ್ಷಣವನ್ನು ಹೇಳುವೆನು. ಎಲೈ ಗೌತಮನೇ! ಆಗ ಮನುಷ್ಯನ ಸ್ಥಿತಿ ಹೇಗಾಗುವುದೆಂಬುದನ್ನು ತಿಳಿದುಕೋ.

೨. ನಾಲಗೆಯು ಮಡಿಸಿಕೊಳ್ಳುವುದು, ಎದೆಶೂಲೆ ಬರುವುದು, ಕಣ್ಣುಗಳು ಕಾಣದಂತಾಗುವುವು. ಕಚ್ಚಿದ ಸ್ಥಳವು ಸುಟ್ಟಹಾಗಾಗಿ ಮಾಗಿದ ನೇರಳೇ ಹಣ್ಣಿನ ಬಣ್ಣವಾಗುವುವು.

೩. ಹಲ್ಲುಗಳ ಬಣ್ಣ ಕೆಡುವುದು, ಅವನ ಮೈಬಣ್ಣ ಹಳದಿಯಾಗುವುದು, ಮೈಯೆಲ್ಲಾ ನಿಶ್ಶಕ್ತಿಯಾಗಿ ಭೇದಿಯಾಗುವುದು.

ಭಗ್ನಸ್ಕಂಧಕಟಿಗ್ರೀವ ಊರ್ಧ್ವದೃಷ್ಟಿರಧೋಮುಖಃ ।
ದಹ್ಯತೇ ವೇಪತೇ ಚೈವ ಸ್ವಪತೇ ಚ ಮುಹುರ್ಮುಹುಃ ॥ ೪ ॥

ಶಸ್ತ್ರೇಣ ವಿಧ್ಯಮಾನಸ್ಯ ರುಧಿರಂ ನ ಪ್ರವರ್ತತೇ ।
ದಂಡೇನ ತಾಡ್ಯಮಾನಸ್ಯ ದಂಡರಾಜೀ ನ ಜಾಯತೇ ॥ ೫ ॥

ದಂಶೇ ಕಾಕಪದಂ ಸುನೀಲಮಸಕೃತ್ ಜಂಬೂಫಲಾಭಂ ಘನಂ ।
ಉಚ್ಛೂನಂ ರುಧಿರಾರ್ದ್ರಸೇಕ ಬಹುಳಂ ಕೃಚ್ಛ್ರಾನಿರೋಧೋ ಭವೇತ್ ।
ಹಿಕ್ಕಾಶ್ವಾಸ ಗಲಗ್ರಹಶ್ಚ ಸುಮಹಾನ್ ಪಾಂಡುಸ್ತ್ವಚಾ ದೃಶ್ಯತೇ ।
ಶುಷ್ಕಾಂಗಂ ಪ್ರವದಂತಿ ಶಾಸ್ತ್ರನಿಪುಣಾ ತತ್ಕಾಲದಷ್ಟಂ ವಿದುಃ ॥ ೬ ॥

ದಂಶೇ ಯಸ್ಯಾಥ ಶೋಥಃ ಪ್ರಚಲಿತವಲಿತಂ ಮಂಡಲಂ ವಾ ಸುನೀಲಂ ।
ಪ್ರಸ್ವೇದೋ ಗಾತ್ರಭೇದಃ ಸ್ರವತಿ ಚ ರುಧಿರಂ ಸಾನುನಾಸಂ ಚ ಜಲ್ಪೇತ್

---

೪. ಹೆಗಲು, ಸೊಂಟ, ಕುತ್ತಿಗೆ ಇವು ಸೋತು ಹೋಗುವುವು. ದೃಷ್ಟಿ ಮೇಲ್ಮುಖವಾಗುವುದು, ಮುಖವು ಬಗ್ಗಿದಂತೆ ಆಗುವುದು, ಮೈ ಸುಡುವುದು, ನಡುಕಹುಟ್ಟುವುದು, ಮತ್ತೆ ಮತ್ತೆ ನಿದ್ರಿಸುವನು.

೫. ಅವನ ಮೈಯನ್ನು ಶಸ್ತ್ರದಿಂದ ಕತ್ತರಿಸಿದರೆ ರಕ್ತಹೊರಡುವುದಿಲ್ಲ. ದೊಣ್ಣೆಯಿಂದ ಹೊಡೆದರೆ ಬಾಸುಂಡೆ ಬರುವುದಿಲ್ಲ.

೬. ಕಚ್ಚಿದ ಸ್ಥಳದಲ್ಲಿ ಬಹು ಕಪ್ಪಾಗಿ ಕಾಗೆಯಕಾಲಿನ ಆಕಾರವಿರುವುದು. ಕೆಲವು ಸಂದರ್ಭಗಳಲ್ಲಿ ಅದು ನೇರಿಳೇಹಣ್ಣಿನ ಬಣ್ಣವುಳ್ಳದ್ದಾಗಿರುವುದು. ಊದಿ ಕೊಂಡು ಹೆಚ್ಚಾದ ರಕ್ತಸ್ರಾವವುಳ್ಳದ್ದಾಗಿ ರಕ್ತನಿಲ್ಲುವುದೇ ಕಷ್ಟವಾಗುವುದು. ಬಿಕ್ಕಳಿಕೆ, ದಮ್ಮು, ಕುತ್ತಿಗೆ ಬಹಳ ಹಿಡಿಯುವುದು, ಚರ್ಮವು ಹಳದೀ ಬಣ್ಣಕ್ಕೆ ತಿರುಗುವುದು, ಮೈ ಒಣಗುವುದು. ಹೀಗಿರುವುದನ್ನು ನೋಡಿ ಜಾಣರು ಅವನನ್ನು ಕಾಲಚೋದಿತ ಸರ್ಪದಷ್ಟನೆನ್ನುವರು.

೭. ಕಚ್ಚಿದ ಸ್ಥಳದಲ್ಲಿ ಊದಿರುವುದು, ಆ ಸ್ಥಳದ ಸುತ್ತುಮುತ್ತಲೂ ದುಂಡಗೆ ನೀಲಿಯ ಬಣ್ಣವಾಗುವುದು. ಮೈಯೆಲ್ಲಾ ತುಂಬಾ ಬೆವರುವುದು. ಮೈ ಕೈಕಾಲು ವಡೆತ, ರಕ್ತಸುರಿಯುವುದು, ಮೂಗಿನಲ್ಲಿಯೇ ಮಾತನಾಡುವುದು, (ಎಂದರೆ ನಾಸಿಕ ಧ್ವನಿಯೇ ಪ್ರಧಾನವಾಗಿರುವುದು) ಹಲ್ಲು ತುಟಿಗಳಿಗೆ ಸಂಬಂಧ

ದಂತೋಷ್ಠಾಭ್ಯಾಂ ವಿಯೋಗೋ ಭ್ರಮತಿ ಚ ಹೃದಯಂ ಸನ್ನಿರೋಧಶ್ಚ ತೀವ್ರೋ ।
ದಿವ್ಯಾನಾಮೇಷ ದಂಶಃ ಸ್ಥಲವಿಪುಲವಯೋ ವಿದ್ಧಿ ತಂ ಕಾಲದಷ್ಟಂ ॥ ೭ ॥

ದಂತೈರ್ದಂತಾನ್ ಸ್ಪೃಶತಿ ಬಹುಶೋ ದೃಷ್ಟಿರಾಯಾಸ ಖಿನ್ನಾ ।
ಸ್ಥೂಲೋ ದಂಶಃ ಸ್ರವತಿ ರುಧಿರಂ ಕೇಕರಂ ಚಕ್ಷುರೇಕಂ ।
ಪ್ರತ್ಯಾದಿಷ್ಟಂ ಶ್ವಸಿತಿ ಸತತಂ ಸಾನುನಾಸಂ ಚ ಭಾಷೇತ್ ।
ಪಾಪಂ ಬ್ರೂತೇ ಸಕಲಗದಿತಂ ಕಾಲದಷ್ಟಂ ತಮಾಹುಃ ॥ ೮ ॥

ವೇಪತೇ ವೇದನಾ ತೀವ್ರಾ ರಕ್ತನೇತ್ರಶ್ಚ ಜಾಯತೇ ।
ಗ್ರೀವಾಭಂಗಶ್ಚಲಾ ನಾಭಿಃ ಕಾಲದಷ್ಟಂ ವಿನಿರ್ದಿಶೇತ್ ॥ ೯ ॥

ದರ್ಪಣೇ ಸಲಿಲೇ ವಾಪಿ ಆತ್ಮಚ್ಛಾಯಾಂ ನ ಪಶ್ಯತಿ ।
ಮಂದರಶ್ಮಿಂ ತಥಾ ತೀವ್ರಂ ತೇಜೋಹೀನಂ ದಿವಾಕರಂ ॥ ೧೦ ॥

---

ತಪ್ಪುವುದು, ಮನಸ್ಸಿಗೆ ಭ್ರಾಂತಿ ಬರುವುದು, ಹೃದಯದ ವ್ಯಾಪಾರ ನಿಲ್ಲುವುದು. ಹೀಗಾಗುವುದು ಕಾಲಚೋದಿತಗಳಾದ ದಿವ್ಯಪ್ರಕೃತಿಯ ಸರ್ಪಗಳ ದಂಶನವು ಇದು ಎಲ್ಲ ಸ್ಥಳವನ್ನು ಆಕ್ರಮಿಸುವುದಾಗಿರುತ್ತೆ.

೮. ಹಲ್ಲುಗಳು ಒಂದಕ್ಕೊಂದು ಬಿಗಿಯಾಗಿ ತಗಲಿ ಗಿಟಿಗಿರಿದುಕೊಳ್ಳುವುದು, ನೋಟವು ಆಲಸವಾಗುವುದು, ಕಚ್ಚಿದ ಜಾಗವು ಗಾತ್ರವಿಸ್ತಾರವಾಗುವುದು, ರಕ್ತ ಹರಿಯುವುದು, ನಿರಾಕರಣೆಹೊಂದಿದಂತೆ ನಿಟ್ಟುಸಿರುಬಿಡುವುದು, ಭ್ರಮಚಿಂತಾದಿಗಳಿಂದ ಕೂಡಿದ ದೃಷ್ಟಿಶಕ್ತಿಯು ಒಂದು ಕಣ್ಣಿನಲ್ಲಿ ಮಾತ್ರವಿರುವುದು, ಮೂಗಿನಲ್ಲೇ ಧ್ವನಿಹೊರಟಂತೆ ಮಾತನಾಡುವುದು, ಮಾತು ಸರಿಯಾಗಿ ಹೊರಡದೇ ಇರುವುದು, ಇವೆಲ್ಲಾ ಕಾಲಚೋದಿತವಾದ ಸರ್ಪದಷ್ಟನ ಲಕ್ಷಣಗಳಾಗಿವೆ.

೯. ನೈನಡುಕ ಹುಟ್ಟುವುದು, ನೋವು ತಡೆಯಲು ಅಸಾಧ್ಯವಾಗುವುದು. ಕಣ್ಣು ಕೆಂಡದಂತಾಗುವುದು, ಕುತ್ತಿಗೆ ಜೋಲುಬೀಳುವುದು, ಹೊಕ್ಕುಳಬಳಿ ಜೋರಾಗಿ ಸವಗುಟ್ಟುವುದು.

೧೦. ಕನ್ನಡಿಯಲ್ಲಿಯಾಗಲೀ, ನೀರಿನಲ್ಲಿಯಾಗಲೀ, ನೋಡಿದಾಗ ತನ್ನ ಪ್ರತಿಬಿಂಬ ಕಾಣದೇ ಹೋಗುವುದು, ತೀಕ್ಷ್ಣವಾದ ಪ್ರಕಾಶವುಳ್ಳ ಸೂರ್ಯನನ್ನು ಕಾಂತಿ ಶೂನ್ಯನನ್ನಾಗಿ ತಿಳಿಯುವುದು, ಇವು ಕಾಲಚೋದಿತ ಸರ್ಪವು ಕಚ್ಚಿದ ಲಕ್ಷಣಗಳು.

ವೇಪತೇ ವೇದನಾ ತ್ರಸ್ತೋ ರಕ್ತನೇತ್ರಶ್ಚ ಜಾಯತೇ ।
ಸ ಯಾತಿ ನಿಧನಂ ಜಂತುಃ ಕಾಲದಷ್ಟಂ ವಿನಿರ್ದಿಶೇತ್ ॥ ೧೧ ॥

ಅಷ್ಟಮ್ಯಾಂ ಚ ನವಮ್ಯಾಂ ಚ ಕೃಷ್ಣಪಕ್ಷೇ ಚತುರ್ದಶೀಂ ।
ದಷ್ಟಾನಾಂ ನಾಗಪಂಚಮ್ಯಾಂ ಜೀವಿತಸ್ಯ ಚ ಸಂಶಯಃ ॥ ೧೨ ॥

ಆರ್ದ್ರಾಽಶ್ಲೇಷಾ ಮಘಾ ಭರಣೀ ಕೃತ್ತಿಕಾಸು ವಿಶೇಷತಃ ।
ವಿಶಾಖಾಂ ತ್ರಿಷು ಪೂರ್ವಾಸು ಮೂಲಾಸ್ವಾತೀ ಶತಾತ್ಮಕೇ ।
ಸರ್ಪದಷ್ಟಾ ನ ಜೀವಂತಿ ವಿಷಂ ಪೀತಂ ಚ ಯೈಸ್ತಥಾ ॥ ೧೩ ॥

ಶೂನ್ಯಾಗಾರೇ ಶ್ಮಶಾನೇ ಚ ಶುಷ್ಕವೃಕ್ಷೇ ತಥೈವ ಚ ।
ನ ಜೀವಂತಿ ನರಾ ದಷ್ಟಾ ನಕ್ಷತ್ರೇ ತಿಥಿಸಂಯುತೇ ॥ ೧೪ ॥

---

೧೧. ನೋವಿಗೆ ಹೆದರಿದವನಂತೆ ಮೈ ಕೈ ನಡುಗುವುದು, ಕಣ್ಣುಕೆಂಪಾಗುವುದು, ಹೀಗಾದ ಕೆಲವು ಹೊತ್ತಿನಲ್ಲಿ ಮೃತಿ ಹೊಂದುವುದು, ಇವೂ ಕಾಲಚೋದಿತ ಸರ್ಪದಷ್ಟನ ಲಕ್ಷಣಗಳು.

೧೨. ಸಾಮಾನ್ಯವಾಗಿ ಅಷ್ಟಮೀ, ನವಮೀ, ಚತುರ್ದಶೀ, ಈ ತಿಥಿಗಳಲ್ಲಿಯಾದರೂ, ನಾಗಪಂಚಮಿಯ ದಿನದಲ್ಲಿಯಾದರೂ, ಸರ್ಪದಷ್ಟವಾದ ಪ್ರಾಣಿಗಳು ಬದುಕುವುದು ಸಂಶಯವೇ ಸರಿ.

೧೩. ಆರಿದ್ರೆ, ಆಶ್ಲೇಷೆ, ಮಘೆ, ಭರಣೀ, ಕೃತ್ತಿಕೆ, ವಿಶಾಖಾ, ಪುಬ್ಬಾ, ಪೂರ್ವಾಷಾಢ, ಪೂರ್ವಾಭದ್ರಾ, ಮೂಲ, ಸ್ವಾತಿ, ಶತತಾರಾ ಈ ನಕ್ಷತ್ರಯುಕ್ತವಾದ ದಿನಗಳಲ್ಲಿ ಹಾವು ಕಚ್ಚಿದವರು, ವಿಷಪಾನ ಮಾಡಿದವರು ಹೇಗೆ ಬದುಕಲಾರರೋ ಹಾಗೆ ಬದುಕುವುದಿಲ್ಲ.

೧೪. ಪಾಳುಮನೆ, ಶ್ಮಶಾನ, ಒಣಗಿದ ಮರದಪೊಟರೆ, ಇವುಗಳಲ್ಲಿ ವಾಸಿಸುವ ಹಾವುಗಳು ಮೇಲೆ ಹೇಳಿದ ತಿಥಿಯುಕ್ತವಾದ ದಿನ, ನಕ್ಷತ್ರಯುಕ್ತವಾದ ದಿನ ಇವುಗಳಲ್ಲಿ ಕಚ್ಚಿದರೆ ಖಂಡಿತವಾಗಿಯೂ ಸಾಯುವನು.

ಅಷ್ಟೋತ್ತರಂ ಮರ್ಮಶತಂ ಪ್ರಾಣಿನಾಂ ಸಮುದಾಹೃತಂ ।
ತೇಷಾಂ ಮಧ್ಯೇ ತು ಮರ್ಮಾಣಿ ದಶದ್ವೇಚಾಪಿ ಕೀರ್ತಿತೇ ॥ ೧೫ ॥

ಶಂಖೇ ನೇತ್ರಭ್ರುವೋರ್ಮಧ್ಯೇ ಬಸ್ತಿಭ್ಯಾಂ ವೃಷಣೋತ್ತರೇ ।
ಕಕ್ಷೇಽಕ್ಷಸಂಧೌ ಹೃದಿ ಮಧ್ಯೇ ತಾಲುಕೇ ಚಿಬುಕೇ ಗುದೇ ॥ ೧೬ ॥

ಏಷು ದ್ವಾದಶಮರ್ಮೇಷು ದಂಶ್ಯೈಃ ಶಸ್ತ್ರೇಣ ವಾ ಹತಃ ।
ನ ಜೀವತಿ ನರೋ ಲೋಕೇ ಕಾಲದಷ್ಟಂ ವಿನಿರ್ದಿಶೇತ್ ॥ ೧೭ ॥

ಅಕಚಟತಪಯಶಾ ವದಂತಿಪ್ರೋಕ್ತಾ ಜೀವಂತಿ ನ ತತ್ರ ಹಿ ।
ಗತಂ ಬ್ರೂಯಾದ್ಯದಿ ಸ್ಖಲತಿ ಶಿರಸ್ತಸ್ಯ ಸಂಪ್ರಾಪ್ತಕಾಲಃ ॥ ೧೮ ॥

---

೧೫-೧೬. ಮನುಷ್ಯಾದಿ ಪ್ರಾಣಿಗಳಿಗೆ ನೂರಎಂಟು ಮರ್ಮಸ್ಥಾನಗಳುಂಟು. ಇವುಗಳಲ್ಲಿ ಶಂಖಸಂಜ್ಞಿತವಾದ ಹಣೆಕಪೋಲ, ಕಣ್ಣುಗಳು, ಹುಬ್ಬಿನನಡು, ಕೆಳ ಹೊಟ್ಟೆ, ವೃಷಣದ ಮೇಲ್ಭಾಗ, ಕಂಕಳು, ಹೆಗಲು, ಎದೆ, ಸೊಂಟ, ಪಕ್ಕೆ, ದವಡೆ, ಗಲ್ಲ, ಗುಹ್ಯಸ್ಥಾನ ಎಂದು ಮುಖ್ಯವಾಗಿ ಈ ಹನ್ನೆರಡೂ ಮರ್ಮಸ್ಥಾನಗಳು.

೧೭. ಮೇಲೆ ಹೇಳಿದ ಹನ್ನೆರಡು ಮುಖ್ಯ ಮರ್ಮಸ್ಥಾನಗಳಲ್ಲಿ ಹಾವು ಕಚ್ಚಿದರೂ, ಶಸ್ತ್ರಘಾತವಾದರೂ ಆ ಪ್ರಾಣಿ ಬದುಕುವುದಿಲ್ಲ. ಇದೂ ಕಾಲಚೋದಿತವೇ.

೧೮. ಅಕಾರ, ಕಕಾರ, ಚಕಾರ, ಟಕಾರ, ತಕಾರ, ಪಕಾರ, ಯಕಾರ ಮತ್ತು ಶ ಎಂಬ ವರ್ಣ ಈ ಅಕ್ಷರಗಳೇ ಮೊದಲಲ್ಲಿರುವ ಹೆಸರಿನವರಿಗೆ ಹಾವು ಕಚ್ಚಿದರೆ ಅವರು ಮೂರ್ಛೆ ಹೊಂದುವರು. ಮತ್ತು ಮೃತರಾಗುವರು ಎಂದು ಹೇಳುವರು. ಕೆಲವು ವೇಳೆ ಹಾವು ಕಚ್ಚಿದರೆ ಬುದ್ಧಿಯು ಕೆಟ್ಟುಹೋಗುವುದು, ಹೀಗಾದರೂ ಅದಕ್ಕೆ ಕಾಲವಂಶಯೋಗವೆಂದು ತಿಳಿಯತಕ್ಕದ್ದು.

[ಪ್ರಶ್ನಮಾರ್ಗವೆಂಬ ಗ್ರಂಥದ ೨ನೆಯ ಅಧ್ಯಾಯದ ೧೧ನೆಯ ಈ ಶ್ಲೋಕವು ಇದಕ್ಕೆ ಸಂಬಂಧಿಸಿದೆ.

ಅಕಚಟತಪಯಾ ವರ್ಗಾ ರವಿಕುಜಶಿತ ಸೌಮ್ಯಜೀವ ಸೌರಾಣಾಂ ।
ಚಂದ್ರಸ್ಯ ಚ ನಿರ್ದಿಷ್ಟಂ ಪ್ರಶ್ನೇಪ್ರಥಮೋದ್ಭವಂ ವರ್ಣಂ ।

ಭವತಿ ಚ ಯದಿ ದೂತೋ ಹ್ಯುತ್ತಮಸ್ಯಾಧಮೋ ವಾ ।
ಯದಿ ಭವತಿ ಚ ದೂತ ಉತ್ತಮೋ ವಾಧಮಸ್ಯ ।
ಆದೌ ದಷ್ಟಸ್ಯ ನಾಮ ಯದಿವದತಿ ಕ್ವಚಿದ್ವಕ್ತಿ ತಸ್ಯಾಥ ಪಶ್ಚಾತ್ ।
ತಂ ವರ್ಣಭೇದೋ ಯದಿ ಭವತಿ ಸಮಃ ಪ್ರಾಪ್ತಕಾಲಸ್ಯ ದೂತಃ ॥ ೧೯ ॥

ದೂತೋ ವಾ ದಂಡಹಸ್ತೋ ಭವತಿ ಚ ಯುಗಳಂ ಪಾಶಹಸ್ತಸ್ತಥಾ ವಾ ।
ರಕ್ತಂ ವಸ್ತ್ರಂ ಚ ಕೃಷ್ಣಂ ಮುಖಶಿರಸಿ ಗತಂ ಚೈಕವಸ್ತ್ರಶ್ಚ ದೂತಃ ।
ತೈಲಾಭ್ಯಕ್ತಶ್ಚ ತದ್ವದ್ಯದಿ ಸ ಲಘುಗತಿರ್ಮುಕ್ತಕೇಶಃ ಸ ಯಾತಿ ।
ಯಃ ಕುರ್ಯಾದ್ಘೋರಶಬ್ದಂ ಕರಚರಣಯುಗೈಃ ಪ್ರಾಪ್ತಕಾಲಸ್ಯ ದೂತಃ ॥

---

ಪ್ರಶ್ನೆಮಾಡುವ ಪ್ರಾರಂಭಾಕ್ಷರವು ಅಕಾರವೇ ಮೊದಲಾದ ಸ್ವರಗಳಾದರೆ ರವಿಯು ಅಧಿಪನೆಂದೂ, ಕವರ್ಗಾಕ್ಷರವಾದರೆ ಕುಜನೆಂದೂ, ಚವರ್ಗಾಕ್ಷರವಾದರೆ ಶುಕ್ರನೆಂದೂ, ಟವರ್ಗಾಕ್ಷರವಾದರೆ ಬುಧನೆಂದೂ, ತವರ್ಗಾಕ್ಷರವಾದರೆ ಗುರುವೆಂದೂ ಪವರ್ಗಾಕ್ಷರವಾದರೆ ಶನಿಯೆಂದೂ, ಯಕಾರ ಮೊದಲುಗೊಂಡು ಮುಂದಿನ ಎಂಟು ಅಕ್ಷರಗಳಾದರೆ ಚಂದ್ರನು ಅಧಿಪತಿಯೆಂದೂ, ತಿಳಿಯಬೇಕು. ಈ ಗ್ರಹಗಳ ಫಲವೇ ಕುಜಾದಿಗಳಿಗೆ ಎರಡೆರಡು ರಾಶಿಗಳಿರುವಲ್ಲಿ ಪ್ರಶ್ನಾದಿ ಅಕ್ಷರವು ವರ್ಗದ ಸಮಾಕ್ಷರವಾದರೆ ಸಮರಾಶಿ, ವಿಷಮಾಕ್ಷರನಾದರೆ ವಿಷಮಸಂಖ್ಯಾರಾಶಿ ಎಂದು ತಿಳಿಯಬೇಕು.]

೧೯. ಹಾವುಕಡಿದ ವರ್ತಮಾನವನ್ನು ವಿಷವೈದ್ಯನಿಗೆ ಹೇಳಿ ಅವನನ್ನು ಕರೆತರುವುದಕ್ಕೆ ಹೋಗಲು ಸಮಯ ಒದಗಿದಹಾಗೆ ಅಧಮ ಜಾತಿಯವನಿಗೆ ಉತ್ತಮ ಜಾತಿಯವನು ದೂತನಾಗಿ ಬರಬೇಕಾಗಬಹುದು. ಉತ್ತಮ ಜಾತಿಯವನಿಗೆ ಅಧಮ ಜಾತಿಯವನು ವಾರ್ತಾಹರನಾಗಿ ಬರಬಹುದು. ಹೀಗೆ ಭಿನ್ನಜಾತೀಯರು, ಸಮಾನರು, ಬಂದಾಗ ಹಾವು ಕಡಿದವನ ಹೆಸರನ್ನು ಮೊದಲು ಹೇಳಿ, ಅನಂತರ ತನ್ನ ಹೆಸರು ಹೇಳಿದರೆ ಹಾವು ಕಡಿದವನಿಗೆ ಕಾಲಪ್ರಾಪ್ತಿಯಾಗಿದೆ ಅಂದರೆ ಕೊನೆಗಾಲ ಎಂದು ತಿಳಿಯಬೇಕು.

೨೦. ಈರೀತಿಯಾಗಿ ವಾರ್ತಾಹರ ದೂತನು ಬರುತ್ತಿರುವಾಗ ತನ್ನ ಕೈಯಲ್ಲಿ ಒಂದು ದೊಣ್ಣೆಯನ್ನು ಹಿಡಿದುಕೊಂಡಿದ್ದರೂ ಅದರ ಜೊತೆಗೆ ಹಗ್ಗವನ್ನು ಹಿಡಿದುಕೊಂಡಿದ್ದರೂ ಕೆಂಪು ಅಥವಾ ಕಪ್ಪು ಬಣ್ಣದ ಬಟ್ಟೆಯನ್ನು ಉಟ್ಟು ಅದರ ಒಂದು ಸೆರಗನ್ನೇ ತಲೆಗೆ ಮರೆಮಾಡಿದ್ದರೂ ತೈಲಾಭ್ಯಕ್ತನಾಗಿ ಹಾಗೆಯೇ ತಲೆ ಕೆದರಿಕೊಂಡು ಬಂದರೂ ಆತುರನಾಗಿ ಕೈಕಾಲುಗಳಿಂದ ಭಯಂಕರವಾಗಿ ಶಬ್ದಮಾಡುತ್ತಾಬಂದರೂ

ನಾಗೋದಯಂ ಪ್ರವಕ್ಷ್ಯಾಮಿ ಈಶಾನೇನ ತು ಭಾಷಿತಂ ।
ಬ್ರಹ್ಮಣಾ ತು ಪುರಾ ದೃಷ್ಟಾ ಗ್ರಹಾ ನಾಗಾಸ್ತ್ವನೇಕಶಃ ॥ ೨೧ ॥

ಅನಂತಂ ಭಾಸ್ಕರಂ ವಿದ್ಯಾತ್ ಸೋಮಂ ವಿದ್ಯಾತ್ತುವಾಸುಕಿಂ ।
ತಕ್ಷಕಂ ಭೂಮಿಪುತ್ರಂ ತು ಕರ್ಕೋಟಂ ಚ ಬುಧಂ ವಿದುಃ ॥ ೨೨ ॥

ಪದ್ಮಂ ಬೃಹಸ್ಪತಿಂ ವಿದ್ಯಾತ್ ಮಹಾಪದ್ಮಂ ಚ ಭಾರ್ಗವಂ ।
ಕುಲಿಕಃ ಶಂಖಪಾಲಶ್ಚ ದ್ವಾವೇತೌ ಞ್ಚು ಶನೈಶ್ಚರಃ ॥ ೨೩ ॥

ಪೂರ್ವಪಾದಃ ಶಂಖಪಾಲೋ ದ್ವಿತೀಯಃ ಕುಲಿಕಸ್ತಥಾ ।
ನಿತ್ಯಂ ಭಾಗೇ ಯಥೋದ್ದಿಷ್ಟೇ ದಿನರಾತ್ರೀ ತಥೈವ ಚ ॥ ೨೪ ॥

---

ಇವೆಲ್ಲಾ ಸುಲಕ್ಷಣವಲ್ಲವಾದುದರಿಂದ ಹಾವು ಕಡಿದವನಿಗೆ ಕೊನೆಗಾಲ ಪ್ರಾಪ್ತ ವಾಗಿದೆ ಎಂದು ತಿಳಿಯಬೇಕು.

೨೧. ಶಿವನು ನಿರೂಪಿಸಿದ ನಾಗೋದಯ ವಿಷಯವಾಗಿ ಹೇಳುತ್ತೇನೆ— ಪೂರ್ವದಲ್ಲಿ ಬ್ರಹ್ಮನು ಸೃಷ್ಟಿಮಾಡಿದ ಗ್ರಹಗಳೇ ಬೇರೆ ಬೇರೆ ಅನೇಕ ಮಹಾನಾಗ ಗಳಾದುವು.

೨೨–೨೩. ಭಾಸ್ಕರನು ಅನಂತನಾಗಿಯೂ, ಚಂದ್ರನು ವಾಸುಕಿಯಾಗಿಯೂ ಅಂಗಾರಕನು ತಕ್ಷಕನಾಗಿಯೂ; ಬುಧನು ಕರ್ಕೋಟಕನಾಗಿಯೂ, ಬೃಹಸ್ಪತಿಯು ಪದ್ಮನಾಗಿಯೂ, ಶುಕ್ರನು ಮಹಾಪದ್ಮನಾಗಿಯೂ, ಶನೈಶ್ಚರನ ಪೂರ್ವಭಾಗವು ಶಂಖಪಾಲನಾಗಿಯೂ, ಉತ್ತರ ಭಾಗವು ಗುಳಿಕನಾಗಿಯೂ (ಕುಳಿಕ) ನಿರ್ಮಿತ ರಾದರು.

೨೪. ಈರೀತಿ ಈ ಗ್ರಹಗಳಿಗೆ ಸಂಬಂಧಿಸಿದ ದಿನಗಳು ಇವೆಯಷ್ಟೆ! ಆ ದಿನ ದಲ್ಲಿ ಹಗಲು ಎಂಟು ಭಾಗಗಳು ರಾತ್ರಿಯ ಎಂಟು ಭಾಗಗಳು ಯಥಾಕ್ರಮನಾಗಿ ಹೇಳಲ್ಪಟ್ಟಿವೆ. ಅಥವಾ ಪ್ರತಿದಿನವೂ ಹಗಲು ಹದಿನೈದು, ರಾತ್ರಿ ಹದಿನೈದು ಮುಹೂ ರ್ತಗಳೆಂದು ಹೇಳುವುದು ಪಕ್ಷಾಂತರ.

**ಶುಕ್ರ ಸೋಮೌ ಚ ಮಧ್ಯಾಹ್ನೇ ಉದಯೇ ತು ಕ್ಷಮಾಸುತಃ ।**
**ಶನಿಃ ಪ್ರಾಗಷ್ಟಮೇ ಭಾಗೇ ದಿವಾರಾತ್ರೇ ತ್ವಿಹೋಚ್ಯತೇ ॥ ೨೫ ॥**

**ಗ್ರಹಾಶ್ಚ ಭುಂಜತೇ ಚೈವಂ ಶೇಷಂ ಭಾಗಸ್ಯ ಲಕ್ಷಣಂ ।**
**ರವಿವಾರೇ ಸದಾ ಜ್ಞೇಯೌ ಪಾದೌ ದಶ ಚತುರ್ದಶ ॥ ೨೬ ॥**

**ಅಷ್ಟ ದ್ವಾದಶ ವೈ ಚಂದ್ರೇ ದಶಷಷ್ಠೇ ಕುಜೇ ತಥಾ ।**
**ಬುಧಸ್ಯ ನವಮೇ ಪಾದೇ ರಾಹೌ ಚ ದಿವಸಸ್ಯ ಚ ॥ ೨೭ ॥**

---

೨೫. ಈಗ ಗ್ರಹಗಳು ತಮ್ಮ ಫಲವನ್ನು ಅನುಭವಿಸುವ ಕಾಲವನ್ನು ತಿಳಿಸುತ್ತಾನೆ. ಶುಕ್ರ ಮತ್ತು ಚಂದ್ರರು ಮಧ್ಯಾಹ್ನಕಾಲದಲ್ಲಿಯೂ, ಮಂಗಳನು (ಅಂಗಾರಕನು) ಉದಯಕಾಲದಲ್ಲಿಯೂ, ಶನಿಯು ಪ್ರಾರಂಭದಲ್ಲಿಯೂ ಮತ್ತು ಎಂಟನೇ ಭಾಗದಲ್ಲಿಯೂ, ಇತರ ಗ್ರಹಗಳು ಹಗಲು ಮತ್ತು ರಾತ್ರಿ ಈ ಎರಡು ವೇಳೆಗಳಲ್ಲಿಯೂ ಫಲಭಾಗಿಗಳಾಗುವರೆಂದು ತಿಳಿಯಬೇಕು

೨೬. ಈಗ ಬಿಡಬೇಕಾದ ಮೂಹೂರ್ತಗಳನ್ನು ತಿಳಿಸುತ್ತಾನೆ. ಒಟ್ಟು ಎರಡೆರಡು ಘಳಿಗೆಗಳಿಗೆ ಒಂದೊಂದು ಮುಹೂರ್ತದಂತೆ ಹಗಲು ಹದಿನೈದು ಮುಹೂರ್ತಗಳು ರಾತ್ರಿ ಹದಿನೈದು ಮುಹೂರ್ತಗಳು ಒಟ್ಟು ಮೂವತ್ತು ಮುಹೂರ್ತಗಳಿರುವುವು. ಅವುಗಳಲ್ಲಿ (1) ರುದ್ರ, (2) ಅಹಿ, (3) ಮಿತ್ರ, (4) ಪಿತೃ, (5) ವಸು, (6) ವಾರ, (7) ವಿಶ್ವೇದೇವ, (8) ವಿಧಿ, (9) ಶತಮುಖ, (10) ಪುರುಹೂತ, (11) ವಹ್ನಿ, (12) ನಕ್ತಂಚರ, (13) ವರುಣ, (14) ಅರ್ಯಮ, (15) ಮತ್ತು ಭಗ, ಈ ಹದಿನೈದು ದೇವತೆಗಳು ಹಗಲಿನ ಮುಹೂರ್ತಗಳಿಗೆ ಕ್ರಮವಾಗಿ ಅಧಿದೇವತೆಗಳು. ರಾತ್ರಿಯ ಮುಹೂರ್ತಗಳಿಗೆ ಕ್ರಮವಾಗಿ (1) ಗಿರಿಶ, (2) ಅಜಪಾದ; (3) ಅಹಿ ಬುರ್ಧ್ನ, (4) ಪೂಷ, (5) ಅಶ್ವಿ, (6) ಯಮ, (7) ಅಗ್ನಿ, (8) ವಿಧಾತೃ, (9) ಚಂದ್ರ, (10) ಅದಿತಿ, (11) ಜೀವ, (12) ವಿಷ್ಣು, (13) ತಿಗ್ಮದ್ಯುತಿ, (14) ಕೃಷ್ಣ ಮತ್ತು (15) ಸಮೀರಣ ಈ ಹದಿನೈದು ಜನ ದೇವತೆಗಳು ಅಧಿಪತಿಗಳು ಎಂದು ತಿಳಿಯಬೇಕು. ಭಾನುವಾರದ ದಿವಸ ಹತ್ತು ಮತ್ತು ಹದಿನಾಲ್ಕನೆಯ ಪುರುಹೂತ, ಮತ್ತು ಅರ್ಯಮ ಮುಹೂರ್ತಗಳನ್ನೂ; ಮೊದಲನೆಯದಾದ ರುದ್ರಮುಹೂರ್ತವನ್ನೂ ಬಿಡಬೇಕು. ಸೋಮವಾರ ಎಂಟನೆಯ ಮತ್ತು ಹನ್ನೆರಡನೆಯದಾದ ವಿಧಿ ಮತ್ತು ನಕ್ತಂಚರ ಮುಹೂರ್ತಗಳನ್ನು ತ್ಯಜಿಸಬೇಕು. ಮಂಗಳವಾರ ಪುರುಹೂತ ಮತ್ತು ಪಾದವೆಂಬ ಹತ್ತು ಮತ್ತು ಆರನೆಯ ಮುಹೂರ್ತಗಳನ್ನು ಬಿಡಬೇಕು.

ಗುರೋ ದ್ವಿತೀಯಃ ಷಷ್ಠಶ್ಚ ಷೋಡಶಸ್ಯ ತು ವರ್ಜಯೇತ್ ।
ಭಾಸ್ಕರಸ್ಯ ದಿನೇ ಪ್ರೋಕ್ತೇ ಚತುರ್ಥೇ ದಶಮೇಷ್ಟಮೇ ॥ ೨೮ ॥

ಶನೈಶ್ಚರದಿನೇ ಪಾದಂ ತ್ಯಜೇಚ್ಚೈವ ಸದಾರುಣಂ ।
ದ್ವಿತೀಯಂ ದ್ವಾದಶಂ ಚೈವ ಷೋಡಶಸ್ಯ ತು ವರ್ಜಯೇತ್ ॥ ೨೯ ॥

---

ಬುಧವಾರ ಒಂಭತ್ತನೆಯದಾದ ಶತಮುಖ ಮುಹೂರ್ತವನ್ನೂ ತ್ಯಾಗಮಾಡಬೇಕು. ಯಾವ ಶುಭ ಕೆಲಸಕ್ಕೂ ರಾಹುಕಾಲವನ್ನು ಬಿಡಬೇಕು ಅಂದರೆ ರಾಹುಕಾಲದಲ್ಲಿ ಶುಭ ಕೆಲಸವನ್ನು ಪ್ರಾರಂಭಮಾಡಕೂಡದು.

೨೮ ಗುರುವಾರ ಎರಡು, ಆರು ಮತ್ತು ಹದಿನಾರನೆಯದಾದ ಅಹಿ, ವಾರ, ಮತ್ತು ಗಿರಿಶ ಮುಹೂರ್ತಗಳನ್ನು ಬಿಡಬೇಕು ಭಾನುವಾರ ಪಿತೃ, ಪುರುಹೂತ ಮತ್ತು ವಿಧಿ ಮುಹೂರ್ತಗಳನ್ನು ಅಂದರೆ ನಾಲ್ಕು ಹತ್ತು ಎಂಟನೆಯ ಮುಹೂರ್ತಗಳನ್ನು ಬಿಡಬೇಕು. ಇದು ಪ್ರಕಾರಾಂತರವೆಂದು ತಿಳಿಯಬೇಕು. ಹಿಂದೆ ಭಾನುವಾರದ ತ್ಯಾಜ್ಯವನ್ನು ಬೇರೊಂದು ರೀತಿಯಲ್ಲಿ ಹೇಳಿದೆ.

ಗ್ರಂಥಾಂತರದಲ್ಲಿ ಪ್ರಕಾರಾಂತರದಿಂದ ದುರ್ಮುಹೂರ್ತಗಳನ್ನು ಹೇಳುತ್ತಾನೆ— ಭಾನುವಾರ ನಾಲ್ಕನೆಯ ಅರ್ಯಮ, ಸೋಮವಾರ ಎಂಟನೆಯ ವಿಧಿ, ಹನ್ನೆರಡನೆಯ ನಕ್ತಂಚರ, ಮಂಗಳವಾರದಲ್ಲಿ ನಾಲ್ಕನೆಯ ಪಿತೃ, ಹನ್ನೊಂದನೆಯ ವಹ್ನಿ, ಬುಧವಾರದಲ್ಲಿ ಅಭಿಜಿತ್ತು. ಗುರುವಾರ ಹನ್ನೆರಡನೆಯ ನಕ್ತಂಚರ, ಹದಿಮೂರನೆಯ ವರುಣ, ಶುಕ್ರವಾರದಲ್ಲಿ ನಾಲ್ಕನೆಯ ಪಿತೃ, ಎಂಟನೆಯ ವಿಧಿ, ಶನಿವಾರದಲ್ಲಿ ಒಂದನೆಯ ರುದ್ರ, ಎರಡನೆಯ ಅಹಿ ಎಂಬ ಈ ಮುಹೂರ್ತಗಳು ಆಯಾವಾರದ ದುರ್ಮುಹೂರ್ತಗಳೆಂದು ತಿಳಿಯಬೇಕು ಅವುಗಳನ್ನು ಬಿಟ್ಟು ಶುಭಕಾರ್ಯಗಳನ್ನು ಪ್ರಾರಂಭ ಮಾಡಬೇಕು.

೨೯. ಶನಿವಾರದ ದಿವಸ ಮೊದಲನೆಯ ಮುಹೂರ್ತವು ಅತಿಭಯಂಕರವಾಗಿರುವುದರಿಂದ ಆ ರುದ್ರಮುಹೂರ್ತವನ್ನು ಬಿಡಬೇಕು. ಮತ್ತು ಎರಡನೆಯದಾದ ಅಹಿ ಮುಹೂರ್ತವನ್ನೂ ಹನ್ನೆರಡನೆಯದಾದ ನಕ್ತಂಚರ ಮುಹೂರ್ತವನ್ನೂ ಹದಿನಾರನೆಯದಾಗಿರುವ ಗಿರಿಶಮುಹೂರ್ತವನ್ನೂ ಬಿಟ್ಟುಬಿಡಬೇಕು.

ಮುಹೂರ್ತಘಟಿಕಾದೂರ್ಧ್ವಂ ಘಟಿಕಾಚತುರ್ಥಭಾಗಂ ವಿಂಶತಿಶ್ಚ ।
ಕುಹೂಸುತಂ ಬುದ್ಬುದಂ ನಿಮೇಷಮೇತತ್ಕಾಲಸ್ಯ ಲಕ್ಷಣಂ ॥ ೩೦ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಪಂಚಮೀಕಲ್ಪೇ
ದಂಶದಷ್ಟಕ ದೂತಲಕ್ಷಣಂ ನಾಮ ಚತುಸ್ತ್ರಿಂಶೋಽಧ್ಯಾಯಃ.



---

೩೦. ಆಯಾಯ ಮುಹೂರ್ತಗಳ ಪ್ರಮಾಣವನ್ನು ನಾಲ್ಕುಭಾಗಮಾಡಿದರೆ ಮೂವತ್ತು ವಿಘಳಿಗೆ ಬರುವುದು. ಎರಡೂವರೆ ವಿಘಳಿಗೆಗೆ ಒಂದು ನಿಮಿಷದಂತೆ ಮೂವತ್ತು ವಿಘಳಿಗೆಗೆ ಹನ್ನೆರಡು ನಿಮಿಷಗಳಾಗುವುವು. ಹನ್ನೆರಡು ನಿಮಿಷದಿಂದ ಇಪ್ಪತ್ತು ನಿಮಿಷದವರೆಗೆ "ಕುಹೂ" ಎಂಬ ದೋಷವಿರುವುದರಿಂದ ಆ ಕಾಲವನ್ನು ತ್ಯಾಜ್ಯಮಾಡಬೇಕು. ಇದೇ ಕಾಲನಿರ್ಣಯದ ರೀತಿಯೆಂದು ತಿಳಿಯಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿಯ ಬ್ರಾಹ್ಮಪರ್ವದಲ್ಲಿ ಪಂಚಮೀ
ಕಲ್ಪದಲ್ಲಿ ದಂಶದಷ್ಟಕದೂತ ಲಕ್ಷಣವೆಂಬ ಮೂವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪಂಚತ್ರಿಂಶೋಽಧ್ಯಾಯಃ

---

॥ ಕಶ್ಯಪ ಉವಾಚ ॥

ಸವಿಷಾ ದಂಷ್ಟ್ರಯೋರ್ಮಧ್ಯೇ ಯಮದೂತೀ ತು ವೈ ಭವೇತ್ ।
ನ ಚಿಕಿತ್ಸಾ ಬುಧೈಃ ಕಾರ್ಯಾ ತಂ ಗತಾಯುಂ ವಿನಿರ್ದಿಶೇತ್ ॥ ೧ ॥

ಪ್ರಹಾರಾರ್ಧಂ ದಿವಾರಾತ್ರೌ ಏಕೈಕಂ ಭುಂಜತೇ ಬಹಿಃ ।
ಏಕಸ್ಯ ಚ ಸಮಾನಂ ಚ ದ್ವಿತೀಯಂ ಷೋಡಶಂ ತಥಾ ॥ ೨ ॥

ನಾಗಾದಯೋ ಯಮುದ್ದಿಶ್ಯ ಹತೋ ವಿದ್ಧೋ ವಿದಾರಿತಃ ।
ಕಾಲದಷ್ಟಂ ವಿಜಾನೀಯಾತ್ ಕಶ್ಯಪಸ್ಯ ವಚೋ ಯಥಾ ॥ ೩ ॥

---

## ಮೂವತ್ತೈದನೆಯ ಅಧ್ಯಾಯವು

೧. ಕಶ್ಯಪ ಬ್ರಹ್ಮನು ಹೇಳುತ್ತಾನೆ—ವಿಷದಿಂದ ಕೂಡಿದವುಗಳಾದ ಎರಡು ಜೊತೆ-ಹಲ್ಲುಗಳಲ್ಲಿ ಯಮದೂತೀ ಸಂಜ್ಞೆಯುಳ್ಳ ಕೋರೆಹಲ್ಲಿನಿಂದ ಕಚ್ಚಿದೆ ಎಂದು ತೋರಿದಾಗ ತಿಳಿದವರು ಚಿಕಿತ್ಸೆಮಾಡಲೇಕೂಡದು. ಆತನ ಆಯುಸ್ಸು ಮುಗಿಯಿತೆಂದೇ ಹೇಳಬೇಕು.

೨. ಕಾಲಪುರುಷನು ಅರ್ಧಜಾವಕ್ಕೊಬ್ಬನಂತೆ ಹಗಲಿನಲ್ಲೂ, ರಾತ್ರಿಯೂ ಕಬಳಿಸುತ್ತಾನೆ. ದ್ವಿತೀಯದಿಂದ ಷೋಡಶ ಸಂಖ್ಯೆಯವರೆಗಿನ ನಾಗಗಳೆಲ್ಲಾ ಒಂದನೇ ನಾಗನಿಗೆ ಸಮನಾದ ಫಲಗಳುಳ್ಳವುಗಳು.

೩. ಸರ್ಪ ಮೊದಲಾದವು ಯಾವ ಮನುಷ್ಯನನ್ನು ಹೊಡೆದು ಕಚ್ಚಿ ಸೀಳಿ ಹೀಗೆಲ್ಲಾ ಮಾಡುವುವೋ ಆ ಮನುಷ್ಯನು ಕಾಲಪುರುಷನಿಂದ ತೊಂದರೆಗೊಳಿಸಲ್ಪಟ್ಟವನೆಂದು ತಿಳಿಯಬೇಕು ಎಂಬದಾಗಿ ಕಶ್ಯಪರು ಹೇಳಿದ್ದಾರೆ.

ಯನ್ಮಾತ್ರಂ ಪತತೇ ಬಿಂದುಃ ವಾಲಾಗ್ರಂ ಸಲಿಲೋದ್ಧೃತಂ ।
ತನ್ಮಾತ್ರಂ ಸ್ರವತೇ ದಂಷ್ಟ್ರಾ ವಿಷಂ ಸರ್ಪಸ್ಯ ದಾರುಣಂ ॥ ೪ ॥

ನಾಡೀಶತೇ ತು ಸಂಪೂರ್ಣೇ ದೇಹೇ ಸಂಕ್ರಮತೇ ವಿಷಂ ।
ಯಾವತ್ಸಂಕ್ರಮಯೇದ್ಬಾಹುಂ ಕುಂಚಿತಂ ವಾ ಪ್ರಸಾರಯೇತ್ ॥ ೫ ॥

ಅನೇನ ಕ್ಷಣಮಾತ್ರೇಣ ವಿಷಂ ಗಚ್ಛತಿ ಮಸ್ತಕೇ ।
ವೇಪತೇ ವಿಷವೇಗೇ ತು ಶತಶೋಽಥ ಸಹಸ್ರಶಃ ॥ ೬ ॥

ವರ್ಧತೇ ರಕ್ತಮಾಸಾದ್ಯ ತತೋ ವಾತೈಃ ಶಿಖಿಂ ಯಥಾ ।
ತೈಲಬಿಂದುರ್ಜಲಂ ಪ್ರಾಪ್ಯ ಯಥಾ ವೇಗೇನ ವರ್ಧತೇ ॥ ೭ ॥

ಶಿಖಂಡೀ ಆಶ್ರಯಂ ಪ್ರಾಪ್ಯ ಮಾರುತೇನ ಸಮೀರಿತಃ ।
ತತಃ ಸ್ಥಾನಶತಂ ಪ್ರಾಪ್ಯ ತ್ವಚಾಸ್ಥಾನಂ ವಿಚೇಷ್ಟಿತಂ ॥ ೮ ॥

---

೪. ಹಾವು ನೀರಿನಿಂದ ಬಾಲವನ್ನು ಎತ್ತಿದಾಗ ಅದರ ಬಾಲದಿಂದ ಎಷ್ಟು ಜಲಬಿಂದುಗಳು ತೊಟ್ಟಿಕ್ಕುವುವೋ ಅಷ್ಟು ತೊಟ್ಟು ವಿಷಬಿಂದುಗಳೂ ಅದರ ಕೋರೆ ದಾಡೆಯಿಂದ ಸುರಿಯುತ್ತವೆ.

೫-೬. ನೂರಾರು ನಾಡಿಗಳಿಂದ ಕೂಡಿದ ಈ ದೇಹದಲ್ಲಿ ವಿಷವು ಎಲ್ಲಕಡೆಗೂ ವ್ಯಾಪಿಸುವುದು. ಕಚ್ಚುವಾಗ ಮಡಿಸಿದ್ದರೆ ಆ ತೋಳನ್ನು ನೀಡುವಾಗಲೂ, ಕಚ್ಚು ವಾಗ ನೀಡಿಕೊಂಡಿದ್ದ ತೋಳನ್ನು ಮಡಿಸುವಾಗಲೂ ಆ ಸ್ವಲ್ಪಕಾಲದಲ್ಲಿಯೇ ವಿಷವು ಥಟ್ಟನೆ ತಲೆಗೆ ಏರುವುದು. ಈ ವಿಷದವೇಗವು ಹೆಚ್ಚುತ್ತಾ ಹೆಚ್ಚುತ್ತಾ ನೂರುಮಡಿ ಸಾವಿರಮಡಿ ನಡುಕವುಂಟಾಗುವುದು.

೭. ಗಾಳಿಬೀಸಿದಾಗ ಬೆಂಕಿಯು ಹೇಗೆ ವೃದ್ಧಿಯಾಗುವುದೋ ಹಾಗೆ ಕ್ರಮ ವಾಗಿ ಈ ವಿಷವು ರಕ್ತಗತವಾಗಿ ವೃದ್ಧಿಹೊಂದುತ್ತದೆ.

೮. ಎಣ್ಣೆಯ ಒಂದು ತೊಟ್ಟು ನೀರಿನಮೇಲೆ ಬಿದ್ದರೆ ಹೇಗೆ ಕೂಡಲೇ ಅಗಲ ವಾಗಿ ಹರಡಿಕೊಳ್ಳುವುದೋ, ಗಾಳಿಯ ಅವಲಂಬನದಿಂದ ಅಗ್ನಿಯು ಹೇಗೆ ಅಭಿ ವೃದ್ಧಿ ಹೊಂದುವದೋ ಹಾಗೆ ಸರ್ಪದಂಶನದ ಚಿಹ್ನವು ಚರ್ಮದ ಮೇಲೆ ಮೊದಲು ಗೋಚರವಾಗುವುದು.

ತ್ವಚಾಸು ದ್ವಿಗುಣಂ ವಿದ್ಯಾತ್ ಶೋಣಿತೇಷು ಚತುರ್ಗುಣಂ ।
ಪಿತ್ತೇ ಶು ತ್ರಿಗುಣಂ ಯಾತಿ ಶ್ಲೇಷ್ಮೇ ವೈ ಷೋಡಶಂ ಭವೇತ್ ॥ ೯ ॥

ವಾಯೌ ತ್ರಿಂಶದ್ಗುಣಂ ಚೈವ ಮಜ್ಜಾ ಷಷ್ಟಿಗುಣಂ ತಥಾ ।
ಪ್ರಾಣೇ ಚೈಕಾರ್ಣವೀಭೂತೇ ಸರ್ವಗಾತ್ರಾಣಿ ಸಂಧಯೇತ್ ॥ ೧೦ ॥

ಶ್ರೋತ್ರೇ ನಿರುಧ್ಯಮಾನೇ ಚ ಯಾತಿ ದಷ್ಟಸ್ತ್ವಸಾಧ್ಯತಾಂ ।
ತತೋ ಸೌ ಮ್ರಿಯತೇ ಜಂತುಃ ನಿಶ್ವಾಸೋಚ್ಛ್ವಾಸವರ್ಜಿತಃ ॥ ೧೧ ॥

ನಿಶ್ವಾಸ್ಯಾಂತೇ ತು ತತೋ ಜೀವೇ ಭೂತೇ ಪಂಚತ್ವಮಾಗತೇ ।
ತಾನಿ ಭೂತಾನಿ ಗಚ್ಛಂತಿ ಯಸ್ಯ ಯಸ್ಯ ಯಥಾತಥಂ ॥ ೧೨ ॥

---

೯ ವಿಷವ್ಯಾಪ್ತಿಯ ಪರಿಮಾಣವು ಚರ್ಮದಲ್ಲಿ ಎರಡುಪಾಲು ಇದ್ದರೆ ರಕ್ತದಲ್ಲಿ ನಾಲ್ಕುಪಾಲಿನಷ್ಟು ಆಗುವುದು. ಈ ವಿಷವ್ಯಾಪ್ತಿ ಪರಿಮಾಣ, ಪಿತ್ತಧಾತುವಿನಲ್ಲಿ ಮೂರರಷ್ಟು, ಇದ್ದದು ಶ್ಲೇಷ್ಮಧಾತುವಿನಲ್ಲಿ ಹದಿನಾರು ಪಾಲಿನಷ್ಟು ಆಗುವುದು.

೧೦. ಈ ವಿಷವ್ಯಾಪ್ತಿಯ ಪರಿಮಾಣವು ವಾತಧಾತುವಿನವರೆಗೆ ವ್ಯಾಪಿಸುವಾದರೆ ಅದು ಮೂವತ್ತು ಪಾಲಿನಷ್ಟು ಹೆಚ್ಚಾಗುವುದು. ಈ ವ್ಯಾಪ್ತಿಯ ಪರಿಣಾಮವು ಮಜ್ಜಾ ಎಂಬ ಧಾತುವಿನವರೆಗೂ ವ್ಯಾಪಿಸುವುದಾದರೆ ಆಗ ಅದು ಅರವತ್ತು ಪಾಲಿನಷ್ಟು ಹೆಚ್ಚಾಗುತ್ತದೆ. ಸಮುದ್ರದ ಭಾಗವೆಲ್ಲವೂ ನೀರಿನಿಂದ ವ್ಯಾಪ್ತವಾಗಿರುವ ಹಾಗೆ ಪ್ರಾಣವಾಯು ಸ್ಥಾನಕ್ಕೆ ವಿಷವ್ಯಾಪನೆಯಾದರೆ ದೇಹದ ಸರ್ವಭಾಗಕ್ಕೂ ವಿಷವ್ಯಾಪನೆಯಾದಂತೆಯೇ ಸರಿ.

೧೧. ಹಾವು ಕಚ್ಚಿದವನಿಗೆ ಕಿವಿಗಳೆರಡೂ ಸಂಪೂರ್ಣವಾಗಿ ಮುಚ್ಚಿಹೋಗಬಹುದು. ಹೀಗಾದರೆ ಕಚ್ಚಿದವನು ಬದುಕುವುದು ಅಸಾಧ್ಯ. ಕ್ರಮವಾಗಿ ಚರ್ಮ, ರಕ್ತ, ಮುಂತಾದ್ದಕ್ಕೆಲ್ಲಾ ವ್ಯಾಪಿಸಿ, ಕೊನೆಗೆ ಪ್ರಾಣವಾಯುವನ್ನೂ ವ್ಯಾಪಿಸಿದರೆ ಅಲ್ಲಿಗೆ ಅವನ ಉಸಿರಾಡುವ ಕ್ರಿಯೆಯು ನಿಂತುಹೋಗಿ ಸಾಯುವನು.

೧೨ ಹೀಗೆ ಜೀವಹೋಗುತ್ತಲೆ ಪಂಚಭೂತಗಳಿಂದ ಏರ್ಪಟ್ಟದೇಹವು ತನಗೆ ಕಾರಣವಾಗಿದ್ದ ಪಂಚಭೂತಗಳ ಸ್ಥಿತಿಗೇ ಮಾರ್ಪಟ್ಟು ಆಯಾ ಅಂಶಗಳು ಆಯಾ ಭಾಗಗಳಲ್ಲಿ ಸೇರಿಹೋಗುವುವು.

**ಪೃಥಿವ್ಯಾಪಸ್ತಥಾ ತೇಜೋ ವಾಯುರಾಕಾಶಮೇವ ಚ ।**
**ಇತ್ಯೇಷಾಮೇವ ಸಂಘಾತಃ ಶರೀರಮಭಿಧೀಯತೇ ॥ ೧೩ ॥**

**ಪೃಥಿವೀ ಪೃಥಿವೀಂ ಯಾತಿ ತೋಯಂ ತೋಯೇಷು ಲೀಯತೇ ।**
**ತೇಜೋ ಗಚ್ಛತಿ ಚಾದಿತ್ಯಂ ಮರುನ್ಮಾರುತಮಾವ್ರಜೇತ್ ॥ ೧೪ ॥**

**ಆಕಾಶಂ ಚೈವಮಾಕಾಶೇ ಸಹ ತೇನೈವ ಗಚ್ಛತಿ ।**
**ಸ್ವಸ್ಥಾನಂ ತೇ ಪ್ರಪದ್ಯಂತೇ ಪರಸ್ಪರನಿಯೋಜಿತಾಃ ॥ ೧೫ ॥**

**ನ ಜೀವೇದಾಗತಃ ಕಶ್ಚಿದಿಹ ಜನ್ಮನಿ ಸುವ್ರತ ।**
**ವಿಷಾರ್ತಂ ನ ಉಪೇಕ್ಷೇತ ತ್ವರಿತಂ ತು ಚಿಕಿತ್ಸಯೇತ್ ॥ ೧೬ ॥**

**ಏಕಮಸ್ತಿ ವಿಷಂ ಲೋಕೇ ದ್ವಿತೀಯಂ ಚ ಪ್ರಪದ್ಯತೇ ।**
**ಯಥಾ ನಾನಾವಿಧಂ ಚೈವ ಸ್ಥಾವರಂ ತು ತಥೈವ ಚ ॥ ೧೭ ॥**

---

೧೩. ಪೃಥಿವೀ, ಅಪ್ (ನೀರು) ತೇಜ, ವಾಯು, ಆಕಾಶ ಈ ಭೂತಗಳ ಸಮುದಾಯವೇ ಶರೀರವೆನ್ನಿಸಿಕೊಂಡಿರುವುದು.

೧೪. ಶರೀರದಲ್ಲಿ ಪೃಥಿವೀ ಸಂಬಂಧವಾದ ಅಂಶವು ಪೃಥಿವಿಯಲ್ಲಿಯೂ, ಜಲಾಂಶವು ಜಲದಲ್ಲಿಯೂ, ತೇಜೋಂಶವು ಆದಿತ್ಯನಲ್ಲಿಯೂ, ವಾಯುವಿನ ಅಂಶವು ವಾಯುವಿನಲ್ಲಿಯೂ, ಆಕಾಶದ ಅಂಶವು ಆಕಾಶದಲ್ಲಿಯೂ, ಬೆರೆದುಹೋಗುವುವು.

೧೫. ದೇಹಾವಸ್ಥೆಯನ್ನು ಹೊಂದುವುದಕ್ಕಾಗಿ ಒಂದಕ್ಕೊಂದು ಜೋಡಿಸಲ್ಪಟ್ಟಿದ್ದ ಈ ಪಂಚಭೂತಾಂಶಗಳು ಸ್ವಸ್ಥಾನವಾದ ಆಯಾ ಪಂಚಭೂತಗಳನ್ನು ಸೇರುತ್ತವೆ.

೧೬. ಅಯ್ಯಾ ಸುವ್ರತನೇ ! ಜನ್ಮವನ್ನು ಹೊಂದಿ ಮೃತನಾದಮೇಲೆ ಪುನಃ ಯಾರೂ ಬದುಕುವುದಿಲ್ಲ. ಆದುದರಿಂದ ವಿಷದಿಂದ ಪೀಡಿತನಾದವನಿಗೆ " ಇದೇನು ಮಾಡೀತು " ಎಂದು ಉಪೇಕ್ಷೆಮಾಡದೆ ಕೂಡಲೇ ಸಾಧ್ಯವಾದಷ್ಟು ಚಿಕಿತ್ಸೆಯನ್ನು ಮಾಡಬೇಕು.

೧೭. ಲೋಕದಲ್ಲಿ ವಿಷವ್ಯಾಪನೆ ಎಂಬುದಾಗಿ ಒಂದೇ ಮಾತಿನಲ್ಲಿ ವ್ಯವಹಾರ ಮಾಡಿದರೂ, ಅದರಲ್ಲಿ ಒಂದನೆಯದು ಬಹುಪ್ರಬಲ, ಎರಡನೆಯದು ಪ್ರಬಲವಾ

ಪ್ರಥಮೇ ವಿಷವೇಗೇ ತು ರೋಮಹರ್ಷೋಽಭಿಜಾಯತೇ ।
ದ್ವಿತೀಯೇ ವಿಷವೇಗೇ ತು ಸ್ವೇದೋ ಗಾತ್ರೇಷು ಜಾಯತೇ ॥ ೧೮ ॥

ತೃತೀಯೇ ವಿಷವೇಗೇ ತು ಕಂಪೋ ಗಾತ್ರೇಷು ಜಾಯತೇ ।
ಚತುರ್ಥೇ ವಿಷವೇಗೇ ತು ಶ್ರೋತ್ರಾಂತರ ನಿರೋಧಕೃತ್ ॥ ೧೯ ॥

ಪಂಚಮೇ ವಿಷವೇಗೇ ತು ಹಿಕ್ಕಾ ಗಾತ್ರೇಷು ಜಾಯತೇ ।
ಷಷ್ಠೇ ಚ ವಿಷವೇಗೇ ತು ಪ್ರಾಣೇಭ್ಯೋಽಪಿ ಪ್ರಮುಚ್ಯತೇ ।
ಸಪ್ತಧಾತುವಹಾ ಹ್ಯೇತೇ ವೈನತೇಯೇನ ಭಾಷಿತಾಃ ॥ ೨೦ ॥

ತ್ವಚಃ ಸ್ಥಾನೇ ವಿಷೇ ಪ್ರಾಪ್ತೇ ತಸ್ಯ ರೂಪಾಣಿ ಮೇ ಶೃಣು ।
ಅಂಗಾನಿ ತಿಮಿರಾಯಂತೆ ತಪಂತೇ ಚ ಮುಹುರ್ಮುಹುಃ ॥ ೨೧ ॥

---

ವದ್ದು, ಮೂರನೆಯದು (ಮಧ್ಯಮ) ಎನ್ನಿಸಿಕೊಳ್ಳುವುದು ಉಂಟು ಎಂದು ಹೇಳ ಬೇಕಾಗುವ ಸಂದರ್ಭವೂ ಇದೆ. ಸ್ಥಳದಿಂದ ಸ್ಥಳಕ್ಕೆ ಚಲನಶಕ್ತಿ ಇಲ್ಲದೇ ಇರುವುದನ್ನು ಸ್ಥಾವರ ಎಂಬ ಒಂದೇ ಮಾತಿನಲ್ಲಿ ವ್ಯವಹರಿಸಿದಾಗ್ಯೂ ಅದರಲ್ಲಿ ಕಲ್ಲು, ಮಣ್ಣು, ಮರ, ಮುಂತಾದ ನಾನಾ ಭೇದಗಳಿರುವಂತೆ ಪ್ರಾಣಾಪಹಾರಕ ವಸ್ತುವು ವಿಷವೆಂಬ ಒಂದು ಪಂಗಡಕ್ಕೆ ಸೇರಿದರೂ ಈ ವಿಷವ್ಯಾಪನಾವಿಶೇಷಪ್ರಕಾರದಿಂದ ಅನೇಕ ಭೇದಗಳಾಗಿವೆ.

೧೮. ವಿಷವು ವ್ಯಾಪಿಸಿದಾಗ ಮೊಟ್ಟಮೊದಲು ರೋಮಾಂಚವಾಗುವುದು. ಆಮೇಲೆ ದ್ವಿತೀಯಾವಸ್ಥೆಯಲ್ಲಿ ದೇಹವೆಲ್ಲಾ ಬೆವರುವುದು.

೧೯. ಅವಯುವಗಳಲ್ಲಿ ನಡುಕ ಉಂಟಾಗುವುದು, ಮೂರನೇ ವಿಷವೇಗದ ಪರಿಣಾಮ. ವಿಷವ್ಯಾಪ್ತಿಯಾದವನಿಗೆ ಉಂಟಾಗುವ ನಾಲ್ಕನೇ ಅವಸ್ಥೆಯು ಕಿವುಡು.

೨೦. ಆದರ ಮುಂದಿನ (ಐದನೆಯ) ಅವಸ್ಥೆಯು ಬಿಕ್ಕಳಿಕೆ ಹುಟ್ಟುವುದು. ಪ್ರಾಣಗಳು ಶರೀರವನ್ನು ಬಿಟ್ಟುಹೊರಡುವುದೇ ಆರನೆಯ ಅವಸ್ಥೆಯು. ಈ ಸಪ್ತಧಾತುಸ್ವರೂಪವನ್ನು ಗರುಡನು ಹಿಂದೆ ಹೇಳಿದ್ದಾನೆ.

೨೧-೨೨. ವಿಷವು ತ್ವಕ್‌ಸ್ಥಾನವನ್ನು ತಲಪಿದರೆ ಅವನ ಆಕೃತಿ ಹೇಗಾಗುವುದೋ ಅದನ್ನು ಹೇಳುವೆನು ಕೇಳು. ಮೈಯಲ್ಲಿ ನವೆಯೂ ಪದೇ ಪದೇ ನಡುಕವೂ

ಏತಾನಿ ಯಸ್ಯ ಚಿಹ್ನಾನಿ ತಸ್ಯ ತ್ವಚಿ ಗತಂ ವಿಷಂ ।
ತಸ್ಯಾಗದಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಸುಖಂ ॥ ೨೨ ॥

ಅರ್ಕ ಮೂಲಮಪಾಮಾರ್ಗಂ ಪ್ರಿಯಂಗುಂ ತ್ರೈಲಕಂ ತಥಾ ।
ಏತದಾಲೋಡ್ಯ ದಾತವ್ಯಂ ತತಃ ಸಂಪದ್ಯತೇ ಸುಖಂ ॥ ೨೩ ॥

ತತಃ ತಸ್ಮಿನ್ ಕೃತೇ ವಿಪ್ರ ನ ನಿವರ್ತೇತ ಚೇದ್ವಿಷಂ ।
ತ್ವಚಃ ಸ್ಥಾನಂ ತತೋ ಭಿತ್ವಾ ರಕ್ತಸ್ಥಾನಂ ಪ್ರಧಾವತಿ ॥ ೨೪ ॥

ವಿಷೇ ಚ ರಕ್ತಂ ಸಂಪ್ರಾಪ್ತೇ ತಸ್ಯ ರೂಪಾಣಿ ಮೇ ಶೃಣು ।
ದಹ್ಯತೇ ಚೈವ ತದ್ದೇಹಂ ಶೀತಲಂ ಬಹು ಮನ್ಯತೇ ॥ ೨೫ ॥

ಏತಾನಿ ಯಸ್ಯ ರೂಪಾಣಿ ತಸ್ಯ ರಕ್ತಗತಂ ವಿಷಂ ।
ತಶ್ಯಾಗದಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಸುಖಂ ॥ ೨೬ ॥

---

ಆಗುವುದು. ಇವು ತ್ವಕ್ಕಿನಲ್ಲಿ ವಿಷವು ಸೇರಿದವನಿಗೆ ಆಗುವ ಚಿಹ್ನೆಗಳು. ಅವನಿಗೆ ಯಾವುದರಿಂದ ಗುಣವಾಗುವುದೋ ಅಂತಹ ಔಷಧವನ್ನು ಹೇಳುವೆನು.

೨೩. ಎಕ್ಕದಬೇರು, ಉತ್ತರಣೆ ಎಲೆ, ನವಣೆ (ತ್ರೈಲಕ) ತಗರ ಇವನ್ನು ಅರೆದು ನೀರಿನಲ್ಲಿ ಅದನ್ನು ಕದರಿಕೊಡಬೇಕು ಆಗ ಅನುಕೂಲವುಂಟಾಗುವುದು.

೨೪. ಹೀಗೆ ಆದನ್ನು ಮಾಡಿದಾಗ ವಿಷವು ನಿವೃತ್ತಿಯಾಗದಿದ್ದರೆ ತ್ವಕ್ ಸ್ಥಾನವನ್ನು ಭೇದಿಸಿಕೊಂಡು ರಕ್ತಸ್ಥಾನಕ್ಕೆ ವಿಷವು ಏರಿದೆಯೆಂದು ತಿಳಿಯಬೇಕು.

೨೫. ವಿಷವು ರಕ್ತವನ್ನು ಸೇರಿದಮೇಲೆ ಆ ಪ್ರಾಣಿಯ ರೂಪು ಹೇಗಾಗುವುದೋ ಆದನ್ನು ಕೇಳು. ಅವನ ದೇಹವು ಕಾಂತಿಹೀನವಾಗುವುದು, ಸುಡುತ್ತಿರುವ ವಸ್ತುವು ಅವನಿಗೆ ಬಹಳ ತಣ್ಣಗೆ ತೋರುವುದು.

೨೬. ಈ ಲಕ್ಷಣವುಳ್ಳವನಿಗೆ ವಿಷವು ರಕ್ತಗತವಾಗಿರುವುದೆಂದು ತಿಳಿ. ಆ ಸಂದರ್ಭದಲ್ಲಿ ಗುಣಪಡಿಸುವ ಔಷಧವನ್ನು ಹೇಳುವೆನು.

ಉಶೀರಂ ಚಂದನಂ ಕುಷ್ಟಮುತ್ಪಲಂ ತಗರಂ ತಥಾ ।
ಮಹಾಕಾಲಸ್ಯ ಮೂಲಾನಿ ಸಿಂಧುವಾರನಗಸ್ಯ ಚ ।
ಹಿಂಗುಲಂ ಮರಿಚಂ ಚೈವ ಪೂರ್ವವೇಗೇ ತು ಪಾಪಯೇತ್ ॥ ೨೭ ॥

ಬೃಹತೀ ವೃಶ್ಚಿಕಾಕಾಲೀ ಇಂದ್ರವಾರುಣಿ ಮೂಲಕಂ ।
ಸಪ್ತಗಂಧ ಘೃತಂ ಚೈವ ದ್ವಿತೀಯೇ ಪರಿಕೀರ್ತಿತಂ ॥ ೨೮ ॥

ಸಿಂಧುವಾರಂ ತಥಾ ಹಿಂಗುಂ ತೃತೀಯೇ ಕಾರಯೇದ್ಬುಧಃ ।
ತಸ್ಯ ಪಾನಂ ಚ ಕುರ್ವೀತ ಅಂಜನಂ ಲೇಪನಂ ತಥಾ ॥ ೨೯ ॥

ಏತೇನೈವೋಪಚಾರೇಣ ತತಃ ಸಂಪದ್ಯತೇ ಸುಖಂ ।
ರಕ್ತಸ್ಥಾನಂ ತತೋ ಗತ್ವಾ ಪಿತ್ತಸ್ಥಾನಂ ಪ್ರಧಾವತಿ ॥ ೩೦ ॥

---

೨೭. ಲಾಮಂಚ, ಶ್ರೀಗಂಧ, ಚಂಗಲಕೋಷ್ಟ, ನೈದಿಲೆಯಹೂ, ಗಂಧಕ, ತಗರ ಎಂಬ ಬೇರು, ಕರೀತಿಗಡೆ ಮರದ ಬೇರು, ಬಿಳಿಯಲಕ್ಕೀ ಬೇರು, ಇಂಗಲೀಕ, ಮೆಣಸು, ಇವುಗಳ ಕಷಾಯವನ್ನು ಪೂರ್ವವೇಗದಲ್ಲಿ ಇದ್ದಾಗ ಎಂದರೆ ಹಾವು ಕಡಿದ ಕೂಡಲೇ ಕೊಡಬೇಕು.

೨೮. ಗುಳ್ಳದ ಬೇರು, ಚೇಳುಬಾಳದ ಗಿಡದ ಮೂಲ, ಹಾವುಮೆಕ್ಕೆಯ ಗಿಡದ ಬೇರು, ಸಪ್ತಗಂಧೀತುಪ್ಪ ಇವುಗಳನ್ನು ಹಾಕಿ ಘೃತಪಾಕಮಾಡಿದ್ದನ್ನು ಹಾವು ಕಚ್ಚಿದವನಿಗೆ ಎರಡನೇ ವಿಷವೇಗ ಪ್ರಕ್ರಿಯೆಯಲ್ಲಿ ಸೇವನೆಮಾಡಿಸಬೇಕು.

೨೯. ಬಿಳಿಯ ಲಕ್ಕಿಯಸೊಪ್ಪಿನ ರಸದಲ್ಲಿ ಇಂಗನ್ನು ತೇಯ್ದು ಹಾವು ಕಡಿದ ಗಾಯಕ್ಕೆ ಲೇಪಿಸಿ, ಕಣ್ಣಿಗೂ ಇದನ್ನೇ ಅಂಜನ ಹಾಕಿ ಹೊಟ್ಟೆಗೂ ಕುಡಿಸಿದರೆ ಮೂರನೆಯ ಸ್ಥಾನದ ವಿಷವೇಗದ ಉರುಬು ಕಡಿಮೆಯಾಗುತ್ತದೆ

೩೦. ವಿಷವು ರಕ್ತಸ್ಥಾನವನ್ನು ದಾಟಿದರೆ ಪಿತ್ತಸ್ಥಾನವನ್ನು ವ್ಯಾಪಿಸುವುದು. ಅಯ್ಯಾ ದ್ವಿಜಶ್ರೇಷ್ಠನೇ! ವಿಷವು ಪಿತ್ತಸ್ಥಾನಕ್ಕೆ ಹೋದಾಗ ಹಾವು ಕಚ್ಚಿದವನಲ್ಲಿ ಕಾಣುವ ಚಿಹ್ನೆಗಳನ್ನು ಹೇಳುವೆನು ಕೇಳು.

ಪಿತ್ತಸ್ಥಾನಂ ಗತೇ ವಿಪ್ರ ವಿಷರೂಪಾಣಿ ಮೇ ಶೃಣು ।
ಉತ್ತಿಷ್ಠತೇ ನಿಪತತೇ ದಹ್ಯತೇ ಮುಹ್ಯತೇ ತಥಾ ॥ ೩೧ ॥

ಗಾತ್ರತಃ ಪೀತಕಃ ಸ್ಯಾದ್ವೈ ದಿಶಃ ಪಶ್ಯತಿ ಪೀತಿಕಾಃ ।
ಪ್ರಬಲಾ ಚ ಭವೇನ್ಮೂರ್ಛಾ ನ ಚಾತ್ಮಾನಂ ವಿಜಾನತೇ ।
ವಿಷಕ್ರಿಯಾಂ ತಸ್ಯ ಕುರ್ಯಾದ್ಯಯಾ ಸಂಪದ್ಯತೇ ಸುಖಂ ॥ ೩೨ ॥

ಪಿತ್ತಸ್ಥಾನಮತಿಕ್ರಮ್ಯ ಶ್ಲೇಷ್ಮಸ್ಥಾನಂ ಚ ಗಚ್ಛತಿ ।
ಪಿಪ್ಪಲೀ ಮಧುಕಂ ಚೈವ ಮಧುಖಂಡಂ ಘೃತಂ ತಥಾ ॥ ೩೩ ॥

ಮಧುಸಾರಮಲಾಬೂಂ ಚ ಜಾತಿಂ ಶಂಕರವಾಲುಕಾಂ ।
ಇಂದ್ರವಾರುಣಿಕಾಮೂಲಂ ಗವಾಂ ಮೂತ್ರೇಣ ಪೇಷಯೇತ್ ॥ ೩೪ ॥

ನಸ್ಯಂ ತಸ್ಯ ಪ್ರಯುಂಜೀತ ಪಾನಮಾಲೇಪನಾಂಜನಂ ।
ಏತೇನೈವೋಪಚಾರೇಣ ತತಃ ಸಂಪದ್ಯತೇ ಸುಖಂ ॥ ೩೫ ॥

---

೩೧-೩೨. ವಿಷ ವ್ಯಾಪಿಸಿದವನು ಏಳುವನು, ಬೀಳುವನು, ಮೈ ಉರಿ ಎಂದು ಬಳಲುವನು, ಜ್ಞಾನಾಜ್ಞಾನದ ಸ್ಥಿತಿಯನ್ನು ಹೊಂದುವನು, ಮೈಯೆಲ್ಲವೂ ಹಳದಿಯ ಬಣ್ಣವಾಗುವುದು, ನೋಡಿದ ವಸ್ತುಗಳೆಲ್ಲಾ ಅವನಿಗೆ ಹಳದಿಯ ಬಣ್ಣದವುಗಳಾಗಿ ತೋರುವುವು, ಬಲವಾದ ಮೂರ್ಛೆಯು ಉಂಟಾಗುವುದು, ಶರೀರದ ಮೇಲೆ ಪ್ರಜ್ಞೆಯೇ ಇರುವುದಿಲ್ಲ. ಹೀಗಾದಾಗ ಅದಕ್ಕೆ ತಕ್ಕ ಹಿಂದೆ ಹೇಳಿದ ವಿಷಚಿಕಿತ್ಸೆಯನ್ನು ಮಾಡಿದರೆ ಸುಖವಾಗುತ್ತದೆ.

೩೩. ವಿಷವು ಪಿತ್ತಸ್ಥಾನವನ್ನು ದಾಟಿದರೆ ಮುಂದೆ ಶ್ಲೇಷ್ಮಸ್ಥಾನವನ್ನು ವ್ಯಾಪಿಸುವುದು. ಅಲ್ಲಿ ಮಾಡಬೇಕಾದ ಚಿಕಿತ್ಸಾಕ್ರಮವನ್ನು ಹೇಳುವೆನು ಕೇಳು.

೩೪-೩೫ ಹಿಪ್ಪಲಿ, ಅತಿಮಧುರ, ಜೇನು, ಕಲ್ಲುಸಕ್ಕರೆ, ತುಪ್ಪ, ಮಧುಸಾರ, ಸೋರೇಕಾಯಿ, ಜಾಜಿಯಸೊಪ್ಪು, ಶಂಕರವಾಲುಕಾ (ಮುಡಿವಾಳ), ಹಾವುಮೆಕ್ಕೆಯ ಗಿಡದ ಬೇರು, ಇವುಗಳನ್ನೆಲ್ಲಾ ಹಸುವಿನ ಗಂಜಲದಲ್ಲಿ ಅರೆದು ಸರ್ಪದಷ್ಟನ ಮೂಗಿನಲ್ಲಿ ಹಿಂಡಬೇಕು. ಇದನ್ನೇ ಕಣ್ಣಿಗೂ ಅಂಜನ ಹಾಕಬೇಕು. ಕಡಿದ ಜಾಗಕ್ಕೆಲ್ಲಾ ಲೇಪಿಸುವುದಲ್ಲದೆ ಹೊಟ್ಟೆಗೂ ಕುಡಿಸಬೇಕು. ಹೀಗೆ ಮಾಡಿದರೆ ವಿಷಪರಿಹಾರವಾಗಿ ಸುಖವಾಗುವುದು.

ಶ್ಲೇಷ್ಮಸ್ಥಾನಂ ತತಃ ಪ್ರಾಪ್ತೇ ತಸ್ಯ ರೂಪಾಣಿ ಮೇ ಶೃಣು ।
ಗಾತ್ರಾಣಿ ತಸ್ಯ ರುಧ್ಯಂತೇ ನಿಶ್ವಾಸಶ್ಚ ನ ಜಾಯತೇ ।
ಲಾಲಾ ಚ ಸ್ರವತೇ ತಸ್ಯ ಕಂಠೋ ಗುರುಗುರಾಯತೇ ॥ ೩೬ ॥

ಏತಾನಿ ಯಸ್ಯ ರೂಪಾಣಿ ತಸ್ಯ ಶ್ಲೇಷ್ಮಗತಂ ವಿಷಂ ।
ತಸ್ಯಾಗದಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಸುಖಂ ॥ ೩೭ ॥

ತ್ರಿಕಟುಕೀ ಶ್ಲೇಷ್ಮಾತಕೋ ಲೋಧ್ರಂ ಚ ಮಧುಸಾರಕಂ ।
ಏತಾನಿ ಸಮಭಾಗಾನಿ ಗವಾಂ ಮೂತ್ರೇಣ ಪೇಷಯೇತ್ ॥ ೩೮ ॥

ತಸ್ಯಪಾನಂ ಚ ಕುರ್ವೀತ ಅಂಜನಂ ಲೇಪನಂ ತಥಾ ।
ಏತೇನೈವೋಪಚಾರೇಣ ತತಃ ಸಂಪದ್ಯತೇ ಸುಖಂ ॥ ೩೯ ॥

ಶ್ಲೇಷ್ಮಸ್ಥಾನಮತಿಕ್ರಮ್ಯ ವಾಯುಸ್ಥಾನಂ ಚ ಗಚ್ಛತಿ ।
ತತ್ರರೂಪಾಣಿ ವಕ್ಷ್ಯಾಮಿ ವಾಯುಸ್ಥಾನಗತೇ ವಿಷೇ ॥ ೪೦ ॥

---

೩೬. ಶ್ಲೇಷ್ಮಸ್ಥಾನಕ್ಕೆ ವಿಷವು ವ್ಯಾಪಿಸಿದಾಗ ಸರ್ಪದಷ್ಟನಲ್ಲಿ ಕಾಣುವ ಲಕ್ಷಣವನ್ನು ಹೇಳುವೆನು. ಕಿವಿಯು ಸರ್ವಥಾ ಕೇಳಿಸುವುದಿಲ್ಲ. ಉಸಿರು ಆಡುವುದೂ ಗೊತ್ತಾಗುವುದಿಲ್ಲ. ಬಾಯಿಯಿಂದ ಜೊಲ್ಲು ಸುರಿಯುವುದು. ಗಂಟಲಲ್ಲಿ ಗೊರಗುಟ್ಟುವುದು.

೩೭. ಇವುಗಳೆಲ್ಲಾ ಶ್ಲೇಷ್ಮಸ್ಥಾನಕ್ಕೆ ವಿಷವ್ಯಾಪಿಸಿದುದರ ಲಕ್ಷಣಗಳು. ಆಗ ಯಾವ ಔಷಧಿಯನ್ನು ಮಾಡಿದರೆ ಗುಣವಾಗುವುದೋ ಆ ಔಷಧವನ್ನು ಹೇಳುವೆನು ಕೇಳು.

೩೮-೩೯. ತ್ರಿಕಟುಕಗಳು (ಎಂದರೆ ಶುಂಠಿ, ಮೆಣಸು, ಹಿಪ್ಪಲಿ ಇವು ಮೂರು) ಚಳ್ಳೆಯಕಾಯಿ ಲೋಧ್ರ, ಮಧುಸಾರ ಇವುಗಳನ್ನು ಸಮಭಾಗವಾಗಿ ತೆಗೆದುಕೊಂಡು ಗೋಮೂತ್ರದಲ್ಲಿ ಅರೆದು ಹೊಟ್ಟೆಗೆ ಕುಡಿಸಬೇಕು. ಅದನ್ನೇ ಕಣ್ಣಿಗೆ ಅಂಜನ ಹಾಕಬೇಕು. ಮತ್ತು ಗಾಯಕ್ಕೂ ಲೇಪಿಸಬೇಕು. ಈ ಚಿಕಿತ್ಸೆ ಮಾಡುವುದರಿಂದ ಬೇಗ ಗುಣವಾಗಿ ಸುಖವಾಗುವುದು.

೪೦. ವಿಷವು ಶ್ಲೇಷ್ಮಸ್ಥಾನವನ್ನು ದಾಟಿದರೆ ಮುಂದೆ ವಾತಸ್ಥಾನವನ್ನು ವ್ಯಾಪಿಸುವುದು. ಹೀಗೆ ವಾತಸ್ಥಾನದಲ್ಲಿ ವಿಷ ವ್ಯಾಪನೆಯಾದಾಗ ಹಾವು ಕಡಿದವನಲ್ಲಿ ಕಾಣುವ ಲಕ್ಷಣಗಳನ್ನು ಹೇಳುವೆನು.

ಆಧ್ಮಾಯತೇ ಚ ಜಠರಂ ಬಾಂಧವಾಂಶ್ಚ ನ ಪಶ್ಯತಿ ।
ಈದೃಶಂ ಕುರುತೇ ರೂಪಂ ದೃಷ್ಟಿಭಂಗಶ್ಚ ಜಾಯತೇ ॥ ೪೧ ॥

ಏತಾನಿ ಯಸ್ಯ ರೂಪಾಣಿ ತಸ್ಯ ವಾಯುಗತಂ ವಿಷಂ ।
ತಸ್ಯಾಗದಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಸುಖಂ ॥ ೪೨ ॥

ಶೋಣಾಮೂಲಂ ಪ್ರಿಯಾಲಂ ಚ ರಕ್ತಂ ಚ ಗಜಪಿಪ್ಪಲೀಂ ।
ಭಾಂರ್ಜೀಂ ವಚಾಂ ಪಿಪ್ಪಲೀಂ ಚ ದೇವದಾರುಮಧೂಕಕಂ ॥ ೪೩ ॥

ಮಧೂಕಸಾರಂ ಸಹ ಸಿಂದುವಾರಂ ಹಿಂಗುಂ ಚ ಪಿಷ್ಟ್ವಾ ಗುಟಿಕಾಂಶ್ಚ ಕುರ್ಯಾತ್ ।
ದದ್ಯಾಚ್ಚ ತಸ್ಯಾಂಜನ ಲೇಪನಾದಿ ಏಷೋಽಗದಃ ಸರ್ಪವಿಷಾಣಿ ಹನ್ಯಾತ್ ॥ ೪೪ ॥

ಅಂಜನಂ ಚೈವ ನಸ್ಯಂ ಚ ಕ್ಷಿಪ್ರಂ ದದ್ಯಾದ್ವಿಷಾನ್ವಿತೇ ।
ವಾಯುಸ್ಥಾನಂ ತತೋ ಮುಕ್ತ್ವಾ ಮಜ್ಜಾಸ್ಥಾನಂ ಪ್ರಧಾವತಿ ॥ ೪೫ ॥

---

೪೧. ಸರ್ಪದಷ್ಟನ ಹೊಟ್ಟೆ ಉಬ್ಬರಿಸಿಕೊಳ್ಳುವುದು, ಪಕ್ಕದಲ್ಲಿರುವ ಬಂಧುಗಳನ್ನೂ ಸಹ ಗುರುತಿಸಲಾರದಷ್ಟು ಮಟ್ಟಿಗೆ ದೃಷ್ಟಿಶಕ್ತಿಯು ಕೆಟ್ಟುಹೋಗುವುದು.

೪೨. ವಿಷವು ವಾತಸ್ಥಾನಕ್ಕೆ ವ್ಯಾಪಿಸಿದಾಗ ಈ ಲಕ್ಷಣವುಂಟಾಗುತ್ತವೆ ಅದಕ್ಕೆ ಯಾವ ಔಷಧವನ್ನು ಮಾಡಿದರೆ ಸುಖವಾಗುವುದೋ ಆ ಔಷಧವನ್ನು ಹೇಳುವೆನು ಕೇಳು

೪೩-೪೪. ಶೋಣಾಮೂಲ (ಗೊರಟೆ ಬೇರು), ಪ್ರಿಯಾಲ, ಕೆಂಪುಚಂದನ, ಗಜಹಿಪ್ಪಲಿ, ಗಂಟುಭಾರ್ಙ್ಗಿ, ಬಜೆ, ಸಣ್ಣಹಿಪ್ಪಲಿ, ದೇವದಾರು ಮತ್ತು ಇಪ್ಪೆಯ ಬೇರು, ಹಿಪ್ಪೆಯ ಚೇಗು, ಲಕ್ಕಿಯಸೊಪ್ಪು, ಇಂಗು ಇವುಗಳನ್ನೆಲ್ಲಾ ಬೆಣ್ಣಾಗಿ ಅರೆದು ಗುಳಿಗೆ ಮಾಡಿಕೊಳ್ಳಬೇಕು. ಈ ಮಾತ್ರೆಯನ್ನೇ ಮೇಲೆ ಲೇಪನಮಾಡುವುದು, ಕಣ್ಣಿಗೆ ಅಂಜನ, ಹೊಟ್ಟೆಗೆ ಪಾನಮಾಡುವುದು ಮುಂತಾದ ರೂಪಗಳಲ್ಲಿಯೂ ಉಪಯೋಗಿಸಿದರೆ ಸಮಸ್ತ ವಿಧವಾದ ಸರ್ಪಗಳ ವಿಷಗಳನ್ನೂ ಹೋಗಲಾಗಿಸುವುದು.

೪೫. ವಿಷ ವ್ಯಾಪಿಸಿದವನಿಗೆ ಕಣ್ಣಿಗೆ ಅಂಜನ ಹಾಕುವುದನ್ನೂ, ಮೂಗಿಗೆ ಹಿಂಡುವುದನ್ನೂ ಆ ಕೂಡಲೇ ಮಾಡಬೇಕು. ವಿಷವು ವಾತಸ್ಥಾನವನ್ನು ಅತಿಕ್ರಮಿಸಿದರೆ ಮುಂದೆ ಮಜ್ಜಾಸ್ಥಾನವನ್ನು ವ್ಯಾಪಿಸುವುದು.

ವಿಷೇ ಮಜ್ಜಾಗತೇ ವಿಪ್ರ ತಸ್ಯ ರೂಪಾಣಿ ಮೇ ಶೃಣು ।
ದೃಷ್ಟಿಶ್ಚ ಹೀಯತೇ ತಸ್ಯ ಭೃಶಮಂಗಾನಿ ಮುಂಚತಿ ॥ ೪೬ ॥

ಏತಾನಿ ಯಸ್ಯ ರೂಪಾಣಿ ತಸ್ಯ ಮಜ್ಜಾಗತಂ ವಿಷಂ ।
ತಸ್ಯಾಗದಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಸುಖಂ ॥ ೪೭ ॥

ಘೃತಮಧುಶರ್ಕರಾನ್ವಿತಮುಶೀರಂ ಚಂದನಂ ತಥಾ ।
ಏತದಾಲೋಡ್ಯ ದಾತವ್ಯಂ ಪಾನಂ ನಸ್ಯಂ ಚ ಸುವ್ರತ ॥ ೪೮ ॥

ತತಃ ಪ್ರಣಶ್ಯತೇ ದುಃಖಂ ತತಃ ಸಂಪದ್ಯತೇ ಸುಖಂ ।
ಅಥ ತಸ್ಮಿನ್ ಕೃತೇ ಯೋಗೇ ವಿಷಂ ತಸ್ಯ ನಿವರ್ತತೇ ॥ ೪೯ ॥

ಮಜ್ಜಾಸ್ಥಾನಂ ತತೋ ಗತ್ವಾ ಮರ್ಮಸ್ಥಾನಂ ಪ್ರಧಾವತಿ ।
ವಿಷೇ ತು ಮರ್ಮ ಸಂಪ್ರಾಪ್ತೇ ಶೃಣು ರೂಪಂ ಯಥಾ ಭವೇತ್ ॥ ೫೦ ॥

---

೪೬. ಮಜ್ಜಾಸ್ಥಾನಕ್ಕೆ ವಿಷವ್ಯಾಪನೆಯಾದಾಗ ಸರ್ಪದಷ್ಟನಲ್ಲಿ ಆಗುವ ಚಿಹ್ನೆಗಳನ್ನು ಹೇಳುತ್ತೇನೆ ಕೇಳು. ದೃಷ್ಟಿಶಕ್ತಿಯು ಸಂಪೂರ್ಣವಾಗಿ ಕಡಿಮೆಯಾಗುವುದು. ಸಂಧಿಸ್ಥಾನಗಳು ನಿಲ್ಲದೇ ಮುದುಡಿಕೊಳ್ಳುವಷ್ಟು ಸಡಿಲವಾಗುವುದು (ಎಂದರೆ ಜೋಲುಬೀಳುವುದು.)

೪೭. ಈ ಲಕ್ಷಣವು ತೋರಿದರೆ ವಿಷವು ಮಜ್ಜಾಸ್ಥಾನಕ್ಕೆ ವ್ಯಾಪನೆಯಾಗಿದೆ ಎಂದು ತಿಳಿಯಬೇಕು. ಯಾವ ಔಷಧವನ್ನು ಮಾಡಿದರೆ ಬೇಗ ಗುಣವಾಗುವುದೋ ಆ ಔಷಧಿಯನ್ನು ಹೇಳುತ್ತೇನೆ ಕೇಳು.

೪೮. ಅಯ್ಯಾ ಸುವ್ರತನೇ! ಲಾಮಂಚ, ಶ್ರೀಗಂಧ ಇವನ್ನು ತೇಯ್ದು ಅದಕ್ಕೆ ತುಪ್ಪ, ಜೇನು, ಸಕ್ಕರೆ ಇವನ್ನು ಬೆರಸಿ ಹೊಟ್ಟೆಗೆ ಕೊಡಬೇಕು. ಅಲ್ಲದೆ ಮೂಗಿಗೂ ಹಿಂಡಬೇಕು.

೪೯. ಹೀಗೆ ಮಾಡಿದರೆ ನೋವು ಕಮ್ಮಿಯಾಗಿ ಕಚ್ಚಿಸಿಕೊಂಡವನಿಗೆ ಬೇಗ ಗುಣವಾಗುವುದು. ಈ ಔಷಧ ಪ್ರಯೋಗದಿಂದ ವಿಷವೆಲ್ಲಾ ಪರಿಹಾರವಾಗುವುದು.

೫೦. ವಿಷವು ಮಜ್ಜಾಸ್ಥಾನವನ್ನು ದಾಟಿದರೆ ಮರ್ಮಸ್ಥಾನವನ್ನು ವ್ಯಾಪಿಸುವುದು. ಮರ್ಮಸ್ಥಾನಕ್ಕೆ ವಿಷ ವ್ಯಾಪಿಸಿದವನಿಗೆ ಉಂಟಾಗುವ ಲಕ್ಷಣಗಳನ್ನು ಹೇಳುವೆನು ಕೇಳು.

ನಿಶ್ಚೇಷ್ಟಃ ಪತತೇ ಭೂಮೌ ಕರ್ಣಾಭ್ಯಾಂ ಬಧಿರೋ ಭವೇತ್ ।
ವಾರಿಣಾ ಸಿಚ್ಯಮಾನಸ್ಯ ರೋಮಹರ್ಷೋ ನ ಜಾಯತೇ ॥ ೫೧ ॥

ದಂಡೇನ ಹನ್ಯಮಾನಸ್ಯ ದಂಡರಾಜೀ ನ ಜಾಯತೇ ।
ಶಸ್ತ್ರೇಣಚ್ಛಿದ್ಯಮಾನಸ್ಯ ರುಧಿರಂ ನ ಪ್ರವರ್ತತೇ ॥ ೫೨ ॥

ಕೇಶೇಷು ಲುಂಚ್ಯಮಾನೇಷು ನೈವ ಕೇಶಾನ್ ಪ್ರವೇದತೇ ।
ಯಸ್ಯ ಕರ್ಣೌ ಚ ಪಾರ್ಶ್ವೇ ಚ ಹಸ್ತಪಾದೌ ಚ ಸಂಧಯಃ ।
ಶಿಥಿಲಾನಿ ಭವಂತೀಹ ಸ ಗತಾಸುರಿತಿ ಶ್ರುತಿಃ ॥ ೫೩ ॥

ಏತಾನಿ ಯಸ್ಯ ರೂಪಾಣಿ ವಿಪರೀತಾನಿ ಗೌತಮ ।
ಮೃತಂ ತು ನ ವಿಜಾನೀಯಾತ್ ಕಶ್ಯಪಸ್ಯ ವಚೋ ಯಥಾ ॥ ೫೪ ॥

ವೈದ್ಯಾಸ್ತಸ್ಯ ನ ಪಶ್ಯಂತಿ ಯೇ ಭವಂತಿ ಕುಶಿಕ್ಷಿತಾಃ ।
ವಿಚಕ್ಷಣಾಸ್ತು ಪಶ್ಯಂತಿ ಮಂತ್ರೌಷಧಿಸಮನ್ವಿತಾಃ ॥ ೫೫ ॥

---

೫೧-೫೨. ಸರ್ಪದಷ್ಟನು ಅಲುಗಾಡದೇ ನೆಲದ ಮೇಲೆ ಬಿದ್ದಿರುವನು. ಕಿವಿ ಕೇಳಿಸುವುದೇ ಇಲ್ಲ. ಅವನ ಮೇಲೆ ನೀರು ಎರಚಿದರೂ ರೋಮಾಂಚವು ಆಗುವುದಿಲ್ಲ. ಕೋಲಿನಿಂದ ಹೊಡೆದರೂ ಮೈಮೇಲೆ ಬಾಸುಂಡೆಗಳು ಏಳುವುದಿಲ್ಲ. ಅವನ ಅವಯವವನ್ನು ಆಯುಧದಿಂದ ಕುಯ್ದರೂ ರಕ್ತವು ಬರುವುದಿಲ್ಲ.

೫೩. ಅವನ ತಲೆಯ ಅಥವಾ ಮೈಯ ಕೂದಲನ್ನು ಕಿತ್ತರೂ ನೋವು ಕಾಣುವುದಿಲ್ಲ. ಕಿವಿಗಳು, ಪಕ್ಕೆಗಳು, ಕೈಕಾಲುಗಳು ಮತ್ತು ಸಂಧಿಸ್ಥಾನಗಳೂ ಸಡಿಲವಾಗುವುವು. ಈ ಲಕ್ಷಣಗಳು ಕಾಣಬಂದಾಗ ಸಾಮಾನ್ಯಸಂದರ್ಭದಲ್ಲಿ ಸತ್ತನೆಂದೇ ಭಾವಿಸಬೇಕು.

೫೪. ಅಯ್ಯಾ ಗೌತಮನೇ! ಸರ್ಪದಷ್ಟನಿಗೆ ಈರೀತಿ ಜೀವಿತಸ್ಥಿತಿಗೆ ವಿರುದ್ಧವಾದ ಲಕ್ಷಣಗಳು ಕಂಡುಬಂದರೂ ಆತನನ್ನು ಮೃತನೆಂದು ಭಾವಿಸಬಾರದು ಎಂದು ಕಶ್ಯಪರು ಹೇಳುತ್ತಾರೆ.

೫೫. ಚೆನ್ನಾಗಿ ತಿಳಿವಳಿಕೆ ಇಲ್ಲದ ವೈದ್ಯರೂ ಕೂಡ ಈ ಮರ್ಮಸ್ಥಾನ ವಿಷವ್ಯಾಪಕನಿಗೆ ಪ್ರಾಣವಿರುವುದನ್ನು ತಿಳಿಯಲಾರರು. ವಿಷಚಿಕಿತ್ಸೆ, ವಿಷಪರಿಹಾರ ಮಂತ್ರ ಇವುಗಳನ್ನು ತಿಳಿದು ವಿಚಕ್ಷಣರೆನಿಸಿದ ವೈದ್ಯರು ಅವನಿಗೆ ಪ್ರಾಣಹೋಗಿಲ್ಲವೆಂದು ತಿಳಿಯಬಲ್ಲರು.

ತಸ್ಯಾಗದಂ ಪ್ರವಕ್ಷ್ಯಾಮಿ ಸ್ವಯಂ ರುದ್ರೇಣ ಭಾಷಿತಂ ।
ಮಯೂರಪಿತ್ತಂ ಮಾರ್ಜಾರಪಿತ್ತಂ ಗಂಧನಾಡೀ ಮೂಲಮೇವ ಚ ॥೫೬॥

ಕುಂಕುಮಂ ತಗರಂ ಕುಷ್ಟಂ ಕಾಸಮರ್ದತ್ವಚಂ ತಥಾ ।
ಉತ್ಪಲಸ್ಯ ಚ ಕಿಂಜಲ್ಕಂ ಪದ್ಮಸ್ಯ ಕುಮುದಸ್ಯ ಚ ॥ ೫೭ ॥

ಏತಾನಿ ಸಮಭಾಗಾನಿ ಗೋಮೂತ್ರೇಣ ತು ಪೇಷಯೇತ್ ।
ವಿಷೋಗದೋ ಯಸ್ಯ ಹಸ್ತೇ ದಷ್ಟೋ ನ ಮ್ರಿಯತೇ ಸ ವೈ ॥ ೫೮ ॥

ಕಾಲಾಹಿನಾಪಿ ದಷ್ಟೇನ ಕ್ಷಿಪ್ರಂ ಭವತಿ ನಿರ್ವಿಷಃ ।
ಕ್ಷಿಪ್ರಮೇವ ಪ್ರದಾತವ್ಯಂ ಮೃತಸಂಜೀವನೌಷಧಂ ।
ಅಂಜನಂ ಚೈವ ನಸ್ಯಂ ಚ ಕ್ಷಿಪ್ರಂ ದದ್ಯಾದ್ವಿಚಕ್ಷಣಃ ॥ ೫೯ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಧಾತುಗತ ವಿಷಕ್ರಿಯಾವರ್ಣನಂ ನಾಮ ಪಂಚತ್ರಿಂಶೋಽಧ್ಯಾಯಃ.**

---

೫೬. ಹೀಗಾದಾಗ ಯಾವ ಔಷಧವನ್ನು ಮಾಡಬೇಕೆಂಬುದು ಪರಮೇಶ್ವರನಿಂದ ನಿರೂಪಿತವಾಗಿಯೋ ಅದನ್ನೇ ಹೇಳುವೆನು ಕೇಳು. ನವಿಲಿನ ಪಿತ್ತಕೋಶ, ಬೆಕ್ಕಿನ ಪಿತ್ತಕೋಶ, ಗಂಧನಾಡೀ ಎಂಬುದರ ಬೇರು, ಕೇಸರೀ, ಗ್ರಂಥಿಕತಗರ, ಚಂಗಲಕೋಷ್ಟ ಮತ್ತು.

೫೭. ಕಾಸಮರ್ದ (ಎಸಗಲೆ) ಎಂಬ ಬಳ್ಳಿಯ ತೊಗಟೆ, ಕನ್ನೈದಿಲೆ, ಕಮಲ, ಕುಮುದ ಇವುಗಳ ಕೇಸರ, ಇವೆಲ್ಲವನ್ನೂ ಸಮಭಾಗವಾಗಿ ತೆಗೆದುಕೊಂಡು ಹಸುವಿನ ಗಂಜಲದಲ್ಲಿ ಅರೆದು ಸರ್ಪದಷ್ಟನ ಕೈಯಲ್ಲಿ ಹಿಡಿದುಕೊಳ್ಳುವಂತೆ ಮಾಡಿದರೂ, ಅವನು ಸಾಯುವುದಿಲ್ಲ. ಎಂತಹ ಕಾಳಸರ್ಪವು ಕಚ್ಚಿದ್ದರೂ ಈ ಔಷಧದಿಂದ ಕ್ಷಣಮಾತ್ರದೊಳಗಾಗಿ ವಿಷವು ಪರಿಹಾರವಾಗುವುದು.

೫೯. ಈ ಮೃತಸಂಜೀವಿನೀ ಔಷಧವನ್ನು ಹಾವು ಕಡಿದ ತಕ್ಷಣವೇ ಕೊಡಬೇಕು. ಬುದ್ಧಿವಂತನು ಹೊಟ್ಟೆಗೆ ಇದನ್ನು ಕೊಡುವುದಕ್ಕಿಂತ ಮೊದಲು ಕಣ್ಣಿಗೆ ಅಂಜನ ಹಾಕುವುದು. ಮೂಗಿಗೆ ಹಿಂಡುವುದು. ಇವನ್ನು ಮಾಡಬೇಕು.

ಇಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಧಾತುವಿನಲ್ಲಿ ಸೇರಿದ ವಿಷ ಕ್ರಿಯೆಯ ವರ್ಣನವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಟ್‌ತ್ರಿಂಶೋಽಧ್ಯಾಯಃ

॥ ಗೌತಮ ಉವಾಚ ॥

ಕೀದೃಶಂ ಸರ್ಪದಷ್ಟಸ್ಯ ಸರ್ಪಿಣ್ಯಾಃ ಕೀದೃಶಂ ಭವೇತ್ ।
ಕುಮಾರದಷ್ಟಃ ಕೀದೃಕ್ ಸ್ಯಾತ್ ಸೂತಿಕಾದಂಶಿತಸ್ಯ ಚ ॥ ೧ ॥

ರೂಪಂ ನಪುಂಸಕೇನೇಹ ವ್ಯಂತರೇಣ ಚ ಕೀದೃಶಂ ।
ಏತದಾಖ್ಯಾಹಿ ಮೇ ಸರ್ವಂ ಏಭಿರ್ದಷ್ಟಸ್ಯ ಲಕ್ಷಣಂ ॥ ೨ ॥

॥ ಕಶ್ಯಪ ಉವಾಚ ॥

ಅತಃಪರಂ ಪ್ರವಕ್ಷ್ಯಾಮಿ ನಾಗಾನಾಂ ರೂಪಲಕ್ಷಣಂ ।
ಸರ್ಪದಷ್ಟಸ್ಯ ಚ ತಥಾ ಸಮಾಸಾದ್ದ್ವಿಜಪುಂಗವ ॥ ೩ ॥

---

## ಮೂವತ್ತಾರನೆಯ ಅಧ್ಯಾಯವು

೧. ಗೌತಮ ಋಷಿಯು ಪ್ರಶ್ನಿಸುತ್ತಾನೆ—ಮನುಷ್ಯನನ್ನು ಗಂಡುಹಾವು ಕಚ್ಚಿದರೆ ಮತ್ತು ಹೆಣ್ಣುಹಾವು ಕಚ್ಚಿದರೆ ಸರ್ಪದಷ್ಟನ ಲಕ್ಷಣಗಳಲ್ಲಿ ಏನು ತಾರತಮ್ಯವಿರುವುದು? ಎಳೆಯದಾದ ಗಂಡುಹಾವು ಕಚ್ಚಿದರೆ ಏನಾಗುವುದು? ಆಗತಾನೇ ಪ್ರಸವಿಸಿದ ಹಾವು ಕಚ್ಚಿದರೆ ಅದರ ಲಕ್ಷಣವೇನು?

೨. ನಪುಂಸಕಸರ್ಪದಷ್ಟನಿಗೂ ವ್ಯಂತರ ಸರ್ಪದಷ್ಟನಿಗೂ ಲಕ್ಷಣದಲ್ಲಿ ಏನು ಭೇದ? ಇವುಗಳಿಂದ ದಷ್ಟನಾದವನ ಲಕ್ಷಣವೇನು? ಇದೆಲ್ಲವನ್ನೂ ಹೇಳು ಎಂದನು.

೩. ಕಶ್ಯಪಬ್ರಹ್ಮನು ಹೇಳುತ್ತಾನೆ—ಇಲ್ಲಿಂದ ಮುಂದೆ ನಾಗರ ರೂಪಗಳನ್ನೂ, ಲಕ್ಷಣಗಳನ್ನೂ ಮತ್ತು ಸರ್ಪದಷ್ಟನ ಲಕ್ಷಣವನ್ನೂ ಸಂಕ್ಷೇಪವಾಗಿ ಹೇಳುವೆನು.

ಅಥ ಸರ್ಪೇಣ ದಷ್ಟಸ್ಯ ಊರ್ಧ್ವದೃಷ್ಟಿಃ ಪ್ರಜಾಯತೇ ।
ಸರ್ಪೀದಷ್ಟಸ್ಯ ಚ ತಥಾ ಅಧೋದೃಷ್ಟಿಃ ಪ್ರಜಾಯತೇ ॥ ೪ ॥

ಕನ್ಯಾದಷ್ಟಸ್ಯ ವಾಮಾ ಸ್ಯಾತ್ ದೃಷ್ಟಿರ್ದ್ವಿಜವರೋತ್ತಮ ।
ಕುಮಾರೇಣಾಪಿ ದಷ್ಟಸ್ಯ ದಕ್ಷಿಣಾ ಏವ ಜಾಯತೇ ॥ ೫ ॥

ಗರ್ಭಿಣ್ಯಾ ವಾಥ ದಷ್ಟಸ್ಯ ತಥಾ ಸ್ವೇದಶ್ಚ ಜಾಯತೆ ।
ರೋಮಾಂಚಃ ಸೂತಿಕಾಯಾಸ್ತು ವೇಪಥುಶ್ಚಾಪಿ ಜಾಯತೆ ।
ನಪುಂಸಕೇನ ದಷ್ಟಸ್ಯ ಅಂಗಮರ್ದಃ ಪ್ರಜಾಯತೇ ॥ ೬ ॥

ಪನ್ನಗ್ಯಃ ಪ್ರಭವೋ ರಾತ್ರೌ ದಿವಾ ಸರ್ಪೋ ವಿಷಾಧಿಕಃ ।
ನಪುಂಸಕಸ್ತು ಸಂಧ್ಯಾಯಾಂ ಕಶ್ಯಪೇನ ತು ಭಾಷಿತಃ ॥ ೭ ॥

ಅಂಧಕಾರೇ ತು ದಷ್ಟೋ ಯ ಉದಕೇ ಗಹನೇ ವನೇ ।
ಸುಪ್ತೋ ವಾ ಚ ಪ್ರಮತ್ತೋ ವಾ ಯದಿ ಸರ್ಪಂ ನ ಪಶ್ಯತಿ ।
ದೃಷ್ಟರೂಪಾನಭಿಜ್ಞಾನೇ ಕಥಂವೈದ್ಯಚಿಕಿತ್ಸಿತಂ ॥ ೮ ॥

---

೪. ಗಂಡುಹಾವು ಕಚ್ಚಿದವನ ದೃಷ್ಟಿಯು ಊರ್ಧ್ವಮುಖವಾಗಿರುವುದು. ಹೆಣ್ಣುಹಾವು ಕಚ್ಚಿದರೆ ದೃಷ್ಟಿಯು ಅಧೋಮುಖವಾಗುವುದು.

೫. ಎಳೆಯ ಹೆಣ್ಣುಹಾವು ಕಚ್ಚಿದವನ ದೃಷ್ಟಿಯು ಎಡಗಡೆ ವಾಲಿರುವುದು. ಕುಮಾರಸರ್ಪದಿಂದ ಕಚ್ಚಲ್ಪಟ್ಟವನ ದೃಷ್ಟಿಯು ಬಲಗಡೆಗೆ ವಾಲಿರುವುದು.

೬. ಗರ್ಭಿಣೀಸರ್ಪವು ಕಚ್ಚಿದಾಗ ಬೆವರುಂಟಾಗುವುದು. ಪ್ರಸವಿಸಿದ್ದ ಹಾವು ಕಚ್ಚಿದವನಿಗೆ ರೋಮಾಂಚ ಉಂಟಾಗುವುದು. ನಡುಕವೂ ಉಂಟಾಗುವುದು. ನಪುಂಸಕಸರ್ಪವು ಕಚ್ಚಿದಾಗ ಮೈನೋವು ಕಾಣುವುದು.

೭. ಹೆಣ್ಣುಹಾವುಗಳಿಗೆ ರಾತ್ರಿಕಾಲದಲ್ಲಿ ಶಕ್ತಿ ಹೆಚ್ಚು. ಗಂಡುಹಾವುಗಳಿಗೆ ಹಗಲಿನಲ್ಲಿ ಶಕ್ತಿ ಹೆಚ್ಚು. ನಪುಂಸಕಸರ್ಪನಿಗೆ ಸಂಧ್ಯಾಕಾಲದಲ್ಲಿ ಶಕ್ತಿ ಹೆಚ್ಚು. ಎಂಬವಾಗಿ ಕಶ್ಯಪರು ಹೇಳಿದ್ದಾರೆ.

೮. ಕತ್ತಲೆಯಲ್ಲೋ, ನೀರಿನಲ್ಲೋ, ದುರ್ಗಮವಾದ ಕಾಡಿನಲ್ಲೋ ಮಲಗಿದ್ದಾಗ, ಅಥವಾ ಬೇರೆ ಏನಾದರೂ ಕಾರಣದಿಂದ ಎಚ್ಚರವಿಲ್ಲದಾಗ, ಹಾವಿನಿಂದ ಕಚ್ಚ

**ಚತುರ್ವಿಧಾ ಇಹ ಪ್ರೋಕ್ತಾಃ ಪನ್ನಗಾಸ್ತು ಮಹಾತ್ಮನಾ ।**
**ದರ್ವೀಕರಾ ಮಂಡಲಿನೋ ರಾಜಿಲಾ ವ್ಯಂತರಾಸ್ತಥಾ　　॥ ೯ ॥**

**ದರ್ವೀಕರಾ ವಾತವಿಷಾ ಮಂಡಲಾ ಪೈತ್ತಿಕಾಃ ಸ್ಮೃತಾಃ ।**
**ಸಶ್ಲೇಷ್ಮಾ ರಾಜಿಲಾ ಜ್ಞೇಯಾ ವ್ಯಂತರಾಃ ಸಾನ್ನಿಪಾತಿಕಾಃ　　॥ ೧೦ ॥**

**ರಕ್ತಂ ಪರೀಕ್ಷಯೇದೇಷಾಂ ಸರ್ಪಾಣಾಂ ತು ಪೃಥಕ್ ಪೃಥಕ್ ।**
**ಕೃಷ್ಣಂ ದರ್ವೀಕರಾಣಾಂ ತು ಜಾಯತೇ ನಾಲ್ಪಮುಲ್ಬಣಂ　　॥ ೧೧ ॥**

**ರಕ್ತಂ ಘನಂ ಚ ಬಹುಶಃ ಶೋಣಿತಂ ಮಂಡಲೀ ಕೃತಂ ।**
**ಪಿಚ್ಛಿಲಂ ರಾಜಿಲೇ ಸ್ವಲ್ಪಂ ತದ್ವದ್ವ್ಯಂತರಕೇ ತಥಾ　　॥ ೧೨ ॥**

---

ಲ್ಪಟ್ಟವನು ಆ ಸರ್ಪದ ಜಾತಿಯನ್ನು ಕಾಣದಿರುವಾಗ ವೈದ್ಯನು ಚಿಕಿತ್ಸೆಮಾಡುವುದು ಹೇಗೆ ?

೯. ಹಾವುಗಳಲ್ಲಿ ದರ್ವೀಕರಗಳು ಮಂಡಲಿಗಳು, ರಾಜಿಲಗಳು ವ್ಯಂತರಗಳು ಎಂದು ನಾಲ್ಕು ಬಗೆಗಳಿವೆ.

೧೦. ದರ್ವೀಕರಗಳ ವಿಷವು ವಾತಧಾತುವನ್ನು ವ್ಯಾಪಿಸುವುದು. ಮಂಡಲದ ಹಾವುಗಳ ವಿಷವು ಪಿತ್ತಧಾತುವನ್ನು ವ್ಯಾಪಿಸುವುದು. ರಾಜಿಲಗಳ ವಿಷವು ಶ್ಲೇಷ್ಮ ಧಾತುವನ್ನು ವ್ಯಾಪಿಸುವುದು. ವ್ಯಂತರಗಳ ವಿಷವು ಸನ್ನಿಪಾತವನ್ನುಂಟುಮಾಡು ವುದು.

೧೧. ಈ ಸರ್ಪಗಳು ಕಡಿದು ಉಂಟಾದ ರಕ್ತಗಳನ್ನು ಬೇರೆ ಬೇರೆ ಪರೀಕ್ಷಿಸ ಬೇಕು. ದರ್ವೀಕರ ಸರ್ಪಗಳು ಕಚ್ಚುವುದರಿಂದ ಬಂದ ರಕ್ತವು ಕಪ್ಪು ಬಣ್ಣವಾಗಿ ರುವುದು. ಮತ್ತು ವಿಷವು ಅಷ್ಟು ಉಲ್ಬಣವಾಗಿರುವುದಿಲ್ಲ.

೧೨. ಮಂಡಲದ ಹಾವು ಕಚ್ಚಿದುದರಿಂದ ಬಂದ ರಕ್ತವು ಗಟ್ಟಿಯಾಗಿಯೂ ಕೆಂಪಗೂ ಇರುವುದು. ರಾಜಿಲ (ನೀರ ಹಾವು) ವು ಕಡಿದಾಗ ಬಂದ ರಕ್ತವು ಸ್ವಲ್ಪ ವಾಗಿಯೂ ಗೋಂದಿನಂತೆ ಅಂಟಾಗಿಯೂ ಇರುವುದು. ವ್ಯಂತರವೆಂಬ ಜಾತಿಯ ಹಾವು ಕಡಿದಾಗ ಬರುವ ರಕ್ತವೂ ಇದೇ ರೀತಿಯಾಗಿರುತ್ತದೆ

ಸರ್ಪಾ ಜ್ಞೇಯಾಸ್ತು ಚತ್ವಾರಃ ಪಂಚಮೋ ನೋಪಲಭ್ಯತೆ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚೈವ ಚತುರ್ಥಕಃ ॥ ೧೩ ॥

ಬ್ರಾಹ್ಮಣೇ ಮಧುರಂ ದದ್ಯಾತ್ ತಿಕ್ತಂ ದದ್ಯಾತ್ತಥೋತ್ತರೇ ।
ವೈಶ್ಯೇ ಕರ್ಷಫಲಂ ದದ್ಯಾತ್ ಶೂದ್ರೇ ತ್ರಿಕಟುರೇವ ಚ ॥ ೧೪ ॥

ಬ್ರಾಹ್ಮಣೇನ ತು ದಷ್ಟಸ್ಯ ದಾಹೋ ಗಾತ್ರೇಷು ಜಾಯತೇ ।
ಮೂರ್ಛಾ ಚ ಪ್ರಬಲಾ ಸ್ಯಾದ್ವೈ ನಾತ್ಮಾನಮಭಿಜಾಯತೇ ॥ ೧೫ ॥

ಶ್ಯಾಮವರ್ಣಂ ಮುಖಂ ಚ ಸ್ಯಾತ್ ಮಜ್ಜಾಸ್ತಂಭಶ್ಚ ಜಾಯತೇ ।
ತಸ್ಯ ಕುರ್ಯಾತ್ ಪ್ರತೀಕಾರಂ ಯೇನ ಸಂಪದ್ಯತೇ ಸುಖಂ ॥ ೧೬ ॥

---

೧೩. ಹಾವುಗಳ ಜಾತಿಯಲ್ಲಿ ಈ ನಾಲ್ಕು ಬಗೆಗಳೇ ವಿನಾ ಐದನೆಯ ಬಗೆ ಯೆಂಬುದಿರುವುದಿಲ್ಲ. ಈ ಸರ್ಪಗಳಲ್ಲಿಯೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಎಂಬ ನಾಲ್ಕು ಜಾತಿ ಭೇದಗಳುಂಟು.

೧೪. ಬ್ರಾಹ್ಮಣಜಾತಿಯ ಸರ್ಪ ಕಚ್ಚಿದಾಗ ಸರ್ಪದಷ್ಟನಿಗೆ ಮಧುರ ಪದಾರ್ಥವನ್ನು ಆಹಾರವಾಗಿ ಕೊಡಬೇಕು. ಕ್ಷತ್ರಿಯ ಜಾತಿಯ ಸರ್ಪ ಕಚ್ಚಿದಾಗ ಕಚ್ಚಲ್ಪಟ್ಟವನಿಗೆ ಒಗರಾಗಿರುವ ಆಹಾರವಸ್ತುಗಳನ್ನು ಕೊಡಬೇಕು. ವೈಶ್ಯಜಾತಿಯ ಸರ್ಪ ಕಚ್ಚಿದಾತನಿಗೆ ತಾರೆಯ ಕಾಯನ್ನು ತಿನ್ನಿಸಬೇಕು. ಶೂದ್ರಜಾತಿಯ ಸರ್ಪ ಕಚ್ಚಿದವನಿಗೆ ಶುಂಠಿ, ಮೆಣಸು, ಹಿಪ್ಪಲಿ ಎಂಬ ತ್ರಿಕಟುಕಗಳನ್ನು ತಿನ್ನಿಸಬೇಕು.

೧೫. ಬ್ರಾಹ್ಮಣಜಾತಿಯ ಸರ್ಪ ಕಚ್ಚಿದವನಿಗೆ ಮೈಉರಿ ಕಾಣಿಸಿಕೊಳ್ಳುವುದು. ತನ್ನ ಮೈಮೇಲೂ ಎಚ್ಚರವಿಲ್ಲದಷ್ಟು ಪ್ರಬಲವಾದ ಮೂರ್ಛೆಯುಂಟಾಗುವುದು.

೧೬. ಅಷ್ಟೇ ಅಲ್ಲದೆ ಮುಖವು ಕಪ್ಪುಬಣ್ಣವಾಗಿಬಿಡುವುದು. ಮಜ್ಜಾ ಎಂಬ ಧಾತುವಿನ ಚಲನವೇ ನಿಂತುಹೋಗುವುದು. ಈ ಅವಸ್ಥೆಯುಂಟಾದಾಗ ಅದರ ನಿವಾರಣಾರ್ಥವಾಗಿ ಈ ಮುಂದೆ ಸೂಚಿಸುವಂತೆ ಮಾಡಿದರೆ ಸುಖವಾಗುವುದು.

ಅಶ್ವಗಂಧಾಪ್ಯಪಾಮಾರ್ಗಃ ಸಿಂಧುವಾರಂ ಸುರಾಮಯಂ ।
ಏತತ್ ಸರ್ಪಿಃ ಸಮಾಯುಕ್ತಂ ಪಾನೇ ನಸ್ಯೇ ಚ ದಾಪಯೇತ್ ।
ಏತೇನೈವೋಪಚಾರೇಣ ಸುಖೀ ಭವತಿ ಮಾನವಃ ॥ ೧೭ ॥

ಕ್ಷತ್ರಿಯೇಣ ತು ದಷ್ಟಸ್ಯ ಕಂಪೋ ಗಾತ್ರೇಷು ಜಾಯತೆ ।
ಮೂರ್ಛಾ ಮೋಹಸ್ತಥಾ ಸ್ಯಾದ್ವೈನಾತ್ಮಾನಮಭಿವೇತ್ತಿ ಸಃ ॥ ೧೮ ॥

ಜಾಯತೇ ವೇದನಾ ತಸ್ಯ ಊರ್ಧ್ವಂ ಚೈವ ನಿರೀಕ್ಷತೇ ।
ತಸ್ಯ ಕುರ್ಯಾತ್ ಪ್ರತೀಕಾರಂ ಯೇನ ಸಂಪದ್ಯತೇ ಸುಖಂ ॥ ೧೯ ॥

ಅರ್ಕಮೂಲಮಪಾಮಾರ್ಗಂ ಪ್ರಿಯಂಗುಮಿಂದ್ರವಾರುಣೀಂ ।
ಏತತ್ಸರ್ಪಿಃ ಸಮಾಯುಕ್ತಂ ಪಾನಂ ನಸ್ಯಂ ಚ ದಾಪಯೇತ್ ।
ಏತೇನೈವೋಪಚಾರೇಣ ಸುಖೀ ಭವತಿ ಮಾನವಃ ॥ ೨೦ ॥

---

೧೭. ಹಿರಿಯಮದ್ದಿನ ಗಿಡ (ಅಶ್ವಗಂಧ) ಉತ್ತರಣೆ, ಲಕ್ಕಿ ಈ ಮೂಲಿಕೆಗಳನ್ನು ಮದ್ಯ (ಹೆಂಡ) ದಲ್ಲಿ ಅರೆದು ತುಪ್ಪವನ್ನು ಬೆರಸಿ ಮೂಗಿಗೆ ಹಿಂಡಬೇಕು. ಮತ್ತು ಹೊಟ್ಟೆಗೂ ಕೊಡಬೇಕು. ಈ ಚಿಕಿತ್ಸೆಯಿಂದ ಅವನಿಗೆ ವಾಸಿಯಾಗುವುದು.

೧೮. ಕ್ಷತ್ರಿಯ ಜಾತಿಯ ಸರ್ಪವು ಕಚ್ಚಿದವನಿಗೆ ಮೈಯಲ್ಲಿ ನಡುಕವುಂಟಾಗುವುದು. ಇಂದ್ರಿಯಗಳು ವ್ಯಾಪಾರ ಶೂನ್ಯವಾಗುವುವು. ಬಾಹ್ಯಪ್ರಜ್ಞೆಯಿಲ್ಲದೆ ಜ್ಞಾನವೇ ತಪ್ಪಿಹೋಗುವುದು.

೧೯. ಇಷ್ಟೇ ಅಲ್ಲದೆ ನೋವು ಅಸಾಧ್ಯವಾಗಿ ಕಾಣಿಸುವುದು. ದೃಷ್ಟಿಯು ಮೇಲ್ಮುಖವಾಗುವುದು. ಅದಕ್ಕೆ ಈ ಮುಂದೆ ಹೇಳುವ ಚಿಕಿತ್ಸೆಮಾಡಿದರೆ ಸುಖವಾಗುವುದು.

೨೦. ಎಕ್ಕದಬೇರು, ಉತ್ತರಣೆಯಬೇರು, ನವಣೆ, ಹಾವುಮೆಕ್ಕೆಯಕಾಯಿ, ಇವುಗಳನ್ನು ತೆಯ್ದು ತುಪ್ಪದಲ್ಲಿ ರಂಗಳಿಸಿ ಮೂಗಿಗೆ ಹಿಂಡಬೇಕು. ಮತ್ತು ಹೊಟ್ಟೆಗೂ ಕೊಡಬೇಕು. ಇದರಿಂದ ಅವನಿಗೆ ವಾಸಿಯಾಗುವುದು.

ವೈಶ್ಯೇನಾಪಿ ಹಿ ದಷ್ಟಸ್ಯ ಶೃಣು ರೂಪಾಣಿ ಯಾನಿ ತು ।
ಶ್ಲೇಷ್ಮಪ್ರಕೋಪೋ ಲಾಲಾ ಚ ನ ಚೋದ್ವಹತಿ ಚೇತನಾಂ । ॥ ೨೧ ॥

ಮೂರ್ಛಾ ಚ ಪ್ರಬಲಾ ಯಸ್ಯ ಆತ್ಮಾನಂ ನಾಭಿನಂದತಿ ।
ತಸ್ಯ ಕುರ್ಯಾತ್ ಪ್ರತೀಕಾರಂ ಯೇನ ಸಂಪದ್ಯತೇ ಸುಖಂ ॥ ೨೨ ॥

ಅಶ್ವಗಂಧಾ ಸಗೋಮೂತ್ರಾ ಗೃಹಧೂಮಂ ಸ ಗುಗ್ಗಲಂ ।
ಶಿರೀಷಾರ್ಕಪಲಾಶೇನ ಶ್ವೇತಾ ಚ ಗಿರಿಕರ್ಣಿಕಾ ॥ ೨೩ ॥

ಗೋಮೂತ್ರೇಣ ಸಮಾಯುಕ್ತಂ ಪಾನಂ ನಸ್ಯಂ ಚ ದಾಪಯೇತ್ ।
ಏಷ ವೈಶ್ಯೇನ ದಷ್ಟಾನಾಮಗದಃ ಪರಿಕೀರ್ತಿತಃ ॥ ೨೪ ॥

ಶೂದ್ರೇಣಾಪಿ ಹಿ ದಷ್ಟಸ್ಯ ಶೃಣು ತತ್ವೇನ ಗೌತಮ ।
ಕಥ್ಯತೇ ವೇಪತೇ ಚೈವ ಜ್ವರಃ ಶೀತಂ ಚ ಜಾಯತೇ ॥ ೨೫ ॥

---

೨೧. ವೈಶ್ಯಜಾತಿಯ ಸರ್ಪ ಕಚ್ಚಿದವನಿಗೆ ಆಗುವ ಸ್ಥಿತಿಯನ್ನು ಕೇಳು. ಶ್ಲೇಷ್ಮವು ಅಧಿಕವಾಗುವುದು, ಬಾಯಲ್ಲಿ ಜೊಲ್ಲು (ನೊದಲೆ) ಸುರಿಯುವುದು, ಶರೀರದಮೇಲಿನ ಎಚ್ಚರವೂ ತಪ್ಪುವುದು.

೨೨. ಇಂದ್ರಿಯ ವ್ಯಾಪಾರಗಳು ತೀರ ನಿಂತುಹೋಗುವುವು. ಜ್ಞಾನವೇ ಇರುವುದಿಲ್ಲ, ಇದಕ್ಕೆ ಈ ಮುಂದಿನ ಚಿಕಿತ್ಸೆಮಾಡಿದರೆ ವಾಸಿಯಾಗಿ ಸುಖವಾಗುವುದು.

೨೩-೨೪. ಹಿರಿಯಮದ್ದಿನ ಬೇರು, ಅಡಿಗೆ ಒಲೆಯ ಹಿಂಭಾಗದ ಗೋಡೆಯನ್ನು ಕೆರೆದ ಮಸಿ (ಇಲ್ಲಣ) ಬಾಗೆ, ಎಕ್ಕ, ಮುತ್ತುಗ, ಬಿಳಿಯಗಿರಿಕರ್ಣಿಕೆ ಇವುಗಳ ಬೇರು. ಇವೆಲ್ಲವನ್ನೂ ಹಸುವಿನ ಗಂಜಲದಲ್ಲಿ ಕುಟ್ಟಿ ಕದರಿ ಮೂಗಿಗೂ ಹಾಕಿ ಹೊಟ್ಟೆಗೂ ಕುಡಿಸಬೇಕು. ವೈಶ್ಯಜಾತಿಯ ಸರ್ಪ ಕಡಿದವನಿಗೆ ಇದು ಉತ್ತಮವಾದ ಔಷಧವೆಂದು ಪ್ರಾಜ್ಞರು ಹೇಳಿದ್ದಾರೆ.

೨೫. ಶೂದ್ರಜಾತಿಯ ಸರ್ಪಗಳು ಕಚ್ಚಿದವನ ಲಕ್ಷಣಗಳನ್ನೂ ಅವನಿಗೆ ಮಾಡಬೇಕಾದ ಚಿಕಿತ್ಸೆಯ ತತ್ವವನ್ನೂ ಹೇಳುತ್ತೇನೆ. ಅಯ್ಯಾ, ಗೌತಮನೇ! ಕೇಳು, ಆ ಜಾತಿಯ ಸರ್ಪ ಕಚ್ಚಿದವನಿಗೆ ಮೈಕುದಿಯುವಂತಾಗುವುದು, ನಡುಕ ಹುಟ್ಟುವುದು, ಜ್ವರವೂ, ನೆಗಡಿಯೂ ಕಾಣಿಸಿಕೊಳ್ಳುವುವು.

ಅಂಗಾನಿ ಚುಲುಚುಲಾಯಂತೇ ಶೂದ್ರದಷ್ಟಸ್ಯ ಲಕ್ಷಣಂ ।
ತತ್ರಾಗದಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಸುಖಂ ॥ ೨೬ ॥

ಪದ್ಮಂ ಚ ಲೋಧ್ರಕಂ ಚೈವ ಕ್ಷೌದ್ರಂ ಪದ್ಮಸ್ಯ ಕೇಸರಂ ।
ಮಧೂಕಸಾರಂ ಮಧು ಚ ಶ್ವೇತಾಂ ಚ ಗಿರಿಕರ್ಣಿಕಾಂ ॥ ೨೭ ॥

ಏತಾನಿ ಸಮಭಾಗಾನಿ ಪೇಷಯೇತ್ ಶೀತವಾರಿಣಾ ।
ಪಾನಲೇಪಾಂಜನೈರ್ನಸ್ಯೈಃ ಸುಖೀ ಭವತಿ ಮಾನವಃ ॥ ೨೮ ॥

ಪೂರ್ವಾಹ್ಣೇ ಚರತೇ ವಿಪ್ರೋ ಮಧ್ಯಾಹ್ನೇ ಕ್ಷತ್ರಿಯಶ್ಚರೇತ್ ।
ಅಪರಾಹ್ಣೇ ಚರೇದ್ವೈಶ್ಯಃ ಶೂದ್ರಃ ಸಂಧ್ಯಾಚರೋ ಭವೇತ್ ॥ ೨೯ ॥

ಆಹಾರೋ ವಾಯುಪುಷ್ಪಾಣಿ ಬ್ರಾಹ್ಮಣಾನಾಂ ವಿದುರ್ಬುಧಾಃ ।
ಮೂಷಿಕಾ ಕ್ಷತ್ರಿಯಾಣಾಂ ಚ ಆಹಾರೋ ದ್ವಿಜಸತ್ತಮ ।
ವೈಶ್ಯಾ ಮಂಡೂಕಭಕ್ಷ್ಯಾಶ್ಚ ಶೂದ್ರಾಸ್ಸರ್ವಾಶಿನಸ್ತಥಾ ॥ ೩೦ ॥

---

೨೬. ಮೈ ಜುಮುಜುಮು ಎನ್ನುವುದು, ಇವು ಶೂದ್ರಜಾತಿಯ ಸರ್ಪ ಕಚ್ಚಿದವನ ಮುಖ್ಯ ಲಕ್ಷಣಗಳು. ಹೀಗಾದಾಗ ಈ ಮುಂದೆ ಹೇಳುವ ಔಷಧಿಯಿಂದ ವಾಸಿಯಾಗಿ ಸುಖವಾಗುವುದು. ಹೇಳುತ್ತೇನೆ ಕೇಳು.

೨೭. ತಾವರೆಗೆಡ್ಡೆ, ಲೋಧ್ರ, ಜೇನು, ಕಮಲದ ಕೇಸರ, ಹಿಪ್ಪೆಯಹೂವಿನ ರಸ, ಬಿಳಿಯಗಿರಿಕರ್ಣಿಕೆಯಗಿಡದ ಬೇರು.

೨೮. ಮೇಲ್ಕಂಡ ಮೂಲಿಕೆಗಳೆನ್ನಲ್ಲಾ ಸಮಪ್ರಮಾಣದಲ್ಲಿ ತಣ್ಣೀರಿನಲ್ಲಿ ಅರೆದು ಹೊಟ್ಟೆಗೆ ಕುಡಿಸುವುದು. ಮೈಗೆ ಲೇಪಿಸುವುದು, ಕಣ್ಣಿಗೆ ಹಚ್ಚುವುದು, ಮೂಗಿಗೆ ಹಿಂಡುವುದು, ಹೀಗೆಮಾಡಿದರೆ ಸರ್ಪದಷ್ಟನು ಆರೋಗ್ಯ ಹೊಂದುವನು.

೨೯. ಬ್ರಾಹ್ಮಣ ಜಾತಿಯ ಸರ್ಪಗಳು ಪ್ರಾಯಶಃ ಪೂರ್ವಾಹ್ಣದಲ್ಲಿಯೇ ಸಂಚರಿಸುವುವು. ಕ್ಷತ್ರಿಯ ಜಾತಿಯ ಸರ್ಪಗಳು ಮಧ್ಯಾಹ್ನಕಾಲದಲ್ಲಿ ಓಡಾಡುವುವು. ವೈಶ್ಯಜಾತಿಯ ಸರ್ಪಗಳು ಅಪರಾಹ್ಣದಲ್ಲಿಯೂ, ಶೂದ್ರಜಾತಿಯ ಸರ್ಪಗಳು ಸಂಧ್ಯಾಕಾಲದಲ್ಲಿಯೂ ಸಂಚರಿಸುವುವು.

೩೦. ವಿಪ್ರೋತ್ತಮ! ಕೇಳು, ಬ್ರಾಹ್ಮಣ ಜಾತಿಯ ಸರ್ಪಗಳಿಗೆ ವಾಯುವೂ, ಹೂವುಗಳೂ ಆಹಾರವಾಗುತ್ತವೆ. ಕ್ಷತ್ರಿಯ ಜಾತಿಯ ಸರ್ಪಗಳಿಗೆ ಇಲಿಗಳು ಆಹಾರ

ಅಗ್ರತೋ ದಶತೇ ವಿಪ್ರಃ ಕ್ಷತ್ರಿಯೋ ದಕ್ಷಿಣೇನ ತು ।
ವಾಮಪಾರ್ಶ್ವೇ ಸದಾ ವೈಶ್ಯಃ ಪಶ್ಚಾದ್ವೈ ಶೂದ್ರ ಆದಶೇತ್ ॥ ೩೦ ॥

ಮದಕಾಲೇಷು ಸಂಪ್ರಾಪ್ತೇ ಪೀಡ್ಯಮಾನಾ ಮಹಾವಿಷಾಃ ।
ಅವೇಲಾಯಾಂ ದಶಂತೇ ವೈ ಮೈಥುನಾರ್ತಾ ಭುಜಂಗಮಾಃ ॥ ೩೧ ॥

ಪುಷ್ಪಗಂಧಾ ಸ್ಮೃತಾ ವಿಪ್ರಾಃ ಕ್ಷತ್ರಿಯಾಶ್ಚಂದನಾವಹಾಃ ।
ವೈಶ್ಯಾಶ್ಚ ಘೃತಗಂಧಾ ವೈ ಶೂದ್ರಾ ಸ್ಯುರ್ಮತ್ಸ್ಯಗಂಧಿನಃ ॥ ೩೨ ॥

ವಾಸಂ ಯೇಷಾಂ ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ ।
ವಾಪೀಕೂಪತಡಾಗೇಷು ಗಿರಿಪ್ರಸ್ರವಣೇಷು ಚ ।
ವಸಂತಿ ಬ್ರಾಹ್ಮಣಾಃ ಸರ್ಪಾಃ ಗ್ರಾಮದ್ವಾರೇ ಚತುಷ್ಪಥೇ ॥ ೩೪ ॥

---

ವಾಗಿರುತ್ತವೆ. ವೈಶ್ಯಜಾತಿಯ ಸರ್ಪಗಳು ಕಪ್ಪೆಗಳನ್ನು ತಿಂದು ಹಾಕುವುವು. ಶೂದ್ರ ಜಾತಿಯ ಸರ್ಪಗಳು ಸಮಸ್ತ ಜಂತುಗಳನ್ನೂ ತಿನ್ನುವುವು.

೩೦ ಬ್ರಾಹ್ಮಣ ಜಾತಿಯ ಸರ್ಪವು ಪ್ರಾಣಿಗಳ ಮುಂಭಾಗದಲ್ಲಿ ಬಂದು ಕಚ್ಚುವುದು. ಕ್ಷತ್ರಿಯ ಜಾತಿಯ ಸರ್ಪವು ಬಲಭಾಗದಲ್ಲಿ ಬಂದು ಕಚ್ಚುವುದು. ವೈಶ್ಯಜಾತಿಯ ಸರ್ಪವು ಎಡಭಾಗದಿಂದಲೂ, ಶೂದ್ರಜಾತಿಯ ಸರ್ಪವು ಹಿಂಭಾಗ ದಿಂದಲೂ ಬಂದು ಕಚ್ಚುವುವೆಂದು ತಿಳಿಯಬೇಕು.

೩೧. ಮದವೇರಿ ಅದರಿಂದ ತೊಂದರೆಪಡುತ್ತಿರುವ ಮಹಾವಿಷವುಳ್ಳ ಸರ್ಪ ಗಳೂ, ಮೈಥುನಮಾಡಿ ಆಯಾಸಗೊಂಡ ಸರ್ಪಗಳೂ, ಅವೇಳೆಯಲ್ಲಾದರೂ ಕಚ್ಚು ವುವು.

೩೨. ಬ್ರಾಹ್ಮಣಜಾತಿಯ ಸರ್ಪಗಳು ಓಡಾಡುವಾಗ ಹೂವಿನ ವಾಸನೆಯಂತೆ ಘಮಘಮಿಸುವುದು. ಕ್ಷತ್ರಿಯ ಜಾತಿಯ ಸರ್ಪಗಳು ಸಂಚರಿಸುವಾಗ ಶ್ರೀಗಂಧದ ವಾಸನೆ ತೋರಿಬರುವುದು. ವೈಶ್ಯಜಾತಿಯ ಸರ್ಪಗಳು ಬಂದಾಗ ತುಪ್ಪದ ವಾಸನೆ ಯೂ, ಶೂದ್ರಜಾತಿಯ ಸರ್ಪಗಳು ತಿರುಗಾಡುವಾಗ ಹೂವಿನ ವಾಸನೆಯೂ ಬರುವುದು.

೩೪. ಈ ಸರ್ಪಗಳು ಪ್ರಾಯಿಕವಾಗಿ ವಾಸಮಾಡುವ ಸ್ಥಳಗಳನ್ನು ಹೇಳು ತ್ತೇನೆ ಕೇಳು. ಬ್ರಾಹ್ಮಣ ಜಾತಿಯ ಸರ್ಪಗಳು ಇಳಿಯುವ ಭಾವಿ; ಸೇದುವ ಭಾವಿ, ಕೆರೆಗಳು, ಬೆಟ್ಟದ ಜವುಗುನೀರುಹರಿಯುವ ಪ್ರದೇಶಗಳು ಇಂಥ ಸ್ಥಳಗಳಲ್ಲಿ ವಾಸಿಸು ತ್ತವೆ.

ಆರಾಮೇಷು ಪವಿತ್ರೇಷು ಶುಚಿಷ್ವಾಯತನೇಷು ಚ ।
ವಸಂತಿ ಕ್ಷತ್ರಿಯಾ ನಿತ್ಯಂ ತೋರಣೇಷು ಸರಸ್ಸು ಚ ॥ ೩೫ ॥

ಶ್ಮಶಾನೇ ಭಸ್ಮಶಾಲಾಸು ಪಲಾಲೇಷು ತಟೇಷು ಚ ।
ಗೋಷ್ಠೇಷು ಪಥಿ ವೃಕ್ಷೇಷು ವಿಪ್ರ ವೈಶ್ಯಾ ವಸಂತಿ ಚ ॥ ೩೬ ॥

ಅವಿವಿಕ್ತೇಷು ಸ್ಥಾನೇಷು ನಿರ್ಜನೇಷು ವನೇಷು ಚ ।
ಶೂನ್ಯಾಗಾರೇ ಶ್ಮಶಾನೇ ಚ ಶೂದ್ರಾಃ ವಿಪ್ರ ವಸಂತಿ ಚ ॥ ೩೭ ॥

ಶ್ವೇತಾಶ್ಚ ಕಪಿಲಾಶ್ಚೈವ ಯೇ ಸರ್ಪಾಸ್ತ್ವನಲಪ್ರಭಾಃ ।
ಮನಸ್ವಿನಃ ಸಾತ್ವಿಕಾಶ್ಚ ಬ್ರಾಹ್ಮಣಾಸ್ತೇ ಬುಧೈಃ ಸ್ಮೃತಾಃ ॥ ೩೮ ॥

---

೩೫. ಕ್ಷತ್ರಿಯ ಜಾತಿಯ ಸರ್ಪಗಳು ಊರಬಾಗಿಲು, ನಾಲ್ಕುಬೀದಿ ಸೇರುವ ಚೌಕ, ಪರಿಶುದ್ಧವಾದ ಉದ್ಯಾನ (ತೋಟ) ಗಳು, ಶುದ್ಧವಾದ ಮನೆ, ದೇವಾಲಯ ಸರೋವರ ಇವುಗಳಲ್ಲಿ ವಾಸಿಸುತ್ತವೆ.

೩೬. ವೈಶ್ಯಜಾತಿಯ ಸರ್ಪಗಳು ಸುಡುಗಾಡು (ಶ್ಮಶಾನ), ಬೂದಿಯ ಕುಪ್ಪೆ ಗಳು, ಕುಲಿಮೆಯ ಮನೆಗಳು, ಜಳ್ಳಿನ ಗುಡ್ಡೆಗಳು, ನದಿಯ ದಡಗಳ ಬಿಲಗಳು, ದನದ ಕೊಟ್ಟಿಗೆಗಳು, ತಿರುಗುವ ದಾರಿಗಳು, ಮರಗಳ ಪೊಟರೆಗಳು, (ಮರವನ್ನು ಸುತ್ತಿಕೊಂಡಿರುವುದೂ ಉಂಟು) ಇವುಗಳಲ್ಲಿ ವಾಸಿಸುವುವು.

೩೭. ಅಯ್ಯಾ. ಬ್ರಾಹ್ಮಣೋತ್ತಮನೇ! ಕೇಳು, ಶೂದ್ರಜಾತಿಯ ಹಾವುಗಳು ಜನಸಂಚಾರ ಕಡಮೆಯಾದ ಬಯಲುಗಳು, ಜನಸಂಚಾರ ವಿಲ್ಲದೆ ಇರುವ ಕಾಡಿನಲ್ಲಿ ಹಾಳುಬಿದ್ದ ಮನೆಗಳು, ಶ್ಮಶಾನ ಇವುಗಳಲ್ಲಿ ವಾಸಿಸುತ್ತವೆ.

೩೮. ಬ್ರಾಹ್ಮಣ ಜಾತಿಯ ಸರ್ಪಗಳು ಬಿಳಿಯವರ್ಣ, ಕಪಿಲವರ್ಣ, ಅಗ್ನಿ ವರ್ಣ ಇವುಗಳಲ್ಲಿ ಯಾವದಾದರೊಂದು ಬಣ್ಣವುಳ್ಳವುಗಳಾಗಿ ಬುದ್ಧಿಶಾಲಿಗಳಾಗಿಯೂ, ಮೃದು ಸ್ವಭಾವವುಳ್ಳವುಗಳಾಗಿಯೂ ಇರುತ್ತವೆಂದು ಪ್ರಾಜ್ಞರ ಅಭಿಪ್ರಾಯ.

ರಕ್ತವರ್ಣಾಃ ಸುವರ್ಣಾಭಾಃ ಪ್ರವಾಲಮಣಿಸನ್ನಿಭಾಃ ।
ಸೂರ್ಯಪ್ರಭಾಸ್ತಥಾ ವಿಪ್ರ ಕ್ಷತ್ರಿಯಾಸ್ತೇ ಭುಜಂಗಮಾಃ ॥ ೩೯ ॥

ನಾನಾವಿಚಿತ್ರರಾಜೀಭಿಃ ಅತಸೀವರ್ಣಸನ್ನಿಭಾಃ ।
ಬಾಣಪುಷ್ಪ ಸುವರ್ಣಾಭಾ ವೈಶ್ಯಾಸ್ತೇ ವೈ ಭುಜಂಗಮಾಃ ॥ ೪೦ ॥

ಕಾಕೋದರನಿಭಾಃ ಕೇಚಿತ್ ಯೇ ಚ ಅಂಜನಸನ್ನಿಭಾಃ ।
ಕಾಕವರ್ಣಾ ಧೂಮ್ರವರ್ಣಾಸ್ತೇ ಶೂದ್ರಾಃ ಪರಿಕೀರ್ತಿತಾಃ ॥ ೪೧ ॥

ಯಸ್ಯ ಸರ್ಪೇಣ ದಷ್ಟಸ್ಯ ದಂಶಮಂಗುಲಮಂತರಂ ।
ಬಾಲದಷ್ಟಂ ವಿಜಾನೀಯಾತ್ ಕಶ್ಯಪಸ್ಯ ವಚೋ ಯಥಾ ॥ ೪೨ ॥

ಯಸ್ಯ ಸರ್ಪೇಣ ದಷ್ಟಸ್ಯ ದಂಶಂ ದ್ವ್ಯಂಗುಲಮಂತರಂ ।
ಯೌವನಸ್ಥೇನ ದಷ್ಟಸ್ಯ ಏತದ್ಭವತಿ ಲಕ್ಷಣಂ ॥ ೪೩ ॥

---

೩೯. ಬ್ರಾಹ್ಮಣೋತ್ತಮ! ಕೇಳು—ಕ್ಷತ್ರಿಯ ಜಾತಿಯ ಸರ್ಪಗಳು ರಕ್ತದಂತೆ ಕೆಂಪುಬಣ್ಣ ಉಳ್ಳವು. ಕೆಲವು ಚಿನ್ನದ ಕಾಂತಿಯಂತೆ ಕಾಂತಿಯುಳ್ಳವು. ಕೆಲವು ಹವಳದ ಮಣಿಗಳ ಬಣ್ಣಕ್ಕೆ ಸಮಾನವಾದುವು. ಮತ್ತೆ ಕೆಲವು ಸೂರ್ಯಮಂಡಲದಂತೆ ಬಣ್ಣ ಉಳ್ಳವೂ ಆಗಿರುತ್ತವೆ.

೪೦. ಮೈಮೇಲೆ ಅನೇಕ ಚಿತ್ರಗಳು ಬರೆದಂತೆ ಇರುವುದು, ಅಗಸೆಹೂವಿನ ಬಣ್ಣ ಉಳ್ಳದ್ದಾಗಿರುವುದು, ಕರಿಯ ಗೋರಂಟಿಯ ಹೂವಿನ ಬಣ್ಣವಾಗಿರುವುದು, ಇದೆಲ್ಲವೂ ವೈಶ್ಯಜಾತಿಯ ಸರ್ಪಗಳೆಂದು ತಿಳಿಯಬೇಕು.

೪೧. ಕಾಗೆಯ ಹೊಟ್ಟೆಯ ಬಣ್ಣದಂತೆ ಬಣ್ಣವುಳ್ಳವು, ಕಾಡಿಗೆಯಂತೆ ಕಪ್ಪಾಗಿರತಕ್ಕವು, ಧೂಮ್ರವರ್ಣವಾಗಿರತಕ್ಕವು, ಕಾಗೆಯ ಬಣ್ಣದಂತೆಯೇ ಬಣ್ಣವುಳ್ಳವು, ಇವೆಲ್ಲವೂ ಶೂದ್ರ ಜಾತಿಯ ಹಾವುಗಳೆಂದು ಹೇಳಿದೆ.

೪೨. ಹಾವು ಕಚ್ಚಿದಾಗ ಆಗುವ ಗಾಯಗಳ ಮಧ್ಯೆ ಒಂದು ಅಂಗುಲ ಮಾತ್ರ ಅಂತರವಿದ್ದರೆ ಎಳೆಯ ನಾಗರಹಾವು ಕಚ್ಚಿದೆಯೆಂದು ತಿಳಿದುಕೊಳ್ಳಬೇಕು ಹೀಗೆ ಕಶ್ಯಪರು ಹೇಳಿದಾರೆ.

೪೩. ಸರ್ಪದಷ್ಟನ ಶರೀರದಲ್ಲಿ ಹಾವಿನ ಕೋರೇಹಲ್ಲಿನ ಗಾಯಗಳ ಅಂತರವು ಎರಡು ಅಂಗುಲವಿದ್ದರೆ ಪ್ರಾಯದ ಹಾವು ಕಚ್ಚಿದೆಯೆಂದು ಹೇಳಬೇಕು.

ಯಸ್ಯ ಸರ್ಪೇಣ ದಷ್ಟಸ್ಯ ದ್ವ್ಯಂಗುಲಮಂತರಂ ।
ವೃದ್ಧದಷ್ಟಂ ವಿಜಾನೀಯಾತ್ ಕಶ್ಯಪಸ್ಯ ವಚೋ ಯಥಾ ॥ ೪೪ ॥

ಅನಂತಃ ಪ್ರೇಕ್ಷತೇ ಪೂರ್ವಂ ವಾಮಪಾರ್ಶ್ವೇ ತು ವಾಸುಕಿಃ ।
ತಕ್ಷಕೋ ದಕ್ಷಿಣೇನೇಹ ಕಾರ್ಕೋಟಃ ಪೃಷ್ಟತಸ್ತಥಾ ॥ ೪೫ ॥

ಚಲತೇ ಭ್ರಮತೇ ಪದ್ಮೋ ಮಹಾಪದ್ಮೋ ನಿಮಜ್ಜತಿ ।
ನಿಸಂಜ್ಞಃ ತಿಷ್ಠತೇ ಚೈವ ಶಂಖಪಾಲೋ ಮುಹುರ್ಮುಹುಃ ॥ ೪೬ ॥

ಸರ್ವೇಷಾಂ ಕುರುತೇ ರೂಪಂ ಕುಲಿಕಃ ಪನ್ನಗೋತ್ತಮಃ ।
ಅನಂತಸ್ಯ ದಿಶಾ ಪೂರ್ವಾ ವಾಸುಕೇಸ್ತು ಹುತಾಶನೀ ॥ ೪೭ ॥

---

೪೪. ಶರೀರದಲ್ಲಿ ಹಾವು ಕಚ್ಚಿದಾಗ ಹಲ್ಲಿನ ಗಾಯದ ಮಧ್ಯೆ ಅಂತರವು ಎರಡೂವರೆ ಅಂಗುಲವಿದ್ದರೆ ಆಗ ಬಲಿತಸರ್ಪ ಕಚ್ಚಿದೆಯೆಂದು ತಿಳಿಯಬೇಕು.

೪೫ ಅನಂತ ಎಂಬ ಸರ್ಪಜಾತಿಯು ಕಚ್ಚಲು ಬರುವಾಗ ಅವನ ಮುಂಭಾಗವನ್ನೇ ನೋಡುತ್ತದೆ ವಾಸುಕಿಯು ಕಚ್ಚಬೇಕಾದವನ ಎಡಭಾಗವನ್ನೂ, ತಕ್ಷಕನೆಂಬ ಸರ್ಪವು ಅವನ ಬಲಭಾಗವನ್ನೂ, ಕರ್ಕೋಟಕವು ಅವನ ಹಿಂಭಾಗವನ್ನೂ ನೋಡುತ್ತದೆ.

೪೬. ಪದ್ಮನೆಂಬ ಸರ್ಪಜಾತಿಯ ಹಾವು ಕಚ್ಚಿದಕೂಡಲೇ ತಾನೇ ಗಿರಗಿರನೆ ತಿರುಗುವುದು. ಮಹಾಪದ್ಮವೆಂಬ ಸರ್ಪಜಾತಿಯು ಕಚ್ಚಿದಕೂಡಲೇ ನೀರಿಗೆ ಮುಳುಗಿ ಅವಿತುಕೊಳ್ಳುವುದು. ಶಂಖಪಾಲ ಎಂಬ ಸರ್ಪಜಾತಿ ಕಚ್ಚಿದಾಗ ತಾನೇ ಪದೇ ಪದೇ ಪ್ರಜ್ಞೆತಪ್ಪಿ ಅಲ್ಲಲ್ಲಿ ನಿಲ್ಲುವುದು.

೪೭. ನಾಗಶ್ರೇಷ್ಠನಾದ ಕುಲಿಕನೆಂಬ ಸರ್ಪಜಾತಿ ಕಚ್ಚಿದಾಗ ಈ ಹೇಳಿದ ಎಲ್ಲದರಲ್ಲಿಯೂ ಕಾಣುವ ಲಕ್ಷಣಗಳನ್ನು ಹೊಂದುವನು. ಅನಂತವೆಂಬ ನಾಗವು ಪೂರ್ವದಿಕ್ಕಿನಲ್ಲಿಯೂ, ವಾಸುಕಿಯು ಆಗ್ನೇಯ ದಿಕ್ಕಿನಲ್ಲಿಯೂ, ಕಾಣಿಸಿಕೊಳ್ಳುವುದು.

ದಕ್ಷಿಣಾ ತಕ್ಷಕಸ್ಯೋಕ್ತಾ ಕರ್ಕೋಟಸ್ಯ ತು ನೈಋತೀ ।
ಪಶ್ಚಿಮಾ ಪದ್ಮನಾಗಸ್ಯ ಮಹಾಪದ್ಮಸ್ಯ ವಾಯುಜಾ ।
ಉತ್ತರಾ ಶಂಖಪಾಲಸ್ಯ ಐಶಾನೀ ಕಂಬಲಸ್ಯ ತು ॥ ೪೮ ॥

ಅನಂತಸ್ಯ ಭವೇತ್ಪದ್ಮಂ ವಾಸುಕೇಃ ಸ್ಯಾತ್ತಥೋತ್ಪಲಂ ।
ಸ್ವಸ್ತಿಕಂ ತಕ್ಷಕಸ್ಯೋಕ್ತಂ ಕರ್ಕೋಟಸ್ಯ ತು ಪಂಕಜಂ ॥ ೪೯ ॥

ಪದ್ಮಸ್ಯ ತು ಭವೇತ್ಪದ್ಮಂ ಶೂಲಂ ಪದ್ಮೇತರಸ್ಯ ತು ।
ಶಂಖಪಾಲೇ ಭವೇಚ್ಛತ್ರಂ ಕುಲಿಕಸ್ಯಾರ್ಧಚಂದ್ರಕಂ ॥ ೫೦ ॥

ಅನಂತಕುಲಿಕೌ ವಿಪ್ರೌ ಕ್ಷತ್ರಿಯೌ ಶಂಖವಾಸುಕೀ ।
ಮಹಾಪದ್ಮಸ್ತ್ವಕ್ಷಕಶ್ಚ ವೈಶ್ಯೌ ವಿಪ್ರ ಪ್ರಕೀರ್ತಿತೌ ।
ಪದ್ಮ ಕರ್ಕೋಟಕೌ ಶೂದ್ರೌ ಸದಾ ಜ್ಞೇಯೌ ಮನೀಷಿಭಿಃ ॥ ೫೧ ॥

---

೪೮. ತಕ್ಷಕನೆಂಬುದು ದಕ್ಷಿಣ ದಿಕ್ಕಿನಲ್ಲಿಯೂ, ಕರ್ಕೋಟಕಸರ್ಪವು ನೈರುತ್ಯ ದಿಕ್ಕಿನಲ್ಲಿಯೂ, ಪದ್ಮಸರ್ಪವು ಪಶ್ಚಿಮ ದಿಕ್ಕಿನಲ್ಲಿಯೂ, ಮಹಾಪದ್ಮಸರ್ಪವು ವಾಯುವ್ಯ ದಿಕ್ಕಿನಲ್ಲಿಯೂ, ಶಂಖಪಾಲಸರ್ಪವು ಉತ್ತರ ದಿಕ್ಕಿನಲ್ಲಿಯೂ, ಕಂಬಳನೆಂಬ ಸರ್ಪವು ಈಶಾನ್ಯ ದಿಕ್ಕಿನಲ್ಲೂ ಕಾಣಿಸಿಕೊಳ್ಳುವುದು.

೪೯–೫೦. ಅನಂತನೆಂಬ ನಾಗನಿಗೆ ಕಮಲದ ಮೊಗ್ಗಿನ ಆಕೃತಿಯೂ, ವಾಸುಕಿಗೆ ನೈದಿಲೆ ಹೂವಿನ ಆಕೃತಿಯೂ, ತಕ್ಷಕನಿಗೆ ಸ್ವಸ್ತಿಕದ ಆಕೃತಿಯೂ, ಕರ್ಕೋಟಕನಿಗೆ ಪಂಕಜದ ಆಕೃತಿಯೂ, ಪದ್ಮನೆಂಬ ಸರ್ಪಕ್ಕೆ ಕುಶೇಶಯದ (ಸಣ್ಣಕಮಲ) ಆಕೃತಿಯೂ, ಮಹಾಪದ್ಮ ಸರ್ಪನಿಗೆ ಶೂಲದ ಆಕೃತಿಯೂ, ಶಂಖಪಾಲನಿಗೆ ಛತ್ರಾಕೃತಿಯೂ, ಕುಲಿಕನಿಗೆ ಅರ್ಧಚಂದ್ರಾಕೃತಿಯೂ ಆದ ಗುರುತು ಹೆಡೆಯ ಹಿಂಭಾಗದಲ್ಲಿ ಕಾಣಬರುವುವು.

೫೧. ಅನಂತ, ಕುಲಿಕ ಎಂಬಿವು ಬ್ರಾಹ್ಮಣ ಜಾತಿಯವು, ಶಂಖಪಾಲ, ವಾಸುಕಿಗಳು ಕ್ಷತ್ರಿಯ ಜಾತಿಯವು, ಮಹಾಪದ್ಮ, ತಕ್ಷಕ ಇವು ವೈಶ್ಯಜಾತಿಯವು, ಪದ್ಮ, ಕರ್ಕೋಟಕ ಇವು ಶೂದ್ರಜಾತಿಯವು ಎಂಬದಾಗಿ ವಿದ್ವಾಂಸರು ತಿಳಿಯುತ್ತಾರೆ.

ಅನಂತಕುಲಿಕೌ ಶುಕ್ಲೌ ವರ್ಣತೋ ಬ್ರಹ್ಮಸಂಭವೌ ।
ವಾಸುಕಿಃ ಶಂಖಪಾಲಶ್ಚ ರಕ್ತೌ ಹ್ಯಗ್ನಿಸಮುದ್ಭವೌ ॥ ೫೨ ॥

ತಕ್ಷಕಶ್ಚ ಮಹಾಪದ್ಮ ಈಷತ್ಪೀತೌ ಬಭೂವತುಃ ।
ಪದ್ಮಕರ್ಕೋಟಕೌ ವಿಪ್ರ ಸರ್ಪೌ ಕೃಷ್ಣೌ ಬಭೂವತುಃ ॥ ೫೩ ॥

ಹಯಂ ಯಾನಂ ವೃಷಂ ಛತ್ರಂ ರಾಜಾನಮಥ ಪಾವಕಂ ।
ಧರಣೀಮುತ್ಪಾದ್ಯ ಧೃತಾನೇತಾನ್ ಸಿದ್ಧಿಕರಾನ್ ವಿದುಃ ॥ ೫೪ ॥

ಪೂರ್ಣಕುಂಭಃ ಪತಾಕಾ ಚ ಕಾಂಚನಂ ಮಣಯಸ್ತಥಾ ।
ಶಿರೀಷಂ ಮಾಣಿಕಂ ಕಂಠೇ ಜೀವಜೀವೇತಿ ಸುವ್ರತ ।
ಏತೇಷಾಂ ದರ್ಶನಂ ಶ್ರೇಷ್ಠಂ ಕನ್ಯಾಚೈಕಪ್ರಸೂಯಿಕಾ ॥ ೫೫ ॥

ಚತುಷ್ಷಷ್ಟಿಃ ಸಮಾಖ್ಯಾತಾ ಭೋಗಿನೋ ಯೇ ತು ಪನ್ನಗಾಃ ।
ಅದೃಶ್ಯಾಸ್ತೇಷು ಷಟ್ತ್ರಿಂಶತ್ ದೃಶ್ಯಾಸ್ತ್ರಿಂಶನ್ಮಹೀಚರಾಃ ॥ ೫೬ ॥

---

೫೨–೫೩. ಅನಂತ, ಕುಲಿಕ ಎಂಬ ಸರ್ಪಗಳ ಬಣ್ಣವು ಬಿಳಿದು; ಇವೆರಡೂ ಬ್ರಹ್ಮನಿಂದ ಜನಿಸಿದುವು. ವಾಸುಕಿ, ಶಂಖಪಾಲ, ಎಂಬ ಸರ್ಪಗಳ ಬಣ್ಣ ಕೆಂಪು, ಇವೆರಡೂ ಅಗ್ನಿಯಿಂದ ಜನಿಸಿದುವು. ತಕ್ಷಕ, ಮಹಾಪದ್ಮ ಎಂಬ ಎರಡು ಸರ್ಪಗಳ ಬಣ್ಣವು ಸ್ವಲ್ಪ ಹಳದಿ, ಪದ್ಮ, ಕರ್ಕೋಟಕ ಎಂಬೆರಡು ಸರ್ಪಗಳ ಬಣ್ಣವು ಕಪ್ಪು.

೫೪. ಕುದುರೆ, ರಥ, ಎತ್ತು, ಛತ್ರಿ, ರಾಜ, ಅಗ್ನಿ ಮತ್ತು ಭೂಮಿ, ಇವೆಲ್ಲವನ್ನೂ ಬ್ರಹ್ಮನು ನಿರ್ಮಿಸಿ ಅನಂತರ ಇವುಗಳನ್ನು ಧರಿಸುವುದಕ್ಕೋಸ್ಕರ ವಾಸುಕಿಯೇ ಮೊದಲಾದ ಸರ್ಪಗಳನ್ನು ಸೃಷ್ಟಿಸಿದನು. ಇವು ಆ ಕೆಲಸವನ್ನು ಮಾಡಿದುದರಿಂದ ಸಿದ್ಧಿಪಡೆದಿರುವುವೆಂದು ತಿಳಿಯಬೇಕು.

೫೫. ಅಯ್ಯಾ, ಸುವ್ರತನೇ! ತುಂಬಿದಕೊಡ, ಧ್ವಜ, ಚಿನ್ನ, ರತ್ನಗಳು, ಬಾಗೆಯ ಹೂ, ಕಂಠಸ್ಥಿತವಾದ ಕೆಂಪುರತ್ನ, (ಜೀವ ಜೀವ) ಚಕೋರ, ಚೊಚ್ಚಲು ಹೆರಿಗೆಯಾದ ಹೆಂಗಸು, ಇವರ ದರ್ಶನವು ಶ್ರೇಷ್ಠವೆನಿಸಿ ಕಾರ್ಯಸಿದ್ಧಿಯುಂಟು ಮಾಡುವುದು.

೫೬-೫೭. ಸರ್ಪಜಾತಿಗಳಲ್ಲಿ ಭೋಗಿಗಳು ಅರವತ್ತುನಾಲ್ಕು. ಯಾರ ಕಣ್ಣಿಗೂ ಕಾಣದಂತೆ ತಿರುಗತಕ್ಕವು ಮುಪತ್ತಾರು.ಪ್ರಾಣಿಗಳ ಕಣ್ಣಿಗೆ ಕಾಣುವಂತೆ

ವಿಂಶಚ್ಚ ಸ್ರಗ್ವಿಣಃ ಪ್ರೋಕ್ತಾ ಸಪ್ತಮಂಡಲಿನಸ್ತಥಾ ।
ರಾಜೀವಂತೋ ದಶ ಪ್ರೋಕ್ತಾಃ ದರ್ವ್ಯಃ ಷೋಡಶ್ಚ ಪಂಚ ಚ ॥ ೫೭ ॥

ದುಂದುಭೋ ಡುಂಡುಭಶ್ಚೈವ ಚೇಟಿಭಶ್ಚೇಂದ್ರವಾಹನಃ ।
ನಾಗಪುಷ್ಪಸುವರ್ಣಾಖ್ಯಾ ನಿರ್ವಿಷಾ ಯೇ ಚ ಪನ್ನಗಾಃ ।
ಏವಮೇವ ತು ಸರ್ಪಾಣಾಂ ಶತದ್ವಿನವತಿ ಸ್ಮೃತಂ ॥ ೫೮ ॥

ವರಾಹಕರ್ಣೀಂ ಗಜಪಿಪ್ಪಲೀಂ ಚ ಗಾಂಧಾರಿಕಾಂ ಪಿಪ್ಪಲದೇವದಾರು ।
ಮಧೂಕಸಾರಂ ಸಹಸಿಂಧುವಾರಂ ಹಿಂಗುಂ ಚ ಪಿಷ್ಟ್ವಾ ಗುಟಿಕಾ ಚ
ಕಾರ್ಯಾ ॥ ೫೯ ॥

॥ ಸುಮಂತುರುವಾಚ ॥
ಇತ್ಯುಕ್ತವಾನ್ ಪುರಾ ವೀರ ಗೌತಮಸ್ಯ ಪ್ರಜಾಪತಿಃ ।
ಲಕ್ಷಣಂ ಸರ್ವನಾಗಾನಾಂ ರೂಪವರ್ಣ ವಿಷಂ ತಥಾ ॥ ೬೦ ॥

---

ನೆಲದ ಮೇಲೆ ಹರಿದಾಡತಕ್ಕವು ಮೂವತ್ತು, ಹೆಡೆಯಮೇಲೆ ಹಾರದಂತೆ ಗುರುತುಳ್ಳವು ಇಪ್ಪತ್ತು, ವರ್ತುಳಾಕಾರವಾದ ಗುರುತುಳ್ಳವು (ಮಂಡಲದ ಹಾವುಗಳು), ಏಳು, ರಾಜೀವಂತಗಳೆಂಬುವು (ನೀರುಹಾವು) ಹತ್ತು; ಸೌಟಿನಂತೆ ಗುರುತುಳ್ಳವು (ದರ್ವೀಕರಗಳು) ಇಪ್ಪತ್ತೊಂದು.

೫೮. ಇವಲ್ಲದೆ ದುಂದುಭ, ಡುಂಡುಭ, ಚೇಟಭ, ಇಂದ್ರವಾಹನ, ಎಂಬ ನಾಲ್ಕು ನಾಮದಿಂದ ನಿರ್ದೇಶವಾದುವು ನಾಲ್ಕು, ಇವು ಒಟ್ಟು ಸರ್ಪಗಳಲ್ಲಿರುವ ಒಂದನೂರ ತೊಂಬತ್ತೆರಡು ಜಾತಿಗಳಾಗಿವೆ. ಯಾವ ಹಾವುಗಳಲ್ಲಿ ವಿಷವಿಲ್ಲವೋ ಅವು ನಾಗಪುಷ್ಪಕ್ಕೆ ಸಮಾನವಾದ ಬಣ್ಣ ಉಳ್ಳವುಗಳಾಗಿರುತ್ತವೆ.

೫೯. ವರಾಹಕರ್ಣೀ, ಗಜಪಿಪ್ಪಲೀ, ಗಾಂಧಾರಿಕೆ, ಪಿಪ್ಪಲಿ, ದೇವದಾರು, ಹಿಪ್ಪೆ (ಮಧೂಕಸಾರ) ಲಕ್ಕಿ (ಸಿಂದುವಾರ) ಇಂಗು ಇವೆಲ್ಲವನ್ನೂ ಸಮಭಾಗದಲ್ಲಿ ಸೇರಿಸಿ ಅರೆದು ಗುಳಿಗೆಮಾಡಿ ಸೇವಿಸಬೇಕು.

೬೦. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ, ವೀರಶ್ರೇಷ್ಠನೇ! ಪೂರ್ವದಲ್ಲಿ ಬ್ರಹ್ಮನು ಗೌತಮನಿಗೆ ಸರ್ಪದ ಎಲ್ಲಾ ಜಾತಿಗಳ ವರ್ಣ, ಆಕಾರ, ವಿಷ ವೇಗ ವಿಚಾರ ಇವೆಲ್ಲವನ್ನೂ ಈರೀತಿ ವಿಸ್ತಾರವಾಗಿ ಹೇಳಿದನು.

ತಸ್ಮಾತ್ ಸಂಪೂಜಯೇನ್ನಾಗಾನ್ ಸದಾ ಭಕ್ತ್ಯಾ ಸಮನ್ವಿತಃ ।
ವಿಶೇಷತಸ್ತು ಪಂಚಮ್ಯಾಂ ಪಯಸಾ ಪಾಯಸೇನ ಚ ॥ ೬೧ ॥

ಶ್ರಾವಣೇ ಮಾಸಿ ಪಂಚಮ್ಯಾಂ ಶುಕ್ಲಪಕ್ಷೇ ನರಾಧಿಪ ।
ದ್ವಾರಸ್ಯೋಭಯತೋ ಲೇಖ್ಯಾ ಗೋಮಯೇನ ವಿಷೋಲ್ಬಣಾಃ ॥ ೬೨ ॥

ಪೂಜಯೇದ್ವಿಧಿವದ್ದ್ವಾರಂ ದಧಿದೂರ್ವಾಕ್ಷತೈಃ ಕುಶೈಃ ।
ಗಂಧಪುಷ್ಪೋಪಹಾರೈಶ್ಚ ಬ್ರಾಹ್ಮಣಾನಾಂ ಚ ಭೋಜನೈಃ ॥ ೬೩ ॥

(ತರ್ಪಣೈಃ)

ಯೇತ್ವಸ್ಯಾಂ ಪೂಜಯಂತೀಹ ನಾಗಾನ್ ಭಕ್ತಿಪುರಸ್ಸರಾಃ ।
ನ ತೇಷಾಂ ಸರ್ಪತೋ ವೀರ ಭಯಂ ಭವತಿ ಕರ್ಹಿಚಿತ್ ॥ ೬೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಪಂಚಮೀ
ಕಲ್ಪೇ ಶ್ರಾವಣಿಕ ನಾಗಪಂಚಮೀ ವ್ರತವರ್ಣನಂ ನಾಮ
ಷಟ್ತ್ರಿಂಶೋಽಧ್ಯಾಯಃ.

---

೬೧. ಆದುದರಿಂದ ಯಾವಾಗಲೂ ಭಕ್ತಿಯುತನಾಗಿ ನಾಗಗಳನ್ನು ಚೆನ್ನಾಗಿ ಪೂಜಿಸಬೇಕು. ವಿಶೇಷವಾಗಿ ಪಂಚಮಿಯದಿನ ಪಾಯಸ, ಹಾಲು ಇವನ್ನು ಸಮರ್ಪಿಸಿ ಅರ್ಚಿಸಬೇಕು.

೬೨. ಅಯ್ಯಾ, ರಾಜನೇ! ಶ್ರಾವಣ ಶುಕ್ಲ ಪಂಚಮಿಯಲ್ಲಿ ಬಾಗಿಲಿನ ಎರಡು ಪಾರ್ಶ್ವಗಳಲ್ಲಿಯೂ ವಿಷೋಲ್ಬಣವಾದ ಸರ್ಪಗಳ ಆಕೃತಿಯನ್ನು ಗೋಮಯದಿಂದ ರಚಿಸಿ.

೬೩. ಈ ಸರ್ಪಾಕೃತಿಯುಕ್ತವಾದ ದ್ವಾರಕ್ಕೆ ವಿಧಿಪ್ರಕಾರ ಅರ್ಚಿಸಿ ಗರಿಕೆ ಹುಲ್ಲು, ದರ್ಭೆ, ಮೊಸರು, ಅಕ್ಷತೆ ಮುಂತಾದುವುಗಳಿಂದ ಪೂಜಿಸಬೇಕು. ಮತ್ತು ಗಂಧ ಪುಷ್ಪ ಉಪಹಾರಗಳು ಇವುಗಳಿಂದ ಬ್ರಾಹ್ಮಣರ ಭೋಜನಮಾಡಿಸಿ ತೃಪ್ತಿಪಡಿಸಬೇಕು.

೬೪. ಯಾರು ಈ ಪಂಚಮಿಯಲ್ಲಿ ಭಕ್ತಿಯಿಂದ ಸರ್ಪಗಳೆಲ್ಲವನ್ನೂ ಪೂಜಿಸುತ್ತಾರೋ ಅವರಿಗೆ ಎಲ್ಲಿಯೂ ಯಾವ ಹಾವುಗಳಿಂದಲೂ ಭಯವಿರುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಪಂಚಮೀ ಕಲ್ಪದಲ್ಲಿ
ಶ್ರಾವಣಮಾಸದ ನಾಗರಪಂಚಮೀವ್ರತ ವರ್ಣನೆಯೆಂಬ
ಮುವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತತ್ರಿಂಶೋಽಧ್ಯಾಯಃ

---

॥ ಸುಮಂತುರುವಾಚ ॥

ತಥಾ ಭಾದ್ರಪದೇ ಮಾಸಿ ಪಂಚಮ್ಯಾಂ ಶ್ರದ್ಧಯಾನ್ವಿತಃ ।
ಅಥಾಲೇಖ್ಯ ನರೋ ನಾಗಾನ್ ಕೃಷ್ಣವರ್ಣಾದಿ ವರ್ಣಕೈಃ ॥ ೧ ॥

ಪೂಜಯೇದ್ಗಂಧಪುಷ್ಪೈಶ್ಚ ಸರ್ಪಿಃಪಾಯಸಗುಗ್ಗುಳೈಃ ।
ತಸ್ಯ ತುಷ್ಟಿಂ ಸಮಾಯಾಂತಿ ಪನ್ನಗಾಸ್ತಕ್ಷಕಾದಯಃ ॥ ೨ ॥

---

## ಮೂವತ್ತೇಳನೆಯ ಅಧ್ಯಾಯವು

೧. ಸುಮಂತು ಮುನಿವರ್ಯರು ಹೇಳುತ್ತಾರೆ—ಶ್ರಾವಣ ಶುಕ್ಲಪಂಚಮಿಯಲ್ಲಿ ಆಚರಿಸಿದಂತೆಯೇ ಭಾದ್ರಪದಮಾಸದ ಶುಕ್ಲಪಂಚಮಿಯಲ್ಲಿಯೂ ಜನರು ಭಕ್ತಿಯುಕ್ತರಾಗಿ ಗೃಹದ್ವಾರದ ಎರಡು ಪಕ್ಕಗಳಲ್ಲಿಯೂ ಕಪ್ಪು ಕೆಂಪು ಮುಂತಾದ ಬಣ್ಣದ ವಸ್ತುಗಳಿಂದ ಸರ್ಪಾಕೃತಿಗಳನ್ನು ಚಿತ್ರಿಸಬೇಕು.

೨ ಪ್ರತಿಯು ಆ ಸರ್ಪ ಪ್ರತಿಕೃತಿಗಳಿಗೆ ಗಂಧಪುಷ್ಪಾದಿಗಳಿಂದ ಪೂಜಿಸಿ ಗುಗ್ಗುಳ ಧೂಪವನ್ನು ಹಾಕಿ ಪಾಯಸ, ತುಪ್ಪ ಮುಂತಾದುವುಗಳನ್ನು ನಿವೇದಿಸಿ ಪೂಜಿಸಿದರೆ ತಕ್ಷಕನೇ ಮುಂತಾದ ಸರ್ಪಗಳೆಲ್ಲವೂ ಅವನ ವಿಷಯದಲ್ಲಿ ಸಂತುಷ್ಟವಾಗುತ್ತವೆ.

ಆಸಪ್ತಮಾತ್ ಕುಲಾತ್ತಸ್ಯ ನ ಭಯಂ ನಾಗತೋ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ನಾಗಾನ್ ಸಂಪೂಜಯೇದ್ಬುಧಃ ॥ ೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಪಂಚಮೀ ಕಲ್ಪೇ
ಭಾದ್ರಪದಿಕ ಪಂಚಮೀವರ್ಣನಂ ನಾಮ
ಸಪ್ತತ್ರಿಂಶೋಽಧ್ಯಾಯಃ.



---

೩. ಈರೀತಿ ಪೂಜಿಸಿದವನಿಗೆ ಅವನ ಮುಂದಿನ ಏಳು ತಲೆಗಳವರೆಗಿನ ವಂಶಸ್ಥರಿಗೂ ಸರ್ಪಗಳ ಭಯವು ಇರುವುದಿಲ್ಲ. ಅದುದರಿಂದ ತಿಳಿದವನು ಸರ್ವಪ್ರಯತ್ನಗಳಿಂದಲೂ ಈ ನಾಗಗಳನ್ನು ಆರಾಧಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಪಂಚಮೀ ಕಲ್ಪದಲ್ಲಿ
ಭಾದ್ರಪದಮಾಸದ ನಾಗಪಂಚಮೀ ವರ್ಣನೆಯೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟತ್ರಿಂಶೋಽಧ್ಯಾಯಃ

---

॥ ಸುಮಂತುರುವಾಚ ॥

ತಥಾ ಚಾಶ್ವಯುಜೇ ಮಾಸಿ ಪಂಚಮ್ಯಾಂ ಕುರುನಂದನ ।
ಕೃತ್ವಾ ಕುಶಮಯಾನ್ ನಾಗಾನ್ ಗಂಧಾದ್ಯೈಃ ಸಂಪ್ರಪೂಜಯೇತ್ ॥೧॥

ಘೃತೋದಕಾಭ್ಯಾಂ ಪಯಸಾ ಸ್ನಾಪಯಿತ್ವಾ ವಿಶಾಂಪತೇ ।
ಗೋಧೂಮೈಃ ಪಯಸಾ ಸಿಕ್ತೈಃ ಭಕ್ಷ್ಯೈಶ್ಚ ವಿವಿಧೈಸ್ತಥಾ ॥ ೨ ॥

ಯಸ್ತ್ವಸ್ಯಾಂ ವಿಧಿವನ್ನಾಗಾನ್ ಶುಚಿರ್ಭಕ್ತ್ಯಾ ಸಮನ್ವಿತಃ ।
ಪೂಜಯೇತ್ಕುರುಶಾರ್ದೂಲ ತಸ್ಯ ಶೇಷಾದಯೋ ನೃಪ ॥ ೩ ॥

---

## ಮೂವತ್ತೆಂಟನೆಯ ಅಧ್ಯಾಯವು

೧. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ, ಕುರುನಂದನನೇ ! ಮಾನವನು ಭಕ್ತಿಯುಕ್ತನೂ ಶುಚಿರ್ಭೂತನೂ ಆಗಿ, ಆಶ್ವಯುಜ ಶುಕ್ಲ ಪಂಚಮಿಯದಿನ ಹಿಂದೆ ಹೇಳಿದಂತೆ ನಾಗಾಕೃತಿಗಳನ್ನು ದರ್ಭೆಯಲ್ಲಿ ರಚಿಸಬೇಕು.

೨. ಆ ನಾಗಗಳನ್ನೇ ವಿಧಿಪ್ರಕಾರವಾಗಿ ಹಾಲು, ತುಪ್ಪ, ಶುದ್ಧೋದಕ ಇವುಗಳಿಂದ ಅಭಿಷೇಕಮಾಡಿ, ಗಂಧ ಪುಷ್ಪ ಮೊದಲಾದುವುಗಳನ್ನು ಸಮರ್ಪಿಸಿ, ಪಾಯಸ, ಕಡುಬು, ಮುಂತಾದ ನಾನಾ ಭಕ್ಷ್ಯಾದಿಗಳನ್ನು ನಿವೇದನಮಾಡಿ ಪೂಜಿಸಬೇಕು.

೩. ಅಯ್ಯಾ, ಕುರುವಂಶ ಶ್ರೇಷ್ಠನೇ ! ಕೇಳು, ಯಾವ ಮನುಷ್ಯನು ಈ ಪ್ರಕಾರ ಭಕ್ತಿಯಿಂದ ಪೂಜಿಸುವನೋ ಅವನಿಗೆ ಶೇಷ ಮುಂತಾದ ಸರ್ಪಗಳು ಸುಪ್ರೀತಗಳಾಗುವುವು.

ನಾಗಾಃ ಪ್ರೀತಾಃ ಭವಂತೀಹ ಶಾಂತಿಮಾಪ್ನೋತಿ ವಾ ವಿಭೋ ।
ಸ ಶಾಂತಿಲೋಕಮಾಸಾದ್ಯ ಮೋದತೇ ಶಾಶ್ವತೀಃ ಸಮಾಃ ॥ ೪ ॥

ಇತ್ಯೇಷ ಕಥಿತೋ ವೀರ ಪಂಚಮೀ ಕಲ್ಪ ಉತ್ತಮಃ ।
ಯತ್ರಾಯಮುಚ್ಯತೇ ಮಂತ್ರಃ ಸರ್ವಸರ್ಪನಿಷೇಧಕಃ ॥ ೫ ॥

ಓಂ ಕುರುಕಲ್ಲೇ ಫಟ್ ಸ್ವಾಹಾ

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಪಂಚಮೀ ಕಲ್ಪ
ಸಮಾಪ್ತಿ ಕಥನಂ ನಾಮ ಅಷ್ಟತ್ರಿಂಶೋಽಧ್ಯಾಯಃ.



೪. ಮತ್ತು ಆ ನಾಗಗಳು ಆತನಿಗೆ ಈ ಲೋಕದಲ್ಲಿ ಶಾಂತಿಯನ್ನುಂಟು ಮಾಡುತ್ತವೆ. ಕಾಲಕ್ರಮದಲ್ಲಿ ಆ ಮಾನವನು ಶಾಂತಿ ಲೋಕವನ್ನು ಸೇರಿ ಅಲ್ಲಿ ಮುಗಿಯದಷ್ಟು ದೀರ್ಘಕಾಲ ಸಂತೋಷಯುಕ್ತನಾಗಿರುತ್ತಾನೆ.

೫. ಅಯ್ಯಾ, ವೀರನೇ ! ಈ ರೀತಿಯಾಗಿ ಅತ್ಯುತ್ತಮವಾದುದೆನಿಸಿರುವ ಪಂಚಮೀ ಕಲ್ಪದ ಪ್ರಕಾರಗಳನ್ನು ಹೇಳಿದುದಾಯಿತು. ಸಮಸ್ತ ಸರ್ಪಗಳನ್ನೂ ಕಡಿಯದಂತೆ ತಡೆಗಟ್ಟುವುದಕ್ಕೆ " ಓಂ ಕುರುಕುಲ್ಲೇ ಫಟ್ ಸ್ವಾಹಾ" ಎಂಬ ಮಂತ್ರವನ್ನು ಉಚ್ಚರಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವ ಪಂಚಮೀ ಕಲ್ಪದ
ಸಮಾಪ್ತಿ ಕಥನವೆಂಬ ಮುವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನ ಚತ್ವಾರಿಂಶೋಽಧ್ಯಾಯಃ

॥ ಸುಮಂತುರುವಾಚ ॥

ಷಷ್ಠ್ಯಾಂ ಫಲಾಶನೋ ರಾಜನ್ ವಿಶೇಷಾತ್ಕಾರ್ತಿಕೇ ನೃಪ ।
ರಾಜ್ಯ ಚ್ಯುತೋ ವಿಶೇಷೇಣ ಸ್ವಂ ರಾಜ್ಯಂ ಲಭತೇಽಚಿರಾತ್ ॥ ೧ ॥

ಷಷ್ಠೀತಿಥಿರ್ಮಹಾರಾಜ ಸರ್ವದಾ ಸರ್ವಕಾಮದಾ ।
ಉಪೋಷ್ಯಾ ತು ಪ್ರಯತ್ನೇನ ಸರ್ವಕಾಲಂ ಜಯಾರ್ಥಿನಾ ॥ ೨ ॥

ಕಾರ್ತಿಕೇಯಸ್ಯ ದಯಿತಾ ಏಷಾ ಷಷ್ಠೀ ಮಹಾತಿಥಿಃ ।
ದೇವಸೇನಾಧಿಪತ್ಯಂ ಹಿ ಪ್ರಾಪ್ತಂ ತಸ್ಯಾಂ ಮಹಾತ್ಮನಾ ॥ ೩ ॥

---

### ಮೂವತ್ತೊಂಭತ್ತನೆಯ ಅಧ್ಯಾಯವು

೧. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ, ನರಪತಿಯೇ ! ಕೇಳು, ಕಾರ್ತೀಕ ಶುದ್ಧ ಷಷ್ಠಿಯಲ್ಲಿ ಹಣ್ಣುಗಳನ್ನು ಮಾತ್ರ ತಿನ್ನುವ ವ್ರತಾಚರಣೆ ಮಾಡಿದರೆ ರಾಜ್ಯಭ್ರಷ್ಟನಾದವನು ತಾನು ಕಳೆದುಕೊಂಡಿದ್ದ ರಾಜ್ಯವನ್ನು ಜಾಗ್ರತೆಯಾಗಿ ಪುನಃ ಸಂಪಾದಿಸಿಕೊಳ್ಳುತ್ತಾನೆ.

೨. ಅಯ್ಯಾ, ರಾಜನೇ ! ಕೇಳು, ಷಷ್ಠೀ ತಿಥಿಯು ಯಾವಾಗಲೂ ಎಲ್ಲಾ ಇಷ್ಟಾರ್ಥವನ್ನೂ ಕೊಡತಕ್ಕದ್ದಾಗಿದೆ. ಜಯವನ್ನು ಅಪೇಕ್ಷಿಸುವ ರಾಜನು ಎಲ್ಲಾ ಕಾಲದಲ್ಲಿಯೂ ಷಷ್ಠಿಯದಿನ ಪ್ರಯತ್ನ ಪೂರ್ವಕವಾಗಿ ಉಪವಾಸಮಾಡಲೇ ಬೇಕು.

೩. ಈ ಷಷ್ಠಿಯು ಮಹಾಷಷ್ಠಿಯೆನಿಸಿ ಷಣ್ಮುಖನಿಗೆ ಪ್ರೀತಿಯಾದ ತಿಥಿಯಾಗಿದೆ. ಆ ದಿವಸ ಮಹಾತ್ಮನಾದ ಷಣ್ಮುಖನು ದೇವತೆಗಳ ಸೇನಾಪತಿಯ ಪದವಿಯನ್ನು ಪಡೆದುಕೊಂಡನು.

ಅಸ್ಯಾಂ ಹಿ ಶ್ರೇಯಸಾ ಯುಕ್ತೋ ಯಸ್ಮಾತ್ ಸ್ಕಂದೋ ಭವಾಗ್ರಣೀ ।
ತಸ್ಮಾತ್ ಷಷ್ಠ್ಯಾಂ ನಕ್ತಭೋಜೀ ಪ್ರಾಪ್ನುಯಾದೀಪ್ಸಿತಂ ಸದಾ ॥ ೪ ॥

ದತ್ವಾರ್ಘ್ಯಂ ಕಾರ್ತಿಕೇಯಾಯ ಸ್ಥಿತ್ವಾ ವೈ ದಕ್ಷಿಣಾಮುಖಃ ।
ದಧ್ನಾ ಘೃತೋದಕೈಃ ಪುಷ್ಪೈಃ ಮಂತ್ರೇಣಾನೇನ ಸುವ್ರತ ॥ ೫ ॥

ಸಪ್ತರ್ಷಿದಾರಜಸ್ಕಂದ ಸ್ವಾಹಾಪತಿಸಮುದ್ಭವ ।
ರುದ್ರಾರ್ಯಮಾಗ್ನಿಜ ವಿಭೋ ಗಂಗಾಗರ್ಭ ನಮೋಽಸ್ತು ತೇ ।
ಪ್ರಿಯತೇ ದೇವಸೇನಾನೀಃ ಸಂಪಾದಯತಿ ಹೃದ್ಗತಂ ॥ ೬ ॥

ದತ್ವಾ ವಿಪ್ರಾಯ ಚಾತ್ಮಾನ್ನಂ ಯಚ್ಚಾನ್ಯದಪಿ ವಿದ್ಯತೇ ।
ಪಶ್ಚಾದ್ಭುಂಕ್ತೇ ತ್ವಸೌ ರಾತ್ರೌ ಭೂಮಿಂ ಕೃತ್ವಾ ತು ಭಾಜನಂ ॥ ೭ ॥

---

೪. ಶಿವನಕಡೆಯ ಮುಖಂಡನೆನಿಸಿಕೊಳ್ಳುವ ಷಣ್ಮುಖನು ಈ ಷಷ್ಠಿಯ ತಿಥಿಯಲ್ಲಿ ಸೇನಾಧಿಪತಿಯೆಂಬ ಶ್ರೇಯಸ್ಸನ್ನು ಪಡೆದನು. ಆ ಕಾರಣದಿಂದ ಈ ಷಷ್ಠೀ ವ್ರತ ಮಾಡತಕ್ಕವನು ಸ್ಕಂದಪ್ರೀತಿಗಾಗಿ ಹಗಲು ಉಪವಾಸವಿದ್ದು ರಾತ್ರಿ ಭೋಜನ ಮಾಡಿ ವ್ರತವನ್ನು ಪೂರೈಸಿದರೆ ಯಾವಾಗಲೂ ತನ್ನ ಇಷ್ಟಾರ್ಥವನ್ನು ಪಡೆದು ಕೊಳ್ಳುವನು.

೫. ವಿಧಿಯಪ್ರಕಾರ ಪೂಜೆಯಾದಮೇಲೆ ದಕ್ಷಿಣಮುಖವಾಗಿ ಕುಳಿತು ಕೈಯ್ಯಲ್ಲಿ ಹೂವನ್ನು ಇಟ್ಟುಕೊಂಡು ಮೊಸರು, ತುಪ್ಪ ಇವನ್ನು ಬೆರಸಿದ ಶುದ್ಧೋದಕವನ್ನು ಅದರಮೇಲೆ ಬಿಡಬೇಕು.

೬. ಹೀಗೆ ಬಿಡುವಾಗ "ಸಪ್ತರ್ಷಿದಾರಜಸ್ಕಂದ ಸ್ವಾಹಾ ಪತಿಸಮುದ್ಭವ ರುದ್ರಾರ್ಯಮಾಗ್ನಿಜ ವಿಭೋ ಗಂಗಾಗರ್ಭ ನಮೋಸ್ತುತೇ" ಎಂಬ ಈ ಮಂತ್ರವನ್ನು ಉಚ್ಚರಿಸುತ್ತಾ ಕಾರ್ತಿಕೇಯನಿಗೆ ಅರ್ಘ್ಯವನ್ನು ಕೊಡಬೇಕು. ಇದರಿಂದ ದೇವ ಸೇನಾಪತಿಯಾದ ಸ್ವಾಮಿಯು ಸಂತುಷ್ಟನಾಗಿ ಭಜಕರಿಗೆ ಮನಸ್ಸಿನ ಇಷ್ಟಾರ್ಥವನ್ನು ಕರುಣಿಸುವನು.

೭. ಅನಂತರ ಬ್ರಾಹ್ಮಣನಿಗೆ ತಾನು ಸಂಪಾದಿಸಿದ ಅನ್ನವನ್ನೂ ಮತ್ತೇನಾದರೂ ಇದ್ದರೆ ಅದನ್ನೂ ಭೋಜನಮಾಡಿಸಿ ಅನಂತರ ತಾನು ನೆಲವನ್ನು ಸಾರಿಸಿಕೊಂಡು ಅದರಮೇಲೆ ಅಡಿಗೆಯನ್ನು ಬಡಿಸಿಕೊಂಡು ಊಟಮಾಡಬೇಕು.

ಏವಂ ಷಷ್ಠ್ಯಾಂ ವ್ರತಂ ಸ್ನೇಹಾತ್ ಪ್ರೋಕ್ತಂ ಸ್ಕಂದೇನ ಯತ್ನತಃ ।
ತನ್ನಿಬೋಧ ಮಹಾರಾಜ ಪ್ರೋಚ್ಯಮಾನಂ ಮಯಾಖಿಲಂ ॥ ೮ ॥

ಷಷ್ಠ್ಯಾಂ ಯಸ್ತು ಫಲಾಹಾರೋ ನಕ್ತಾಹಾರೋ ಭವಿಷ್ಯತಿ ।
ಶುಕ್ಲಾ ಕೃಷ್ಣಾಸು ನಿಯತೋ ಬ್ರಹ್ಮಚಾರೀ ಸಮಾಹಿತಃ ॥ ೯ ॥

ತಸ್ಯ ಸಿದ್ಧಿಂ ಧೃತಿಂ ತುಷ್ಟಿಂ ರಾಜ್ಯಮಾಯುರ್ನಿರಾಮಯಂ ।
ಪಾರತ್ರಿಕಂ ಚೈಹಿಕಂ ಚ ದದ್ಯಾತ್ ಸ್ಕಂದೋ ನ ಸಂಶಯಃ ॥ ೧೦ ॥

ಯೋ ಹಿ ನಕ್ತೋಪವಾಸಃ ಸ್ಯಾತ್ ಸ ನಕ್ತೇನ ವ್ರತೀ ಭವೇತ್ ।
ಇಹಚಾಮುತ್ರ ಸೋತ್ಯಂತಂ ಲಭತೇ ಖ್ಯಾತಿಮುತ್ತಮಾಂ ।
ಸ್ವರ್ಗೇ ಚ ನಿಯತಂ ವಾಸಂ ಲಭತೇ ನಾತ್ರ ಸಂಶಯಃ ॥ ೧೧ ॥

---

೮. ಈ ಷಷ್ಠಿಯ ವ್ರತವನ್ನು ಸ್ಕಂದನು ಸ್ನೇಹಾತಿಶಯದಿಂದ ಎಷ್ಟೋ ಪ್ರಯತ್ನದ ಮೇಲೆ ಹೇಳಿದ್ದಾನೆ. ಅಯ್ಯಾ, ರಾಜನೇ ! ನಾನು ಅವೆಲ್ಲವನ್ನೂ ಹೇಳುವೆನು ತಿಳಿದುಕೋ.

೯=೧೦. ಯಾವನು ಪ್ರತಿತಿಂಗಳ ಶುಕ್ಲಪಕ್ಷ ಕೃಷ್ಣಪಕ್ಷಗಳ ಷಷ್ಠೀದಿನಗಳಲ್ಲಿ ನೇಮದಿಂದಕೂಡಿ ಜಿತೇಂದ್ರಿಯನಾಗಿ ಬ್ರಹ್ಮಚಿಂತಾಸಕ್ತನಾಗಿ ಏಕಾಗ್ರಚಿತ್ತನಾಗಿ ರುತ್ತಾ ಹಗಲು ಫಲಾಹಾರ (ಹಣ್ಣುಮಾತ್ರ ಸೇವಿಸಿ) ಮಾಡಿ, ರಾತ್ರಿ ಭೋಜನ ಮಾಡಿ ಈ ವ್ರತವನ್ನು ಪೂರೈಸುವನೋ ಅವನಿಗೆ ಷಣ್ಮುಖನು ಪ್ರಸನ್ನನಾಗಿ ಸಮಸ್ತ ಕಾರ್ಯಗಳೂ ಸಿದ್ಧಿಯಾಗುವಂತೆ ಮಾಡಿ ಧೈರ್ಯ, ಮನಸ್ಸಂತುಷ್ಟಿ, ರಾಜ್ಯ ಲಾಭ, ದೀರ್ಘಾಯುಸ್ಸು, ಆರೋಗ್ಯ, ಇಹಪರ ಸೌಖ್ಯ ಇವುಗಳನ್ನೂ ಕೊಡುವನು ಎಂಬುದರಲ್ಲಿ ಸಂಶಯವಿಲ್ಲ.

೧೧. ಯಾವನು ರಾತ್ರಿ ಉಪವಾಸ ಮಾಡುವನೋ ಅವನು ರಾತ್ರಿ ವ್ರತಿಯೆನಿಸುವನು. ಅವನು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಬಹಳ ಉತ್ತಮವಾದ ವಿಖ್ಯಾತಿಯನ್ನು ಪಡೆಯುವನು. ಸ್ವರ್ಗದಲ್ಲಿ ವಾಸಿಸುವ ಪುಣ್ಯವನ್ನು ಖಂಡಿತವಾಗಿಯೂ ಪಡೆಯುವನೆಂಬುದಕ್ಕೆ ಸಂಶಯವಿಲ್ಲ.

ಇಹಚಾಗತ್ಯ ಕಾಲಾಂತೇ ಯಥೋಕ್ತ ಫಲಭಾಗ್ಭವೇತ್ ।
ದೇವಾನಾಮಪಿ ವಂದ್ಯೋऽಸೌ ರಾಜ್ಞಾಂ ರಾಜಾ ಭವಿಷ್ಯತಿ ॥ ೧೨ ॥

ಯಶ್ಚಾಪಿ ಶೃಣುಯಾತ್ಕಲ್ಪಂ ಷಷ್ಠ್ಯಾಃ ಕುರುಕುಲೋದ್ವಹ ।
ತಸ್ಯ ಸಿದ್ಧಿಸ್ತಥಾ ತುಷ್ಟಿರ್ಧೃತಿಃ ಸ್ಯಾತ್ ಖ್ಯಾತಿಸಂಭವಾ ॥ ೧೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಷಷ್ಠೀ ಕಲ್ಪ ವರ್ಣನಂ ನಾಮ ಏಕೋನ ಚತ್ವಾರಿಂಶೋऽಧ್ಯಾಯಃ.



---

೧೨. ಆ ಪುಣ್ಯ ಮುಗಿದನಂತರ ಈ ಲೋಕಕ್ಕೆ ಬಂದು ಯಥೋಕ್ತವಾದ ಫಲವನ್ನು ಪಡೆಯುವನು. ದೇವತೆಗಳಿಂದ ಗೌರವಹೊಂದಿ ಬಂದ ಇವನು ಭೂಲೋಕದಲ್ಲಿ ರಾಜಾಧಿರಾಜನಾಗುವನು.

೧೩. ಅಯ್ಯಾ, ಕುರುವಂಶ ಶ್ರೇಷ್ಠನೇ ! ಯಾವನು ಷಷ್ಠಿಯ ಕಲ್ಪವನ್ನು ಶ್ರವಣಮಾಡುವನೋ, ಅವನಿಗೆ ಕಾರ್ಯಸಿದ್ಧಿಯೂ, ಧೈರ್ಯವೂ, ಮನಸ್ತುಷ್ಟಿಯೂ ಲೋಕವಿಖ್ಯಾತಿಯೂ, ಉಂಟಾಗುವುವು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಷಷ್ಠೀ ಕಲ್ಪವರ್ಣನೆ ಯೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತ್ವಾರಿಂಶೋಽಧ್ಯಾಯಃ

---

॥ ಶತಾನೀಕ ಉವಾಚ ॥

ಅಹೋ ವ್ರತಂ ಮಹಾಕಷ್ಟಂ ಸಂಶಯೋ ಹೃದಿ ವರ್ತತೇ ।
ಕಾರ್ತಿಕೇಯಸ್ಯ ಮಹಾತ್ಮ್ಯಂ ಶ್ರುತ್ವಾ ಜನ್ಮ ತಥಾ ದ್ವಿಜ ॥ ೧ ॥

ಅನೇಕಜನಿತಸ್ಯೇಹ ಕಾರ್ತಿಕೇಯಸ್ಯ ಸುವ್ರತ ।
ಮಾಹಾತ್ಮ್ಯಂ ಸುಮಹದ್ವಿಪ್ರ ಕಥಮೇತದ್ವಿಭಾವ್ಯತೇ ॥ ೨ ॥

ಜಾತಿಃ ಶ್ರೇಷ್ಠಾ ಭವೇದ್ವೀರ ಉತ ಕರ್ಮ ಭವೇದ್ವರಂ ।
ಸಂಶಯಸ್ತು ಮಹಾನತ್ರ ದೃಷ್ಟ್ವಾ ಮೇ ಕೃತ್ತಿಕಾಸುತಂ ॥ ೩ ॥

---

## ನಲವತ್ತನೆಯ ಅಧ್ಯಾಯ

೧. ಶತಾನೀಕನಾಜನು ಕೇಳುತ್ತಾನೆ—ಅಯ್ಯಾ, ಬ್ರಾಹ್ಮಣರೇ ! ಷಣ್ಮುಖನ ಮಹಾತ್ಮೆಯನ್ನೂ, ಜನ್ಮವೃತ್ತಾಂತವನ್ನೂ ಕೇಳಿದಮೇಲೆ ಮನಸ್ಸಿನಲ್ಲಿ ಒಂದು ದೊಡ್ಡ ಸಂಶಯವುಂಟಾಗುತ್ತದೆ. ಆಹಾ ! ವ್ರತಾನುಸರಣವು ಮಹಾಕಷ್ಟವಾದುದು.

೨. ಅಯ್ಯಾ, ಸುವ್ರತನೇ ! ರುದ್ರ, ಅಗ್ನಿ, ಗಂಗೆ ಮುಂತಾದ ಅನೇಕರಿಂದ ಹುಟ್ಟಿದ ಆ ಕಾರ್ತಿಕೇಯ (ಷಣ್ಮುಖ) ನ ಮಾಹಾತ್ಮೆಯು ಇಷ್ಟು ಶ್ರೇಷ್ಠವೆಂದು ನಾವು ಭಾವಿಸುವುದಕ್ಕಾಗುತ್ತದೆಯೇ ?

೩. ಸ್ವಾಮೀ ಸಮರ್ಥರೇ ! ಜಾತಿಯೇ ಶ್ರೇಷ್ಠವೋ ? ಅಥವಾ ಕರ್ಮವೇ ಶ್ರೇಷ್ಠವೋ ? ಈ ಕಾರ್ತಿಕೇಯನ ಉತ್ಪತ್ತಿ ಕ್ರಮವನ್ನು ಕೇಳಿದಮೇಲೆ ಈ ದೊಡ್ಡ ಸಂದೇಹವು ನನಗೆ ಉಂಟಾಗಿರುವುದು ಎಂದನು.

ಏತದ್ವದ ವಿನಿಶ್ಚಿತ್ಯ ನ ಯಥಾ ಸಂಶಯೋ ಭವೇತ್ ।
ಜನ್ಮನಃ ಕರ್ಮಣಶ್ಚೈವ ಯಜ್ಜ್ಯಾಯಸ್ತದ್ಬ್ರವೀತು ಮೇ ॥ ೪ ॥

॥ ಸುಮಂತುರುವಾಚ ॥

ಇಮಮರ್ಥಂ ಪುರಾ ಪೃಷ್ಟೋ ಬ್ರಹ್ಮಾ ಶಿಷ್ಯೈರ್ಮನೀಷಿಭಿಃ ।
ಯದುಕ್ತಂ ತೇನ ತೇಷಾಂ ಚ ತತ್ತೇ ವಚ್ಮಿ ನಿಬೋಧ ಮೇ ॥ ೫ ॥

ಸುರಜ್ಯೇಷ್ಠಂ ಸುಖಾಸೀನಮಭಿಗಮ್ಯ ಮಹರ್ಷಯಃ ।
ಪ್ರಣಮ್ಯ ಚ ಮಹಾಬಾಹೋ ವಿಶ್ವಾಮಿತ್ರಸ್ಯ ವಿಪ್ರತಾಂ ॥ ೬ ॥

ದೃಷ್ಟ್ವಾ ವಿಸ್ಮಯಮಾಗತ್ಯ ಕೌತೂಹಲಸಮನ್ವಿತಾಃ ।
ಭಕ್ತಿಂ ಶ್ರದ್ಧಾಂ ಪುರೋಧಾಯ ಪ್ರಣಮ್ಯಾನತಕಂಧರಾಃ ॥ ೭ ॥

॥ ಋಷಯಃ ಊಚುಃ ॥

ಭೋ ಬ್ರಹ್ಮನ್ ಆದಿಕಲ್ಪೇ ಹಿ ಬ್ರಾಹ್ಮಣ್ಯಂ ಬ್ರೂಹಿ ಕಿಂ ಭವೇತ್ ।
ಜಾತ್ಯಧ್ಯಯನದೇಹಾತ್ಮಸಂಸ್ಕಾರಾಚಾರಕರ್ಮಣಾಂ ॥ ೮ ॥

---

೪. ಜನ್ಮ, ಕರ್ಮ ಇವುಗಳಲ್ಲಿ ಯಾವುದು ಶ್ರೇಷ್ಠವೆಂಬುದನ್ನು ನಿಶ್ಚಯಿಸಿ ಮತ್ತೆ ನನಗೆ ಸಂದೇಹ ಬಾರದಂತೆ ವಿವರವಾಗಿ ಹೇಳು ಎಂದನು.

೫-೬. ಸುಮಂತು ಮುನಿವರ್ಯರು ಹೇಳುತ್ತಾರೆ—"ಈ ವಿಷಯವನ್ನು ಕುರಿತು ಬುದ್ಧಿವಂತರಾದ ಬ್ರಹ್ಮನ ಶಿಷ್ಯರು ಪೂರ್ವಕಾಲದಲ್ಲಿ ಬ್ರಹ್ಮನನ್ನು ಪ್ರಶ್ನಿಸಿದರು. ಬ್ರಹ್ಮನು ಆ ಶಿಷ್ಯರಿಗೆ ಏನು ಹೇಳಿದ್ದನೋ ಅದನ್ನೇ ನಾನೂ ನಿನಗೆ ಹೇಳುತ್ತೇನೆ ಕೇಳು" ಎಂದು ಹೇಳತೊಡಗಿದನು.

೭. ಒಂದಾನೊಂದು ಕಾಲದಲ್ಲಿ ಮಹರ್ಷಿಗಳು ಸುಖವಾಗಿ ಕುಳಿತಿದ್ದ ಬ್ರಹ್ಮನ ಸಮೀಪಕ್ಕೆ ಹೋಗಿ ನಮಸ್ಕರಿಸಿ ವಿಶ್ವಾಮಿತ್ರನಿಗೆ ಬ್ರಾಹ್ಮಣ್ಯ ಬಂದುದನ್ನು ಆಲೋಚಿಸಿ ಆಶ್ಚರ್ಯಪಟ್ಟು, ಕುತೂಹಲಿಗಳೂ ಭಕ್ತಿ ಶ್ರದ್ಧಾಯುಕ್ತರೂ ಆಗಿ ನಮಸ್ಕರಿಸಿ ವಿನಯದಿಂದ ತಲೆಬಾಗಿಸಿ ಹೇಳತೊಡಗಿದರು.

೮. ಋಷಿಗಳು ಕೇಳುತ್ತಾರೆ—ಓ ಬ್ರಹ್ಮನೇ! ಸೃಷ್ಟಿಯ (ಆದಿಯಲ್ಲಿ) ಆದಿಕಲ್ಪದಲ್ಲಿ ಬ್ರಾಹ್ಮಣ್ಯವೆಂಬುದು ಆವುದು? ಜನ್ಮ ಅಧ್ಯಯನ, ದೇಹ, ಆತ್ಮ, ಸಂಸ್ಕಾರ, ಸದಾಚಾರ, ಕರ್ಮಾನುಷ್ಠಾನ ಇವುಗಳಲ್ಲಿ ಯಾವುದು ಬ್ರಾಹ್ಮಣ್ಯಕ್ಕೆ ಕಾರಣ? ಎಂದರು.

ಬಾಹ್ಯಾಭ್ಯಂತರಸಾಮಾನ್ಯವಿಶೇಷಾ ಯದಿ ಕೃತ್ರಿಮಾಃ ।
ಮನೋವಾಕ್ಕರ್ಮಶಾರೀರಜಾತಿದ್ರವ್ಯಗುಣಾತ್ಮಕಾಃ ॥ ೯ ॥

ಸಂತ್ಯಕ್ತ್ವಾ ಪ್ರಸಿದ್ಧಾ ಯೇ ಜಾತಿಭೇದವಿಧಾಯಿನಃ ।
ವಸ್ತುಭೂತಾಃ ಪರೋಕ್ಷೈರ್ವಾ ಪ್ರಮಾಣೈರ್ನ ವಿನಿಶ್ಚಿತಾಃ ॥ ೧೦ ॥

ಅವ್ಯಕ್ತಾಗಮ ಸಿದ್ಧಶ್ಚೇತ್ ಜಾತಿಭೇದವಿಧಿರ್ನೃಣಾಂ ।
ವಿಕಲ್ಪೋಽಯಂ ನ ಪುಷ್ಣಾತಿ ಭವತಃ ಶೇಮುಷೀಬಲಂ ॥ ೧೧ ॥

॥ ಬ್ರಹ್ಮೋವಾಚ ॥

ಏವಮೇತನ್ನ ಸಂದೇಹೋ ಯಥಾ ಯೂಯಂ ವದಂತಿಹ ।
ಶೃಣುಧ್ವಂ ಯೋಗಿನೋ ವಾಕ್ಯಂ ಸತರ್ಕಂ ಶಿಷ್ಯಶ್ರೇಯಸೇ ॥ ೧೨ ॥

॥ ಯೋಗೇಶ್ವರ ಉವಾಚ ॥

ಪ್ರಮಾಣೇ ಹಿ ಪ್ರಸಿದ್ಧೇ ತು ಭಿನ್ನಾರ್ಥೇ ವಿಷಯೇ ಯತಃ ।
ಸ್ಪಷ್ಟಯೋಗ್ಯಾರ್ಥವಿಷಯಂ ಪ್ರತ್ಯಕ್ಷಂ ತಾವದೀಕ್ಷತೇ ॥ ೧೩ ॥

---

೯-೧೧. ಜಾತಿಭೇದವಿಧಾಯಕವೆಂದು ಲೋಕದಲ್ಲಿ ಪ್ರಸಿದ್ಧವಾಗಿರುವ ವಿಭೂತಿಧಾರಣ ಮುಂತಾದ ಬಾಹ್ಯಲಕ್ಷಣ, ಭೂತದಯಾ ಮುಂತಾದ ಆಭ್ಯಂತರ ಲಕ್ಷಣ, ಮತ್ತು ಎಲ್ಲಾ ವರ್ಣದವರಿಗೂ ಸಾಮಾನ್ಯಧರ್ಮ, ಮತ್ತು ತತ್ತದ್ವರ್ಣದವರ ವಿಶೇಷ ಧರ್ಮವೆಂಬ ಪ್ರತ್ಯಕ್ಷವಾದ ಜಾತಿದ್ರವ್ಯ ಗುಣಾತ್ಮಕಗಳಾದ ಸಹಜವಲ್ಲದ ಸಾಮಾನ್ಯ ವಿಶೇಷಧರ್ಮಗಳು ಮತ್ತು ಕಾಯಿಕ, ವಾಚಿಕ, ಮಾನಸಿಕ ಕರ್ಮಗಳು ಇವುಗಳಿಂದಲೂ ಮತ್ತು ಅನುಮಾನ ಪ್ರತ್ಯಕ್ಷಾದಿ ಪ್ರಮಾಣಗಳಿಂದಲೂ, ಜಾತಿವಿಶೇಷವು ನಿರ್ಣಯವಾಗದಿರುವಾಗ ಕೇವಲ ಆಗಮಮಾತ್ರದಿಂದಲೇ ಮನುಷ್ಯನಿಗೆ ಜಾತಿ ನಿರ್ಣಯವು ಸಿದ್ಧಿಸಬೇಕೆಂಬ ಪಕ್ಷದಲ್ಲಿ ನಮ್ಮ ಈ ಸಂಶಯವನ್ನು ನಿನ್ನ ಬುದ್ಧಿಬಲದಿಂದ ತೀರ್ಮಾನಿಸುವ ಹಾಗಿಲ್ಲ

೧೨. ಆಗ ಬ್ರಹ್ಮನು "ನೀನು ಹೇಳಿದಹಾಗೆಯೇ ಸರಿ, ಈ ವಿಚಾರದಲ್ಲಿ ಸಂಶಯವಿಲ್ಲ. ಶಿಷ್ಯರ ಶ್ರೇಯಸ್ಸಿಗಾಗಿ ಯೋಗೇಶ್ವರನು ಹೇಳಿರುವ ತರ್ಕಶಾಸ್ತ್ರಾನುಸಾರವಾದ ವಾಕ್ಯಾರ್ಥವನ್ನು ಕೇಳು" ಎಂದನು.

೧೩-೧೪ ಯೋಗೇಶ್ವರರು ಹೇಳಿದರು—ಒಂದೇ ವಿಷಯವನ್ನು ಅನೇಕ ಪ್ರಮಾಣಗಳು ಅನೇಕತರಹವಾಗಿ ಬೋಧಿಸುವ ಸಂದರ್ಭದಲ್ಲಿ ಪ್ರತ್ಯಕ್ಷಪ್ರಮಾಣವು

**ಸಾಮಾನ್ಯಾತೀಂದ್ರಿಯಗ್ರಾಹೀ ಸಿದ್ಧಾಂತೋಽಭ್ಯುಪಗಮ್ಯತೇ ।**
**ಸ ಏವ ಭಗವಾನೇಕಂ ಪ್ರಮಾಣಮಿತಿ ಚೇನ್ನತತ್ ॥ ೧೪ ॥**

**ಯಸ್ಮಾದ್ದ್ವಿವಿಧಮೇತತ್ತೇ ಸಂಕಟಂ ಭದ್ರ ವರ್ತತೇ ।**
**ವೇದಸ್ಯ ಪೌರುಷೇಯತ್ವಂ ನಿತ್ಯಜಾತಿಸಮರ್ಥಕಂ ॥ ೧೫ ॥**

**ಕಾರ್ಯಾ ವಿಶೇಷಾ ವೇದೋಕ್ತಾ ನ ಯುಕ್ತಮುಕ್ಕೃತಂ ವಚಃ ।**
**ತಾಲ್ವಾದಿ ಕರಣಾನಾಂ ಚ ವ್ಯಾಪಾರಾನಂತರಂ ಶ್ರುತೇಃ ॥ ೧೬ ॥**

**ವ್ಯಾಪಾರಾತ್ಪರತಸ್ತಸ್ಯ ಪ್ರಾಗಭಾವವಿಶೇಷತಃ ।**
**ತದ್ಭಾವಾನುವಿಧಾಯಿತ್ವಮನ್ವಯವ್ಯತಿರೇಕತಃ ॥ ೧೭ ॥**

**ತಸ್ಮಾದ್ಧೂಮಾಗ್ನಿವದ್ವಾರ್ಥ ಫಲಭಾವೋಽವತಿಷ್ಠತೇ ।**
**ನ ಚ ವ್ಯಾಪಾರವಚಸೋಃ ಅನ್ಯಥಾನುಪಪತ್ತಿತಃ ॥ ೧೮ ॥**

---

ಆ ವಸ್ತುವಿನ ಸ್ಪಷ್ಟವಾದ ಯೋಗ್ಯರೂಪವನ್ನು ಮಾತ್ರ ಗ್ರಹಿಸುವುದು. ಆ ವಸ್ತು ವಿಷಯದಲ್ಲಿ ಅತೀಂದ್ರಿಯವಾದ ಅರ್ಥವನ್ನು ತೋರಿಸುವ ಪ್ರಮಾಣಬೋಧಕವಾದ ಅರ್ಥವೇ ಸಿದ್ಧಾಂತವಾಗಿ ಗ್ರಹಿಸಲ್ಪಡುವುದು.

೧೫. ಪವಿತ್ರವಾದುದೂ, ಅತೀಂದ್ರಿಯಾರ್ಥಗ್ರಾಹಿಯಾದುದೂ ಆದ ಆ ಆಗಮವೊಂದೇ ಪ್ರಮಾಣವೆಂದು ಹೇಳೋಣವೆಂದರೆ ಅದೂ ಸರಿಯಲ್ಲ. ಅಯ್ಯಾ, ಭದ್ರಮುಖನೆ! ಈರೀತಿ ಒಪ್ಪುವುದಾದರೆ ಅನೇಕ ವಿಷಯದಲ್ಲಿ ಬಾಧಕಗಳುಂಟಾಗುವುವು. ಹೇಗೆಂದರೆ, ವೇದಕ್ಕೆ ಪೌರುಷೇಯತ್ವವನ್ನೂ ಜಾತಿಯು ನಿತ್ಯವೆಂಬುದನ್ನೂ ನಿರ್ಣಯಿಸಲು ಸಾಧಕವಾಗುವುದು.

೧೬–೧೯. ವೇದೋಕ್ತವಾದ ವಿಶೇಷ ಕಾರ್ಯಗಳನ್ನು ನಡೆಸಲೇಬೇಕು. ವಚನರೂಪವಾದ ವೇದವು ಯಾರಿಂದಲೂ ಹುಟ್ಟದೆ ಅಪೌರುಷೇಯವೆಂದು ಹೇಳಿದ ಮತವು ಸರಿಯಲ್ಲ. ಏಕೆಂದರೆ, ಕಂಠ, ತಾಲು ಮುಂತಾದ ಅವಯವಗಳ ವ್ಯಾಪಾರಾನಂತರದಲ್ಲೇ ಯಾವ ವಚನವಾದರೂ ಶ್ರುತವಾಗಬೇಕು. ಆ ತಾಲ್ವಾದಿ ಅವಯವಗಳ ವ್ಯಾಪಾರ ಉಂಟಾಗುವುದಕ್ಕಿಂತ ಮೊದಲು ವಚನದ ಪ್ರಾಗಭಾವವಿರುವುದು. ಈ ಅನ್ವಯ ವ್ಯತಿರೇಕದಿಂದ (ಇದ್ದಿದ್ದರೆ ಅದೂ ಇರುವುದು, ಇದಿಲ್ಲದಿದ್ದರೆ ಅದೂ ಇರುವುದಿಲ್ಲ. ಎಂಬ ರೀತಿಯಿಂದ) ತಾಲ್ವಾದಿಕರಣ ವ್ಯಾಪಾರದಿಂದ ವಚನವು ಉತ್ಪತ್ತಿ

ಪುರುಷಾನುಗತಾ ಜಾತಿಃ ಬ್ರಾಹ್ಮಣತ್ವಾದಿಕಾಸ್ತಿ ಚೇತ್ ।
ದ್ವಿವರ್ಣಜಾತಿಭೇದೇನ ಪ್ರತ್ಯಕ್ಷಾರ್ಥೋಽಪಲಕ್ಷಣಾತ್ ॥ ೧೯ ॥

ಗೋವರ್ಗಮಧ್ಯಂ ಚ ಗತೋ ಯಥಾಶ್ವೋ ।
ನಿರ್ಧಾರ್ಯತೇ ಜ್ಞೈಃ ಸುವಿಚಕ್ಷಣತ್ವಾತ್ ।
ಮನುಷ್ಯಭಾವಾದವಿಶಿಷ್ಯಮಾಣಃ ।
ತದ್ವದ್ವಿಜಃ ಶೂದ್ರಗಣಾನ್ನ ಭಿನ್ನಃ ॥ ೨೦ ॥

ಮನುಷ್ಯಜಾತೇರ್ನ ಪರೋ ವಿಶೇಷೋ ।
ಯಃ ಕಲ್ಪ್ಯತೇ ಸರ್ವನರಾನುಯಾಯಿ ।

---

ಯಾಯಿತೆಂದು ಸಿದ್ಧಿಸುವುದು. ನಿದರ್ಶನವಾಗಿ ಧೂಮವು ಅಗ್ನಿಯಕಾರ್ಯವಾದ್ದರಿಂದ ಹೊಗೆಯನ್ನು ನೋಡಿ ಅದಕ್ಕೆ ಕಾರಣವಾದ ಬೆಂಕಿಯಿದೆಯೆಂದು ಹೇಗೆ ಊಹಿಸುತ್ತೇವೆಯೋ ಹಾಗೆ, ವೇದವೆಂಬ ವಚನರೂಪವಾದ ಶ್ರುತಿಯಿರುವುದರಿಂದ ತಾಲ್ವಾದಿಕರಣಗಳ ವ್ಯಾಪಾರಗಳು ಇದ್ದೇ ಇವೆಯೆಂದು ಊಹಿಸಬೇಕಾಗುವುದು. ಆದುದರಿಂದ ಅವುಗಳಿಗೆ ಪರಸ್ಪರ ಸಾಧ್ಯಸಾಧನಭಾವವು ಸ್ಥಿರವಾಗುವುದು.

ತಾಲ್ವಾದಿ ವ್ಯಾಪಾರ ಮತ್ತು ವಚನ ಇವುಗಳು ಪರಸ್ಪರ ಕಾರ್ಯಕಾರಣಭಾವಯುಕ್ತಗಳಾದುದರಿಂದ ವೇದವಚನಕ್ಕೆ ಕಾರಣವಾದ ತಾಲ್ವಾದಿ ವ್ಯಾಪಾರಗಳು ಬ್ರಾಹ್ಮಣರೂಪ ಪುರುಷ ಸಂಬಂಧಿಯಾಗಿರಬೇಕಾದ್ದಾಯಿತು. ಆದ್ದರಿಂದ ವೇದಕ್ಕಿಂತಲೂ ಮೊದಲು ಪುರುಷರಿರಬೇಕು. ಅವರಲ್ಲಿ ಅನುಗತವಾದ ಬ್ರಾಹ್ಮಣತ್ವಾದಿ ಜಾತಿಯನ್ನೂ ಒಪ್ಪಲೇಬೇಕು ಎಂದೂ ಈ ಯುಕ್ತಿಮಾತ್ರದಿಂದ ಬ್ರಾಹ್ಮಣತ್ವಾದಿ ಜಾತಿ ಸಿದ್ಧಿಸುವುದೆಂದೂ ಹೇಳುವುದು ಸರಿಯಲ್ಲ, ಏಕೆಂದರೆ ಎರಡು ವಿಜಾತೀಯ ವಸ್ತುಗಳು ಒಂದುಕಡೆ ಸೇರಿದಾಗ ಪ್ರತ್ಯಕ್ಷದಿಂದಲೇ ಅವುಗಳ ಜಾತಿಭೇದವನ್ನು ಕಂಡುಹಿಡಿಯಬಹುದು

೨೦. ಹೇಗೆಂದರೆ ದನಗಳ ಮಂದೆಯಲ್ಲಿ ಒಂದು ಕುದುರೆಯು ಸೇರಿಕೊಂಡಿದ್ದರೆ ವಿದ್ವಾಂಸರು ತಮ್ಮ ಬುದ್ಧಿವಂತಿಕೆಯಿಂದ ಅದನ್ನು ಪ್ರತ್ಯೇಕಮಾಡಿ ಅಶ್ವವೆಂದೇ ಭಾವಿಸುತ್ತಾರೆ. ಆದರೆ ಮನುಷ್ಯರ ರೂಪ, ಧರ್ಮ, ಇವುಗಳಲ್ಲಿ ಸಮಾನನಾದ ಬ್ರಾಹ್ಮಣನು ಶೂದ್ರರ ಮಧ್ಯದಲ್ಲಿ ಸೇರಿದ್ದರೆ ಬ್ರಾಹ್ಮಣರೂಪ ಜಾತಿಯಿಂದ ಬ್ರಾಹ್ಮಣನನ್ನು ಶೂದ್ರ ಪಂಗಡದಿಂದ ಪ್ರತ್ಯೇಕಿಸಿ ಗ್ರಹಿಸಲು ಆಗುವುದಿಲ್ಲ.

ಸಂಸ್ಕಾರಯುಕ್ತಾ ಹಿ ಕ್ರಿಯಾವಿಶಿಷ್ಟಾ
ದ್ವಿಜನ್ಮನಾಂ ಶೂದ್ರವಿವೇಕಹೇತುಃ ॥ ೨೧ ॥

ಜೀವೋಽಪಿ ಬ್ರಾಹ್ಮಣಃ ಪ್ರೋಕ್ತೋ ಯೈರತತ್ವಜ್ಞ ಮಾನವೈಃ ।
ಪ್ರಭ್ರಷ್ಟಬ್ರಾಹ್ಮಣತ್ವಾತ್ತೇ ಜಾಯಂತೇ ವಿ ಪ್ರಸಂಗತಃ ॥ ೨೨ ॥

ಜರಾಜನ್ಮಾಂತರಕ್ಲೇಶದುಷ್ಟಗ್ರಾಹಕುಲಾಕುಲಂ ।
ನರತಿರ್ಯಗಸಚ್ಛೂದ್ರಯೋನಿ ದುಃಖೋರ್ಮಿ ಸಂಕಟಂ । ॥ ೨೩ ॥

---

೨೧. ರೂಪ, ಧರ್ಮ ಇವುಗಳಲ್ಲಿ ಶೂದ್ರಸಮಾನ ಮನುಷ್ಯನಾದ ಬ್ರಾಹ್ಮಣನು ಶೂದ್ರರ ಸಮುದಾಯದಲ್ಲಿ ಸೇರಿದ್ದರೆ ಬ್ರಾಹ್ಮಣ್ಯರೂಪ ಧರ್ಮದಿಂದ ಬ್ರಾಹ್ಮಣನನ್ನು ಶೂದ್ರಪಂಗಡದಿಂದ ಪ್ರತ್ಯೇಕಿಸಿ ಗ್ರಹಿಸಲು ಆಗುವುದಿಲ್ಲ. ಸರ್ವಮನುಷ್ಯರಲ್ಲೂ ಅನುಗತವಾದ ಮನುಷ್ಯತ್ವಜಾತಿಗೆ ವ್ಯಂಜಕವಾಗಿ ವಿಲಕ್ಷಣವಾದ ಧರ್ಮವು ಪ್ರತಿ ಮನುಷ್ಯನಲ್ಲಿಯೂ ಬೇರೆ ಬೇರೆ ಇರುವುದಿಲ್ಲ. ಮನುಷ್ಯತ್ವವು ಸರ್ವವರ್ಣಸಾಧಾರಣವು. ಆದುದರಿಂದ ಬ್ರಾಹ್ಮಣರನ್ನು ಶೂದ್ರನಿಂದ ಪೃಥಕ್ಕಾಗಿ ತಿಳಿಯುವುದಕ್ಕಾಗುವುದಿಲ್ಲ. ಹಾಗೆ ತಿಳಿಯುವುದಕ್ಕೆ ಸಂಸ್ಕಾರ ಸಹಿತವಾದ ಅಸಾಧಾರಣವಾದ ಶ್ರೌತ ಕರ್ಮಗಳೇ ಮುಖ್ಯಕಾರಣಗಳು.

೨೨-೨೫. ಅಜ್ಞಾನಿಗಳು ಜೀವನನ್ನು ಬ್ರಾಹ್ಮಣನೆಂದು ವ್ಯವಹರಿಸುವರು. ಆದು ಸರಿಯಲ್ಲ, ಏಕೆಂದರೆ ಒಬ್ಬ ಜೀವನು ಮೊದಲು ಬ್ರಾಹ್ಮಣನಾಗಿದ್ದು ಅನೇಕ ನಿಷಿದ್ಧಕರ್ಮವನ್ನು ಆಚರಿಸಿ ಅದರಿಂದುಂಟಾಗುವ ಪಾಪವಶದಿಂದ ಬ್ರಾಹ್ಮಣ ದೇಹವನ್ನು ತ್ಯಜಿಸಿದಮೇಲೆ ಜರೆ, ಜನ್ಮಾಂತರಗಳೆಂಬ ದುಷ್ಟಮೊಸಳೆಗಳುಳ್ಳದ್ದೂ, ಮನುಷ್ಯ ತಿರ್ಯಗ್ಜಂತುಸದೃಶನಾದ ಮನುಷ್ಯ, ಭ್ರಷ್ಟಶೂದ್ರ ಈ ಜಾತಿಗಳಲ್ಲಿ ಹುಟ್ಟುವುದರಿಂದ ಉಂಟಾಗುವ ಸಂಕಟವೆಂಬ ಅಲೆಗಳುಳ್ಳದ್ದೂ, ದಾರಿದ್ರ್ಯ, ರೋಗಶೋಕ ಪೀಡಾಯುತವಾದ ಜೀವನವೆಂಬ ಸುಳಿಗಳುಳ್ಳದ್ದೂ ಅಸ್ಪೃಶ್ಯವಾದ ನಾಯಿ, ಹಂದಿ, ಚಂಡಾಲ, ಹುಳುಗಳು ಎಂಬ ದೊಡ್ಡ ಆಮೆಗಳುಳ್ಳದ್ದೂ, ಆದ ಮಹಾ ಘೋರವಾದ ಸಂಸಾರಸಾಗರದಲ್ಲಿ ಅನೇಕ ಪಾಪಕರ್ಮಭಾರವುಳ್ಳವನಾಗಿ ಮುಳುಗುತ್ತಾ ತೇಲುತ್ತಾ ಇರುವ, ಒಬ್ಬ ಜೀವನೇ ಈರೀತಿ ಬಹುಜನ್ಮಗಳನ್ನು ಹೊಂದುವುದರಿಂದ ಜೀವನು ಬ್ರಾಹ್ಮಣನಾಗುವುದು ಹೇಗೆ ? ಒಬ್ಬ ಜೀವನು ಪಾಪವಶದಿಂದ ಅನೇಕ ಜನ್ಮಗಳನ್ನು ಹೊಂದುವನು ಎಂಬುದಕ್ಕೆ " ಶ್ವ ಸೂಕರ ಖರೋಷ್ಟ್ರಾಣಾಂಗೋಜಾತಿ ಮೃಗಪಕ್ಷಿಣಾಂ

ದೌಃಸ್ಥಿತ್ಯ ರೋಗಶೋಕಾರ್ತಿಜನಾವರ್ತ ಸಮನ್ವಿತಂ ।
ಶ್ವಾನಶೂಕರಚಾಂಡಾಲಕೃಮಿ ಕೂರ್ಮಾದಿಕಾ ಯುತಂ ॥ ೨೪ ॥

ಸಂಸಾರಸಾಗರಂ ಘೋರಂ ಮಗ್ನಃ ಖಲು ಪರಿಪ್ಲವನ್ ।
ಭೂರಿಪಾಪಭರಾಕ್ರಾಂತಃ ಸ ಜೀವೋ ಬ್ರಾಹ್ಮಣಃಕಥಂ ॥ ೨೫ ॥

॥ ಬ್ರಹ್ಮೋವಾಚ ॥

ಸಪ್ತವ್ಯಾಧಕಥಾ ವಿಪ್ರಾ ಮನುನಾ ಪರಿಕೀರ್ತಿತಾ ।
ತಾಂ ನಿಶಮ್ಯ ಯದುಶ್ರೇಷ್ಠ ನಿತ್ಯಂ ಜಾತಿಪದಂ ತ್ಯಜೇತ್ ॥ ೨೬ ॥

ಸಪ್ತವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ ।
ಚಕ್ರವಾಕಾಃ ಶರದ್ವೀಪೇ ಹಂಸಾಃ ಸರಸಿ ಮಾನಸೇ ॥ ೨೭ ॥

ತೇಽಪಿ ಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ ।
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ಕಿಮವಸೀದಥ ॥ ೨೮ ॥

---

ಚಂಡಾಲ ಪುಲ್ಕಸಾನಾಂ ಚ ಬ್ರಹ್ಮಹಾ ಯೋನಿ ಮೃಚ್ಛತಿ " ಎಂಬ ಮನುಸ್ಮೃತಿಯ ಈ ಶ್ಲೋಕವೂ ಛಾಂದೋಗ್ಯದ " ಕಪೂಯಚರಣಾ ಕಪೂಯ ಯೋನಿಮಾಪದ್ಯಂತೇ ಶ್ವಯೋನಿಂ ವಾ ಸೂಕರಯೋನಿಂ ವಾ, ಚಂಡಾಲಯೋನಿಂವಾ " ಎಂಬ ಶ್ರುತಿ ವಾಕ್ಯಗಳೂ ಆಧಾರವಾಗಿವೆ.

೨೬. ಬ್ರಹ್ಮನು ಹೇಳುತ್ತಾನೆ—ಅಯ್ಯಾ, ಯದುಶ್ರೇಷ್ಠನೇ, ಮನುವು ನಿರೂಪಣಮಾಡಿರುವ ಸಪ್ತವ್ಯಾಧರ ಕಥೆಯೊಂದುಂಟು ಅದನ್ನು ಕೇಳಿದರೆ ಜಾತಿಯೆಂಬ ಪದವನ್ನೇ ಶಾಶ್ವತವಾಗಿ ತ್ಯಾಜ್ಯಮಾಡಬೇಕಾಗುವುದು.

೨೭-೨೮. ಬ್ರಾಹ್ಮಣರೆನಿಸಿದ ಕೆಲವುಮಂದಿ ಶಿಷ್ಯರು ತಾವು ಗುರುವಿನ ಗೋವುಗಳ ವಿಚಾರದಲ್ಲಿ ಮಾಡಿದ ದ್ರೋಹವಶದಿಂದ ಬ್ರಹ್ಮನಿಂದ ಅಜ್ಞಪ್ತರಾಗಿ ದಶಾರ್ಣವೆಂಬ ದೇಶದಲ್ಲಿ ಏಳುಮಂದಿ ವ್ಯಾಧರಾಗಿ ಜನಿಸಿದರು. ಅದರ ಮುಂದಿನ ಜನ್ಮದಲ್ಲಿ ಕಾಲಂಜರವೆಂಬ ಪರ್ವತದಲ್ಲಿ ಮೃಗಗಳಾಗಿ ಜನ್ಮವೆತ್ತಬೇಕಾಯಿತು. ಆಮೇಲೆ ಜೊಂಡು ಬೆಳೆದಿರುವ ಒಂದು ದ್ವೀಪದಲ್ಲಿ ಚಕ್ರವಾಕ ಪಕ್ಷಿಗಳಾಗಿ ಜನಿಸಿದರು. ಅನಂತರ ಮಾನಸ ಸರೋವರದಲ್ಲಿ ಹಂಸಗಳಾದರು. ಹೀಗೆ ಹಲವು ಜನ್ಮಗಳಾದಮೇಲೆ ಅವರೇ ಮತ್ತೆ ಕುರುಕ್ಷೇತ್ರದಲ್ಲಿ ವೇದಪಾರಂಗತರಾದ ಬ್ರಾಹ್ಮಣರಾಗಿ

**ತಸ್ಮಾನ್ನ ಜೀವೇ ಬ್ರಾಹ್ಮಣ್ಯಂ ಪಶ್ಯಾಮೋ ಹಿ ಕಥಂಚನ　　॥ ೨೯ ॥**

**ಶಸ್ತ್ರಾದಿ ಮದ್ಭಾರ್ಗವ ಜಾತಿಯುಕ್ತ್ರೋ ।**
**ಗಜಾಶ್ವಗೋಜೋಷ್ಟ್ರಖರಾದಿಕಾನಾಂ ।**
**ಶಕ್ತ್ಯಾ ಕೃತೋಹ್ಯಂಗಜವರ್ಣಧರ್ಮೈಃ ।**
**ಭೇದಃ ಸ್ಫುಟಂ ಲಕ್ಷಣತೋತ್ರ ಯದ್ವತ್　　॥ ೩೦ ॥**

**ತದುತ್ತರಾನ್ನೈವ ವಿಕರ್ತನೀಯಾ ।**
**ಬ್ರಾಹ್ಮಣ್ಯಜಾತಿರ್ನೃಷು ನಾಸ್ತಿಕಾಚಿತ್ ।**
**ನಿತ್ಯಾಕೃತಿರ್ನಾನುಪಭೇದರೂಪಾ ।**
**ಯಥಾ ಹಿ ಭೇದಃ ಪರಮೋತ್ರ ಸಿದ್ಧ್ಯೇತ್ ।**

---

ಜನಿಸಿದರು. ಈರೀತಿ ಅವರು ಬಹು ಜನ್ಮಮಾರ್ಗದಲ್ಲಿ ತೊಳಲಿ ಬಳಲಿ ಮತ್ತೆ ಬ್ರಾಹ್ಮಣರಾದರು. ನೀವು ಏಕೆ ಚಿಂತಿಪಡುವಿರಿ ತಕ್ಕಪ್ರಯತ್ನಮಾಡಿದರೆ ಉತ್ತಮ ಸ್ಥಿತಿ ಬರುವುದು. ಈ ಸಪ್ತವ್ಯಾಧ ಕಥೆಯಿಂದಲೂ ಇನ್ನೂ ಎಷ್ಟೋತರಹ ವಿಮರ್ಶೆಗಳಿಂದಲೂ ಜೀವನಲ್ಲಿ ಬ್ರಾಹ್ಮಣ್ಯ ಸ್ಥಿತಿಯು ಸಿದ್ಧಿಸುವುದಿಲ್ಲ.

೩೦. ಪರಶುರಾಮನು ಬ್ರಾಹ್ಮಣನಾಗಿದ್ದು ಶಸ್ತ್ರಗ್ರಹಣಮಾಡಿದನು. ಇದರಿಂದ ಅವನ ಬ್ರಾಹ್ಮಣ್ಯವು ಕೆಡಲಿಲ್ಲ, ಅವನನ್ನು ಯಾರೂ ಕ್ಷತ್ರಿಯನೆನ್ನಲಿಲ್ಲ. ಹಾಗೆಯೇ ಆನೆ, ಕುದುರೆ, ಆಡು, ಒಂಟೆ, ಕತ್ತೆ ಮುಂತಾದುವುಗಳಿಗೆ ದೇಹದಬಣ್ಣ ಮತ್ತು ಧರ್ಮ ಇತ್ಯಾದಿಗಳನ್ನನುಸರಿಸಿ ಬೇರೆ ಬೇರೆ ಲಕ್ಷಣಗಳನ್ನು ಸ್ಥಿರಮಾಡಿ ಆ ಲಕ್ಷಣಗಳಿಂದ ಪದಾರ್ಥಗಳಿಗೆ ಪರಸ್ಪರ ಭೇದವನ್ನು ನಿರ್ಣಯಮಾಡಿದರು. ಆ ಭಿನ್ನಭಿನ್ನ ಆಕಾರ ಧರ್ಮ ಇವುಗಳನ್ನು ನೋಡಿ ಗಜಾಶ್ವಾದಿ ಬೇರೆ ಬೇರೆ ಸಾಂಕೇತಿಕ ಶಬ್ದಗಳನ್ನು ಪ್ರಯೋಗಿಸುವರು.

೩೧. ಈ ದೃಷ್ಟಾಂತವನ್ನು ಅವಲಂಬಿಸಿ ಬ್ರಾಹ್ಮಣನಿಗೆ ಅಸಾಧಾರಣಲಕ್ಷಣವೆಂಬುದು ಯಾವುದೂ ಇಲ್ಲದಿರುವುದರಿಂದ ಕೇವಲ ಲಕ್ಷಣದ ಮೂಲಕ ಬ್ರಾಹ್ಮಣ್ಯಜಾತಿ ನಿರ್ಣಯವು ಸಿದ್ಧವಾಗುವುದಿಲ್ಲ. ಆಕಾರವಿಶೇಷವೆಂಬುದು ನಿತ್ಯವಾಗಿರುತ್ತಿದ್ದರೆ ಭೇದವನ್ನು ಸಾಧಿಸಬಹುದಾಗಿತ್ತು. ಆಕಾರವು ನಿತ್ಯವಲ್ಲ (ನಿದರ್ಶನವಾಗಿ ಬಾಲವನ್ನು ಕತ್ತರಿಸಿದರೂ ನಾಯಿಯು ನಾಯಿಯೆಂದೇ ಹೇಳಿಸಿಕೊಳ್ಳುವುದು.) ಆದ್ದರಿಂದ ಆಕಾರವಿಶೇಷದಿಂದ ವ್ಯಕ್ತಿಭೇದವನ್ನು ನಿರ್ಣಯಮಾಡಿ ಜಾತಿಭೇದವನ್ನು ಸಾಧಿಸು

ಸಿತಾದ್ಯಸಾಧಾರಣತುಲ್ಯರೂಪಾಃ ।
ಸನಾತನೋಂಗೇಷು ನ ವರ್ಣಭೇದಃ ॥ ೩೧ ॥

ಬ್ರಾಹ್ಮಣ್ಯ ಮಧ್ರುವಮಿದಂ ಕಿಲ ಕೃತ್ರಿಮತ್ವಾತ್ ।
ಅಕೃತ್ರಿಮಂ ಭವತಿ ಸಾಮಯಿಕತ್ವಯೋಗಾತ್ ।
ಸಾಂಕೇತಿಕಂ ಸುಕೃತ ಲೇಶವಿಶೇಷಲಬ್ಧಂ ।
ವಾಣಿಜ್ಯಭೇಷಜಕೃತಾಮಿವ ಜಾತಿಭೇದಾಃ ॥ ೩೨ ॥

ಕಿಂ ಬ್ರಾಹ್ಮಣಾ ಯೇ ಸುಕೃತಂ ತ್ಯಜಂತಿ ।
ಕಿಂ ಕ್ಷತ್ರಿಯಾ ಲೋಕಮಪಾಲಯಂತಃ ।
ಸ್ವಧರ್ಮಹೀನಾ ಹಿ ತಥೈವ ವೈಶ್ಯಾಃ ।
ಶೂದ್ರಾ ಸ್ವಮುಖ್ಯಕ್ರಿಯಯಾ ವಿಹೀನಾಃ ॥ ೩೩ ॥

---

ಪುದಕ್ಕೆ ಸಾಧ್ಯವಿಲ್ಲ. ಇನ್ನು ವರ್ಣವನ್ನು ನೋಡಿ ಹೇಳೋಣವೆಂದರೆ ಬಿಳುಪು ಮುಂತಾದ ಬಣ್ಣಗಳು ಬ್ರಾಹ್ಮಣರಿಗೂ, ಶೂದ್ರರಿಗೂ ಸಮಾನವಾಗಿರಬಹುದು. ಈ ಜಾತಿಯವರು ಇಂಥಾ ಬಣ್ಣದವರೇ ಆಗಿರುವರೆಂಬ ನಿಗದಿಯಿಲ್ಲ. ಆದ್ದರಿಂದ ಬಣ್ಣದ ಮೂಲಕ ವ್ಯಕ್ತಿಭೇದವನ್ನು ತೀರ್ಮಾನಿಸಿ ಜಾತಿಭೇದವನ್ನು ಸಾಧಿಸಲು ಸಾಧ್ಯವಿಲ್ಲ.

೩೨. ಈ ಬ್ರಾಹ್ಮಣ್ಯವೆಂಬುದು ಕರ್ಮಾಚರಣೆಯಿಂದ ಪ್ರಾಪ್ತವಾಗುವುದರಿಂದ ನಿತ್ಯವಾದುದಲ್ಲ. ಸದಾಚಾರ ವಿಶೇಷದಿಂದ ಅದು ಅಕೃತ್ರಿಮವೆಂದು (ರೂಢಿಯಾಗಿ) ಜನರಿಗೆ ಬುದ್ಧಿ ಹುಟ್ಟಿಸಿದೆ. ವ್ಯಾಪಾರ ಮಾಡುವವರಿಗೂ, ವೈದ್ಯಮಾಡುವವರಿಗೂ, ಆ ವೃತ್ತಿಗಳ ಅವಲಂಬನದಿಂದ ವಣಿಕ್ತ್ವ ವೈದ್ಯತ್ವಗಳು ಹೇಗೆ ನಿಷ್ಕೃಷ್ಟಗಳಾಗಿವೆಯೋ ಹಾಗೆಯೇ ಪುಣ್ಯವಿಶೇಷದಿಂದ ಲಭ್ಯವಾದ ಬ್ರಾಹ್ಮಣ್ಯವೆಂಬುದು ಬ್ರಾಹ್ಮಣರಲ್ಲಿ ಒಂದು ಸಂಕೇತದಂತೆ ಪ್ರಮಾಣವಾಗಿ ಸಲ್ಲುತ್ತದೆ.

೩೩. ಪುಣ್ಯಸಂಪಾದನ ರೂಪವಾದ, ಕರ್ಮಗಳನ್ನು ಮಾಡದವರು ನಿಜವಾಗಿ ಬ್ರಾಹ್ಮಣರಾದಾರೇ ? ಲೋಕರಕ್ಷಣದಲ್ಲಿ ನಿರತರಲ್ಲದವರು ಕ್ಷತ್ರಿಯರೆನಿಸಿಯಾರೆ ? ಹಾಗೆಯೇ ತಮ್ಮ ವ್ಯಾಪಾರ ಧರ್ಮವನ್ನೂ ತೊರೆದು ನಡೆದವರು ವೈಶ್ಯರಾದಾರೆ ? ಸೇವೆ ಮುಂತಾದ ತನ್ನ ಮುಖ್ಯವಾದ ಕಾರ್ಯಗಳಲ್ಲಿ ಉದಾಸೀನನಾದವನು ಶೂದ್ರನೆನಿಸುವನೇ ? ಎಂದಿಗೂ ಇಲ್ಲ. ಆದ್ದರಿಂದ ಪ್ರತಿಯೊಂದು ವರ್ಣದವರಿಗೂ ನಿಯತವಾದ ಕರ್ಮಗಳುಂಟು.

ತಸ್ಮಾನ್ನ ಗೋಶ್ವವತ್ಕಶ್ಚಿತ್ ಜಾತಿಭೇದೋಽಸ್ತಿ ದೇಹಿನಾಂ ।
ಕಾರ್ಯಶಕ್ತಿನಿಮಿತ್ತಸ್ತು ಸಂಕೇತಃ ಕೃತ್ರಿಮೋ ಭವೇತ್ ॥ ೩೪ ॥

ಏವಂ ಪ್ರಮಾಣೈಃ ಪ್ರತಿಷಿಧ್ಯಮಾನಾಂ ।
ಸಾಂಕೇತಿಕೀಂ ಯಾತಿ ನರೋ ವ್ಯವಸ್ಥಾಂ ।
ಸ್ವಕೀಯಸಿದ್ಧಾಂ ಸ್ವಮತೈರ್ನಿಷಿದ್ಧಾಂ ।
ನ ಬುದ್ಧ್ಯತೇ ಮೂಢಮನಾ ವರಾಕಃ ॥ ೩೫ ॥

ಗೋಮಹಿಷ್ಯಜ ವಾಜ್ಯುಷ್ಟ್ರವಾನೇಯಾವಿಗಜಾಧಿಪಾಃ ।
ಪ್ರೇಷ್ಯವಾರ್ಧುಷಿಕಾಕಾರ್ಯಕರಣೋದ್ಯತ ಮಾನಸಾಃ ॥ ೩೬ ॥

ವಣಿಕ್ಕಾರುಕ್ರಿಯಾವಿಷ್ಟಾಃ ದಿವ್ಯಾಸ್ತೇಽಪಿ ಚ ಯೇ ದ್ವಿಜಾಃ ।
ವಿನಷ್ಟಾಸ್ತೇ ತು ವಿಜ್ಞೇಯಾಃ ಕ್ರವ್ಯಾದಾಶ್ಚ ಕುಶೀಲವಾಃ ॥ ೩೭ ॥

---

೩೪. ಹಸು, ಕುದುರೆ ಇವುಗಳಲ್ಲಿ ತತ್ತಜ್ಜಾತಿಸಹಜವಾದ ಅಂಗಲಕ್ಷಣದಿಂದ ಸ್ವತಸ್ಸಿದ್ಧವಾದ ಜಾತಿಭೇದವಿರುವಂತೆ ಮಾನವರೊಳಗೆ ಬ್ರಾಹ್ಮಣರಲ್ಲಿ ಆರೀತಿ ಸ್ವತಸ್ಸಿದ್ಧವಾಗಿ ಜಾತಿಸೂಚಕವಾದ ಅಂಗಲಕ್ಷಣವಿಲ್ಲ. ಈಗ ವ್ಯವಹಾರದಲ್ಲಿ ಬ್ರಾಹ್ಮಣ ಎಂಬುದು ಅವರವರ ಕರ್ಮ, ಶಕ್ತಿ, ಇವುಗಳ ಸ್ವರೂಪದಮೇಲೆ ಮಾಡಿಕೊಂಡಿರುವ ಕೃತ್ರಿಮವಾದ ಸಂಕೇತ ಮಾತ್ರವಾಗಿದೆ.

೩೫. ಈರೀತಿ ಬ್ರಾಹ್ಮಣ ಸ್ವರೂಪವನ್ನು ನಾನಾಮುಖವಾಗಿ ವಿಚಾರದಿಂದ ವಿಮರ್ಶೆ ಮಾಡುವುದಕ್ಕೆ ಹೊರಟ ಮನುಷ್ಯನು ಹಿಂದೆ ಹೇಳಿದರೀತಿ ಯುಕ್ತಿಪೂರ್ವವಾಗಿ ಇತರ ಪಕ್ಷಗಳನ್ನೆಲ್ಲಾ ನಿರಾಕರಿಸಿ ಕೊನೆಗೆ ಬ್ರಾಹ್ಮಣ್ಯವು ಕೇವಲ ಸಾಂಕೇತಿಕವಾದದ್ದೇ ಎಂಬ ವ್ಯವಸ್ಥೆಗೆ ಬರುವನು. ಅಜ್ಞಾನಿಯಾದ ಮೂಢನು ಸ್ವಾಭಿಮತವಾದ ಯುಕ್ತಿಗಳಿಂದಲೇ ಪೂರ್ವಪಕ್ಷಗಳನ್ನೆಲ್ಲಾ ನಿಷೇಧಿಸಿ ತನ್ನ ಪಕ್ಷವೇ ಸಿದ್ಧಿಯಾಗಿದ್ದರೂ ಈ ಸಿದ್ಧಾಂತವನ್ನು ಅವನು ತಿಳಿಯಲಾರನು.

೩೬-೩೭. ಬ್ರಾಹ್ಮಣ ಶ್ರೇಷ್ಠರಾಗಿದ್ದರೂ ಹಸು, ಎಮ್ಮೆ, ಕುದುರೆ, ಒಂಟೆ, ಆಡು, ಕುರಿ, ಆನೆ ಇವುಗಳನ್ನೆಲ್ಲಾ ಮಾರಾಟಕ್ಕೆ ಸಾಕುವುದು, ಸೇವಕನಾಗುವುದು. ಬಡ್ಡಿಯಿಂದ ಜೀವಿಸುವುದು, ವ್ಯಾಪಾರ, ಕಾರುಕ್ರಿಯೆ ಮಾಡುವುದು, ಮಾಂಸಾಹಾರ ಸೇವನೆ ಮಾಡುವುದು, ನಾಟ್ಯಜೀವನ (ನಟವೃತ್ತಿ) ಈ ಕೆಲಸಗಳನ್ನು ಮಾಡಿದರೆ ತಮ್ಮ ಬ್ರಾಹ್ಮಣ್ಯದಿಂದ ಭ್ರಷ್ಟರಾಗುವರು.

ಪಲಾಂಡುಲಶುನಾದಾಶ್ಚ ಮೃಗ್ಯುಷ್ಟ್ರೀ ಕ್ಷೀರಪಾಯಿನಃ ।
ಮಾಂಸಸರ್ವರಸಕ್ಷೀರ ಕ್ರಯವಿಕ್ರಯಕಾರಿಣಃ ॥ ೩೮ ॥

ಪುನರ್ಭೂರ್ವೃಷಲೀವೇಶ್ಯಾಚಂಡಾಲಸ್ತ್ರೀನಿಷೇವಣಃ ।
ಶೂದ್ರಾನ್ನರಸಪುಷ್ಟಾಂಗಾಃ ಪ್ರೇತವಸ್ತ್ರಾನ್ನಭೋಜನಾಃ ॥ ೩೯ ॥

ಮೃತಸೂತಕಲಬ್ಧಾನ್ನ ಪಾನಾದಭ್ಯವಹಾರಿಣಃ ।
ಬ್ರಹ್ಮದೇವ ಪಿತೃಭೂತಮನುಷ್ಯೇಷು ಬಹಿಷ್ಕೃತಾಃ ॥ ೪೦ ॥

ಮಾತ್ಸರ್ಯಮದವಿದ್ವೇಷ ತೃಷ್ಣಾ ಕಾಮತಮೋಮಯಾಃ ।
ಹೀನಾಚಾರಾ ಹಿ ಯೇ ಕೇಚಿತ್ ಅಪರೇ ಪಿಶುನಾ ದ್ವಿಜಾ ।
ಪ್ರಕಾರೈರ್ಬಹುಭಿಃ ಸರ್ವೇ ತೇ ಪ್ರಣಶ್ಯಂತಿ ನಾನ್ಯಥಾ ॥ ೪೧ ॥

ಏವಂ ಶಾಸ್ತ್ರೋದಿತನ್ಯಾಯಮಾರ್ಗಭ್ರಷ್ಟಾಸ್ತು ಯೇ ನರಾಃ ।
ವಿಶಿಷ್ಟಗೋತ್ರಸಂಸ್ಕಾರಕಲಾಪಸಕಲಾತ್ಮಕಾಃ ॥ ೪೨ ॥

---

೩೮-೪೧. ಈರುಳ್ಳಿ, ಬೆಳ್ಳುಳ್ಳಿ ಮುಂತಾದುವನ್ನು ತಿನ್ನುವರು. ಜಿಂಕೆ, ಒಂಟೆ ಇವುಗಳ ಹಾಲನ್ನು ಕುಡಿಯುವವರು, ಮಾಂಸ, ರಸದ್ರವ್ಯ, ಹಾಲು, ಇವನ್ನು ಮಾರಿ ಜೀವಿಸುವವರು, ಪುನರ್ವಿವಾಹವಾದಸ್ತ್ರೀ, ಶೂದ್ರಸ್ತ್ರೀ, ವೇಶ್ಯಾಸ್ತ್ರೀ, ಚಂಡಾಲಸ್ತ್ರೀ, ಇವರಲ್ಲಿ ಸಮಾಗಮಮಾಡುವವರು, ಶೂದ್ರಾನ್ನದಿಂದ ಮೈ ಬೆಳೆಸುವವರು, ಹೆಣದ ಮೈಮೇಲಿನ ಬಟ್ಟೆ, ಪ್ರೇತಾನ್ನಭೋಜನ, ಇವುಗಳಿಂದ ಜೀವಿಸುವವರು ; ಮೃತಾಶೌಚ, ಜಾತಾಶೌಚ ಉಳ್ಳವರ ಅನ್ನಪಾನಾದಿಗಳನ್ನು ಸೇವಿಸುವವರು, ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ ಎಂಬ ಪಂಚ ಯಜ್ಞಗಳನ್ನು ಮಾಡದೇ ಬಿಟ್ಟವರು, ಹೊಟ್ಟೆಕಿಚ್ಚು, ಮದಿಸಿರುವಿಕೆ, ವೈರಸಾಧನೆ ದುರಾಶೆ, ವಿಷಯಾಸಕ್ತಿ (ಇಂದ್ರಿಯಚಾಪಲ್ಯ) ಮುಂತಾದ ದೋಷಭರಿತತೆ, ಆಚಾರ ಹೀನತೆ, ಚಾಡಿಕೋರತನ ಹೀಗೆ ನಾನಾಪ್ರಕಾರವಾದ ನಡವಳಿಕೆಯಿಂದಲೂ ದುಷ್ಕೃತ್ಯಗಳಿಂದಲೂ ಕೂಡಿದವರು ಬ್ರಾಹ್ಮಣ್ಯದಿಂದ ಭ್ರಷ್ಟರಾಗುವುದಲ್ಲದೆ ಪುರುಷಾರ್ಥವನ್ನೂ ಕಳೆದು ಕೊಳ್ಳುತ್ತಾರೆ. ಅಷ್ಟೇ ವಿನಾ ಬೇರೇ ರೀತಿಯಿಂದ ಈ ಬ್ರಾಹ್ಮಣ್ಯಕ್ಕೆ ಚ್ಯುತಿಯಿಲ್ಲ.

೪೨-೪೫. ಶ್ರೇಷ್ಠವಾದ ಕುಲದಲ್ಲಿ ಹುಟ್ಟಿ ಸಕಲ ಸಂಸ್ಕಾರಗಳನ್ನೂ ಪಡೆದು ವಿದ್ಯಾವಂತರಾಗಿ. ವೇದೋಕ್ತಮಾರ್ಗವನ್ನನುಸರಿಸಿ ತಾವು ವೇದಾಧ್ಯಯನ

**ವೇದಾನಧ್ಯಾಪಯಂತೋಽಪಿ ತೇಽಪ್ಯಧೀಯಾನಾಃ ಶ್ರುತಿಕ್ರಮಾತ್ ।**
**ಬ್ರಾಹ್ಮಣತ್ವಾದ್ವಿಹೀಯಂತೇ ದುರಾಚಾರವಿಧಾಯಿನಃ ॥ ೪೩ ॥**

**ತಸ್ಮಾನ್ನ ಜಾತಿರೇಕತ್ರ ಭೂತಾತ್ಮಾಸ್ತ್ಯನಪಾಯಿನೀ ।**
**ನಾಶಿತ್ವಾದತ್ರ ಚ ಶ್ಲೋಕಾನ್ಮಾನವಾಸ್ಸಮುಧೀಯತೇ ॥ ೪೪ ॥**

**ಸದ್ಯಃ ಪತತಿ ಮಾಂಸೇನ ಲಾಕ್ಷಯಾ ಲವಣೇನ ಚ ।**
**ತ್ರ್ಯಹೇಣ ಶೂದ್ರೋ ಭವತಿ ಬ್ರಾಹ್ಮಣಃ ಕ್ಷೀರವಿಕ್ರಯೀ ॥ ೪೫ ॥**

**ಗೋರಕ್ಷಕಾನ್ ವಾಣಿಜಕಾನ್ ತಥಾ ಕಾರುಕುಶೀಲವಾನ್ ।**
**ಪ್ರೇಷ್ಯಾನ್ ವಾರ್ಧುಷಿಕಾಂಶ್ಚೈವ ಶೂದ್ರಾಂಸ್ತಾನ್ಮನುರಬ್ರವೀತ್ ॥ ೪೬ ॥**

---

ಮಾಡುತ್ತಾ, ಇತರ ಶಿಷ್ಯರಿಗೂ ವೇದಾಧ್ಯಯನ ಮಾಡಿಸುತ್ತಾ ಇದ್ದರೂ, ಶಾಸ್ತ್ರೋಕ್ತವಾದ ಮಾರ್ಗವನ್ನತಿಕ್ರಮಿಸಿದರೆ ದುರಾಚಾರನಿರತರಾಗುವುದರಿಂದ ಬ್ರಾಹ್ಮಣ್ಯವನ್ನು ಕಳೆದುಕೊಳ್ಳುವರು.

೪೪. ಆದುದರಿಂದ ಬ್ರಾಹ್ಮಣ ಜಾತಿಯೆಂಬುದು ನಶ್ವರವಾದುದು. ನಿಷ್ಕೃಷ್ಟಸ್ವರೂಪವನ್ನು ಪಡೆದು ಭ್ರಷ್ಟವಾಗದೆ ಸ್ಥಿರವಾಗಿ ಒಂದು ವ್ಯಕ್ತಿಯಲ್ಲಿ ನಿಲ್ಲುವ ಸ್ವಭಾವವುಳ್ಳದ್ದಲ್ಲ. ಈ ವಿಷಯದಲ್ಲಿ ಮನುಸ್ಮೃತಿಯ ಶ್ಲೋಕಗಳು ಈ ಮುಂದಿನಂತೆ ಇವೆ.

೪೫. ಮಾಂಸ, ಉಪ್ಪು, ಅರಗು ಇವುಗಳನ್ನು ವ್ಯಾಪಾರ ಮಾಡೋಣದರಿಂದ ಬ್ರಾಹ್ಮಣನು ತತ್ಕ್ಷಣದಲ್ಲೇ ಜಾತಿಭ್ರಷ್ಟನಾಗುವನು. ಬ್ರಾಹ್ಮಣನು ಮೂರು ದಿನಗಳವರೆಗೆ ಹಾಲಿನ ವ್ಯಾಪಾರಮಾಡಿದರೆ ಶೂದ್ರನಾಗುವನು.

೪೬. ಬ್ರಾಹ್ಮಣರು ಕೂಲಿಗಾಗಿ ದನಮೇಯಿಸಿದರೂ, ವ್ಯಾಪಾರಮಾಡಿದರೂ, ನಟವೃತ್ತಿಯನ್ನಾಚರಿಸಿದರೂ, ಕಾರುಕ್ರಿಯೆ ಮಾಡಿದರೂ, ಬಡ್ಡಿಯಿಂದ ಜೀವಿಸಿದರೂ ಬ್ರಾಹ್ಮಣ್ಯದಿಂದ ಭ್ರಷ್ಟರಾಗುವರೆಂದು ಮನು ಹೇಳಿದ್ದಾನೆ.

**ಶೂದ್ರೋ ಬ್ರಾಹ್ಮಣತಾಮೇತಿ ಬ್ರಾಹ್ಮಣಶ್ಚೈತಿ ಶೂದ್ರತಾಂ ।**
**ಕ್ಷತ್ರಿಯೋ ಯಾತಿ ವಿಪ್ರತ್ವಂ ವಿದ್ಯಾದ್ವೈಶ್ಯಂ ತಥೈವ ಚ ॥ ೪೭ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ**
**ಚತ್ವಾರಿಂಶೋಽಧ್ಯಾಯಃ.**



---

೪೭. ಕರ್ಮದಿಂದಲೇ ಶೂದ್ರನು ಬ್ರಾಹ್ಮಣ್ಯವನ್ನು ಪಡೆಯುವುದಕ್ಕೂ, ಬ್ರಾಹ್ಮಣನು ಶೂದ್ರತ್ವವನ್ನು ಪಡೆಯುವುದಕ್ಕೂ ಅವಕಾಶವಿದೆ. ಹಾಗೆಯೇ ಕರ್ಮದಿಂದ ಕ್ಷತ್ರಿಯನು ಬ್ರಾಹ್ಮಣ್ಯವನ್ನು ಪಡೆಯುವುದಕ್ಕೂ, ವೈಶ್ಯನು ಬ್ರಾಹ್ಮಣನೆನಿಸುವುದಕ್ಕೂ ಅವಕಾಶವುಂಟು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಷಷ್ಠೀಕಲ್ಪದಲ್ಲಿ
ಜಾತಿವರ್ಣನೆಯೆಂಬ ನಲವತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ವೇದಾಧ್ಯಯನಮಪ್ಯೇತತ್ ಬ್ರಾಹ್ಮಣ್ಯಂ ಪ್ರತಿಪದ್ಯತೇ ।
ವಿಪ್ರವದ್ವೈಶ್ಯ ರಾಜನ್ಯಾ ರಾಕ್ಷಸಾ ರಾವಣಾದಯಃ ॥ ೧ ॥

ಶ್ವಾದಚಂಡಾಲದಾಸಾಶ್ಚ ಲುಬ್ಧಕಾಭೀರಧೀವರಾಃ ।
ಯೇಽನ್ಯೇಽಪಿ ವೃಷಲಾಃ ಕೇಚಿತ್ ತೇಽಪಿ ವೇದಾನಧೀಯತೇ ॥ ೨ ॥

ಶೂದ್ರಾ ದೇಶಾಂತರಂ ಗತ್ವಾ ಬ್ರಾಹ್ಮಣ್ಯಂ ಕ್ಷತ್ರಿಯಂ ಶ್ರಿತಾಃ ।
ವ್ಯಾಪಾರಾಕಾರಭಾಷಾದ್ಯೈಃ ವಿಪ್ರತುಲ್ಯೈಃ ಪ್ರಕಲ್ಪಿತೈಃ ॥ ೩ ॥

---

## ನಲವತ್ತೊಂದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಬ್ರಾಹ್ಮಣನು ವೇದಾಧ್ಯಯನದ ಅಧಿಕಾರ ಹೊಂದಿರುತ್ತಾನೆ. ಈ ಬ್ರಾಹ್ಮಣನಂತೆ ಕ್ಷತ್ರಿಯರೂ, ವೈಶ್ಯರೂ ವೇದಾಧ್ಯಯನಕ್ಕೆ ಅಧಿಕಾರಿಗಳು. ರಾವಣನೇ ಮುಂತಾದ ರಾಕ್ಷಸರೂ ವೇದಾಧ್ಯಯನಸಂಪನ್ನರಾಗಿದ್ದರು.

೨. ನಾಯಿಯ ಮಾಂಸವನ್ನು ತಿನ್ನುವ ಶ್ವಪಚರು, ಚಂಡಾಲರಾದ ದಾಸರು ಕಿರಾತರು, ಗೊಲ್ಲರು, ಬೆಸ್ತರು ಮುಂತಾದ ಶೂದ್ರವರ್ಣದ ಕೆಲವರು ವೇದವನ್ನು ಅಧ್ಯಯನಮಾಡುತ್ತಾರೆ.

೩. ಶೂದ್ರರು ದೇಶಾಂತರಕ್ಕೆ ಹೋಗಿ ಅಲ್ಲಿದ್ದು ಬ್ರಾಹ್ಮಣರಂತೆ ತಾವೂ ಕಾರ್ಯಗಳನ್ನಾಚರಿಸುತ್ತಾ ಬ್ರಾಹ್ಮಣರಂತೆ ಶುಚಿಯಾದ ವೇಷ ಭಾಷೆ ಕರ್ಮ

ವೇದಾನಧೀತ್ಯ ವೇದೌ ವಾ ವೇದಂ ವಾಪಿ ಯಥಾಕ್ರಮಂ ।
ಸ್ರೋದ್ವಹಂತಿ ಶುಭಾಂ ಕನ್ಯಾಂ ಶುದ್ಧಬ್ರಾಹ್ಮಣಜಾಂ ನರಾಃ ॥ ೪ ॥

ಅಥವಾಧೀತ್ಯ ವೇದಾಂಸ್ತು ಉದ್ವಹಂತಿ ದ್ವಿಜಸ್ತ್ರಿಯಃ ।
ಗೌಡಪೂರ್ವಾಂ ಕೃತಾನೇಯುಃ ಜಾತಿಂ ವಾ ದಾಕ್ಷಿಣಾತ್ಯಜಾಂ ॥ ೫ ॥

ಅಪರಿಜ್ಞಾತಶೂದ್ರತ್ವಾತ್ ಬ್ರಾಹ್ಮಣ್ಯಂ ಯಾಂತಿ ಕಾಮತಃ ।
ತಸ್ಮಾನ್ನ ಜ್ಞಾಯತೇ ಭೇದೋ ವೇದಾಧ್ಯಾಯಕ್ರಿಯಾಕೃತಃ ॥ ೬ ॥

ಶಾಸ್ತ್ರಕಾರೈಸ್ತಥಾ ಚೋಕ್ತಂ ನ್ಯಾಯಮಾರ್ಗಾನುಸಾರಿಭಿಃ ।
ತೇ ಸಾಧುಮತಮಾಕರ್ಣ್ಯ ಸಂತಃ ಸಂತಿ ವಿಮತ್ಸರಾಃ ॥ ೭ ॥

---

ಗಳನ್ನು ಪ್ರಯತ್ನದಿಂದ ಅನುಕರಿಸುತ್ತಾ ಕೃತ್ರಿಮಬ್ರಾಹ್ಮಣ್ಯವನ್ನು ಹೊಂದಿ ಕ್ಷತ್ರಿಯರನಾಶ್ರಯಿಸಿ ಕೊಂಡಿರುತ್ತಾರೆ.

೪. ಅಂಥಾ ಅನುಕರಣ ಮನುಷ್ಯರು ಮೂರು ವೇದಗಳನ್ನೋ ಇಲ್ಲವೇ ಎರಡು ವೇದಗಳನ್ನೋ ಅದೂ ಆಗದಿದ್ದರೆ ಒಂದೇ ವೇದವನ್ನಾದರೂ ಕ್ರಮವಾಗಿ ಅಧ್ಯಯನಮಾಡಿ ಅನಂತರ ಶುದ್ಧಬ್ರಾಹ್ಮಣಕುಲದಲ್ಲಿ ಹುಟ್ಟಿದ ಒಳ್ಳೆಯ ಕನ್ಯೆಯನ್ನು ಮದುವೆಯಾಗುತ್ತಾರೆ.

೫. ಹೀಗೆ ವೇದಾಧ್ಯಯನಮಾಡಿ ಮದುವೆಮಾಡಿಕೊಂಡು ಕೆಲವರು ದಾಕ್ಷಿಣಾತ್ಯರಲ್ಲಿ ಪ್ರಸಿದ್ಧರಾದ ಗೌಡಸಾರಸ್ವತವೆಂಬ ಒಂದು ಜಾತಿಯೆನಿಸುತ್ತಾರೆ.

೬. ಈರೀತಿ ಮುಂಚೆ ತಾವು ಶೂದ್ರರೆಂಬ ಅರಿವು ಅವರಿಗೆ ಇಲ್ಲದುದರಿಂದ ಸ್ವೇಚ್ಛಾನುಸಾರ ಬ್ರಾಹ್ಮಣ್ಯ ಹೊಂದಿದಂತೆ ಆಯಿತು. ವೇದಾಧ್ಯಯನ ಮಾಡಿದಾನೆಯೆಂಬ ಕಾರಣದಿಂದ ಬ್ರಾಹ್ಮಣ್ಯವನ್ನು ನಿರ್ಣಯಿಸುವುದಕ್ಕೆ ಅವಕಾಶವಿಲ್ಲ. ಬ್ರಾಹ್ಮಣರನ್ನು ಶೂದ್ರರಿಂದ ಪ್ರತ್ಯೇಕಿಸುವುದಕ್ಕೆ ವೇದಾಧ್ಯಯನವು ಕಾರಣವಲ್ಲ.

೭. ನ್ಯಾಯಮಾರ್ಗವನ್ನು ಅನುಸರಿಸಿ ನಡೆಯುವ ಶಾಸ್ತ್ರಕಾರರೂ, ಹೀಗೆಯೇ ಹೇಳಿದಾರೆ. ಆ ಸತ್ಪುರುಷರು ಸಾಧುವಾದ ಈ ಸಿದ್ಧಾಂತವನ್ನು ಕೇಳಿ ಯಾವಾಗಲೂ ಸ್ವಲ್ಪವೂ ಮತ್ಸರವಿಲ್ಲದೆ ಇರುತ್ತಾರೆ.

**ಆಚಾರಹೀನಾನ್ನ ಪುನಂತಿ ವೇದಾಃ ಯದ್ಯಪ್ಯಧೀತಾಃ ಸಹ ಷಡ್ಭಿರಂಗೈಃ ।**
**ಶಿಲ್ಪಂ ಹಿ ವೇದಾಧ್ಯಯನಂ ದ್ವಿಜಾನಾಂ ವೃತ್ತಂ ಸ್ಮೃತಂ ಬ್ರಾಹ್ಮಣ**
**ಲಕ್ಷಣಂ ತು ॥ ೮ ॥**

**ಅಧೀತ್ಯ ಚತುರೋ ವೇದಾನ್ ಯದಿ ವೃತ್ತೇ ನ ತಿಷ್ಠತಿ ।**
**ನ ತೇನ ಕ್ರಿಯತೇ ಕಾರ್ಯಂ ಸ್ತ್ರೀರತ್ನೇನೇವ ಷಂಡಕಃ ॥ ೯ ॥**

**ಶಿಖಾ ಪ್ರಣವಸಂಸ್ಕಾರ ಸಂಧ್ಯೋಪಾಸನಮೇಖಲಾಃ ।**
**ದಂಡಾಜಿನಪವಿತ್ರಾದ್ಯಾಃ ಶೂದ್ರೇಷ್ವಪಿ ನಿರಂಕುಶಾಃ ॥ ೧೦ ॥**

**ಪ್ರಸಂಗೋಪಿ ಹಿ ಶೂದ್ರಾಣಾಂ ನ ಶಕ್ಯೋ ವಿನಿವಾರಿತುಂ ।**
**ದೇವೋತ್ತಮ ತ್ರಯೇಣಾಪಿ ನಿವರ್ತಂತೇ ನರಾ ಸ್ವಯಂ ॥ ೧೧ ॥**

---

೮. ಆರು ವೇದಾಂಗಗಳು ಸಹಿತವಾಗಿ ಸಮಸ್ತ ವೇದಗಳನ್ನೂ ಅಧ್ಯಯನ ಮಾಡಿದ್ದರೂ ವಸ್ತುತಃ ಅಚಾರ ಹೀನರಾಗಿದ್ದರೆ ಅವರು ಶುದ್ಧರೆನಿಸುವುದಿಲ್ಲ. ವೇದಾಧ್ಯಯನ ಮಾಡುವುದು ಬ್ರಾಹ್ಮಣ ಲಕ್ಷಣವೆಂದೂ, ಅದು ಬ್ರಾಹ್ಮಣರಿಗೆ ಒಂದು ಕಸಬು ಎಂದೂ ಹೇಳಬೇಕು.

೯. ನಪುಂಸಕನಿಗೆ ಶ್ರೇಷ್ಠಳಾದ ಸ್ತ್ರೀ ದೊರೆತರೂ ಹೇಗೆ ಯಾವ ಕಾರ್ಯವನ್ನೂ ಮಾಡಿಕೊಳ್ಳಲಾರನೋ ಹಾಗೆಯೇ ಒಬ್ಬನು ನಾಲ್ಕು ವೇದವನ್ನು ಅಧ್ಯಯನ ಮಾಡಿದ್ದರೂ ಇವನಲ್ಲಿ ಒಳ್ಳೆಯ ನಡವಳಿಕೆಯಿಲ್ಲದಿದ್ದರೆ ಇವನಿಂದ ಯಾವ ಕಾರ್ಯವೂ ಆಗುವುದಿಲ್ಲ.

೧೦. ಜುಟ್ಟು ಬಿಡುವುದು, ಪ್ರಣವವನ್ನು ಉಚ್ಚರಿಸುವುದು, ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡುವುದು; ಸಂಧ್ಯಾವಂದನೆ ಮಾಡುವುದು; ಮೌಂಜಿಯನ್ನು ಧರಿಸುವುದು; ದಂಡ, ಕೃಷ್ಣಾಜಿನ ಪವಿತ್ರ ಇವನ್ನು ಧರಿಸುವುದು; ಇವುಗಳನ್ನು ಶೂದ್ರರೂ ಆಚರಿಸಲು ಅಡ್ಡಿಯಿಲ್ಲ.

೧೧. ಈ ಸಂದರ್ಭಗಳು ಶೂದ್ರರಿಗೆ ಸಂಬಂಧಿಸಲೇಬಾರದೆಂದ ತಡೆಯುವುದೂ ಶಕ್ಯವಿಲ್ಲ. ಅಯ್ಯಾ, ದೇವೋತ್ತಮನೇ! ವೇದಾಧ್ಯಯನ, ಸದಾಚಾರ, ಶಿಖಾ ಯಜ್ಞೋಪವೀತ ಧಾರಣಾದಿ ಸಂಸ್ಕಾರಗಳು ಈ ಮೂರರಿಂದ ಜನರು ತಾನಾಗಿಯೇ ಶೂದ್ರತ್ವದಿಂದ ನಿವೃತ್ತರಾಗುವರು.

ತಸ್ಮಾನ್ನೈತೇಽಪಿ ಲಕ್ಷ್ಯಂತೇ ವಿಲಕ್ಷಣತಯಾ ನೃಣಾಂ ।
ಯಜ್ಞೋಪವೀತಸಂಸ್ಕಾರಮೇಖಲಾಚೂಲಿಕಾದಯಃ ॥ ೧೨ ॥

ಆಭಿಚಾರಿಕಮಂತ್ರಾದ್ಯೈಃ ದುರ್ಲಭತ್ವಾದಿ ಭಾಷಣೈಃ ।
ಬ್ರಾಹ್ಮಣಸ್ಯೈವ ಶಕ್ತಿಶ್ಚೇತ್ ಕೇನಾಸ್ಯ ವಿನಿಹನ್ಯತೇ ॥ ೧೩ ॥

ತಪಃಸತ್ಯಾದಿ ಮಾಹಾತ್ಮ್ಯಾತ್ ದೇವತಾ ಸಮುಯಸ್ಮೃತಿಃ ।
ಮಂತ್ರಶಕ್ತಿರ್ನೃಣಾಮೇಷಾಂ ಸರ್ವೇಷಾಮುಪಿ ವಿದ್ಯತೆ ॥ ೧೪ ॥

ವಚನಂ ದುರ್ವಚಸ್ಯಾಪಿ ಕ್ರಿಯತೇ ಸರ್ವಮಾನವೈಃ ।
ಶೂದ್ರಬ್ರಾಹ್ಮಣಯೋಸ್ತಸ್ಮಾತ್ ನಾಸ್ತಿ ಭೇದಃ ಕಥಂಚನ ॥ ೧೫ ॥

ಶಾಪಾನುಗ್ರಹಕಾರಿತ್ವಂ ಶಕ್ತಿಭೇದೋ ನ ವಿದ್ಯತೇ ।
ಚೌರಚಾಟಾದಿರಾಜನ್ಯ ದುರ್ಜನಾಭಿಹತೇ ನೃಣಾಂ ॥ ೧೬ ॥

---

೧೨. ಆದ್ದರಿಂದ ಚೂಲಿಕಾ, ಯಜ್ಞೋಪವೀತಧಾರಣ, ಮೌಂಜೀಧಾರಣ, ಇವು ಈ ಶೂದ್ರಾದಿಗಳಿಗೂ ವೈಲಕ್ಷಣ್ಯಕರಗಳಾಗಿ ಕಾಣುವುದಿಲ್ಲ.

೧೩. ಮಾಟ ಮಂತ್ರಗಳನ್ನು ಪ್ರಯೋಗಿಸಿ ತೊಂದರೆಪಡಿಸುವ ಶಕ್ತಿಯೂ, ಇವನು ನೀಚ ಇವನಿಗೆ ಬ್ರಾಹ್ಮಣ್ಯ ದುರ್ಲಭ ಎಂದು ಭಾಷಣಮಾಡುವ ಶಕ್ತಿಯೂ ಬ್ರಾಹ್ಮಣರಿಗೇ ಇರುವುದಾದರೆ ಇದನ್ನು ಯಾರು ತಾನೆ ತಡೆಯಬಲ್ಲರು.

೧೪. ತಪಸ್ಸು, ಸತ್ಯ ಇವುಗಳ ಮಹಿಮೆಯಿಂದ ದೇವತೆಗಳ ಆಚರಣೆಯು ಇಂಥವೆಂದು ಆಲೋಚಿಸುವ ಶಕ್ತಿಯೂ, ಮಂತ್ರಶಕ್ತಿಸಂಪಾದನೆಯೂ ಸಾಮಾನ್ಯವಾಗಿ ಎಲ್ಲರಿಗೂ ಇರುವುದು.

೧೫. ಎಲ್ಲಾ ಮನುಷ್ಯರೂ ಆಡಬಾರದಂಥ ಮಾತುಗಳೆಷ್ಟನ್ನೋ ಆಡುತ್ತಾರೆ. ದುರ್ವಚನ ಮಾತ್ರದಿಂದ ಬ್ರಾಹ್ಮಣ್ಯ ಶೂದ್ರತ್ವ ಭೇದವನ್ನು ಕಲ್ಪಿಸಲು ಸರ್ವಪ್ರಕಾರದಿಂದ ನೋಡಿದರೂ ಸಾಧ್ಯವಿಲ್ಲ.

೧೬. ತಮಗೆ ತೊಂದರೆಯನ್ನು ಕೊಡುವ ಕಳ್ಳರು, ರಾಜರು, ದುಷ್ಟಜನಗಳು ಮುಂತಾದುವರಿಗೆ ಶಾಪ ಕೊಟ್ಟು ನಿಗ್ರಹಮಾಡುವುದು, ತಮಗೆ ಅನುಕೂಲಮಾಡಿದ ಸಜ್ಜನರಿಗೆ ಅನುಗ್ರಹಮಾಡುವುದು ಈ ಮುಂತಾದ ಮಹಿಮೆಯು ಬ್ರಾಹ್ಮಣತ್ವವನ್ನು ಅನುಕರಿಸುವ ಇತರರಲ್ಲಿ ಇಲ್ಲದೆ ಇರಬಹುದು.

**ಆತ್ಮದುಃಖೋದಯಾಪಾಯಂ ಸ್ವೇಷು ಜಂತುಷು ರಕ್ಷಣಂ ।**
**ಕರ್ತುಂ ನ ಪ್ರಭವೇಚ್ಛೂದ್ರೋ ಬ್ರಾಹ್ಮಣಸ್ತದ್ವದೇವ ಹಿ ॥ ೧೭ ॥**

**ಮಾಭೂದ್ಯುಗೇ ಕಲಾವೇತದ್ದೇಶೇ ಚಾಕಾರ್ಯಕೃದ್ವಿಜೇ ।**
**ಸ್ಯಾದನ್ಯ ದೇಶಕಾಲಾದೌ ದ್ವಿಜಾನಾಮತಿ ಶಾಯಿನಾಮ್ ॥ ೧೮ ॥**

**ಶಾಪಾನುಗ್ರಹಸಾಮರ್ಥ್ಯಮನ್ಯದ್ವಾಧ್ಯಾತ್ಮಗೋಚರಂ ।**
**ಬ್ರಹ್ಮಸಾಧನಮೇತದ್ಧಿ ಲಿಂಗಂ ಕೇಚಿತ್ಪ್ರಚಕ್ಷತೇ ॥ ೧೯ ॥**

**ಸಂಸಾರಾರಕ್ತಚೇತಸ್ಕಾ ಮೋಹಾಂಧತಮಸಾವೃತಾಃ ।**
**ಪತಂತ್ಯುನ್ಮಾರ್ಗಗರ್ತೇಷು ಪ್ರತ್ಯಗ್ನಿ ಶಲಭಾ ಯಥಾ ॥ ೨೦ ॥**

**ಜಾತಿಧರ್ಮಾಃ ಸ್ವಯಂ ಕಿಂಚಿದ್ವಿಶೇಷಃ ಶ್ರುತಿಸಂಗಮಾತ್ ।**
**ಅಸಿದ್ಧಃ ಶೂದ್ರಜಾತೀನಾಂ ಪ್ರಸಿದ್ಧೋ ವಿಪ್ರಜಾತಿಷು ॥ ೨೧ ॥**

---

೧೭. ತನಗೆ ದುಃಖಗಳೇ ಉಂಟಾಗವಂತೆ ನಿವಾರಣೆ ಮಾಡಿಕೊಳ್ಳುವುದು. ತನ್ನ ಕಡೆಯ ಪ್ರಾಣಿಗಳನ್ನೆಲ್ಲಾ ನಿರಪಾಯವಾಗಿರುವಂತೆ ರಕ್ಷಣೆ ಮಾಡಿಕೊಳ್ಳುವುದು ಈ ಕೆಲಸಗಳ ನಿರ್ವಾಹಕ್ಕೂ ಬ್ರಾಹ್ಮಣತ್ವವನ್ನನುಕರಿಸುವ ಶೂದ್ರಾದಿಗಳಿಗೆ ಸಾಮರ್ಥ್ಯವಿಲ್ಲ.

೧೮-೧೯. ಕಲಿಯುಗದಲ್ಲಿ ಬ್ರಾಹ್ಮಣರೆನಿಸಿದ್ದರೂ ಕೂಡ ಎಲ್ಲರಿಗೂ ಅನೇಕ ಸಮಯಗಳಲ್ಲಿ ಅದು ಸಾಧ್ಯವಾಗಿರುವುದಿಲ್ಲ. ನ್ಯಾಯವಾಗಿ ಸರ್ವತ್ರ ಬ್ರಾಹ್ಮಣಜಾತಿಯಲ್ಲಿ ಅಕಾರ್ಯಮಾಡುವವನು ಇರಲೇಬಾರದು, ಇತರ ಕಾಲದೇಶಗಳಲ್ಲಿ ಬ್ರಾಹ್ಮಣನಿಗೆ ಶಾಪಾನುಗ್ರಹ ಸಾಮರ್ಥ್ಯವೂ ಆತ್ಮವಿಷಯವಾದ ವಿಚಾರಶಕ್ತಿಯೂ, ಇರುತ್ತಿದ್ದುವು. ಅವೇ ನಿಜವಾದ ಬ್ರಾಹ್ಮಣ್ಯ ಚಿಹ್ನೆಗಳೆಂದು ಕೆಲವರು ಹೇಳುತ್ತಾರೆ.

೨೦. ಸಂಸಾರದಲ್ಲಿ ಅನುರಕ್ತವಾದ ಮನಸ್ಸುಳ್ಳವನಾಗಿ ಅಜ್ಞಾನಾಂಧಕಾರದಿಂದ ಆವರಿಸಲ್ಪಟ್ಟ ಮನುಷ್ಯನು ಮಿಡತೆ ಹುಳುಗಳು (ಪತಂಗ) ಅಗ್ನಿಯಲ್ಲಿ ಬೀಳುವಂತೆ ದುರ್ಮಾರ್ಗಗಳೆಂಬ ಹಳ್ಳದಲ್ಲಿ ಬೀಳುತ್ತಾನೆ.

೨೧. ವೇದದಿಂದ ತಿಳಿಯಬಹುದಾದ ಅಥವಾ ತಾನಾಗಿ ಹೊಳೆಯಬಹುವಾದ ಯಾವುದೋ ಒಂದು ವಿಶೇಷಶಕ್ತಿಯು ಜಾತಿಧರ್ಮವೆನಿಸುವುದು. ಇದು ಬ್ರಾಹ್ಮಣ ಜಾತಿಯಲ್ಲಿ ಸ್ವತಃ ಪ್ರಸಿದ್ಧ. ಬ್ರಾಹ್ಮಣತ್ವವನ್ನು ಅನುಕರಿಸುವ ಶೂದ್ರಾದಿಗಳಲ್ಲಿ ಅಸಿದ್ಧ.

ಸಂಸ್ಕಾರೋ ಯೋನಿಸಾಧ್ಯೋ ವಾ ಸಾಮಗ್ರೀಪ್ರಭವೋಥವಾ ।
ಶೂದ್ರೇಭ್ಯೋऽತಿಶಯಂ ಧತ್ತೇ ಯಃ ಸಾಧಾರಣತಾಗುಣಃ ॥ ೨೨ ॥

ವಿಪ್ರಾಣಾಂ ಪಂಚಧಾಭೇದಃ ಕಲ್ಪನೀಯಸ್ತು ಪಂಡಿತೈಃ ।
ನ ಜಾತಿಜಸ್ತ್ರಯೀಜೋ ವಾ ವಿಶೇಷೋ ಯುಕ್ತಿಬಾಧಕಾತ್ ।
ಕ್ರಮಾಕ್ರಮಕ್ರಿಯಾಃ ಸಂತಿ ನ ಸನಾತನ ವಸ್ತುನಃ ॥ ೨೩ ॥

ನಿತ್ಯೋ ನ ಹೇತುಃ ವಿಗತಕ್ರಿಯತ್ವಾತ್ ।
ಹೇತುರ್ಭವೇದ್ವೇದವಿಶೇಷತಃ ಸಃ ॥
ಸ ತತ್ಸಮಸ್ತಪ್ರತಿ ಸನ್ನಿಧಾನಾತ್ ।
ಕಾಲಾತ್ಯಯೇಕ್ಷಿತ್ವ ಮಯುಕ್ತಮೇವ ॥ ೨೪ ॥

---

೨೨. ಉಪನಯನಾದಿ ಸಂಸ್ಕಾರವೆಂಬುದು ಬ್ರಾಹ್ಮಣಯೋನಿಯಲ್ಲಿ ಉತ್ಪತ್ತಿಯಾಗುವುದರಿಂದಲೇ ಸಾಧ್ಯವೋ? ಹೀಗೆ ಉತ್ಪತ್ತಿಯಿಲ್ಲದೇ ಬೇರೆ ಸಾಮಗ್ರ್ಯಾದಿಗಳಿಂದಲಾದರೂ ಸಾಧ್ಯವೋ ? ಅದು ಹೇಗಾದರೂ ಇರಲಿ. ಈ ಸಂಸ್ಕಾರವೆಂಬ ಸಾಧಾರಣಗುಣವು ಶೂದ್ರರಿಗಿಂತ ಬ್ರಾಹ್ಮಣರಲ್ಲಿ ಒಂದು ಅತಿಶಯತೆ (ಹೆಚ್ಚಿಗೆ) ಯನ್ನುಂಟುಮಾಡಿದೆ.

೨೩. ಪಂಡಿತರೆನಿಸಿದವರು ಬ್ರಾಹ್ಮಣರಲ್ಲಿ ಐದು ಭೇದಗಳನ್ನು ಕಲ್ಪಿಸುತ್ತಾರೆ. ಆದರೆ ಹೀಗೆ ಕಲ್ಪಿಸುವುದರಲ್ಲಿ ಬಾಧಕವಾದ ಯುಕ್ತಿಯೂ; ಇರುವುದರಿಂದ ಈ ಭೇದವು ಜಾತಿಜನ್ಯವಾದುದಾಗಲಿ, ವೇದಜನ್ಯವಾದುದಾಗಲಿ, ಅಲ್ಲ. ಹಿಂದಿನಿಂದಲೂ ನಡೆದು ಬಂದಿರುವ ವಸ್ತು ಪದ್ಧತಿ ಇವುಗಳಿಗೆ ಕ್ರಮಾಕ್ರಮಗಳನ್ನು ಈಗ ನಿಶ್ಚಯಿಸಲು ಸಾಧ್ಯವಿಲ್ಲ.

೨೪. ಜಾತಿಯು ನಿತ್ಯಪದಾರ್ಥವು. ನಿತ್ಯಪದಾರ್ಥಗಳಿಗೆ ಕ್ರಿಯೆಗಳಿರುವುದಿಲ್ಲ. ಕ್ರಿಯಗಳೇ ಇಲ್ಲದೆ ಕಾರಣಗಳು ಎಂದಿಗೂ ಇರುವುದಿಲ್ಲ. ಆದ್ದರಿಂದ ಜಾತಿಯು ಯಾವ ಕಾರಣಗಳಿಗೂ ಒಳಗಾಗುವುದಿಲ್ಲ. ವೇದಗಳಮೂಲಕ ಕಾರಣವನ್ನು ನಿಶ್ಚಯಿಸುತ್ತೇವೆಂದರೆ ಅದು ಎಲ್ಲಾ ಜಾತಿಗಳಿಗೂ ಸಮಾನವಾಗಿದೆ. ಕಾಲವು ಮುಂದುವರಿಯುತ್ತಾ ಬಂದಂತೆ ಜಾತಿ ಧರ್ಮವನ್ನು ಅನುಸರಿಸಬೇಕೆಂಬುದಾದರೆ ಅದು ಸರಿಯಲ್ಲವೆಂದು ತಿಳಿಯಬೇಕು.

ಸ್ವಾಂತಃ ಶರೀರವೃತ್ತಿಸ್ಥಃ ಶ್ರುತಿಯೋಗಾದುದೇತಿ ಯಃ ।
ಸೋಽನನ್ಯವೇದವಿಜ್ಞಾತ ಸ್ವಭಾವೋ ನೈರ್ನ ಗಮ್ಯತೆ ॥ ೨೫ ॥

ವಿಶಿಷ್ಟಾಧೀತಿಧರ್ಮತ್ವೇ ಕೃತ್ರಿಮಾ ಬ್ರಹ್ಮಸಂಗತಿಃ ।
ಯಸ್ಮಾಸ್ತ್ಯತಿಶಯಸ್ತಸ್ಯ ನಾನ್ಯೋ ನಾಶ್ರಯತೇ ಯದಿ ॥ ೨೬ ॥

ದೃಶ್ಯಸ್ವಭಾವಂ ಕಿಮಭೀಷ್ಟಮೇತತ್ ।
ಬ್ರಾಹ್ಮಣ್ಯಮಾಹೋಸ್ವಿದದೃಶ್ಯರೂಪಂ ॥
ಸರ್ವೈಃ ಪ್ರತೀಯೇತ ಹಿ ದೃಶ್ಯರೂಪಂ ।
ತತೋಽನ್ಯಥಾವದ್ಗತಿರೇವ ನ ಸ್ಯಾತ್ ॥ ೨೭ ॥

ಸಾಮಗ್ರ್ಯಭಾವಾತ್ಪರಮಂ ವಿಶೇಷಂ ।
ಭೂದೇವಗಾತ್ರಸ್ಥಮಭೂಮಿ ದೇವಾಃ ॥
ಸ್ಮರಂತಿ ತೇನಾತ್ಮನಿ ಪುಣ್ಯಪಾಪಂ ।
ಯಥಾ ತಥೇತ್ಯೇತದಯುಕ್ತಮುಕ್ತಂ ॥ ೨೮ ॥

---

೨೫. ಶರೀರದಲ್ಲಿ ಅಂತಃಕರಣವೆಂಬ ಒಳಭಾಗದಲ್ಲಿ ಈ ಸಂಸ್ಕೃತಿ ಇದ್ದು ಕೊಂಡು ವೇದಾಭ್ಯಾಸದಿಂದ ಹೊರಕ್ಕೆ ಗೋಚರವಾಗುವುದು. ಈ ಸ್ವಭಾವವನ್ನು ವೇದಾಧ್ಯಯನ ಮಾಡದೇ ಇರುವ ಶೂದ್ರಾದಿಗಳು ತಿಳಿಯುವುದು ಅಸಾಧ್ಯ.

೨೬-೨೭. ಒಂದು ವಿಶೇಷಕ್ರಮದಿಂದ ಅಧ್ಯಯನ ಮಾಡುವುದೇ ಬ್ರಾಹ್ಮಣ ಧರ್ಮವೆಂದು ಹೇಳುವುದಾದರೆ ಅದೂ ಕಲ್ಪಿತಬ್ರಾಹ್ಮಣ್ಯವೆನಿಸುವುದು. ಯಾವ ನಿಗೆ ಆ ವೇದಾಧ್ಯಯನದಲ್ಲಿ ಅತಿಶಯವಾದ ಜ್ಞಾನವಿದೆಯೋ ಅವನಿಗೆ ಯಾವ ನೊಬ್ಬನೂ ಸಮನಾಗಲೇ ಆರನು. ಬ್ರಾಹ್ಮಣ್ಯವೆಂಬುದು ದೃಶ್ಯಸ್ವಭಾವವುಳ್ಳದ್ದೋ ಅದೃಶ್ಯಸ್ವಭಾವವುಳ್ಳದ್ದೋ? ಎಂದರೆ ಎಲ್ಲರೂ ಬ್ರಾಹ್ಮಣ್ಯವನ್ನು ದೃಶ್ಯಸ್ವರೂಪ ವೆಂದು ತಿಳಿದುಕೊಂಡಿದ್ದಾರೆ. ಈಗ ಅದನ್ನೂ ಬೇರೇ ರೀತಿ ಹೇಳಿದರೆ ಆ ಮಾತಿಗೆ ಉಪಪತ್ತಿಯೇ ಬರುವುದಿಲ್ಲ.

೨೮. ದೇವತೆಗಳೂ ಸಹ ಭೂಸುರರೆನಿಸಿದ ಬ್ರಾಹ್ಮಣರ ಶರೀರದಲ್ಲಿ ಯಾವ ಕಾರಣವೂ ಇಲ್ಲದೇ ಯಾವುದೋ ಒಂದು ಅದ್ಭುತವಾದ ವಿಶೇಷ ಸಾಮಗ್ರಿಯಿದ್ದೇ ಇರಬೇಕೆಂದು ಸ್ಮರಿಸುವರು. ಆದ್ದರಿಂದ ಇತರರು ತಮ್ಮಲ್ಲಿ ಬ್ರಾಹ್ಮಣ್ಯವಿಲ್ಲದೇ

ಸಾಮಗ್ರ್ಯನುಷ್ಠಾನಗುಣೈಃ ಸಮಗ್ರಾ ।
ಶೂದ್ರಾ ಯತಃ ಸಂತಿ ಸಮಾ ದ್ವಿಜಾನಾಂ ।
ತಸ್ಮಾದ್ವಿಶೇಷೋ ದ್ವಿಜ ಶೂದ್ರ ನಾಮ್ನೋಃ ।
ನಾಧ್ಯಾತ್ಮಿಕೋ ಬಾಹ್ಯನಿಮಿತ್ತಕೋ ವಾ ॥ ೨೯ ॥

ಸಂಸ್ಕಾರತಃ ಸೋಽತಿಶಯೋ ಯದಿ ಸ್ಯಾತ್ ।
ಸರ್ವಸ್ಯ ಪುಂಸೋಽಸ್ತ್ಯತಿಸಂಸ್ಕೃತಸ್ಯ ॥
ಯಃ ಸಂಸ್ಕೃತೋ ವಿಪ್ರಗಣ ಪ್ರಧಾನೋ ।
ವ್ಯಾಸಾದಿಕೈಸ್ತೇನ ನ ತಸ್ಯ ಸಾಮ್ಯಮ್ ॥ ೩೦ ॥

ಹೇತುತ್ವಂ ಘಟತೇ ನೈಷಾಂ ಜಾತ್ಯಾದೀನಾಮಸಂಭವಾತ್ ।
ಜಾತೇರಕೃತಕತ್ವಾಚ್ಚ ಅಧೀತೇನ ವಿಶೇಷತಃ ॥ ೩೧ ॥

---

ಹೋಗುವುದಕ್ಕೆ ಕಾರಣಭೂತವಾದ ಯಾವುದೋ ಪಾಪಗಳ ಸಂಪರ್ಕವಿದೆಯೆಂದು ಭಾವಿಸುತ್ತಾರೆ ಎಂದು ಹೇಳುವುದು ಯುಕ್ತವಲ್ಲ.

೨೯. ಶೂದ್ರರು ಬ್ರಾಹ್ಮಣರಿಗೆ ಸಮ ಎಂಬುದಕ್ಕೆ ಬೇಕಾದ ಗುಣರೂಪಾದಿ ಕಾರಣಗಳು ಸಮಗ್ರವಾಗಿ ಇರೋಣದರಿಂದ ಬ್ರಾಹ್ಮಣ, ಶೂದ್ರ ಎಂಬ ಹೆಸರುಗಳಿಗೆ ಅಷ್ಟು ಸಮರ್ಪಕವಾದ ವ್ಯತ್ಯಾಸ ಕಾಣುವುದಿಲ್ಲ. ಆದರೂ ಇವರುಗಳಿಗೆ ಆಧ್ಯಾತ್ಮಿಕ ಮತ್ತು ಕೆಲವು ಬಾಹ್ಯಕಾರಣಗಳಿಂದ ವ್ಯತ್ಯಾಸವಿದೆ ಎಂದು ಹೇಳಬಹುದು.

೩೦. ಹಿಂದಿನ ಸಂಸ್ಕಾರಗಳಿಂದ ಬ್ರಾಹ್ಮಣ ಶೂದ್ರರಲ್ಲಿ ಭೇದವೆಣಿಸೋಣ ವೆಂದರೆ ಅತ್ಯಂತ ಸಂಸ್ಕೃತರಾದರೆ ಇವರಿಬ್ಬರಲ್ಲೂ ಭೇದವನ್ನು ಕಂಡು ಹಿಡಿಯು ವುದೇ ಅಸಾಧ್ಯ, ಬ್ರಾಹ್ಮಣರಲ್ಲಿ ಉತ್ತಮರಾದ ವ್ಯಾಸಾದಿಗಳೊಡನೆ ಇತರ ಬ್ರಾಹ್ಮಣ ರುಗಳಿಗೇ ಸಾಮ್ಯವಿಲ್ಲ ?

೩೧. ಈ ಜಾತಿ ಮೊದಲಾದುವುಗಳಿಗೆ ಬ್ರಾಹ್ಮಣಾದಿ ವ್ಯವಹಾರ ಕಾರಣತ್ವ ವುಂಟಾಗುವುದಿಲ್ಲ. ಏಕೆಂದರೆ ಈ ಜಾತಿ ಎಂಬುದು ಸ್ವಾಭಾವಿಕವಾದುದೇ ವಿನಾ ಕೃತಕವಾಗಿ ಏರ್ಪಟ್ಟಿಲ್ಲ. ಮತ್ತು ವಿಶೇಷರೀತಿಯಲ್ಲಿ ಅಧ್ಯಯನಮಾಡೋಣದರಿಂದ ಏರ್ಪಟ್ಟಿದ್ದಂತೂ ಅಲ್ಲವೇ ಅಲ್ಲ.

**ಸಂಸ್ಕಾರಾತಿಶಯಾಭಾವಾದಂತರಸ್ಯಾಗತೇಃ ಪರೈಃ ।**
**ಭೌತಿಕತ್ವಾಚ್ಛರೀರಸ್ಯ ಸಮಸ್ತಾನಾಮಸಂಹಿತೈಃ** ॥ ೩೨ ॥

**ಕಿಂ ಚಾನ್ಯನಾಸ್ತಿಕಮ್ಲೇಚ್ಛ ಯವನಾದಿಜನೇಷ್ವಲಂ ।**
**ವೇದೋದಿತಬಹಿರ್ದುಷ್ಟಚರಿತೇಷು ದುರಾತ್ಮಸು** ॥ ೩೩ ॥

**ಧರ್ಮಾದತಿಶಯೋ ದೃಷ್ಟಃ ಕ್ರೂರಸಾಹಸಿಕಾದಿಷು ।**
**ತಸ್ಮಾದ್ದ್ವಿಪ್ರೇಷು ಜಾತ್ಯಾದಿಸಾಮಗ್ರೀಪ್ರಭವೋ ನ ಸಃ** ॥ ೩೪ ॥

**ತಸ್ಮಾನ್ನ ಚ ವಿಭೇದೋಽಸ್ತಿ ನ ಬಹಿರ್ನಾಂತರಾತ್ಮನಿ ।**
**ನ ಸುಖಾದೌ ನ ಚೈಶ್ವರ್ಯೇ ನಾಜ್ಞಾಯಾಂ ನಾಭಯೇಷ್ವಪಿ** ॥ ೩೫ ॥

---

೩೨. ಇತರ ವಿಶೇಷ ಸಂಸ್ಕಾರಗಳೇನೂ ಇಲ್ಲದುದರಿಂದಲೂ, ಇತರರೂ ಪ್ರಯತ್ನಪಟ್ಟು ಇದರಲ್ಲಿ ಸೇರಬಹುದಾದುದರಿಂದಲೂ, ಆ ಇತರರ ಶರೀರವೂ ಇವರ ಶರೀರದಂತೆ ಪಂಚಭೂತಾತ್ಮಕವೇ ಆದುದರಿಂದಲೂ, ಬ್ರಾಹ್ಮಣನಲ್ಲಿ ಏನೇನು ವಿಶೇಷ ಶಕ್ತಿಗಳು ಕಾಣಬೇಕೋ ಅವೆಲ್ಲಾ ಒಟ್ಟುಗೂಡಿ ಏಕತ್ರ ಇಲ್ಲದಿರುವುದರಿಂದಲೂ, 'ಇವನು ಬ್ರಾಹ್ಮಣ' 'ಇವನು ಶೂದ್ರ' ಎಂದು ವ್ಯವಸ್ಥೆಮಾಡುವುದೇ ಕಷ್ಟ.

೩೩. ನಾಸ್ತಿಕರು, ಮ್ಲೇಚ್ಛರು, ಯವನರು, ಮುಂತಾದ ಜನರಲ್ಲಿ ವೇದದಲ್ಲಿ ಹೇಳಿಲ್ಲದ ದುಷ್ಟನಡವಳಿಕೆಗಳಿರುತ್ತಾ ಅವರು ಕ್ರೂರರೂ ಸಾಹಸಿಗಳೂ ಆದ ದುರಾತ್ಮರಾಗಿದ್ದಾರೆ.

೩೪. ಆ ಜನರಿಗಿಂತ ಬ್ರಾಹ್ಮಣರಲ್ಲಿ ಧರ್ಮನಿಮಿತ್ತವಾದ ಒಂದು ಅತಿಶಯ (ವ್ಯತ್ಯಾಸ) ವನ್ನು ಕಾಣಬಹುದು. ಆದ್ದರಿಂದ ಬ್ರಾಹ್ಮಣರಲ್ಲಿ ಬ್ರಾಹ್ಮಣತ್ವಾದಿ ಜಾತಿ ಸ್ಥಿತಿಯು ಸ್ವತಃ ಸಿದ್ಧವಾದುದೇ ಹೊರತು ಸಾಮಗ್ರಿಜನ್ಯವಾದುದಲ್ಲ.

೩೫-೩೮. ಆದುದರಿಂದ ಅಂತರಂಗವಾಗಿಯಾಗಲಿ, ಬಹಿರಂಗವಾಗಿಯಾಗಲಿ, ಬ್ರಾಹ್ಮಣ್ಯಾದಿ ಭೇದವು ಇಲ್ಲ. ಸುಖಪಡುವುದು, ಐಶ್ವರ್ಯವಂತರಾಗಿರುವುದು, ಅಧಿಕಾರ ಮಾಡುವುದು, ಆಜ್ಞಾಶಕ್ತಿಯುಕ್ತರಾಗಿರುವುದು, ಭಯಪಡದೇ ಧೈರ್ಯವಾಗಿರುವುದು, ಧಾತುಪುಷ್ಟಿಯುಳ್ಳವರಾಗಿರುವುದು, ಇವುಗಳಲ್ಲಿಯಾಗಲಿ, ಆಕಾರ, ದೃಷ್ಟಿ, ವಿಹಿತ ಕಾರ್ಯಾಚರಣೆ, ಆಯುಃಪ್ರಮಾಣ, ಅಂಗಪುಷ್ಟಿ, ಅಂಗದೌರ್ಬಲ್ಯ, ಸ್ಥೈರ್ಯ

ನ ವೀರ್ಯೇ ನಾಕೃತೌ ನಾಕ್ಷ್ಣೇ ನ.ವ್ಯಾಪಾರೇ ನ ಚಾಯುಷಿ ।
ನಾಂಗೇ ಪುಷ್ಟ್ಯಾ ನ ದೌರ್ಬಲ್ಯೇ ನಸ್ಥೈರ್ಯೇ ನಾಪಿ ಚಾಪಲೇ ॥ ೩೬ ॥

ನ ಪ್ರಜ್ಞಾಯಾಂ ನ ವೈರಾಗ್ಯೇ ನ ಧರ್ಮೇ ನ ಪರಾಕ್ರಮೇ ।
ನ ತ್ರಿವರ್ಗೇ ನ ನೈಪುಣ್ಯೇ ನ ರೂಪಾದೌ ನ ಭೇಷಜೇ ॥ ೩೭ ॥

ನ ಸ್ತ್ರೀಗರ್ಭೇ ನ ಗಮನೇ ನ ದೇಹಮಲಸಂಪ್ಲವೇ ।
ನಾಸ್ಥಿರಂಧ್ರೇ ನ ಚ ಪ್ರೇಮ್ಣಿ ನ ಪ್ರಮಾಣೇ ನ ಲೋಮಸು ॥ ೩೮ ॥

ಶೂದ್ರಬ್ರಾಹ್ಮಣಯೋರ್ಭೇದೋ ಮೃಗ್ಯಮಾಣೋಽಪಿ ಯತ್ನತಃ ।
ನೇಕ್ಷ್ಯತೇ ಸರ್ವಧರ್ಮೇಷು ಸಂಹತ್ಯೈಸ್ತ್ರಿದಶೈರಪಿ ॥ ೩೯ ॥

ಉಕ್ತಮಾತ್ರಾ ವಿಸಂಭೂತಿಃ ವಿಚಾರಕ್ರಮಕಾರಿಭಿಃ ।
ವೃದ್ಧವೃಂದಾರಕಾಧೀಶೈಃ ಅಪ್ರಧೃಷ್ಯಮಿದಂ ವಚಃ ॥ ೪೦ ॥

---

ಚಪಲತ್ವ, ಜ್ಞಾನಸಂಪಾದನೆ, ವೈರಾಗ್ಯಶೀಲತೆ, ಧರ್ಮಾಶಕ್ತಿ, ಪರಾಕ್ರಮ ಧರ್ಮಾರ್ಥಕಾಮಗಳೆಂಬ ತ್ರಿವರ್ಗಸಂಪಾದನಾಶಕ್ತಿ, ಯುಕ್ತಿ, ಸೌಂದರ್ಯಾಭಿನಿವೇಶ. (ಶಿಸ್ತುಗಾರಿಕೆ) ಔಷಧಗಳ ವಿಷಯವಾದ ತಿಳಿವಳಿಕೆ, ಸ್ತ್ರೀಯರಲ್ಲಿ ಗರ್ಭೋತ್ಪತ್ತಿ ಮಾಡುವಿಕೆ, ನಡಗೆಯಶಕ್ತಿ, ದೇಹಕಶ್ಮಲಯುಕ್ತತೆ, ಅಸ್ಥಿಗಳ ರಂಧ್ರಯುಕ್ತತೆ ಪ್ರೇಮಸರಣಿ, ದೇಹದ ಉದ್ದ ಗಾತ್ರಾದಿ ಪ್ರಮಾಣ, ಶರೀರದ ರೋಮಾದಿಗಳು ಈ ಮುಂತಾದುವುಗಳಲ್ಲಿಯಾಗಲಿ; ಶೂದ್ರನಿಗೂ ಬ್ರಾಹ್ಮಣನಿಗೂ ಭೇದವೇನೂ ಕಾಣುವುದಿಲ್ಲ.

೩೯. ಸರ್ವಧರ್ಮಸಮುದಾಯಸ್ವರೂಪರಾದ ದೇವತೆಗಳು ಎಷ್ಟೋ ಪ್ರಯತ್ನಪಟ್ಟು ಹುಡುಕಿದರೂ ಶೂದ್ರನಿಗೂ ಬ್ರಾಹ್ಮಣನಿಗೂ ಯಾವ ವ್ಯತ್ಯಾಸವೂ ಕಾಣಬರುವುದಿಲ್ಲ.

೪೦. ವಿಮರ್ಶೆಪೂರ್ವಕವಾಗಿ ವಿಚಾರಮಾಡಿದವರು ಹೇಳಿರುವ ಈ ಪರಸ್ಪರ ವಿರುದ್ಧ ಧರ್ಮಗಳ ಸಂಭವವನ್ನು "ಹಾಗಾಗುವುದಿಲ್ಲ" ಎಂದು ಹೇಳುವುದಕ್ಕೆ ವೃದ್ಧರಾದ (ಪುರಾತನರಾದ) ದೇವಾಧೀಶರಿಗೂ ಸಹ ಅಸಾಧ್ಯ.

ನ ಬ್ರಾಹ್ಮಣಾಶ್ಚಂದ್ರಮರೀಚಿಶುಭ್ರಾಃ ।
ನ ಕ್ಷತ್ರಿಯಾಃ ಕಿಂಶುಕ ಪುಷ್ಪವರ್ಣಾಃ ॥
ನ ಚೇಹ ವೈಶ್ಯಾ ಹರಿತಾಲತುಲ್ಯಾಃ ।
ಶೂದ್ರೋ ನ ಚಾಂಗಾರಸಮಾನವರ್ಣಾಃ ॥ ೪೧ ॥

ಪಾದಪ್ರಚಾರೈಸ್ತನುವರ್ಣ ಕೇಶೈಃ ।
ಸುಖೇನ ದುಃಖೇನ ಚ ಶೋಣಿತೇನ ॥
ತ್ವಚ್ಮಾಂಸಮೇದೋಽಸ್ಥಿ ರಸೈಃ ಸಮಾನಾಃ ।
ಚತುಷ್ಪ್ರಭೇದಾ ಹಿ ಕಥಂ ಭವಂತಿ ॥ ೪೨ ॥

ವರ್ಣಪ್ರಮಾಣಾಕೃತಿಗರ್ಭವಾಸ ।
ವಾಗ್ಬುದ್ಧಿಕರ್ಮೇಂದ್ರಿಯಜೀವಿತೇಷು ।
ಬಲತ್ರಿವರ್ಗಾಮಯಭೇಷಜೇಷು ।
ನ ವಿದ್ಯತೇ ಜಾತಿಕೃತೋ ವಿಶೇಷಃ ॥ ೪೩ ॥

---

೪೧. ಬ್ರಾಹ್ಮಣರೆಲ್ಲರೂ ಚಂದ್ರಕಿರಣದಂತೆ ಶುಭ್ರರಾಗಿಯೇ ಇರುವುದಿಲ್ಲ. ಕ್ಷತ್ರಿಯರೆಲ್ಲರೂ ಮುತ್ತುಗದ ಹೂವಿನಂತೆ ಕೆಂಪು ಬಣ್ಣಉಳ್ಳವರಾಗಿಯೇ ಇರುವುದಿಲ್ಲ. ವೈಶ್ಯರು ತಾಳೆಯ ಎಲೆಯಂತೆ ಹಸರು ಬಣ್ಣದವರೇ ಆಗಿರುವುದಿಲ್ಲ. ಶೂದ್ರರೆಲ್ಲರೂ ಇದ್ದಿಲಿನಂತೆ ಕಪ್ಪು ಬಣ್ಣದವರೇ ಆಗಿರುವುದಿಲ್ಲ.

೪೨. ಕಾಲುಗಳ ನಡಗೆಯಲ್ಲಿಯೂ ಶರೀರದ ಬಣ್ಣಗಳಲ್ಲೂ ಕೂದಲಿನ ವ್ಯತ್ಯಾಸಗಳಲ್ಲೂ; ಚರ್ಮ, ಮಾಂಸ, ಕೊಬ್ಬು, ಮೂಳೆ, ಲಾಲಾರಸ ಇವುಗಳೆಲ್ಲದರಲ್ಲಿಯೂ; ಸುಖ ದುಃಖಾನುಭವಗಳಲ್ಲಿಯೂ; ರಕ್ತಗಳ ಸ್ಥಿತಿಯಲ್ಲೂ; ಸಹ ಬ್ರಾಹ್ಮಣರು ಇತರರಿಗೆ ಸಮಾನವಾಗಿರುವಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಭೇದಗಳು ಹೇಗೆತಾನೆ ಆದೀತು ? ಮತ್ತು ಹಾಗಾಗಲು ಕಾರಣತಾನೇ ಏನು ?

೪೩. ಬಣ್ಣ, ಉದ್ದ, ಗಾತ್ರ ಮುಂತಾದ ಅಳತೆಯ ಪ್ರಮಾಣ, ಆಕಾರ, ಗರ್ಭದಲ್ಲಿ ಬೆಳೆಯುವಕಾಲ, ವಾಕ್ಕು, ಬುದ್ಧಿ, ಕರ್ಮೇಂದ್ರಿಯಗಳು, ಜೀವ, ದೇಹಶಕ್ತಿ ಧರ್ಮಾರ್ಥಕಾಮಗಳೆಂಬ ತ್ರಿವರ್ಗಸಾಧನಾಸಕ್ತಿ, ರೋಗ ಮತ್ತು ಔಷಧಿಗಳು, ಇವುಗಳಾವುದರಲ್ಲಿಯೂ ಜಾತಿ ನಿಮಿತ್ತಕಗಳಾದ ಭೇದಗಳೇನೂ ಇರುವುದಿಲ್ಲ. ಎಲ್ಲರಿಗೂ ಒಂದೇ ಅಗಿದೆ.

ಸ ಏಕ ಏವಾತ್ರ ಪತಿಃ ಪ್ರಜಾನಾಂ ।
ಕಥಂ ಪುನರ್ಜಾತಿಕೃತಃಪ್ರಭೇದಃ ॥
ಪ್ರಮಾಣದೃಷ್ಟಾಂತನಯ ಪ್ರವಾದೈಃ ।
ಪರೀಕ್ಷ್ಯಮಾಣೋ ವಿಘಟತ್ವಮೇತಿ ॥ ೪೪ ॥

ಚತ್ವಾರ ಏಕಸ್ಯ ಪಿತುಃ ಸುತಾಶ್ಚ ।
ತೇಷಾಂ ಸುತಾನಾಂ ಖಲು ಜಾತಿರೇಕಾ ॥
ಏವಂ ಪ್ರಜಾನಾಂ ಹಿ ಪಿತೈಕ ಏವ ।
ಪಿತ್ರೈಕಭಾವಾನ್ನ ಚ ಜಾತಿಭೇದಃ ॥ ೪೫ ॥

ಫಲಾನ್ಯಥೋದುಂಬರವೃಕ್ಷಜಾತೇಃ ।
ಯಥಾಗ್ರಮಧ್ಯಾಂತಭವಾನಿ ಯಾನಿ ॥
ವರ್ಣಾಕೃತಿಸ್ಪರ್ಶರಸೈಃ ಸಮಾನಿ ।
ತಥೈಕತೋ ಜಾತಿರಪಿ ಪ್ರಚಿಂತ್ಯಾ ॥ ೪೬ ॥

---

೪೪. ಈ ಸಮಸ್ತ ಪ್ರಜೆಗಳನ್ನೂ ಸೃಷ್ಟಿಸಿದ ಪ್ರಜೇಶ್ವರ (ಬ್ರಹ್ಮ) ನು ಒಬ್ಬನೇ ಆಗಿರುವಾಗ ಅವನೊಬ್ಬನಿಂದಲೇ ಸೃಷ್ಟರಾದ ಇವರಿಗೆ ಜಾತಿಭೇದಗಳು ಹೇಗೆ ಬಂದುವು ? ಶಾಸ್ತ್ರಪ್ರಮಾಣ, ಉಚಿತ ದೃಷ್ಟಾಂತ, ನೀತಿಯ ಉಪಪಾದನೆ, ಇವುಗಳಿಂದ ಪರೀಕ್ಷೆಮಾಡಿದರೆ ಯಾವುಗಳ ಪ್ರಕಾರದಿಂದಲೂ ಭೇದ ಸಂಘಟಿಸದೆ ವಿಘಟನೆಯೇ ಕಾಣುತ್ತದೆ

೪೫. ಒಬ್ಬ ತಂದೆಗೆ ಅನೇಕಜನ ಮಕ್ಕಳಿದ್ದರೆ ಆ ಮಕ್ಕಳಿಗೆಲ್ಲಾ ಜಾತಿ ಒಂದೇ ಆಗಿರಬೇಡವೇ ? ಹಾಗೆಯೇ ಪ್ರಜೆಗಳನ್ನೆಲ್ಲಾ ಸೃಷ್ಟಿಸಿದ ಬ್ರಹ್ಮ ಒಬ್ಬನೇತಂದೆ ಆಗಿದ್ದಾನೆ. ತಂದೆ ಒಬ್ಬನೇ ಆಗಿರೋಣದರಿಂದ ಅವನ ಮಕ್ಕಳಿಗೆ ಜಾತಿಭೇದವೇ ಇಲ್ಲ.

೪೬. ಅತ್ತಿಯ ಮರವೆಂಬ ಒಂದು ಜಾತಿಯ ಮರದಲ್ಲಿ ಹಣ್ಣು, ಬುಡದಲ್ಲಿಯೂ ಮಧ್ಯದ ಕೊಂಬೆಗಳಲ್ಲಿಯೂ, ತುದಿಗೊಂಬೆಗಳಲ್ಲಿಯೂ, ಸಹ ಬಿಡುವುದು ಆದಾಗ್ಗೂ ಅವುಗಳಿಗೆ ಪರಸ್ಪರ ವ್ಯತ್ಯಾಸವೇನೂ ಇಲ್ಲದೇ ಬಣ್ಣದಲ್ಲಿಯೂ, ಆಕಾರದಲ್ಲಿಯೂ ರುಚಿಯಲ್ಲಿಯೂ, ಸ್ಪರ್ಶದಲ್ಲೂ ಎಲ್ಲವೂ ಸಮವಾಗಿಯೇ ಹೇಗೆ ಇರುತ್ತವೆಯೋ ಹಾಗೆಯೇ ಒಬ್ಬನೇ ವಿರಾಟ್ಪುರುಷನ ಬೇರೆ ಬೇರೆ ಅಂಗಗಳಲ್ಲಿ ಜನಿಸಿದ ಶೂದ್ರಾದಿ ವ್ಯಕ್ತಿಗಳು ಬೇರೆ ಬೇರೆ ಜಾತಿಗಳೆಂದು ಹೇಳುವುದಕ್ಕೆ ಅವಕಾಶವಿಲ್ಲ.

ಯೇ ಕೌಶಿಕಾ ಕಾಶ್ಯಪ ಗೌತಮಾಶ್ಚ ।
ಕೌಂಡಿನ್ಯಮಾಂಡವ್ಯವಸಿಷ್ಠಗೋತ್ರಾಃ ॥
ಆತ್ರೇಯ ಕೌತ್ಸಾಂಗಿರಸಸ್ಸಗರ್ಗಾಃ ।
ಮೌದ್ಗಲ್ಯಕಾತ್ಯಾಯನಭಾರ್ಗವಾಶ್ಚ ॥ ೪೭ ॥

ಗೋತ್ರಾಣಿ ನಾನಾವಿಧಜಾತಯಶ್ಚ ।
ಭ್ರಾತೃಸ್ನುಷಾಮೈಥುನ ಪುತ್ರಭಾವಾಃ ॥
ವೈವಾಹಿಕಂ ಕರ್ಮ ನ ವರ್ಣಭೇದಾಃ ।
ಸರ್ವಾಣಿ ಶಿಲ್ಪಾನಿ ಭವಂತಿ ತೇಷಾಂ ॥ ೪೮ ॥

ಯೇ ಚಾನ್ಯೇ ಪಂಡಿತಾ ಪ್ರಾಹುಃ ದೇಹಬ್ರಾಹ್ಮಣತಾಂ ನರಾಃ ।
ತೇಷಾಂ ದುರ್ದೃಷ್ಟಿತಿಮಿರಂ ಅಪನೀಯಾನುಕಂಪ್ಯ ಚ ॥ ೪೯ ॥

ನ್ಯಾಯಾಂಜನೌಷಧೈರ್ದಿವ್ಯೈಃ ಪರಿಣಾಮಸುಖಾವಹೈಃ ।
ಉಪನೀತೈಃ ಪ್ರಯತ್ನೇನ ಸುದೃಷ್ಟಿಂ ಸಂವಿದಧ್ಮಹೇ ॥ ೫೦ ॥

---

೪೭. ಕೌಶಿಕ, ಕಾಶ್ಯಪ, ಗೌತಮ, ಕೌಂಡಿನ್ಯ, ಮಾಂಡವ್ಯ, ವಸಿಷ್ಠ, ಆತ್ರೇಯ, ಕೌತ್ಸ, ಆಂಗಿರಸ, ಗರ್ಗ, ಮೌದ್ಗಲ್ಯ, ಕಾತ್ಯಾಯನ, ಭಾರ್ಗವ ಈ ಋಷಿಗಳ ಗೋತ್ರಗಳು ಬ್ರಹ್ಮಕ್ಷತ್ರಿಯಾದಿ ಬೇರೆ ಬೇರೆ ಜಾತಿಗಳಲ್ಲಿಯೂ ಕಾಣುವುದರಿಂದಲೂ,

೪೮. ಅಣ್ಣ, ತಮ್ಮ ಎಂಬ ಭೇದವೂ, ಅತ್ತೆ, ಸೊಸೆಯೆಂಬ ಭೇದವೂ, ಮಾವೆಯಂತೆ ಸಂಭೋಗಾರ್ಹರು, ಸಂಭೋಗಾರ್ಹರಲ್ಲದವರು ಎಂಬ ಭೇದವೂ ಇದ್ದಾಗ್ಯೂ ವಿವಾಹಕರ್ಮದ ವಿಷಯದಲ್ಲಿ ನಾನಾಗೋತ್ರಗಳವರಿಗೆ ಪರಸ್ಪರ ವ್ಯತ್ಯಾಸವಾಗಲಿ ನಾನಾಜಾತಿಯವರಿಗೆ ಪರಸ್ಪರ ವ್ಯತ್ಯಾಸವಾಗಲಿ ಕಾಣುವುದಿಲ್ಲ. ಬಗೆಬಗೆಯಾದ ಕೈಕಸಬುಗಳು ಅವಲಂಬನೆಯೂ ಎಲ್ಲರಿಗೂ ಸಮಾನಗಳಾಗಿವೆ.

೪೯–೫೦. ವಿದ್ವಾಂಸರೆನಿಸಿದ ಕೆಲವರು ಬ್ರಾಹ್ಮಣದೇಹಕ್ಕೆ ಬ್ರಾಹ್ಮಣ್ಯವುಂಟೆಂದು ಹೇಳುವರು. ಅವರ ವಿರುದ್ಧ ಜ್ಞಾನವೆಂಬ ಅಂಧಕಾರವನ್ನು ತೊಲಗಿಸಿ, ಅವರಲ್ಲಿ ದಯೆಗೂಡಿ ಪರಿಣಾಮದಲ್ಲಿ ಸುಖವನ್ನುಂಟುಮಾಡುವ ಶ್ರೇಷ್ಠವಾದ ನ್ಯಾಯಗಳೆಂಬ ಅಂಜನರೂಪವಾದ ದಿವ್ಯೌಷಧಗಳಿಂದ ಅವರಿಗೆ ಒಳ್ಳೆಯ ಜ್ಞಾನದೃಷ್ಟಿಯನ್ನುಂಟುಮಾಡಿಕೊಡುವೆವು.

ಮೂರ್ತಿಮತ್ತ್ವಾಚ್ಚ ನಾಶಿತ್ವಂ ನಾಶಿತ್ವಾತ್ ಶೇಷಭೂತವತ್ ।
ದೇಹಾಧಾರನಿವಿಷ್ಟಾನಾಂ ಬ್ರಾಹ್ಮಣ್ಯಂ ನ ಪ್ರಕಲ್ಪ್ಯತೇ ॥ ೫೧ ॥

ಏಕೈಕೋವಯವಸ್ತೇಷಾಂ ನ ಬ್ರಾಹ್ಮಣ್ಯಂ ಸಮಶ್ನುತೇ ।
ನ ಚಾನೇಕ ಸಮೂಹೇಪಿ ಸರ್ವಥಾತಿಪ್ರಸಂಗತಾ ॥ ೫೨ ॥

ಪೃಥಿವ್ಯುದಕವಾಯ್ವಗ್ನಿಪರಿಣಾಮಾ ವಿಶೇಷತಃ ।
ದೇಹತಃ ಸರ್ವಭೂತಾನಾಂ ಬ್ರಾಹ್ಮಣತ್ವಪ್ರಸಂಗತಃ ॥ ೫೩ ॥

ದೇಹಸ್ಯ ಬ್ರಾಹ್ಮಣತ್ವಂ ಯೈರತತ್ವಜ್ಞೈಃ ಪ್ರಕಲ್ಪ್ಯತೇ ।
ಸಂಸ್ಕರ್ತ್ಯಾಣಾಂ ಶರೀರಸ್ಯ ತೇಷಾಂ ನ ಬ್ರಹ್ಮತಾ ಭವೇತ್ ॥ ೫೪ ॥

ಮೃಗ್ಯಮಾಣೇ ಪ್ರಯತ್ನೇನ ದೇಹೇ ತನ್ನೋಪಲಭ್ಯತೇ ।
ತಸ್ಮಾನ್ನ ದೇಹೇ ಬ್ರಾಹ್ಮಣ್ಯಂ ನಾಪಿ ದೇಹಾತ್ಮಕಂ ಭವೇತ್ ॥ ೫೫ ॥

---

೫೧. ಪೃಥಿವ್ಯಾದಿ ಇತರಭೂತಗಳು ನಾಶವಾಗತಕ್ಕದ್ದಾಗಿರೋಣದರಿಂದ ಬ್ರಾಹ್ಮಣ್ಯವೂ ನಾಶವಾಗತಕ್ಕದ್ದು, ದೇಹವೆಂಬ ಆಶ್ರಯದಲ್ಲಿ ಪ್ರವೇಶಮಾಡಿರುವ ಜನರಿಗೆಲ್ಲಾ ಬ್ರಾಹ್ಮಣ್ಯವನ್ನು ಕಲ್ಪಿಸಲು ಆಗುವುದಿಲ್ಲ.

೫೨. ಬ್ರಾಹ್ಮಣದೇಹದಲ್ಲಿರುವ ಅವಯುವದ ಸಮುದಾಯಕ್ಕೇ ಹೊರತು ಒಂದೊಂದು ಅವಯುವಕ್ಕೂ ಬ್ರಾಹ್ಮಣ್ಯವಿದೆಯೆಂದು ಹೇಳಲು ಹೇಗೆ ಆಗುವುದಿಲ್ಲವೋ ಹಾಗೆ ಅನೇಕ ಅವಯುವಗಳಿಂದ ಕೂಡಿದ ದೇಹದಲ್ಲಿಯೂ ಬ್ರಾಹ್ಮಣ್ಯವನ್ನು ಕಲ್ಪಿಸುವುದಕ್ಕೆ ಆಗುವುದಿಲ್ಲ. ಏಕೆಂದರೆ ಅತಿಪ್ರಸಂಗಬರಬಹುದು.

೫೩. ಪೃಥಿವ್ಯಾದಿ ಪಂಚಭೂತಗಳ ಪರಿಣಾಮರೂಪವಾದ ದೇಹದಲ್ಲಿ ಬ್ರಾಹ್ಮಣನಿಗೂ ಇತರರಿಗೂ ಏನೂ ವ್ಯತ್ಯಾಸಕಾಣುವುದಿಲ್ಲ. ಏಕೆಂದರೆ ಎಲ್ಲಾ ಭೂತಗಳಿಗೂ ದೇಹದೃಷ್ಟ್ಯಾ ಬ್ರಾಹ್ಮಣತ್ವವು ಪ್ರಾಪ್ತವಾಗುವುದು.

೫೪. ತತ್ವಜ್ಞರಲ್ಲದವರು ದೇಹಕ್ಕೆ ಬ್ರಾಹ್ಮಣತ್ವವನ್ನು ಕಲ್ಪಿಸುವರು ಅಂಥವರೂ ಕೂಡ ಸಂಸ್ಕಾರವಾಗುವುದಕ್ಕೆ ಮುಂಚೆ ಶರೀರಕ್ಕೆ ಬ್ರಾಹ್ಮಣ್ಯವಿಲ್ಲವೆಂದು ಒಪ್ಪಬೇಕಾಗುತ್ತದೆ.

೫೫. ಎಷ್ಟೆಷ್ಟು ಪ್ರಯತ್ನಪಟ್ಟು ಹುಡುಕಿದರೂ ದೇಹದಲ್ಲಿ ಬ್ರಾಹ್ಮಣತ್ವ ಸಿಕ್ಕುವುದಿಲ್ಲ. ಆದುದರಿಂದ ದೇಹದಲ್ಲಿ ಬ್ರಾಹ್ಮಣ್ಯವಿಲ್ಲ. ಬ್ರಾಹ್ಮಣ್ಯವು ದೇಹಸ್ವರೂಪವಾದುದೂ ಅಲ್ಲ.

**ವರ್ಣಾಪಸದ ಚಂಡಾಲ ಶ್ವಾದಾದೀನಾಂ ಪ್ರಸಜ್ಯತೇ ।**
**ಯದಿ ದೇಹಸ್ಯ ವಿಪ್ರತ್ವಂ ಭವದ್ಭಿರುಪಗಮ್ಯತೇ ॥ ೫೬ ॥**

**ದೇಹಶಕ್ತಿ ಗುಣ್ಯೈಃ ಕ್ಷೀಣ್ಯೈಃ ಕಾಯುಭಸ್ಮಾದಿ ರೂಪವತ್ ।**
**ತಸ್ಮಾದ್ದೇಹಾತ್ಮಕೇ ನೈತತ್ ಬ್ರಾಹ್ಮಣ್ಯಂ ನಾಪಿ ಕರ್ಮಜಂ ॥ ೫೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಷಷ್ಠೀಕಲ್ಪೇ ವಿವೇಕವರ್ಣನಂ ನಾಮ ಏಕಚತ್ವಾರಿಂಶೋಽಧ್ಯಾಯಃ.**



---

೫೬. ನೀವು ದೇಹದಲ್ಲಿ ಬ್ರಾಹ್ಮಣ್ಯವಿದೆಯೆಂದು ಒಪ್ಪಿದುದೇ ಆದರೆ ನೀಚ ವರ್ಣದವರು, ಹೊಲೆಯರು, ಶ್ವಪಚರು ಇವರುಗಳ ದೇಹಕ್ಕೂ ಬ್ರಾಹ್ಮಣ್ಯ ವುಂಟೆಂದು ನೀವೇ ಹೇಳಬೇಕಾಗುವುದು.

೫೭. ದೇಹಶಕ್ತಿ, ಗುಣ ಸ್ವಭಾವ ಇವೆಲ್ಲಾ ಕುಗ್ಗಿ ನಶಿಸಿದಮೇಲೆ ಆ ಶರೀರವು ಭಸ್ಮ, ಮೃತ್ತಿಕಾದಿರೂಪಗಳನ್ನು ಹೊಂದುತ್ತದೆ. ಆದುದರಿಂದ ಬ್ರಾಹ್ಮಣ್ಯವೆಂಬುದು ದೇಹಸ್ವರೂಪವೂ ಅಲ್ಲ. ಅಥವಾ ಕೇವಲ ಕರ್ಮಜನ್ಯವಾದುದೂ ಅಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಷಷ್ಠೀ ಕಲ್ಪದಲ್ಲಿ ಬ್ರಾಹ್ಮಣ್ಯವಿವೇಕ ವರ್ಣನೆಯೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿಚತ್ವಾರಿಂಶೋಽಧ್ಯಾಯಃ

---

**॥ ಬ್ರಹ್ಮೋವಾಚ ॥**

**ಅಪರೈಶ್ಚ ಸದಾಚಾರಯೋಗಯುಕ್ತೈರ್ಮನೀಷಿಭಿಃ ।**
**ಯದಕಾರಿ ಮಹಾಸತ್ವೈಃ ಸುಭಾಷಿತಮಿದಂ ಶೃಣು ॥ ೧ ॥**

**ಬಹು ವನಸ್ಪತಿಶಂಖಪಿಪೀಲಿಕಾ ಭ್ರಮರವಾರಣಜಾತಮುದಾಹರನ್ ।**
**ಗತಿಷು ಕರ್ಮಮಿತೋ ನಟವತ್ಸದಾ ಭ್ರಮತಿ ಜಂತುರಲಬ್ಧಸುದರ್ಶನಃ ॥ ೨ ॥**

---

## ನಲವತ್ತೆರಡನೆಯ ಅಧ್ಯಾಯವು

೧. ಬ್ರಹ್ಮನು ಹೇಳುತ್ತಾನೆ—ಸದಾಚಾರ ಸಂಪನ್ನರೂ ಯೋಗಾಭ್ಯಾಸಿಗಳೂ ಮಹಾಸತ್ವಶಾಲಿಗಳೂ ಆದ ವಿದ್ವಾಂಸರು ಹೇಳಿರುವ ಸುಭಾಷಿತ ಪದ್ಯವನ್ನು ಹೇಳುವೆನು ಅದನ್ನು ನೀನು ಕೇಳು.

೨. ಒಬ್ಬನೇ ನಟನು ಅನೇಕ ರೂಪಗಳನ್ನು ಧರಿಸಿ ಬೇರೆ ಬೇರೆ ಅನೇಕ ವ್ಯಕ್ತಿಗಳಂತೆ ತೋರಿಸಿಕೊಳ್ಳುವ ಹಾಗೆ ತತ್ವಜ್ಞಾನವನ್ನರಿಯದ ಪ್ರಾಣಿಯು ಕರ್ಮಬಂಧನಕ್ಕೊಳಗಾಗಿ ನಾನಾ ವನಸ್ಪತಿಗಳು, ಶಂಖಗಳು, ಇರುವೆ, ದುಂಬಿ, ಆನೆ ಮೊದಲಾದ ಜಾತಿಗಳಲ್ಲಿ ಹುಟ್ಟಿ ತೊಳಲುವುದು.

ರೂಪೈಶ್ವರ್ಯಜ್ಞಾನಕುಲೈರ್ವಿಭವೈರ್ವಮಿತೋ ।
ಭೂತ್ವಾ ಧರ್ಮಪಥಂ ಚೇದ್ವಿಜಹಾಸಿ ॥
ನ ವಕ್ಷ್ಯೇ ವ್ರಜನ್ ಭುವನಾನಿ ತ್ವಮುಟಿಷ್ಯನ್ ।
ತಸ್ಮಾದಭಿಭಸ್ಮೀಭೂತೇ ಮದ ಆತ್ಮನಃ ॥ ೩ ॥

ಜಾತಿ ಕುಲ ರೂಪವಯೋ ವರ್ಣಾನೇಕಶ್ರುತಮದಾಂಧಾಃ ।
ಕ್ಲೀಬಾಃ ಪರತ್ರ ಚೇಹ ಚ ಹಿತಮಪ್ಯರ್ಥಂ ನ ಪಶ್ಯಂತಿ ॥ ೪ ॥

ಜ್ಞಾತ್ವಾ ಭವಪರಿವರ್ತೇ ಜಾತೀನಾಂ ಕೋಟಿ ಶತಸಹಸ್ರೇಷು ।
ಹೀನೋತ್ತಮ ಮಧ್ಯತ್ವಂ ಕೋ ಜಾತಿಮದಂ ಬುಧಃ ಕುರ್ಯಾತ್ ॥ ೫ ॥

ನೈಕಾನ್ ಜ್ಞಾತಿ ವಿಶೇಷಾನ್ ಇಂದ್ರಿಯನಿವೃತ್ತಿಪೂರ್ವಕಾನ್ ಸರ್ವಾನ್ ।
ಕರ್ಮವಶಾದ್ಗಚ್ಛತ್ಯತ್ರ ಕಸ್ಯೈಕಾ ಶಾಶ್ವತೀ ಜಾತಿಃ ॥ ೬ ॥

---

೩. ರೂಪ, ಒಡೆತನ, ಜ್ಞಾನ, ಸತ್ಕುಲ, ಐಶ್ವರ್ಯ ಇವುಗಳಿಂದ ಆವೃತನಾಗಿ ಧರ್ಮಮಾರ್ಗವನ್ನು ಬಿಟ್ಟು ಪ್ರಪಂಚವನ್ನೆಲ್ಲಾ ಅಲೆಯುತ್ತಾ ನಿನ್ನ ಈ ಸಂಚಾರ ದಿಂದ ನಿನ್ನಲ್ಲುಂಟಾಗಿದ್ದ ಅಹಂಕಾರವೆಲ್ಲಾ ಕುಗ್ಗಿದಮೇಲೆ ನಿನಗೆ ತತ್ವೋಪದೇಶ ಮಾಡುವೆನು. ಅದಕ್ಕೆ ಮೊದಲು ಉಪದೇಶಕ್ಕೆ ನೀನು ಅರ್ಹನಲ್ಲ ಎಂದು ಆ ಮಹಾ ನುಭಾವರು ಹೇಳಿದರು.

೪. ಉತ್ತಮಜಾತಿ ಕುಲ, ಸೌಂದರ್ಯ, ಪ್ರಾಯ, ಮೈಬಣ್ಣ, ಅನೇಕಶಾಸ್ತ್ರ ಜ್ಞಾನ, ಮದ, ಮುಂತಾದುವುಗಳಿಂದ ಕಣ್ಗಾಣದವರಾಗಿ ಪುಂಸ್ತ್ವವನ್ನು ಕಳೆದು ಕೊಂಡು (ನಪುಂಸಕರಾಗಿ) ಪರಲೋಕದಲ್ಲೂ ಈ ಲೋಕದಲ್ಲೂ ತನಗೆ ಹಿತವಾದುದು ಯಾವುದೆಂಬುದನ್ನು ಕೂಡ ಇವರು ತಿಳಿಯುವುದಿಲ್ಲ.

೫. ಅನೇಕ ಸಹಸ್ರಕೋಟಿ ಜನ್ಮಗಳಲ್ಲಿ ಹುಟ್ಟಿ ಸುತ್ತಾಡುವುದನ್ನು ಅರಿತು ಕೊಂಡು; ತನಗೂ ಹೀನತ್ವ ಉತ್ತಮತ್ವ ಮಧ್ಯಮತ್ವಗಳುಂಟೆಂದು ತಿಳಿದು ತಿಳಿದು ಹೀನಜಾತಿ, ಮಧ್ಯಮಜಾತಿ, ಉತ್ತಮಜಾತಿ ಎಂಬ ಜಾತಿಮದವನ್ನು ಯಾವ ಪಂಡಿ ತನು ತಾನೆ ತೋರಿಸಿಯಾನು.

೬. ತನ್ನ ದೇಹದಿಂದ ಇಂದ್ರಿಯ ವಿಸರ್ಜನೆಯಾಗಿ ಅದು ಸ್ತ್ರೀವ್ಯಕ್ತಿಯ ಗರ್ಭವನ್ನು ಪ್ರವೇಶಿಸುತ್ತಲೆ ಮನುಷ್ಯ, ಗೋವು, ಅಶ್ವ ಮೊದಲಾದ ಬೇರೆ ಜಾತಿಗಳು

ವಿದ್ವತ್ಸದಸಿ ಯೋಽಪ್ಯಾಹ ಸಂಸ್ಕಾರಾದ್ಬ್ರಾಹ್ಮಣೋ ಭವನ್ ।
ನ್ಯಾಯಜ್ಞೈಃ ಸ ನಿರಾಕಾರ್ಯೋ ವಾಕ್ಯೈರ್ನ್ಯಾಯಾನುಸಾರಿಭಿಃ ॥ ೭ ॥

ಗರ್ಭಾಧಾನಂ ಪುಂಸವನಂ ಸೀಮಂತೋನ್ನಯನಂ ತಥಾ ।
ಜಾತಕರ್ಮ ನಾಮಕರ್ಮ ತಥಾನ್ನಪ್ರಾಶನಂ ಚ ವೈ ॥ ೮ ॥

ಚೂಡೋಪನಯನಂ ಚಾಸ್ಯ ವ್ರತಾದೇಶಸ್ತಥೈವ ಚ ।
ಸಮಾವರ್ತನಮಪ್ಯನ್ಯತ್ ಪಾಣಿಗ್ರಹಣಮೇವ ಚ ॥ ೯ ॥

ಇತ್ಯೇವಮಾದಿಸಂಸ್ಕಾರವಿಧಾನೈರ್ಯೇಽತಿಸಂಸ್ಕೃತಾಃ ।
ತ ಏವ ಬ್ರಾಹ್ಮಣಾ ಯೇಷಾಂ ನೈರಂತರ್ಯೇಣ ಕಾಮನಾಃ ॥ ೧೦ ॥

ಯಸ್ಮಾದ್ದ್ವೈ ಬ್ರಾಹ್ಮಣಾ ಜಾತಾ ಬ್ರಾಹ್ಮಣ್ಯೈಃ ಕೃತಸಂಸ್ಕೃತೈಃ ।
ನ್ಯಾಯಶಕ್ತಿರ್ಹಿ ಕಾಂತ್ಯಾದಿ ವಿಶೇಷೋ ವಿದ್ಯತೇ ಸ್ಫುಟಃ ॥ ೧೧ ॥

---

ಆಯಾ ಕ್ಷೇತ್ರಯೋನಿಗಳಿಗೆ ತಕ್ಕಂತೆ ಏರ್ಪಡುವುವು. ತನ್ನ ಕರ್ಮವಶದಿಂದ ಈ ಜಾತಿಗಳನ್ನು ಪ್ರಾಣಿಯು ಹೊಂದುವುದು. ಹೀಗಿರುವಾಗ ಇದೇ ಶಾಶ್ವತವಾದ ಜಾತಿಯೆಂದು ಹೇಳಲು ಯಾರಿಗೆ ತಾನೆ ಸಾಧ್ಯ ?

೭. ಸಂಸ್ಕಾರದಿಂದ ಬ್ರಾಹ್ಮಣನೆನಿಸಿದೆನೆಂದು ವಿದ್ವತ್ಸಭೆಯಲ್ಲಿ ಯಾವನಾದನೊಬ್ಬನು ಹೇಳಿಕೊಂಡರೆ ಇದನ್ನು ಕೇಳಿ ನ್ಯಾಯ ತಿಳಿದವರು ನ್ಯಾಯಶಾಸ್ತ್ರಾನುಸಾರವಾಗಿ ಅವನನ್ನು ನಿರಾಕರಿಸಬೇಕು.

೮-೧೦. ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ವೇದವ್ರತಾದೇಶ, ಸಮಾವರ್ತನ, ವಿವಾಹ, ಇವು ಮುಖ್ಯವಾಗಿ ಬ್ರಾಹ್ಮಣನಿಗೆ ಆಗಬೇಕಾದ ಸಂಸ್ಕಾರಗಳು. ಈ ರೀತಿಯಾದ ಸಂಸ್ಕಾರಗಳು ಯಾರಿಗೆ ನಡೆದಿವೆಯೋ ಅವರೇ ನಿರಂತರವೂ ಬ್ರಾಹ್ಮಣರೆನಿಸುವರು ಎಂದು ಕೆಲವರಮತ.

೧೧. ಹೀಗೆ ಸಂಸ್ಕಾರಹೊಂದಿದವರೇ ಬ್ರಾಹ್ಮಣರೆನಿಸುವುದಾದರೆ ಅವರ ಆಯುಸ್ಸು, ದೇಹಶಕ್ತಿ, ಕಾಂತಿ ಮೊದಲಾದ ವಿಶೇಷಧರ್ಮಗಳು ಅವರಲ್ಲಿ ಮಾತ್ರ ಸ್ಫುಟವಾಗಿ ಕಾಣಬೇಕು. ಅನ್ಯರಲ್ಲಿ ಸ್ಫುಟವಾಗಿ ಕಾಣದೆ ಇರಬೇಕು.

ತೌ ವಾ ಬ್ರಾಹ್ಮಣ ಗೋತ್ರೋತ್ಥೌ ಸಂಸ್ಕೃತಾಸಂಸ್ಕೃತೌ ನರೌ ।
ಇಷ್ಟಾನಿಷ್ಟಾಪ್ತ್ಯನಾಪ್ತಿಭ್ಯಾಂ ನ ಭಿಧ್ಯೇತೇ ಪರಸ್ಪರಂ ॥ ೧೨ ॥

ಜ್ಞಾನಾಧ್ಯಯನ ಮೀಮಾಂಸಾ ನಿಯಮೇಂದ್ರಿಯ ನಿಗ್ರಹೈಃ ।
ವಿನಾ ಸಂಸ್ಕಾರ ಯೋಗ್ಯೇಪಿ ಪುಂಸಃ ಶೂದ್ರಾನ್ನ ಭಿನ್ನತಾ ॥ ೧೩ ॥

ಸಂಸ್ಕಾರ ಕ್ರಿಯಮಾಣಶ್ಚ ನ ಶೂದ್ರೇ ಚ ಪ್ರವರ್ತತೇ ।
ಸಂಸ್ಕೃಂತಾಂಗಶ್ಚ ಪಾಪೇಭ್ಯೋ ನ ಪಶ್ಯತಿ ನಿವರ್ತತೇ ॥ ೧೪ ॥

ವಿಲಾಸಿನೀ ಭುಜಂಗಾದಿ ಜನವನ್ಮದವಿಹ್ವಲಾಃ ।
ವ್ಯಾಮುಹ್ಯಂತಿ ಸದಾಚಾರಾತ್ ಬ್ರಾಹ್ಮಣತ್ವಾತ್ ಪತಂತಿ ಚ ॥ ೧೫ ॥

ಸಂಸ್ಕೃತೋಪಿ ದುರಾಚಾರೋ ನರಕಂ ಯಾತಿ ಮಾನವಃ ।
ನಿಃಸಂಸ್ಕಾರಃ ಸದಾಚಾರೋ ಭವೇದ್ವಿಪ್ರೋತ್ತಮಃ ಸದಾ ॥ ೧೬ ॥

---

೧೨. ಬ್ರಾಹ್ಮಣಗೋತ್ರದಲ್ಲಿ ಹುಟ್ಟಿದ ಇಬ್ಬರಲ್ಲಿ ಒಬ್ಬರಿಗೆ ಸಂಸ್ಕಾರಗಳು ನಡೆದು ಇನ್ನೊಬ್ಬರಿಗೆ ಸಂಸ್ಕಾರವಾಗದಿದ್ದರೆ ಅವರಿಬ್ಬರಲ್ಲೊಬ್ಬನಿಗೆ ಇಷ್ಟಪ್ರಾಪ್ತಿಯೂ ಮತ್ತೊಬ್ಬನಿಗೆ ಅನಿಷ್ಟದ ಅಪ್ರಾಪ್ತಿಯೂ ಆಗುವುದು. ಎಂದರೆ ಇವುಗಳಿಂದ ಭೇದವೇ ತೋರುವುದಿಲ್ಲ.

೧೩. ಜ್ಞಾನ, ವೇದಾಧ್ಯಯನ, ವಿಚಾರ, ಒಗೆಬಗೆಯ ನಿಯಮಗಳು, ಇಂದ್ರಿಯನಿಗ್ರಹ ಇವು ಯಾವುವೂ ಇಲ್ಲದಿದ್ದರೆ ಉಪನಯನಾದಿ ಸಂಸ್ಕಾರಗಳಾಗಿದ್ದರೂ ಶೂದ್ರರಿಗೂ ಈ ಸಂಸ್ಕಾರವಾದವನಿಗೂ ಇಬ್ಬರಿಗೂ ಏನೂ ಭೇದವು ತೋರುವುದಿಲ್ಲ.

೧೪-೧೫. ಶೂದ್ರನಿಗೆ ಸಂಸ್ಕಾರಮಾಡಿದರೂ ಅದು ಫಲಿಸುವುದಿಲ್ಲ. ಲಟಕುಗಾರ್ತಿಯರಾದ ಹೆಂಗಸರು, ವಿಟಪುರುಷರು ಇವರಂತೆ ಆ ಶೂದ್ರರು ಮದದಿಂದ ವ್ಯಾಕುಲರಾಗಿ ಸದಾಚಾರವಿಮುಖರಾಗುವರು, ಮತ್ತು ಸಂಸ್ಕಾರದಿಂದ ಜನಿತವಾದ ಬ್ರಾಹ್ಮಣ್ಯವನ್ನು ಕಳೆದುಕೊಳ್ಳುವರು.

೧೬. ಮನುಷ್ಯನಿಗೆ ಸರ್ವಸಂಸ್ಕಾರಗಳೂ ಆಗಿದ್ದರೂ ಅವನು ದುರಾಚಾರನಾಗಿದ್ದರೆ ನರಕಕ್ಕೇ ಹೋಗುವನು. ಯಾವ ಸಂಸ್ಕಾರವೂ ಆಗದೆ ಇದ್ದರೂ ಆಚಾರವೊಂದು ಸರಿಯಾಗಿದ್ದರೆ ಅವನು ಯಾವಾಗಲೂ ವಿಪ್ರೋತ್ತಮನೆನಿಸುವನು.

ಮಂತ್ರಪೂತಾತ್ಮಸಂಸ್ಕಾರಯುಕ್ತೋಽಪಿ ಪ್ಲವತೇ ನ ತು ।
ಬ್ರಾಹ್ಮಣ್ಯಾದವಿಕಲ್ಪಂ ಸಃ ಪಶ್ಚಾದ್ದುಶ್ಚರಿತೋ ನರಃ ॥ ೧೭ ॥

ಸಾಮರ್ಥ್ಯಾತ್ ಪತನಂ ತಸ್ಮಾತ್ ಬ್ರಾಹ್ಮಣ್ಯಾನ್ಮುಚ್ಯತೇ ಧ್ರುವಂ ।
ದುರನುಷ್ಠಾನಸಕ್ತಾನಾಂ ಪುಂಸಾಂ ಪುರುಷಪುಂಗವೈಃ ॥ ೧೮ ॥

ಕಿಂ ಕ್ವಚಿ ದ್ದೃಷ್ಟಮೇವೈತತ್ ಕಿಂ ವಾ ಸ್ಪರ್ಧಾ ವಿದತ್ಯಯಂ ।
ತುಲ್ಯಮುತ್ಸಹಸೇ ಕರ್ತುಮಸ್ಯದೃಷ್ಟಂ ತದಾ ವದ ॥ ೧೯ ॥

ಅಚಾರಮನುತಿಷ್ಠಂತೋ ವ್ಯಾಸಾದಿ ಮುನಿಸತ್ತಮಾಃ ।
ಗರ್ಭಾಧಾನಾದಿಸಂಸ್ಕಾರಕಲಾಪ ರಹಿತಾಸ್ಫುಟಂ ॥ ೨೦ ॥

ವಿಪ್ರೋತ್ತಮಾಃ ಶ್ರಿಯಂ ಪ್ರಾಪ್ತಾಃ ಸರ್ವಲೋಕನಮಸ್ಕೃತಾಃ ।
ಬಹವಃ ಕಥ್ಯಮಾನಾ ಯೇ ಕತಿಚಿತ್ತಾನ್ನಿ ಬೋಧತ ॥ ೨೧ ॥

---

೧೭. ಮಂತ್ರಜಪದಿಂದ ಶುದ್ಧವಾದ ಆತ್ಮಸಂಸ್ಕಾರದಿಂದ ಕೂಡಿದ್ದರೂ ಆಮೇಲೆ ದುಶ್ಚರಿತ್ರದಿಂದ ಕೂಡಿದವನಾದರೆ, ಆ ಮನುಷ್ಯನು ನಿಸ್ಸಂದೇಹವಾಗಿ ಬ್ರಾಹ್ಮಣ್ಯದಿಂದ ಭ್ರಷ್ಟನಾಗುವನು.

೧೮. ಕೆಟ್ಟನಡವಳಿಕೆಯುಳ್ಳವರ ಜೊತೆಸೇರಿ ಕಷ್ಟಪಟ್ಟು ಬ್ರಾಹ್ಮಣ್ಯವನ್ನು ಸಂಪಾದಿಸಲು ಪ್ರಯತ್ನಿಸಿದರೂ ಅಂತಹ ಪುರುಷನು ತನ್ನದಲ್ಲಿದ್ದ ಬ್ರಾಹ್ಮಣ್ಯವನ್ನು ಕಳೆದುಕೊಳ್ಳುವುದೇ ನಿಶ್ಚಯ.

೧೯. ಈಗ ಹೇಳಿದ ವಿಷಯವು ಎಲ್ಲಿಯಾದರೂ ಕಂಡುದುಂಟೋ ಅಥವಾ ಸುಮ್ಮನೇ ಸ್ಪರ್ಧೆಗಾಗಿ ತಿಳಿದು ಹೇಳಿದ ಮಾತೋ? ಎಂದರೆ ಎರಡೂ ಸಂಭವ. ಎರಡಕ್ಕೂ ಸಮಾನವಾಗಿಯೇ ಉತ್ಸಾಹಗೊಳ್ಳುವೆಯೋ ಎಂದರೆ ಕಾಣದೇ ಇರುವುದನ್ನು ಸ್ಪರ್ಧೆಯಿಂದ ತಿಳಿಸುವ ಕ್ರಮವನ್ನು ಕೇಳು.

೨೦. ತಪ್ಪದೆ ಸದಾಚಾರವನ್ನೇ ನಡೆಯಿಸುತ್ತಿದ್ದ ವ್ಯಾಸ ಮೊದಲಾದ ಮುನಿ ಶ್ರೇಷ್ಠರು ಗರ್ಭಾಧಾನಾದಿ ಸಂಸ್ಕಾರಗಳಿಲ್ಲದವರೆಂಬುದು ಸ್ಪಷ್ಟವಾಗಿಯೇ ಇದೆ.

೨೧. ಅನೇಕ ಬ್ರಾಹ್ಮಣೋತ್ತಮರು ಸರ್ವಜನರಿಂದಲೂ ನಮಸ್ಕರಿಸಲ್ಪಡುವ ಯಾವ ಸಂಪತ್ತಿಯನ್ನು ಪಡೆದರೋ ಅಂತಹ ಕೆಲವರನ್ನು ಹೇಳುತ್ತೇನೆ ಕೇಳು.

**ಜಾತೋ ವ್ಯಾಸಸ್ತು ಕೈವರ್ತ್ಯಾಃ ಶ್ವಪಾಕ್ಯಾಶ್ಚ ಪರಾಶರಃ ।**
**ಶುಕ್ಯಾಃ ಶುಕಃ ಕಣಾದಾಖ್ಯಃ ತಥೋಲೂಕ್ಯಾಸ್ಸುತೋಽಭವತ್ ॥ ೨೨ ॥**

**ಮೃಗೀಜೋಽಥರ್ಷ್ಯಶೃಂಗೋಽಪಿ ವಶಿಷ್ಠೋ ಗಣಿಕಾತ್ಮಜಃ ।**
**ಮಂದಪಾಲೋ ಮುನಿಶ್ರೇಷ್ಠೋ ನಾವಿಕಾಪತ್ಯಮುಚ್ಯತೇ ॥ ೨೩ ॥**

**ಮಾಂಡವ್ಯೋ ಮುನಿರಾಜಸ್ತು ಮಂಡೂಕೀ ಗರ್ಭಸಂಭವಃ ।**
**ಬಹವೋಽನ್ಯೇಽಪಿ ವಿಪ್ರತ್ವಂ ಪ್ರಾಪ್ತಯೇ ಪೂರ್ವವದ್ವಿಜಾಃ ॥ ೨೪ ॥**

**ಯಚ್ಚೈತಚ್ಚಾರುಚರಿತೈಃ ಆರ್ಚ್ಯಮುಚ್ಚರಿತಂ ವಚಃ ।**
**ತದ್ವಿಚಾರ್ಯಾಚರನ್ ಉಚ್ಚೈಃ ಆಚಾರೋಪಚಿತದ್ಯುತಿಃ ॥ ೨೫ ॥**

**ಹರಿಣೀಗರ್ಭಸಂಭೂತಃ ಋಷ್ಯಶೃಂಗೋ ಮಹಾಮುನಿಃ ।**
**ತಪಸಾ ಬ್ರಾಹ್ಮಣೋ ಜಾತಃ ಸಂಸ್ಕಾರಸ್ತೇನ ಕಾರಣಮ್ ॥ ೨೬ ॥**

---

೨೨. ವ್ಯಾಸರು ಅಂಬಿಗರ ಹುಡುಗಿಯಲ್ಲಿ ಹುಟ್ಟಿದರು. ಪರಾಶರ ಮಹರ್ಷಿಯು ನಾಯಿಯನ್ನು ಬೇಯಿಸಿ ತಿನ್ನುವ ಹೀನಜಾತಿಯ ಸ್ತ್ರೀಯಲ್ಲಿ ಹುಟ್ಟಿದನು. ಶುಕಮಹರ್ಷಿಗಳು ಹೆಣ್ಣುಗಿಣಿಯ ಗರ್ಭದಲ್ಲಿ ಹುಟ್ಟಿದರು. ಮತ್ತು ಕಣಾದರು (ವೈಶೇಷಿಕಶಾಸ್ತ್ರ ಪ್ರವರ್ತಕರು) ಹೆಣ್ಣು ಗೂಬೆಯಲ್ಲಿ ಜನಿಸಿದರು.

೨೩. ಋಷ್ಯಶೃಂಗಮುನಿಗಳು ಹೆಣ್ಣುಹುಲ್ಲೆಯಲ್ಲಿ ಹುಟ್ಟಿದರು. ವಸಿಷ್ಠರು ಸೂಳೆಯಲ್ಲಿ ಹುಟ್ಟಿದವರು, ಮುನಿಶ್ರೇಷ್ಠರಾದ ಮಂದಪಾಲರು ನಾವಿಕನ ಮಗನಾಗಿ ಹುಟ್ಟಿದರೆಂದು ಹೇಳಲ್ಪಟ್ಟಿದೆ.

೨೪. ಶ್ರೇಷ್ಠಮುನಿಗಳಾದ ಮಾಂಡವ್ಯರು ಹೆಣ್ಣುಕಪ್ಪೆಯ ಗರ್ಭದಲ್ಲಿ ಹುಟ್ಟಿದರು. ಇನ್ನೂ ಅನೇಕ ಬ್ರಾಹ್ಮಣರು ಹಿಂದೆ ಹೇಳಿದಂತೆ ತಾವು ಹುಟ್ಟುವ ಸ್ಥಾನಗಳು ಪ್ರಶಸ್ತಗಳಲ್ಲದಿದ್ದರೂ ಶ್ರೇಷ್ಠವಾದ ಬ್ರಾಹ್ಮಣ್ಯವನ್ನು ಪಡೆದರು.

೨೫. ಇಲ್ಲಿ ಹೇಳಿರುವ ಮಹಾತ್ಮರ ಶ್ರೇಷ್ಠವಾದ ನಡತೆಗಳಿಂದ ಅವರ ವಿಷಯವಾಗಿ ಹೇಳಿದ ಮಾತು ಪೂಜ್ಯವಾಗಿರುವುದು. ಅದನ್ನು ವಿಚಾರಮಾಡಿ ಆರೀತಿ ನಡೆದವನು ಶ್ರೇಷ್ಠವಾದ ಆಚಾರದಿಂದ ಒಳ್ಳೆಯ ತೇಜಸ್ವಿಯಾಗುವನು.

೨೬. ಜಿಂಕೆಯ ಗರ್ಭದಲ್ಲಿ ಋಷ್ಯಶೃಂಗಮಹಾಮುನಿಯು ಹುಟ್ಟಿದನು. ಅನಂತರ ತಪಸ್ಸಿನಿಂದ ಬ್ರಾಹ್ಮಣನಾದನು. ಆದುದರಿಂದ ಸಂಸ್ಕಾರವೇ ಬ್ರಾಹ್ಮಣ್ಯಕ್ಕೆ ಕಾರಣ.

ಶ್ವಪಾಕೀಗರ್ಭಸಂಭೂತಃ ಪಿತಾ ವ್ಯಾಸಸ್ಯ ಪಾರ್ಥಿವಾ ।
ತಪಸಾ ಬ್ರಾಹ್ಮಣೋ ಜಾತಃ ಸಂಸ್ಕಾರಸ್ತೇನ ಕಾರಣಂ ॥ ೨೮ ॥

ಉಲೂಕೀ ಗರ್ಭಸಂಭೂತಃ ಕಣಾದಾಖ್ಯೋ ಮಹಾಮುನಿಃ ।
ತಪಸಾ ಬ್ರಾಹ್ಮಣೋ ಜಾತಃ ಸಂಸ್ಕಾರಸ್ತೇನ ಕಾರಣಂ ॥ ೨೯ ॥

ಗಣಿಕಾಗರ್ಭಸಂಭೂತಃ ವಶಿಷ್ಠಶ್ಚ ಮಹಾಮುನಿಃ ।
ತಪಸಾ ಬ್ರಾಹ್ಮಣೋ ಜಾತಃ ಸಂಸ್ಕಾರಸ್ತೇನ ಕಾರಣಂ ॥ ೨೯ ॥

ನಾವಿಕಾ ಗರ್ಭಸಂಭೂತೋ ಮಂದಪಾಲೋ ಮಹಾಮುನಿಃ ।
ತಪಸಾ ಬ್ರಾಹ್ಮಣೋ ಜಾತಃ ಸಂಸ್ಕಾರಸ್ತೇನ ಕಾರಣಂ ॥ ೩೦ ॥

ವೇದತಂತ್ರಜ ಸಂಸ್ಕಾರ ಕಲಾಪನಿಪುಣೈರಪಿ ।
ವಿದ್ಯಾ ತಪೋಧನಬಲಾತ್ ಉತ್ಕೃಷ್ಟಂ ಲಭ್ಯತೇ ಫಲಂ ॥ ೩೧ ॥

---

೨೭. ಚಂಡಾಲ ಸ್ತ್ರೀಗರ್ಭದಲ್ಲಿ ಹುಟ್ಟಿದ ವ್ಯಾಸರ ತಂದೆ ಪರಾಶರಮಹರ್ಷಿಗಳೂ ತಪಸ್ಸಿನಿಂದಲೇ ಬ್ರಾಹ್ಮಣರಾದರು. ಆದುದರಿಂದ ಸಂಸ್ಕಾರವೇ ಬ್ರಾಹ್ಮಣ್ಯಕ್ಕೆ ಕಾರಣ

೨೮. ಕಣಾದನೆಂಬ ದೊಡ್ಡಮುನಿಯು ಹೆಣ್ಣುಗೂಬೆಯಲ್ಲಿ ಜನಿಸಿ ತಪಸ್ಸು ಮಾಡಿ ಬ್ರಾಹ್ಮಣನಾದನು. ಆದುದರಿಂದ ಸಂಸ್ಕಾರವು ಬ್ರಾಹ್ಮಣ್ಯಕ್ಕೆ ಕಾರಣವು.

೨೯. ಸೂಳೆಯ ಗರ್ಭದಲ್ಲಿ ಹುಟ್ಟಿದ ವಸಿಷ್ಠನೂ ತಪಸ್ಸಿನಿಂದ ಬ್ರಾಹ್ಮಣನಾದನು. ಆದುದರಿಂದ ತಪಸ್ಸು ಬ್ರಾಹ್ಮಣ್ಯಕ್ಕೆ ಕಾರಣ.

೩೦. ಮಂದಪಾಲನೆಂಬ ಮಹರ್ಷಿಯು ಬೆಸ್ತಜಾತಿಯ ಹೆಂಗಸಿನ ಹೊಟ್ಟೆಯಲ್ಲಿ ಹುಟ್ಟಿದವನು. ಆದಾಗ್ಯೂ ತಪಸ್ಸಿನಿಂದ ಬ್ರಾಹ್ಮಣನಾದನು. ಆದ್ದರಿಂದ ಸಂಸ್ಕಾರವೇ ಬ್ರಾಹ್ಮಣ್ಯಕ್ಕೆ ಕಾರಣವು.

೩೧. ವೇದೋಕ್ತ ತಂತ್ರಗಳಿಂದ ಏರ್ಪಟ್ಟ ಸಂಸ್ಕಾರಗಳನ್ನು ಮಾಡಿಕೊಳ್ಳುವುದರಲ್ಲಿ ನಿಪುಣರಾದವರು ವಿದ್ಯಾಬಲ, ತಪೋಬಲ, ಧನಬಲ ಇವುಗಳ ಸಾಧನಗಳಿಂದ ಉತ್ಕೃಷ್ಟವಾದ ಫಲವನ್ನು ಹೊಂದುತ್ತಾರೆ.

**ಲಬ್ಧಸಂಸ್ಕಾರದೇಹಾಶ್ಚ ಮಹಾಪಾತಕಿನೋ ನರಾಃ ।**
**ಯಸ್ಮಾನ್ನಿವರ್ತತೇ ಬ್ರಹ್ಮ ತಸ್ಮಾತ್ಸಾಂಕೇತಿಕಂ ವಿದುಃ　　　　॥ ೩೨ ॥**

**ಇತಿ ಶ್ರೀ ಭವಿಷ್ಯೆಮಹಾಪುರಾಣೇ ಬ್ರಾಹ್ಮೇಪರ್ವಣಿ ಷಷ್ಠೀಕಲ್ಪಬ್ರಾಹ್ಮಣ್ಯ ಸಂಸ್ಕಾರ ವಿವೇಕವರ್ಣನಂ ನಾಮಚತ್ವಾರಿಂಶೋಽಧ್ಯಾಯಃ.**



೩೨. ಮಹಾಪಾಪಿಗಳಾಗಿದ್ದ ಪುರುಷರೂ ಸಹ ಉಪನಯನಾದಿ ಸಂಸ್ಕಾರಗಳಿಂದ ಬ್ರಾಹ್ಮಣ್ಯವನ್ನು ಹೊಂದಿ ಪರಿಶುದ್ಧರಾಗುವರು. ಆದ್ದರಿಂದ ಬ್ರಾಹ್ಮಣ್ಯವು ನಮಗೆ ಸಾಂಕೇತಿಕವೆಂದು ಹೇಳುವರು ಎಂದರೆ ಸಾಂಕೇತಿಕದಿಂದಲೇ ಬ್ರಾಹ್ಮಣ್ಯ ವುಂಟಾಗುವುದೆಂದು ಹೇಳುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಷಷ್ಠೀ ಕಲ್ಪದಲ್ಲಿ ಬ್ರಾಹ್ಮಣ ಸಂಸ್ಕಾರ ವಿವೇಕವರ್ಣನೆ ಎಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಚತ್ವಾರಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಕಿಂಚಾನ್ಯದಪರಂ ಯೂಯಂ ವೇದಮಂತ್ರವಿದೋ ಜನಾಃ ।
ಪ್ರಷ್ಟವ್ಯಾಃ ಕಸ್ಯ ಸಂಸ್ಕಾರೇ ವಿಶೇಷಮುಪಗಚ್ಛತ ॥ ೧ ॥

ಕಿಂ ದೇಹಸ್ಯೋತ ಯೇನಾಸೌ ನಿಸರ್ಗಮಲಿನಃ ಸ್ಥಿತಃ ।
ಶುಕ್ರಶೋಣಿತ ಸಂಭೂತಃ ಶಮಲೋದ್ಭವ ಕೀಟವತ್ ॥ ೨ ॥

ನಿಷೇಕಾದಿ ಸ್ಮಶಾನಾಂತ್ಯೈಃ ವಿವಿಧೈರ್ವಿಧಿವಿಸ್ತರೈಃ ।
ದೇಹಿನೋಽತಿಶಯಂ ಕೇಚಿತ್ ಉಪಗಚ್ಛಂತಿ ಮಾನವಾಃ ॥ ೩ ॥

---

## ನಲವತ್ತಮೂರನೆಯ ಅಧ್ಯಾಯವು

೧. ಬ್ರಹ್ಮನು ಋಷಿಗಳನ್ನು ಕುರಿತು ಹೇಳುತ್ತಾನೆ—ಎಲೈ ! ವೇದಮಂತ್ರಗಳನ್ನು ತಿಳಿದ ಜನಗಳೇ ! ನಿಮ್ಮನ್ನು ಇನ್ನೊಂದು ವಿಷಯವನ್ನು ಕೇಳಬೇಕಾಗಿದೆ. ದೇಹ ಆತ್ಮ ಈ ಎರಡರಲ್ಲಿ ಯಾವುದಕ್ಕೆ ಸಂಸ್ಕಾರ ಮಾಡುವುದರಲ್ಲಿ ವಿಶೇಷವಿದೆಯೆಂದು ನಿಮಗೆ ತಿಳಿದಿವೆ.

೨. ಏಕೆಂದರೆ, ದೇಹವು ಶುಕ್ರಶೋಣಿತಗಳ ಸಂಯೋಗದಿಂದ ಉತ್ಪನ್ನವಾಗಿ ಮಲದಲ್ಲಿ ಹುಟ್ಟಿದ ಕೀಟದಂತೆ ಇರುವುದು.

೩. ಕೆಲವರು ಮನುಷ್ಯರು ನಿಷೇಕಮೊದಲುಗೊಂಡು ಶ್ಮಶಾನಯಾತ್ರೆಯವರೆಗಿನ ವಿಧವಿಧವಾದ ವಿಸ್ತಾರವಾದ ಸಂಸ್ಕಾರಗಳಿಂದ ದೇಹಕ್ಕೆ ವಿಶೇಷ ಶಕ್ತಿಯುಂಟಾಗುವುದೆಂದು ಒಪ್ಪುವರು.

ತೇಷಾಂ ಗೂಢಂ ಮನಃಕಾಯವಾಗ್ಭಿದುಷ್ಟೈರ್ವಿಚೇಷ್ಟಿತೈಃ ।
ಅಸಂಯುತಮನುಷ್ಯಾಣಾಂ ಪಕ್ಷೋಽಯಂ ದೂಷ್ಯತೇ ಮಯಾ ॥ ೪ ॥

ವೈದಿಕಾಖಿಲ ಸಂಸ್ಕಾರ ಸಾರಭೂತಾಃ ದ್ವಿಜಾತಯಃ ।
ಸರ್ವ ಕಾರ್ಯಕರಾನ್ ಸರ್ವಾನ್ ವೃಷಲಾನತಿಶೇರತೇ ॥ ೫ ॥

ಚಂಡಕರ್ಮಾ ವಿಕರ್ಮಸ್ಥೋ ಬ್ರಹ್ಮಹಾ ಗುರುತಲ್ಪಗಃ ।
ಸ್ತೇನೋ ಗೋಘ್ನಃ ಸುರಾಪಾಣಃ ಪರಸ್ತ್ರೀರಮಣಪ್ರಿಯಃ ॥ ೬ ॥

ಮಿಥ್ಯಾವಾದೀ ಮದೋನ್ಮತ್ತೋ ನಾಸ್ತಿಕೋ ವೇದನಿಂದಕಃ ।
ಗ್ರಾಮಯಾಚಕ ನಿರ್ಗ್ರಂಥೌ ಬಹುದೋಷೋ ದುರಾಸದಃ ॥ ೭ ॥

ನಿಷಿದ್ಧಾಚಾರಸಂಸೇವೀ ಚೋರಶ್ಚಾಟೋ ಮದೋದ್ಧತಃ ।
ಧೂರ್ತೋ ನಟಃ ಶಠಃ ಪಾಪೀ ಸರ್ವಾಶೀ ಸರ್ವವಿಕ್ರಯೀ ॥ ೮ ॥

---

೪. ಮನಸ್ಸು, ದೇಹ- ವಾಕ್ಕು ಇವುಗಳ ದುರ್ವ್ಯಾಪಾರಗಳನ್ನು ಗುಟ್ಟಾಗಿ ಇಟ್ಟುಕೊಂಡಿರುವ ಮನುಷ್ಯರ ಈ ವಾದಗಳನ್ನು ನಾನು ವಿರೋಧಿಸುವೆನು

೫. ವೇದೋಕ್ತಗಳಾದ ಸಮಸ್ತ ಸಂಸ್ಕಾರಗಳನ್ನು ಹೊಂದಿರುವ ಬ್ರಾಹ್ಮಣರು ನಿಷಿದ್ಧಕಾರ್ಯಗಳಲ್ಲಿ ಪ್ರವರ್ತಿಸಿ, ಸಿಕ್ಕಿದ ಕೆಲಸಗಳನ್ನೆಲ್ಲಾ ಮಾಡಲು ತೊಡಗಿದರೆ ಬ್ರಾಹ್ಮಣೇತರರನ್ನೂ ಮೀರಿಸಿಬಿಡುತ್ತಾರೆ.

೬. ಕ್ರೂರಕರ್ಮಿಯೂ, ಲೋಕವಿರುದ್ಧಕೆಲಸಗಳನ್ನು ಆಚರಿಸುವವನೂ, ಬ್ರಹ್ಮಹತ್ಯ ಮಾಡಿದವನೂ, ಹೆಂಡ ಕುಡಿದವನೂ, ಪರಸ್ತ್ರೀಯಲ್ಲಿ ರಮಿಸುವವನೂ,

೭. ಸುಳ್ಳುಹೇಳುವವನೂ, ಹೆಮ್ಮೆಯಿಂದ ಕೂಡಿದವನೂ, ವೇದಶಾಸ್ತ್ರಗಳನ್ನೂ, ದೇವರನ್ನೂ ಇಲ್ಲವೆನ್ನುವವನೂ, ವೇದಗಳನ್ನು ನಿಂದಿಸುವವನೂ, ಊರಿನಲ್ಲಿ ಬಹುಜನರು ಮಾಡುವ ಅನೇಕ ಯಜ್ಞಗಳಲ್ಲಿ ಋತ್ವಿಜನಾಗಿ ಕೆಲಸಮಾಡುವವನೂ, ಶಾಸ್ತ್ರಜ್ಞಾನವಿಲ್ಲದವನೂ ಆದ ದೋಷಭಾಜಿಸನನ್ನು ಯಾವ ಕಾರ್ಯಕ್ಕೂ ಉಪಸರ್ಪಣೆ ಮಾಡಬಾರದು.

೮. ಮಾಡಬಾರದ ಕೆಲಸಮಾಡುವವನು, ಕಳ್ಳ, ಹರಟುವವನು, ಮದಿಸಿಕೊಬ್ಬಿದವನು, ಪಗಡೆಯಾಡುವವನು, ನಾಟಕದಲ್ಲಿ ಪಾತ್ರವಹಿಸುವವನು, ದುಷ್ಟ,

**ವಾಙ್ಮನಃ ಕಾಯಜೈರ್ದುಷ್ಟೈಃ ಹತಾ ಯೇ ಬ್ರಾಹ್ಮಣಾಧಮಾಃ ।**
**ತೇ ನ ಶುದ್ಧಿಂ ವ್ರಜಂತೀಹ ಅಪಿ ಯಜ್ಞ ಶತೈರಪಿ ॥ ೯ ॥**

**ಶೂದ್ರಾಣಾಂ ಯಾನ್ಯನಿಷ್ಟಾನಿ ಸಂಪದ್ಯಂತೇ ಸ್ವಭಾವತಃ ।**
**ವಿಪ್ರಾಣಾಮಪಿ ತಾನ್ಯೇವ ನಿರ್ವಿಘ್ನಾನಿ ಭವಂತಿ ನ ॥ ೧೦ ॥**

**ತಸ್ಮಾನ್ಮಂತ್ರೋಽಗ್ನಿಹೋತ್ರಂ ವಾ ವೇದ್ಯಾಂ ಪಶುವಧೋಽಪಿ ವಾ ।**
**ಹೇತವೋ ನಹಿ ವಿಪ್ರತ್ವೇ ಶೂದ್ರೈಃ ಶಕ್ತ್ಯಾ ಕ್ರಿಯಾ ಯಥಾ ॥ ೧೧ ॥**

**ಯೇ ಚಾಪಿ ಕರ್ಮಬಂಧೇನ ಬದ್ಧಾಃ ಸೀದಂತಿ ಜಂತವಃ ।**
**ಸಂಸಾರಾನಲಸಂತಾಪವಿಕ್ಲವೀಕೃತ ಮಾನಸಾಃ ॥ ೧೨ ॥**

---

ಪಾಪಕಾರ್ಯಕ್ಕೆ ಹೇಸದವನು, ಸಿಕ್ಕಿದುದನ್ನೆಲ್ಲಾ ತಿನ್ನುವವನು, ಎಲ್ಲವನ್ನು ಮಾರುವವನು.

೯. ಮನೋವಾಕ್ಕಾಯ ಜನ್ಯವಾದ ದೋಷದಿಂದ ಕೆಟ್ಟಿರುವವನು, ಇಂತಹ ನಡವಳಿಕೆಯುಳ್ಳ ಹೀನ ಬ್ರಾಹ್ಮಣನು, ನೂರಾರು ಯಜ್ಞಗಳನ್ನು ಮಾಡಿದಾಗ್ಯೂ ಎಂದಿಗೂ ಶುದ್ಧನೆನಿಸುವುದಿಲ್ಲ.

೧೦. ಶೂದ್ರರ ಸ್ವಭಾವಾನುಸಾರವಾಗಿ ಪರ್ಯಾಲೋಚಿಸಿದರೆ ಯಾವುವು ಅವರಿಗೆ ಅನಿಷ್ಟಗಳೋ ಬ್ರಾಹ್ಮಣರಿಗೂ ಅವೇ ಅನಿಷ್ಟಗಳು ಎಂಬುದರಲ್ಲಿ ಯಾವ ಅಡ್ಡಿಯೂ ಇಲ್ಲ.

೧೧. ಶೂದ್ರರಿಗೆ ಅವರಲ್ಲಿರುವ ಶಕ್ತಿವಿಶೇಷದಮೇಲೆ ಅವರ ಪಂಗಡದ ವಿಂಗಡಣೆ ಹೇಗೆ ಅನುಕೂಲವಾಗುವುದೋ ಹಾಗೆ ಬ್ರಾಹ್ಮಣರಿಗೂ ಅವರಲ್ಲಿ ವಿವಿಧಕರ್ಮಗಳನ್ನು ನಡೆಸುವ ಶಕ್ತಿವಿಶೇಷಕ್ಕನುಸಾರವಾಗಿ ಅವರನ್ನೂ ನಾನಾಪಂಗಡಗಳಾಗಿ ವಿಭಾಗಿಸಲು ಅವಕಾಶವಿದೆ. ಆದುದರಿಂದ ಮಂತ್ರಪುರಶ್ಚರಣೆಯಾಗಲೀ, ಅಗ್ನಿಹೋತ್ರಾಚರಣವಾಗಲೀ, ಯಜ್ಞವೇದಿಕೆಯಲ್ಲಿ ಬಹುವಾಗಿ ಪಶುವಧೆಯನ್ನು ಮಾಡುವುದಾಗಲೀ ಮನುಷ್ಯನಲ್ಲಿ ಬ್ರಾಹ್ಮಣತ್ವವು ಇದೆಯೆಂದು ನಿರ್ಣಯಿಸಲು ಕಾರಣವಾಗುವುದಿಲ್ಲ.

೧೨-೧೩. ಯಾರು ಕರ್ಮಬಂಧಕ್ಕೆ ಸಿಕ್ಕಿಕೊಂಡು ಸಂಸಾರಾಗ್ನಿಸಂತಾಪದಿಂದ ದುಃಖಿತವಾದ ಮನಸ್ಸುಳ್ಳವರಾಗಿರುವರೋ ಅವರು ಜನನ, ಮರಣಗಳೆಂಬ

ತೇ ಜನ್ಮಮರಣಾಟವ್ಯಾಂ ಸುಖಾಮೃತಪಿಪಾಸನಃ ।
ಕೃಪಣಸ್ಯಾಶ್ರಯೇಽಜಂತೋ ಲಭಂತೇ ನೈವ ನಿರ್ವೃತಿಂ ॥ ೧೩ ॥

ಚತುರ್ವರ್ಣಾ ನರಾ ಯೇ ತು ತತ್ತದ್ವೀರ್ಯೇ ನರಾಧಮಾ ।
ತೇಷಾಂ ಸರ್ವಾತ್ಮನಾ ಸರ್ವೈಃ ಧರ್ಮೈಃ ಸಾಂಕರ್ಯಮೀಕ್ಷ್ಯತೇ ॥ ೧೪ ॥

ಶೂದ್ರವಿಪ್ರಾದಯೋ ಯೋನೌ ನ ಭಿದ್ಯಂತೇ ಪರಸ್ಪರಂ ।
ಸರ್ವಧರ್ಮ ಸಮಾನತ್ವಾತ್ ಸಂಸ್ಕಾರಾದಿ ನಿರರ್ಥಕಂ ॥ ೧೫ ॥

ತದನುಷ್ಠಾನವೈಧರ್ಮ್ಯವಿಯೋಗಮರಣಾದಿಭಿಃ ।
ಅಸೇವ್ಯಸೇವನೈರನ್ಯೈಃ ಶೂದ್ರವಿಪ್ರಾದಯಃ ಸಮಾಃ ॥ ೧೬ ॥

---

ಕಾಡಿನಲ್ಲಿ ಸಿಕ್ಕಿಕೊಂಡು ಸುಖವೆಂಬ ಅಮೃತಪಾನವನ್ನು ಮಾಡಲೆಣಿಸಿ ಆ ಅನುಕೂಲಮಾಡಲಾರದ ಕೃಪಣರನ್ನು ಆಶ್ರಯಿಸುವುದಕ್ಕಾಗಿ ಅಲೆಯುತ್ತಿರುವವರು ಸುಖವನ್ನು ಎಂದಿಗೂ ಹೊಂದಲಾರರು.

೧೪. ಜಗೆಬಗೆಯವರ ವೀರ್ಯಗಳಿಂದ ಹುಟ್ಟಿದ ನಾಲ್ಕುವರ್ಣಗಳ ಮನುಷ್ಯರಲ್ಲಿಯೂ ಹೇಗೆ ಹೇಗೆ ನೋಡಿದರೂ ಅಧಮರಾದವರಿಗೆ ಸರ್ವಧರ್ಮಗಳ ದೃಷ್ಟಿಯಿಂದಲೂ ಸಾಂಕರ್ಯವೇ ಕಾಣುವುದು.

೧೫. ಶೂದ್ರರೂ ಬ್ರಾಹ್ಮಣರೂ ಉತ್ಪತ್ತಿಯಾದ ಕ್ಷೇತ್ರವನ್ನು ಕುರಿತು ಪರ್ಯಾಲೋಚಿಸಿದರೆ ಬೇರೆ ಬೇರೆ ವರ್ಣಗಳವರ ದೇಹಗಳೊಡನೆ ಸರ್ವಧರ್ಮಗಳಲ್ಲಿಯೂ ಬ್ರಾಹ್ಮಣದೇಹಕ್ಕೂ ಸಾಮ್ಯವಿರೋಣದರಿಂದ ಬ್ರಾಹ್ಮಣರು ಸಂಸ್ಕಾರ ವಿಶೇಷಗಳನ್ನು ಮಾಡಿಕೊಂಡ ಮಾತ್ರಕ್ಕೆ ಒಂದು ವಿಶೇಷಧರ್ಮವುಂಟಾಯಿತೆಂದು ಹೇಳಲು ಆಗುವುದಿಲ್ಲ.

೧೬. ವಿಯೋಗ ಮರಣ ಇವುಗಳೊದಗುವುದರಿಂದ ಧರ್ಮವಿರುದ್ಧವಾಗಿ ಆಚರಿಸುವುದು, ಸೇವಿಸಬಾರದವುಗಳನ್ನು ಸೇವಿಸುವುದು, ಈ ಸಂದರ್ಭದಲ್ಲಿಯೂ ಬ್ರಾಹ್ಮಣ ಶೂದ್ರ ಮುಂತಾದ ಎಲ್ಲರೂ ಸಮಾನರೇ.

ಬುಧ್ಯಾ ಶಕ್ತ್ಯಾ ಸ್ವಭಾವೇನ ಧರ್ಮೈರ್ಜಾತ್ಯಾದಿಭಿಃ ಶ್ರಿಯಾ ।
ಕರ್ತವ್ಯೈಃ ಪುಣ್ಯಪಾಪಾಭ್ಯಾಂ ಶನ್ಯೈಃ ಸರ್ವಶರೀರಗೈಃ ॥ ೧೭ ॥

ಬಂಧನೈ ರೋಧನೈರ್ನಾನಾಯಾತನೋಪಾಯ ಪೀಡನೈಃ ।
ದಂಡೈರದಂಡಕರಣೈಃ ವಿಷಾದಪರಿವೇದನೈಃ ॥ ೧೮ ॥

ಸಾತ್ವಿಕೈಃ ಪ್ರೀತಿ ಧರ್ಮಾದ್ಯೈ ರಾಜಸೈಶ್ಚಿತ್ರವೇಷ್ಟಿತೈಃ ।
ತಾಮಸೈಸ್ತಾಪಮೋಹಾದ್ಯೈಃ ದೂಯಮಾನಾಃ ಪುನಃ ಪುನಃ ॥ ೧೯ ॥

ಶ್ಲೇಷ್ಮ ಮಾರುತ ಪಿತ್ತಾದ್ಯೈಃ ಮಹಾಬೀಭತ್ಸದರ್ಶನೈಃ ।
ಕ್ವಚಿದ್ವೃತ್ತಿನಿವೃತ್ತಿಭ್ಯಾಂ ಋತಾನೃತಹಿತಾಹಿತೈಃ ॥ ೨೦ ॥

---

೧೭. ಬುದ್ಧಿಯಲ್ಲೂ, ದೇಹಶಕ್ತಿಯಲ್ಲೂ, ಔದಾರ್ಯಾದಿ ಸ್ವಭಾವದಲ್ಲೂ, ಬಾಲ್ಯ ತಾರುಣ್ಯಾದಿ ಧರ್ಮಗಳಲ್ಲೂ, ಬ್ರಾಹ್ಮಣ ಕ್ಷತ್ರಿಯಾದಿ ಜಾತಿ ಮುಂತಾದುದರಲ್ಲೂ, ಸಂಪತ್ತಿನಲ್ಲಿಯೂ, ತತ್ತಜ್ಜಾತಿಗೆ ಉಚಿತಗಳಾದ ಕರ್ತವ್ಯಕರ್ಮಗಳಲ್ಲೂ, ಎಲ್ಲರ ದೇಹದಲ್ಲೂ ಸೂಕ್ಷ್ಮವಾದ ಸಮಾನತೆ ಇರುವುದು.

೧೮. ನಿಬಂಧನೆ ಮಾಡಿಕೊಳ್ಳುವುದು, ಪ್ರತಿಬಂಧಕ ಪಡಿಸುವುದು, ಬಗೆಬಗೆಯಾಗಿ ಹಿಂಸೆ ಕೊಡುವುದು, ಬಾಧಿಸುವುದು, ದೊಣ್ಣೆಯನ್ನು ಉಪಯೋಗಿಸದೆ ಶಿಕ್ಷೆ ಮಾಡುವುದು, ವಿಷಾದಪಡುವಂತೆ ಸರ್ವಪ್ರಕಾರದ ವೇದನೆಗಳನ್ನು ಉಂಟುಮಾಡುವುದು, ಈ ವಿಚಾರಗಳಲ್ಲೂ,

೧೯. ಇತರರನ್ನು ಪ್ರೀತಿಸುವುದು, ಪುಣ್ಯಕಾರ್ಯಾಚರಣೆ ಮುಂತಾದ ಸಾತ್ವಿಕ ವೃತ್ತಿಗಳಲ್ಲೂ, ನಾನಾವಿಧವಾಗಿ ಹೆಣೆದುಕೊಂಡಿರುವ ರಾಜಸ ವಿಷಯದಲ್ಲಿಯೂ ದುಃಖ ಅಜ್ಞಾನ ಮುಂತಾದ ತಾಮಸ ವೃತ್ತಿಗಳಲ್ಲೂ, ಪುನಃ ಪುನಃ ದುಃಖಪಡುವುದರಲ್ಲೂ, ಬ್ರಾಹ್ಮಣರೂ ಇತರರೂ ಸಮಾನರು.

೨೦. ವಾತ ಪಿತ್ತ ಶ್ಲೇಷ್ಮಗಳೆಂಬ ಮಹಾಜುಗುಪ್ಸಿತವಾದ ಧಾತುಭೇದಗಳುಂಟಾಗುವುದರಲ್ಲೂ, ಕಾರ್ಯಕ್ಕೆ ಕೈಹಚ್ಚುವುದು ಹಾಗೆಯೇ ಅಷ್ಟಕ್ಕೇ ಕೈಬಿಡುವುದು, ಈ ಸ್ವಭಾವದಲ್ಲೂ, ಯಥಾರ್ಥ ಹೇಳುವುದು, ಸುಳ್ಳುಹೇಳುವುದು, ಇವುಗಳಲ್ಲೂ, ಹಿತ ಅಹಿತ ಇವುಗಳಲ್ಲೂ, ಬ್ರಾಹ್ಮಣರು ಇತರರಿಗೆ ಸಮಾನರು.

ಅಲಂಕಾರೋಪಯೋಗೇನ ಮನ್ಮಥಾದ್ಯೈರ್ವಿಚೇಷ್ಟಿತೈಃ ।
ಧನಲಾಭಾಶಯಾನ್ಯೈಕಜಂತುಸಂಘಾತಪಾತನೈಃ ॥ ೨೧ ॥

ಅಧಿಸಿದ್ಧಿಗತಿಂ ಯಾತೈಃ ನಾನಾವಿಧಮನೋರಥೈಃ ।
ಆತ್ಮಸ್ನೇಹಪರದ್ವೇಷ ಸ್ವೀಕೃತದ್ರವ್ಯ ರಕ್ಷಣೈಃ ॥ ೨೨ ॥

ಅತಿಕ್ಷೀಬತ್ವ ಸಂಕ್ಷೋಭ ಕ್ಷುತ್ ಕ್ಷಾಮ ಕ್ಷಮಾಮಯೈಃ ।
ಯಾತನೋಪಾಯಪೈಶುನ್ಯ ಶೂನ್ಯತ್ವೋಪಜಪೈಸ್ತಥಾ ॥ ೨೩ ॥

ಅಪ್ರಶಸ್ತೈರನುಷ್ಠಾನೈಃ ಸಮಾಪಸ್ಥಾಪದಃ ಸಮಾಃ ।
ಹಿಂಸಕಾಃ ಪ್ರಾಣಿನಃ ಪಾಪವಿತಥಾಲಾಪ ಭಾಷಿಣಃ ॥ ೨೪ ॥

ಸಾಧೂನಾಂ ಭಾಷಕಾಸ್ತೇನಾಃ ನಿರ್ದಯಾಃ ಪರದಾರಿಕಾಃ ।
ನೀಚಕರ್ಮಸಮಾಚಾರಾಃ ಸರ್ವಭಕ್ಷಾಃ ಪಿಶಾಚವತ್ ॥ ೨೫ ॥

---

೨೧–೨೨. ಹೀಗೆ ಬಗೆ ಬಗೆಯಾದ ಕಾರ್ಯಸಿದ್ಧಿಯಲ್ಲಿ, ಸ್ವರೂಪ ಭೇದದಲ್ಲಿ, ನಾನಾವಿಧವಾದ ಮನೋಧರ್ಮಗಳಲ್ಲಿ, ತನ್ನವರಲ್ಲಿ ಪ್ರೀತಿ, ಇತರರಲ್ಲಿ ದ್ವೇಷ, ತಾವು ಸ್ವೀಕರಿಸಿದ ಪದಾರ್ಥಗಳನ್ನು ಜೋಪಾನಮಾಡಿಕೊಳ್ಳುವುದು, ಇವುಗಳಲ್ಲಿ ಇಬ್ಬರೂ ಸಮ.

೨೩. ಅತಿಮದ. ಅತಿಗಾಬರಿ, ಶೀನು, ಕೃಶವಾಗಿರುವಿಕೆ, ಅತಿಸಹನೆ, ರೋಗಗಳು, ಇತರರಿಗೆ ನೋವನ್ನುಂಟುಮಾಡುವ ಯುಕ್ತಿಗಳು, ಚಾಡೀಕೋರತನ, ಅಭಿಚಾರಕ್ರಿಯಾ ಮತ್ತು ಮನಃಶಾಂತಿರಾಹಿತ್ಯ, ಮುಂತಾದ ಹೀನನಡವಳಿಕೆ, ಆಪದ್ಗ್ರಸ್ತರಾಗುವಿಕೆ, ಈ ವಿಚಾರಗಳು ಸರ್ವರಿಗೂ ಸಮನಾಗಿ ಇರುವುವು.

೨೪. ಹಿಂಸೆ ಕೊಡತಕ್ಕವರೂ, ಕೆಟ್ಟಮಾತುಗಳನ್ನೂ, ವ್ಯರ್ಥವಾದ ಮಾತುಗಳನ್ನೂ ಆಡತಕ್ಕವರೂ,

೨೫–೨೭. ಮಹಾಸಾಧುಗಳಂತೆ ಮಾತಾಡತಕ್ಕವರು, ಕಳ್ಳರು, ನಿಷ್ಕರುಣಿಗಳು, ಪರಸ್ತ್ರೀ ವ್ಯಸನಿಗಳು, ಕೆಟ್ಟಕೆಲಸಕ್ಕೆ ತಕ್ಕದ್ದಾದ ಆಚಾರವುಳ್ಳವರು, ಪಿಶಾಚದ ಹಾಗೆ ಸರ್ವಭಕ್ಷಕರು, ಕಿರಾತರು ಕಾಡಿನಲ್ಲಿದ್ದುಕೊಂಡು ಸಾಧುಗಳಾದ ಜಂತುಗಳನ್ನು ಕೊಂದು ತಿಂದು ತೃಪ್ತಿಪಡುವಂತೆ ಹೀನಕುಲದ ಚಾಡಿಕೋರರನೇಕರು

ದುಷ್ಕುಲೀನಾ ದುರಾಚಾರಾಃ ನೃಪಾಣಾಮುಪಜೀವಿನಃ ।
ವಿಪ್ರಕಾರ್ಯವಿಕರ್ಮಸ್ಥಾ ಧನಿನೋ ದುಷ್ಟಚೇತಸಃ ॥ ೨೬ ॥

ಲುಬ್ಧಕಾಃ ಹರಿಣಾನ್ ಹತ್ವಾ ವಾಸಂ ಕೃತ್ವಾ ಯಥಾ ವನೇ ।
ಕಥಂ ಖಾದಂತಿ ಪಿಶುನಾಃ ಹರಯಶ್ಚ ಕ್ರಿಯಾವಶಾತ್ ॥ ೨೭ ॥

ವೇದವಾದಮಧೀಯಾನಾಃ ಪ್ರಾಣಿಘಾತಾಭಿಶಂಸಿನಃ ।
ಪುಷ್ಣಂತಿ ಕಪಟ್ಯೈರರ್ಥಾನ್ ವೇದವಿಕ್ರಯಿಣೋsಧಮಾಃ ॥ ೨೮ ॥

ಮಾಯಿನೋ ಮತ್ಸರಗ್ರಸ್ತಾಃ ಲುಬ್ಧಾ ಮುಗ್ಧಾ ಮದೋದ್ಧತಾಃ ।
ಚಾಟಾಃ ಕಾರ್ಪಟಿಕಾಃ ಕ್ರೂರಾಃ ಕದರ್ಯಾಃ ಕಲಹಪ್ರಿಯಾ ॥ ೨೯ ॥

ವಾಚಾಟಾ ದುಷ್ಟಕುಲಟಾ ಅಟಂತೋ ಭಾಟಕೈಃ ಸಹ ।
ಭಂಡಮಾನ್ಯಾಃ ಭಟಾಟೋಪೈಃ ಸಂಕ್ರುದ್ಧಾಸುವಿಲುಂಠಕಾಃ ॥ ೩೦ ॥

---

ರಾಜರ ಹತ್ತಿರವಿರುತ್ತ ಕೆಲಸ ಬಿದ್ದಾಗ ಬ್ರಾಹ್ಮಣಾನರ್ಹವಾದ ಕರ್ಮದಲ್ಲಿ ಕೂಡ ಆಸಕ್ತರಾಗಿ ಧನಿಕರಾದರೂ ನೀಚಮನಸ್ಸುಳ್ಳವರಾಗಿ ನಡೆದುಕೊಳ್ಳುವರು.

೨೮. ಕೆಲವು ವಿಪ್ರರು ವೇದಗಳನ್ನು ಅಭ್ಯಾಸಮಾಡಿ ವೇದೋಕ್ತವಾದ ಯಜ್ಞಕರ್ಮದ ಪ್ರಾಣಿವಧೆಯನ್ನು ಹೊಗಳಿಕೊಂಡು ವೇದ ವಿಕ್ರಯಮಾಡುತ್ತಾ ಅಧಮರಾಗಿ ಕಪಟಾಚರಣಗಳಿಂದ ಹಣವನ್ನು ಕೂಡಿಹಾಕುತ್ತಾರೆ.

೨೯. ಮೋಸಗಾರರು, ತುಂಬಾ ಹೊಟ್ಟೆಕಿಚ್ಚುಳ್ಳವರು, ಲೋಭಿಗಳು, ಮೂಢರು, ಮದದಿಂದ ಸೊಕ್ಕಿದವರು, ರೇಶ್ಮೇ ಹುಳಗಳನ್ನು ನಿಷ್ಕರುಣೆಯಿಂದ ನಾಶಮಾಡಿ ದಾರತೆಗೆಯುವ ಕ್ರೂರಮನಸ್ಸಿನ ನೇಯ್ಗೆಯವರು, ತಾನೂತಿನ್ನದ ಮತ್ತು ಪರರಿಗೂ ಕೊಡದ ಸ್ವಭಾವದವರು, ಜಗಳಗಂಟಿಗರು ಇವರನ್ನು ನೂರುಮಡಿ ಮೇಲೆನ್ನಬೇಕು.

೩೦-೩೧ ಬಹುನಿಂದ್ಯವಾದ ಮಾತನಾಡುವವರು, ತಮ್ಮ ದುಷ್ಟಸಖರೊಡನೆ ನೀಚಸ್ತ್ರೀ ಸುಖಕ್ಕಾಗಿ ತಿರುಗಾಡುತ್ತಾ ಭಂಡಜನರಿಂದ ಹೊಗಳಲ್ಪಟ್ಟವರು, ಯುದ್ಧ ಭಟರಂತೆ ಆಡಂಬರವುಳ್ಳ ಲೂಟೀಕೋರರು, ಭಟರಂತೆ ಅಲೆಯುವ ವ್ಯಕ್ತಿಗಳು, ಬಾಯಿಗೆ ಬಂದಂತೆ ದೇಶಕಾಲ ವಿವೇಚನೆ ಇಲ್ಲದೆ ಅಸಂಬದ್ಧವಾಗಿ ಶ್ಲೋಕಗಳನ್ನು ಹೇಳತಕ್ಕವರು, ಮಾರಬಾರದ ವಸ್ತುವನ್ನು ಮಾರುವವರು, ತಿನ್ನಬಾರದ ವಸ್ತುಗಳನ್ನು ತಿನ್ನುವವರು.

ಪರ್ಯಟಾ ಭಾಟಿಕಾ ಜೀವಾಃ ಕೆಂಠಕಶ್ಲೋಕಭಾಷಿಣಃ ।
ವಿಕ್ರೀಣತೇ ಹ್ಯ ವಿಕ್ರೇಯಮಭಕ್ಷ್ಯದ್ರವ್ಯಭಕ್ಷಣಾಃ ॥ ೩೧ ॥

ಶೂದ್ರ ಕರ್ಮಾನುತಿಷ್ಠಂತೋ ನಿಸ್ತ್ರಪಾಸ್ತೇ ನರಾಧಮಾಃ ।
ಸೇವಾಧ್ಯಾಪನವಾಣಿಜ್ಯಕೃಷ್ಯಾದ್ಯಾರಂಭಲಂಭಿತಾಃ ॥
ಗೃಹ್ಣಂತಃ ಸಂಪದೋ ಬಾಹ್ಯಾತ್ ದ್ರವ್ಯಧಾನ್ಯಧನಾದಿಕಾಃ ॥ ೩೨ ॥

ಕ್ರೋಧಾದಾಭ್ಯಂತರಾನ್ ದೋಷಾನ್ ತಥಾ ದುಷ್ಟ ಮನೋರಥಾನ್ ।
ಅತ್ಯಜಂತೋ ವಿಶಿಷ್ಟಾನಾಂ ಶ್ರೇಷ್ಠಾಸ್ತೇ ಕಚಮರ್ದಿನಃ ॥ ೩೩ ॥

ನೋಪಾದೇಯಾನಿ ವಸ್ತ್ರಾಣಿ ನಿತತ್ಯಮಾದದತೇ ದ್ವಿಜಾಃ ।
ಹಾಪಯಂತಿ ನ ಹೇಯಾನಿ ಕಥಂ ತೇ ಗುರವಃ ಕ್ಷಿತೌ ॥ ೩೪ ॥

ದಂಡಿಕಾ ಡಿಂಡಿಕಾ ಭಂಡಾಃ ಚಂಡಾಶ್ಚಂಡಾಲಚೇಷ್ಟಿತಾಃ ।
ವೈತಂಡಕಾಸ್ತೇ ನಿಘ್ನಂತಿ ಯಥಾ ಸಿಂಹೋ ಮೃಗಾನ್ ಪಶೂನ್ ॥ ೩೫ ॥

---

೩೨. ಶೂದ್ರರಿಗೆ ಅರ್ಹವಾದ ಕರ್ಮಗಳನ್ನು ಮಾಡತಕ್ಕವರು ಇವರೆಲ್ಲರೂ ನಾಚಿಗೆಗೆಟ್ಟ ಅಧಮ ಮನುಷ್ಯರೆನಿಸಿಕೊಳ್ಳುವರು. ಇತರರ ಸೇವಾವೃತ್ತಿ, ಪಾಠಹೇಳುವುದು, ವ್ಯಾಪಾರ ಮಾಡುವುದು, ವ್ಯವಸಾಯ ಮಾಡುವುದು, ಇನ್ನೂ ಇತರ ವೃತ್ತಿಯನ್ನೂ ಮಾಡುವಂತೆ ತೋರ್ಪಡಿಸಿಕೊಂಡು ಹಣಕಾಸು, ಕಾಳುಕಡ್ಡಿಗಳನ್ನು ಸಂಗ್ರಹಿಸುವುದು.

೩೩–೩೪. ಕೋಪಾವಿಷ್ಟರಾಗಿ ತಮ್ಮಲ್ಲಿ ದೋಷಗಳನ್ನೂ ದುರಾಶೆಗಳನ್ನೂ ಬಿಡದೇ ನಿಷಿದ್ಧರೀತಿಯಲ್ಲಿ ಕೇಶಸಂಸ್ಕಾರ ಮಾಡಿಕೊಂಡು ಬ್ರಾಹ್ಮಣರು ಮಹಾಶ್ರೇಷ್ಠರೆಂದು ಹೊಗಳಿಸಿಕೊಳ್ಳುವರು, ವಸ್ತ್ರಗಳನ್ನು ಎಂದರೆ ಅಂಚು ಸೆರಗು ಇಲ್ಲದ ಮಲ್ಲು ಬಟ್ಟೆಯಂತಹವುಗಳನ್ನೇ ನಿತ್ಯವೂ ಧರಿಸಲು ತೆಗೆದುಕೊಳ್ಳುತ್ತಾರೆ, ಹೀಗೆ ತ್ಯಾಜ್ಯವಾದ ಕಾರ್ಯಗಳನ್ನು ಜನವೃಂದವು ಮಾಡುತ್ತಿದ್ದರೂ ಅವನ್ನು ಗಮನಿಸಿ ಬುದ್ಧಿಹೇಳಿ ಅವನ್ನು ಬಿಡಿಸದೆ ಸುಮ್ಮನಿರುವ ಅವರನ್ನು ಈ ಲೋಕದಲ್ಲಿ ಗುರುಗಳೆಂದು ಕರೆಯುವುದು ಹೇಗೆ?

೩೫. ಮೇನೆ ಪಲ್ಲಕ್ಕಿಗಳನ್ನೇರಿ ವಾದ್ಯಾದಿ ಆಡಂಬರವುಳ್ಳವರಾಗಿ ಭಂಡತನದ ವ್ಯಾಪಾರಗಳುಳ್ಳ ವಿತಂಡವಾದಿಗಳಾದ ಗುರುನಾಮಕರು ಹಲವರು ಸಿಂಹವು ಕಾಡಿ

**ನಿರ್ಗ್ರಂಥಂ ಮುನಿಮಾಲೋಕ್ಯ ಮನ್ಯಮಾನಾಃ ಸಮುನ್ನತಂ ।**
**ಪರಿಭೂಯಾವತಿಷ್ಠಂತೇ ಧಿಕ್ ತಾನ್ ಧಿಕ್ ತಾನ್ ಸ್ವವೈರಿಣಃ ॥ ೩೬ ॥**

**ತಸ್ಮಾತ್ಸಂಸಾರಿಕಾಃ ಸತ್ವಾಃ ಚಿತ್ತಕ್ಲೇಶಕಲಂಕಿತಾಃ ।**
**ದೌಃಶೀಲ್ಯದೌರ್ಮನಸ್ಯಾದ್ಯೈಃ ತುಲ್ಯಂ ಜಾತೀಯ ಬಂಧನಾತ್ ॥ ೩೭ ॥**

**ಶೂದ್ರಾಂ ಪ್ರರೋಚತೇ ವಿಪ್ರೋ ರಾಗಿಣೀಂ ಮೈಥುನಂ ಪ್ರತಿ ।**
**ಸಾ ಕಾಮದುಃಖವಿಗಮೇ ಗರ್ಭಂ ಧತ್ತೇ ಸಮಾಗಮೇ ॥ ೩೮ ॥**

**ಕಾಮಂ ಕಾಮಾತುರಾಭ್ಯಸ್ತು ರೋಚಂತೇ ಶೂದ್ರಮಾನವಾಃ ।**
**ಮೈಥುನಂ ಪ್ರತಿ ಬ್ರಾಹ್ಮಣ್ಯೋ ತೇ ಪಿ ತಾಸಾಂ ಸುಖಾವಹಾಃ ॥ ೩೯ ॥**

---

ನಲ್ಲಿರುವ ಮೃಗಗಳನ್ನು ಕೊಂದು ತಿಂದು ತೇಗುವಹಾಗೆ ಜನವೃಂದಕ್ಕೆ ಏನೂ ಸದುಪದೇಶವನ್ನು ಮಾಡದೇ ಅವರಿಂದ ಕಾಣಿಕೆಯನ್ನು ದೋಚುತ್ತಿರುವರು.

೩೬. ಶಾಸ್ತ್ರಗ್ರಂಥಾಭ್ಯಾಸವಿಲ್ಲದೇ ಇದ್ದರೂ ಜಟೆ ಮುಂತಾದ ಆಡಂಬರದ ಮುನಿವೇಷವುಳ್ಳವನನ್ನು ನೋಡಿ ಅವನೇ ಶ್ರೇಷ್ಠನೆಂದು ತಿಳಿದುಕೊಂಡು ಅವನನ್ನು ಗೌರವಿಸುತ್ತಾರೆ. ಆ ಆಡಂಬರವಿಲ್ಲದೇ ರಿಕ್ತರಾಗಿ ಯಥಾಸ್ಥಿತಿಯಲ್ಲಿ ಇರುವವರನ್ನು ಕುರಿತು ವೈರಮಾಡುತ್ತಾರೆ ಇಂತಹ ಜನರನ್ನು ನಿಂದಿಸಬೇಕು.

೩೭. ಚಿತ್ತಕ್ಲೇಶರೂಪವಾದ ಕಳಂಕದಿಂದ ಕೂಡಿದವರು ದುಃಶೀಲ, ದುರ್ಮಾನ ಮುಂತಾದ ಸರ್ವರಿಗೂ ಸಮಾನ ಜಾತೀಯುಗಳಾದ ನಿರ್ಬಂಧದಿಂದ ಕೂಡಿದವರು, ಇಂತಹವರು ಸಂಸಾರವಂದಿಗರೆನಿಸುವರು.

೩೮. ಜಾತಿಯಲ್ಲಿ ತಾನು ಬ್ರಾಹ್ಮಣನಾದರೂ, ಅನುರಾಗ ಹುಟ್ಟಿದರೆ ಶೂದ್ರ ಸ್ತ್ರೀಯನ್ನಾದರೂ ಸಂಗಮಕ್ಕೆ ಅಪೇಕ್ಷಿಸುತ್ತಾನೆ. ಅವಳು ಒಪ್ಪಿ ಕಾಮಕೇಳಿಯು ತೀರಿದಮೇಲೆ ಆಕೆ ಸಮಾಗಮ ನಿಮಿತ್ತವಾಗಿ ಗರ್ಭವನ್ನು ಧರಿಸುತ್ತಾಳೆ.

೩೯. ಬ್ರಾಹ್ಮಣ ಸ್ತ್ರೀಯರಿಗೆ ವಿಶೇಷ ಕಾಮಾತುರತೆಯು ಹುಟ್ಟಿದಾಗ, ಶೂದ್ರ ಪುರುಷರು ಕೂಡ ಪ್ರಿಯರಾಗುತ್ತಾರೆ. ಶೂದ್ರಸ್ತ್ರೀಗೆ ಬ್ರಾಹ್ಮಣ ಪುರುಷರಾದರೂ ಮೈಥುನದಲ್ಲಿ ಸುಖಪಡಿಸುವವರಾಗುತ್ತಾರೆ.

**ಯೇ ತು ಜಾತ್ಯಾದಿಭಿರ್ಭಿನ್ನಾಃ ಗವಾಶ್ವೋಷ್ಟ್ರಮತಂಗಜಾಃ ।**
**ತೇ ವಿಜಾತಿಷು ನೋ ಗರ್ಭಂ ಕುರ್ವತೇ ಪಿ ಸುಖಾರ್ಥಿನಃ ॥ ೪೦ ॥**

**ಅನಡ್ವಾನೇವ ಗೋರೇವ ಕಾಮಂ ಪುಷ್ಣಾತಿ ಸಂಗಮೇ ।**
**ಘೋಟಿಕಾಶ್ಚ ರತಿಂ ಸಮ್ಯಕ್ ಕುರ್ವತೇ ವಡವಾಸು ಚ ॥ ೪೧ ॥**

**ಪತಿಂ ಕರಭಮೇವಾಷ್ಟ್ರ ಕರಭೀ ರಮತೇ ಮುದಾ ।**
**ಗಜ ಮೇವ ಪತಿಂ ಲಬ್ಧ್ವಾ ಸುಖಂ ತಿಷ್ಠತಿ ಹಸ್ತಿನೀ ॥ ೪೨ ॥**

**ತಿರ್ಯಗ್ಜಾತಿಃ ಸ್ತ್ರಿಯಾ ಸಾಕಂ ಕುರ್ವಾಣೋಪಿ ಹಿ ಮೈಥುನಂ ।**
**ನ ತಸ್ಯಾಃ ಕುರುತೇ ಗರ್ಭಂ ನರೋ ನಾಪಿ ಸುಖಾಸಿಕಾಂ ॥ ೪೩ ॥**

**ತಿರಶ್ಚಾ ಸಹ ಕುರ್ವಾಣಾ ಮೈಥುನಂ ಮನುಜಾಂಗನಾಃ ।**
**ನಾಧತ್ತೇ ತತ್ಕೃತಂ ಗರ್ಭಂ ನ ಯುಕ್ತಂ ಮೈಥುನಂ ತಯೋಃ ॥ ೪೪ ॥**

---

೪೦. ಹಸು, ಕುದುರೆ, ಒಂಟೆ, ಆನೆ ಇವು ಭಿನ್ನಜಾತಿಗಳಾದ ಸುಖಾಪೇಕ್ಷಿಗಳೇ ಆದರೂ ಸ್ವಜಾತಿಯನ್ನು ಬಿಟ್ಟು ಅನ್ಯಜಾತಿ ಪ್ರಾಣಿಯಲ್ಲಿ ಗರ್ಭವನ್ನು ಉಂಟುಮಾಡುವುದಿಲ್ಲ.

೪೧. ಹಸುವಿನೊಡನೆ ಸಂಗಮಮಾಡಿ ಅದರ ಕಾಮ ತೃಪ್ತಿಪಡಿಸುವುದು, ಗೂಳಿಯೇ ವಿನಾ ಮತ್ತಾವುದೂ ಅಲ್ಲ. ಹೀಗೆ ಹೆಣ್ಣುಕುದುರೆಯ ಕಾಮತೃಪ್ತಿಗೆ ಗಂಡುಕುದುರೆಯೇ ಸರಿ.

೪೨. ಗಂಡು ಒಂಟೆಯು ಹೆಣ್ಣು ಒಂಟೆಯಲ್ಲಿ ರಮಿಸಿ ತೃಪ್ತಿಪಡಿಸುವುದು ಹೆಣ್ಣು ಆನೆಯನ್ನು ರಮಿಸಿ ಗಂಡು ಆನೆಯು ತೃಪ್ತಿಹೊಂದುತ್ತದೆ.

೪೩. ಮಾನವನು ಚತುಷ್ಪಾದಿಗಳಾದ ಪ್ರಾಣಿಗಳೊಡನೆ ಸಂಗಮಾಡಿದರೂ ಅವುಗಳಲ್ಲಿ ಗರ್ಭವನ್ನು ಉಂಟುಮಾಡಲಾರನು. ಅವುಗಳೊಡನೆ ಕೂಡುವುದು, ಮಲಗುವುದು ಸಹ ಸಾಧ್ಯವಿಲ್ಲ

೪೪. ಮಾನವ ಸ್ತ್ರೀಯರು ಚತುಷ್ಪಾದಿಗಳಾದ ಗಂಡು ಪ್ರಾಣಿಗಳೊಡನೆ ಸಂಗಮಮಾಡಿದರೆ ಅವುಗಳ ವೀರ್ಯದಿಂದ ಇವರಲ್ಲಿ ಗರ್ಭವು ನಿಲ್ಲುವುದಿಲ್ಲ. ಆ ರೀತಿ ಸಂಗಮಮಾಡುವುದು ಯೋಗ್ಯವಲ್ಲ.

ನೈವಂ ಕಶ್ಚಿದ್ವಿಭಾಗೋಽಸ್ತಿ ಮೈಥುನೇ ಸ್ತ್ರೀಮನುಷ್ಯಯೋಃ ।
ಯೇನ ಸಂಕ್ಷೀಯತೇ ಭೇದಃ ಪ್ರಸ್ಫುಟಂ ದ್ವಿಜಶೂದ್ರಯೋಃ ॥ ೪೫ ॥

ವೇದಪಾಠಚ್ಛಲೇನಾಯಂ ನ ಕ್ರಿಯಾಭಿಃ ಪ್ರಪದ್ಯತೇ ।
ಬಹುಭಿರ್ಜಡಸಂಘಾತೈಃ ಅವಿಶಿಷ್ಟೇ ಪದೇಽಹನಿ ॥ ೪೬ ॥

ದೇಹೇ ದೇಹಿನಿ ಚಾಮುಷ್ಮಿನ್ ಅಶುಚಾವನವಸ್ಥಿತೇ ।
ರಾಗದ್ವೇಷಾಧಿಭಿರ್ದೋಷೈರಧಿಕಂ ಪರಿಪೀಡಿತೇ ॥ ೪೭ ॥

ಕುಲಾಲಚಕ್ರವದ್ಭ್ರಾಂತೇ ಮಾನಸೇ ವಿಷಯಾರ್ಣವೇ ।
ಘೋರದುಃಖಭಯಾಕ್ರಾಂತೇ ಸಮಾಜೇಽನೀಶ್ವರಾತ್ಮನಿ ॥ ೪೮ ॥

ಜನ್ಮ ಮೃತ್ಯು ಜರಾಶೋಕಾಽ ನಿಷ್ಟಯೋಗಾಗ್ನಿ ಪೀಡಿತೇ ।
ಹೀನಸತ್ವ ಶರೀರಾದೌ ನ ವಿಶೇಷೋ ವಿಭಾವ್ಯತೇ ॥ ೪೯ ॥

---

೪೫. ಚತುಷ್ಪಾದಿ ಪ್ರಾಣಿಗಳೂ ಮನುಷ್ಯರೂ ಅವಯವ ನಿಮಿತ್ತವಾದ ಭೇದವನ್ನು ಹೊಂದಿರುವಂತೆ ಬ್ರಾಹ್ಮಣತ್ವ ಶೂದ್ರತ್ವ ಜಾತಿನಿಮಿತ್ತಕವಾಗಿ ಸ್ಫುಟ ನಾದ ಅವಯವ ವೈಲಕ್ಷಣ್ಯವೇನೂ ಇಲ್ಲ ಆದರೂ ಮನುಷ್ಯಜಾತಿಯ ಸ್ತ್ರೀಪುರುಷ ತ್ವದ ವೈಲಕ್ಷಣವು ಇದ್ದೇ ಇದೆ. ಹಾಗಿರುವುದರಿಂದ ಸಮಾಜಕ್ಕೆ ಏನೂ ಬಾಧಕ ವಾಗುವುದಿಲ್ಲ. ಆದುದರಿಂದ ದ್ವಿಜ, ಶೂದ್ರ ಇವರಿಗಿರುವ ಭೇದವು ತಿರ್ಯಗ್ಜಂತು, ಮಾನವ ಇವರಿಗಿರುವಷ್ಟು ಮಟ್ಟಿನದಲ್ಲ.

೪೬. ವೇದಾಧ್ಯಾಪನದಲ್ಲಿ ತೊಡಗಿರುವುದರಿಂದ ತಾನು ಮಾಡಬೇಕಾದ ಸಂಧ್ಯಾವಂದನಾದಿಗಳನ್ನು ಸಕಾಲದಲ್ಲಿ ಮಾಡಲು ಆಗುವುದಿಲ್ಲವೆಂದು ನೆಪವನ್ನು ಸೋಮಾರಿಜನರ ಗುಂಪಿನ ಮುಂದೆ ಹೇಳಿಕೊಳ್ಳುವವನು ಸದ್ಬ್ರಾಹ್ಮಣನಲ್ಲ.

೪೭-೪೮. ಈ ದೇಹವೂ, ಈ ದೇಹದಲ್ಲಿರುವ ಜೀವವೂ ರಾಗದ್ವೇಷಗಳಿಂದ ಬಹಳವಾಗಿ ಪೀಡಿಸಲ್ಪಟ್ಟು ಅಶುಚಿಯಾಗಿರಲು ಕುಂಬಾರನ ಚಕ್ರದಂತೆ ಚಂಚಲ ಸ್ವಭಾವದ ಮನಸ್ಸು ವಿಷಯಸಮುದ್ರದಲ್ಲಿ ಮುಳುಗಿ, ದೇಹವೂ, ಆತ್ಮವೂ ಕೂಡ ಭಯಂಕರವಾದ ದುಃಖದಿಂದ ಆಕ್ರಮಿಸಲ್ಪಟ್ಟು ಸಮಾಜವು ಕಾರ್ಯಸಾಮರ್ಥ್ಯವನ್ನು ಕಳೆದುಕೊಂಡಿರಲಾಗಿ,

೪೯. ಜನನ ಮರಣಾದಿ ದುಃಖಗಳೆಂಬ ಅಗ್ನಿಗಳಿಂದ ವಿಪ್ರದೇಹಗಳೂ ಸಂತ ಪ್ತಗಳಾಗಿರಲು ಸತ್ವಹೀನವಾದ ಈ ದೇಹದಲ್ಲಿ ಬ್ರಾಹ್ಮಣ ಶೂದ್ರ ಇವರಿಗೆ ಭೇದ ವನ್ನು ಹೇಳುವುದು ಸಾಧ್ಯವಿಲ್ಲ.

ತಸ್ಮಾನ್ಮನುಷ್ಯಭೇದೋಽಯಂ ಸಂಕೇತಬಲನಿರ್ಮಿತಃ ।
ಬ್ರಾಹ್ಮಣ್ಯಂ ಬ್ರಾಹ್ಮಣಾಸಂಗಾತ್ ಬ್ರಾಹ್ಮಣೇಚೋಪಸೇವತೇ ॥ ೫೦ ॥

ಪತಿಂ ತ್ಯಕ್ತ್ವಾ ಸುಖಾಸ್ವಾದೇ ಲಾಲಸೈರ್ಮದನಾಲಸೈಃ ।
ಅಸೇವ್ಯತೇ ವಿಟಂ ಗತ್ವಾ ಬಂಧಕೀ ಚೇಟಕೈರಪಿ ॥ ೫೧ ॥

ಬ್ರಾಹ್ಮಣ್ಯಾತ್ ಪ್ರಚ್ಯವಂತೇಽನ್ಯೇ ಮಹಾಪಾತಕಸೇವಿತಾಃ ।
ವ್ಯಲೀಕಕಲ್ಪನೈವೇಷಾ ತಸ್ಮಾಜ್ಜಾತ್ಯಾದಿಕಲ್ಪನಾ ॥ ೫೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ವರ್ಣವ್ಯವಸ್ಥಾ
ವರ್ಣನಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ.



---

೫೦. ಆದಕಾರಣ ಮನುಷ್ಯರಲ್ಲಿರುವ ಬ್ರಾಹ್ಮಣ ಶೂದ್ರಾದಿ ಭೇದವು ಸಂಕೇತಬಲದಿಂದ ಏರ್ಪಟ್ಟದ್ದು. ಬ್ರಾಹ್ಮಣ ಸ್ತ್ರೀಯು ಬ್ರಾಹ್ಮಣನ ಸಹವಾಸದಿಂದ ಬ್ರಾಹ್ಮಣ್ಯವನ್ನು ಹೊಂದುತ್ತಾಳೆ.

೫೧. ಕೆಲವು ಪ್ರಮದೆಯರು ಕೇವಲ ಶಾರೀರಕ ಸುಖಾಪೇಕ್ಷೆಯಿಂದ ತಮ್ಮ ಪತಿಯು ಇದ್ದರೂ ಅವನ ಸಂಗವನ್ನು ಬಿಟ್ಟು ಪಾತಿವ್ರತ್ಯವನ್ನು ತೊರೆದು ಪರಿಜನ ಸಹಾಯದಿಂದ ಜಾತ್ಯಂತರದ ವಿಟ ಪತಿಯನ್ನು ಸೇರಲು ಅಪೇಕ್ಷಿಸುವರು ಮತ್ತು ಯತ್ನಿಸುತ್ತಾರೆ.

೫೨. ಇನ್ನು ಕೆಲವರು ವಿವಿಧ ಮಹಾಪಾತಕಕೃತ್ಯಗಳನ್ನು ಮಾಡಿ ಬ್ರಾಹ್ಮಣ್ಯವನ್ನು ಕಳೆದುಕೊಳ್ಳುತ್ತಾರೆ. ಆದುದರಿಂದ ಈ ಜಾತ್ಯಾದಿ ಕಲ್ಪನೆಯು ಅನೇಕರಿಗೆ ಅಪ್ರಿಯವಾಗಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ವರ್ಣವ್ಯವಸ್ಥಾವರ್ಣನೆ
ಎಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುಶ್ಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಹೇಯೋಪಾದೇಯತತ್ತ್ವಜ್ಞಾಃ ತ್ಯಕ್ತಾನ್ಯಾಯಪಥಾಗಮಾಃ ।
ಜಿತೇಂದ್ರಿಯಮನೋವಾಚಃ ಸದಾಚಾರ ಪರಾಯಣಾಃ ॥ ೧ ॥

ನಿಯಮಾಚಾರವೃತ್ತಸ್ಥಾಃ ಹಿತಾನ್ವೇಷಣತತ್ಪರಾಃ ।
ಸಂಸಾರರಕ್ಷಣೋಪಾಯಕ್ರಿಯಾಯುಕ್ತಮನೋರಥಾಃ ॥ ೨ ॥

---

## ನಲವತ್ತನಾಲ್ಕನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಬಿಡಬೇಕಾದ ವಿಚಾರಗಳು, ಗ್ರಹಿಸಬೇಕಾದ ವಿಚಾರಗಳು, ಇವುಗಳ ತತ್ವಗಳನ್ನು ಬ್ರಾಹ್ಮಣರು ತಿಳಿದಿರುವವರಾಗಬೇಕು. ಅನ್ಯಾಯಮಾರ್ಗದಲ್ಲಿ ಸಂಪಾದನೆ ಮಾಡುವುದನ್ನು ತ್ಯಜಿಸಬೇಕು, ಮನಸ್ಸು, ಮಾತು, ಇಂದ್ರಿಯ ಇವುಗಳನ್ನು ಜಯಿಸಿದವರು, ಒಳ್ಳೆಯ ನಡವಳಿಕೆಯಲ್ಲಿ ಆಸಕ್ತರಾದ ವರು ಎನಿಸಿಕೊಳ್ಳಬೇಕು.

೨. ಬ್ರಾಹ್ಮಣರು ಶಾಸ್ತ್ರದ ಕಟ್ಟುಪಾಡಿಗೂ, ಶಾಸ್ತ್ರೋಕ್ತವಾದ ನಡವಳಿಕೆಗೂ ಒಳಪಟ್ಟಿರುವವರೂ, ತನಗಾಗಲೀ, ಇತರರಿಗಾಗಲೀ ಹಿತವಾವುದೆಂದು ಹುಡುಕುವುದ ರಲ್ಲಿ ಆಸಕ್ತರೂ, ಕುಟುಂಬವನ್ನು ಪೋಷಿಸುವುದಕ್ಕೆ ಬೇಕಾದ ಯುಕ್ತಿಗಳು, ಕೆಲಸ ಗಳು, ಇವುಗಳಿಂದ ಕೂಡಿದ ಮನೋಭಾವವುಳ್ಳವರೂ ಆಗಿರಬೇಕು

**ಸಮ್ಯಗ್ದರ್ಶನಸಂಪನ್ನಾಃ ಸಮಾಧಿಸ್ಥಾಃ ಹತಕ್ರುಧಃ ।**
**ಸ್ವಾಧ್ಯಾಯ ಭಕ್ತ ಹೃದಯಾಃ ತ್ಯಕ್ತಸಂಗಾ ವಿಮತ್ಸರಾಃ ॥ ೩ ॥**

**ವಿಶೋಕಾಃ ವಿಮದಾಃ ಶಾಂತಾಃ ಸರ್ವಪ್ರಾಣಿಹಿತೈಷಿಣಃ ।**
**ಸುಖದುಃಖಸಮಾಲೋಕಾಃ ವಿವಿಕ್ತಸ್ಥಾನವಾಸಿನಃ ॥ ೪ ॥**

**ವ್ರತೋಪಯುಕ್ತಸರ್ವಾಂಗಾಃ ಧಾರ್ಮಿಕಾಃ ಪಾಪಭೀರವಃ ।**
**ನಿರ್ಮಮಾ ನಿರಹಂಕಾರಾ ದಾನಶೂರಾ ದಯಾಪರಾಃ ॥ ೫ ॥**

**ಸತ್ಯಬ್ರಹ್ಮವಿದಃ ಶಾಂತಾಃ ಸರ್ವಶಾಸ್ತ್ರೇಷು ನಿಷ್ಠಿತಾಃ ।**
**ಸರ್ವಲೋಕಹಿತೋಪಾಯಪ್ರವೃತ್ತೇನ ಸ್ವಯಂಭುವಾ ॥ ೬ ॥**

---

೩. ಮತ್ತು ಸರಿಯಾದ ಶಾಸ್ತ್ರಜ್ಞಾನಯುಕ್ತರು, ಧ್ಯಾನಯೋಗನಿಷ್ಠರು, ಕೋಪವನ್ನು ಜಯಿಸಿದವರು, ವೇದಾಧ್ಯಯನಕ್ಕೆ ಮನಸ್ಸುಕೊಟ್ಟಿರುವವರು, ದುಷ್ಟ ಜನಸಂಗವನ್ನು ಬಿಟ್ಟಿರತಕ್ಕವರು, ಮಾತ್ಸರ್ಯಗುಣವಿಲ್ಲದವರು ಎನಿಸಿಕೊಂಡಿರಬೇಕು.

೪. ಬ್ರಾಹ್ಮಣರು ಬಂಧುಮರಣಾದಿ ಜನ್ಯವಾದ ಅನುತಾಪಗಳಿಲ್ಲದವರೂ, ಸಪ್ತಮದಗಳಿಲ್ಲದವರೂ, ಶಾಂತಿಯುಳ್ಳವರೂ, ಸಮಸ್ತ ಪ್ರಾಣಿಗಳಿಗೂ ಹಿತವನ್ನೇ ಕೋರತಕ್ಕವರೂ, ಸುಖದಲ್ಲಿಯೂ, ದುಃಖದಲ್ಲಿಯೂ, ಸಮನಾದ ಚಿತ್ತವೃತ್ತಿಯುಳ್ಳವರೂ, ನಿರ್ಜನ ಪ್ರದೇಶದಲ್ಲಿ ವಾಸಿಸಲು ಇಷ್ಟವುಳ್ಳವರೂ ಆಗಿರಬೇಕು.

೫. ಮತ್ತು ಶಾಸ್ತ್ರನಿಯಮಗಳಂತೆ ನಡೆಯಲು ತಮ್ಮ ಸರ್ವಾಂಗಗಳನ್ನೂ ಉಪಯೋಗಿಸಿರತಕ್ಕವರೂ, ಧರ್ಮಾಚರಣೆ ಮಾಡತಕ್ಕವರೂ, ಪಾಪಕ್ಕೆ ಹೆದರತಕ್ಕವರೂ, ಸುಖದಲ್ಲಿಯೂ, ದುಃಖದಲ್ಲಿಯೂ ಸಮನಾದ ಚಿತ್ತವೃತ್ತಿಯುಳ್ಳವರೂ, ಇದು ನನ್ನದು ಎಂಬ ಮಮಕಾರವೂ ನಾನು ಮಾಡಿದೆನು ಎಂಬ ಅಹಂಕಾರವೂ ಇಲ್ಲದವರೂ, ಮಹಾದಾನಿಗಳೂ ತುಂಬಾ ದಯಾವಂತರೂ ಆಗಿರಬೇಕು.

೬. ವಿಪ್ರವರ್ಯರು 'ಬ್ರಹ್ಮಸತ್ಯ' ಎಂದು ಹೇಳುವ ರೀತಿಯನ್ನು ಕಂಡವರೂ, ಅಂತರಿಂದ್ರಿಯವನ್ನು ನಿಗ್ರಹಿಸಿದವರೂ ಎಲ್ಲಾ ಶಾಸ್ತ್ರಗಳಲ್ಲಿಯೂ ಪಾಂಡಿತ್ಯವುಳ್ಳವರೂ ಆಗಿರಬೇಕು.

ವಾಗೀಶ್ವರೇಣ ದೇವೇನ ನಾಭೇಯೇನ ಭವಚ್ಛಿದಾ ।
ಬ್ರಹ್ಮಣಾ ಕೃತಮರ್ಯಾದಾಸ್ತ ಏವ ಬ್ರಾಹ್ಮಣಾಃ ಸ್ಮೃತಾಃ ॥ ೭ ॥

ಮಹಾತಪೋಥನ್ಯೈರಾದ್ಯೈಃ ಸರ್ವಸತ್ವಾಭಯಪ್ರದೈಃ ।
ಸರ್ವಲೋಕಹಿತಾರ್ಥಾಯ ನಿಪುಣಂ ಸುಪ್ರತಿಷ್ಠಿತಂ ॥ ೮ ॥

ಬೃಹತ್ವಾತ್ ಭಗವಾನ್ ಬ್ರಹ್ಮಾ ನಾಭೇಯಸ್ತಸ್ಯ ಯೇ ಜನಾಃ ।
ಭಕ್ತಾಸಕ್ತಾಃ ಪ್ರಸನ್ನಾಶ್ಚ ಬ್ರಾಹ್ಮಣಾಸ್ತೇ ಪ್ರಕೀರ್ತಿತಾ ॥ ೯ ॥

ಕ್ಷತ್ರಿಯಾಸ್ತು ಕ್ಷತತ್ರಾಣಾತ್ ವೈಶ್ಯಾ ವಾರ್ತಾ ಪ್ರವೇಶನಾತ್ ।
ಯೇ ತು ಶ್ರುತೇರ್ದ್ರುತಿಂ ಪ್ರಾಪ್ತಾಃ ಶೂದ್ರಾಸ್ತೇಚೇಹ ಕೀರ್ತಿತಾ ॥ ೧೦ ॥

---

೭. ಸಮಸ್ತಜನರಿಗೂ ಹಿತವಾಗುವ ಯುಕ್ತಿಸಾಧನದಲ್ಲಿ ತೊಡಗಿದವನೂ, ವಾಗ್ದೇವಿಯ ಪತಿಯೂ, ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದವನೂ, ಸಂಸಾರ ಛೇದನೋಪಾಯವನ್ನು ಬಲ್ಲವನೂ, ಆದ ಬ್ರಹ್ಮನು ಬ್ರಾಹ್ಮಣರಲ್ಲಿ ಈ ನಿಯಮ ಈ ಗುಣ ಆಚಾರಾದಿಗಳಿರಬೇಕೆಂದು ನಿಯಮಿಸಿರುವನು.

೮. ಮಹಾತಪಸ್ವಿಗಳೂ, ಪೂಜ್ಯರೂ, ಆದ ಇವರು ಸರ್ವಪ್ರಾಣಿಗಳಿಗೂ ಅಭಯವನ್ನು ಕೊಡತಕ್ಕವರಾಗಿರಬೇಕೆಂದೂ, ಸಾಮಾನ್ಯವಾಗಿ ಎಲ್ಲಾ ಜನರಿಗೂ ಹಿತವಾಗಲೆಂಬ ಉದ್ದೇಶದಿಂದಲೂ ಜಾಣತನದ ಈ ಒಳ್ಳೆಯ ಏರ್ಪಾಡನ್ನು ಮಾಡಿರುವವನು.

೯. ತಾನು ಬೃಹತ್ತಾಗಿರುವುದರಿಂದ ಬ್ರಹ್ಮಶಬ್ದವಾಚ್ಯನೂ, ವಿಷ್ಣುವಿನ ನಾಭೀಕಮಲದಿಂದ ಹುಟ್ಟಿದವನೂ ಆದ ಬ್ರಹ್ಮನ ಸಂಬಂಧಿಗಳೂ, ಭಕ್ತರಲ್ಲಿ ಆಸಕ್ತಿಯುಳ್ಳವರೂ, ಪ್ರಸನ್ನಹೃದಯರೂ ಆದವರೇ ಬ್ರಾಹ್ಮಣರು ಎಂದು ಹೇಳಲ್ಪಟ್ಟಿದೆ.

೧೦. ಕ್ಷತ ಎಂದರೆ ಗಾಯ (ಬಾಧೆ) ಅದನ್ನು ಹೊಂದಿದವರನ್ನು ರಕ್ಷಿಸೋಣವರಿಂದ ಕ್ಷತ್ರಿಯರೆಂದೂ, ಕ್ರಯವಿಕ್ರಯಾದಿ ವ್ಯವಹಾರ ವೃತ್ತಾಂತದಲ್ಲಿ ಪ್ರವೇಶಿಸುವುದರಿಂದ ವೈಶ್ಯರೆಂದೂ ವೇದೋಕ್ತವಾದ ನಿಯಮಗಳಿಗೆ ದೂರವಾಗಿ ಓಡುವವರಾದ್ದರಿಂದ ಶೂದ್ರರೆಂದೂ ಹೇಳಲ್ಪಟ್ಟಿದ್ದಾರೆ.

ಯೇ ಚಾಚಾರ ರತಾಃ ಪ್ರಾಹುಃ ಬ್ರಾಹ್ಮಣ್ಯಂ ಬ್ರಹ್ಮವಾದಿನಃ ।
ತೇ ತು ಪ್ರಶಂಸಂತಿ ಫಲಂ ಯತ್ನದಾ ಮನಸೇಪ್ಸಿತಂ ॥ ೧೧ ॥

ಕ್ಷಮಾ ದಮೋ ದಯಾ ದಾನಂ ಸತ್ಯಂ ಶೌಚಂ ಧೃತಿ ರ್ಘೃಣಾ ।
ಮಾರ್ದವಾರ್ಜವಸಂತೋಷಾ್ಯನಹಂಕಾರ ತಪಃ ಶಮಾಃ ॥ ೧೨ ॥

ಧರ್ಮೋಽಜ್ಞಾನಮಪೈಶುನ್ಯಂ ಬ್ರಹ್ಮಚರ್ಯಮಮೂಢತಾ ।
ಧ್ಯಾನಮಾಸ್ತಿಕ್ಯಮದ್ವೇಷೋ ವೈರಾಗ್ಯಂ ಚ ಶಮಾತ್ಮತಾ ॥ ೧೩ ॥

ಪಾಪಭೀರುತ್ವಮಸ್ತೇಯಮಮಾತ್ಸರ್ಯಮತೃಷ್ಣತಾ ।
ನೈಃ ಸಂಗ್ಯಂ ಗುರುಶುಶ್ರೂಷಾ ಮನೋವಾಕ್ಕಾಯಸಂಯಮಃ ॥ ೧೪ ॥

---

೧೧. ಆಚಾರನಿಷ್ಠರಾದ ಬ್ರಹ್ಮಜ್ಞರು ಯಾವುದನ್ನು ಬ್ರಾಹ್ಮಣ್ಯವೆಂದು ಹೇಳುತ್ತಾರೋ ಅದು ನಿಜವಾದ ಬ್ರಾಹ್ಮಣ್ಯಸ್ವರೂಪದ ನಿರೂಪಣವಲ್ಲ. ಬ್ರಾಹ್ಮಣರು, ಮನಸ್ಸಿನಲ್ಲಿ ಯಾವ ಫಲವಾಗಬೇಕೆಂದು ಅಪೇಕ್ಷಿಸುತ್ತಾರೋ ಆ ಫಲಪ್ರಶಂಸೆಯನ್ನು ಮಾತ್ರ ನಿರೂಪಣ ಮಾಡಿದಹಾಗಾಯಿತು.

೧೨. ಸುಖದುಃಖಸಹನೆ, ಬಹಿರಿಂದ್ರಿಯ ನಿಗ್ರಹ, ಪರರದುಃಖಗಳನ್ನು ಹೋಗಲಾಡಿಸುವ ಇಚ್ಛೆ, ಅರ್ಥಿಗಳಿಗೆ ಬೇಕಾದುದನ್ನು ಕೊಡುವುದು, ಇದ್ದದ್ದನ್ನು ಇದ್ದಂತೆ ಹೇಳುವುದು, ಶುಚಿತ್ವ, ಧೈರ್ಯ, ಸಿಷಿದ್ಧಕರ್ಮಗಳನ್ನು ಮಾಡುವುದರಲ್ಲಿ ಜುಗುಪ್ಸೆ, ಮೃದುತ್ವ, ಋಜುತ್ವ, ಸಂತೋಷ, ತಾನು ಮಾಡಿದನೆಂಬ ಅಹಂಕಾರವಿಲ್ಲದಿರುವುದು, ಸ್ವಧರ್ಮಾಚರಣೆ, ಅಂತರಿಂದ್ರಿಯ ನಿಗ್ರಹ ಇವು ವಿಪ್ರರರಬೇಕು.

೧೩–೧೪. ಕರ್ತವ್ಯ ಕರ್ಮಾಸಕ್ತಿ, ತಿಳಿವಳಿಕೆ, ಇತರರ ಗುಣವನ್ನು ದೋಷವಾಗಿ ಎಣಿಸುವ ಸ್ವಭಾವವಿಲ್ಲದಿರುವಿಕೆ, (ಮಾತ್ಸರ್ಯ) ಬ್ರಹ್ಮಚರ್ಯದಿಂದಿರುವುದು, ಮೌಢ್ಯವಿಲ್ಲದಿರುವುದು, ಇತರ ವ್ಯಕ್ತಿಯಿಂದ ಬಾಧಕವಲ್ಲದ ಧ್ಯಾನ (ಎಂದರೆ ಧ್ಯೇಯ ವಸ್ತು ವಿಷಯವಾದ ಸಮಾನಾಕಾರ ವೃತ್ತಿ ಪರಂಪರೆ), ದೇವರಿದ್ದಾನೆ ಎಂದು ನಂಬುವ ಸ್ವಭಾವ (ಆಸ್ತಿಕ್ಯ) ಯಾರನ್ನೂ ದ್ವೇಷಿಸದೇ ಇರುವುದು, ವಿಷಯಾಸಕ್ತಿಯಿಲ್ಲದಿರುವುದು, ಮನಃಶಾಂತಿ, ಪಾಪಭೀತಿ, ಕದಿಯುವ ಬುದ್ಧಿಯಿಲ್ಲದಿರುವುದು ಇತರರಿಗೆ ಶುಭವಾಗುವುದನ್ನು ದ್ವೇಷಿಸದಿರುವುದು, ಆತ್ಯಾಶೆ ಇಲ್ಲದಿರುವುದು, ನಿಸ್ಸಂಗ

ಯ ಏವಂ ಭೂತಮಾಚಾರಮನುತಿಷ್ಠಂತಿಮಾನವಾಃ ।
ಬ್ರಾಹ್ಮಣ್ಯಂ ಪುಷ್ಕಲಂ ತೇಷಾಂ ನಿತ್ಯಮೇವ ಪ್ರವರ್ಧತೇ ॥ ೧೫ ॥

ತೇ ಸ್ವೇಷ್ಟಾಸ್ವಾದಲಬ್ಧಾರ್ಥ ವರ್ಣಾಚಾರಾ ಮಹೌಜಸಃ ।
ಸರ್ವಶಾಸ್ತ್ರಾವಿರೋಧೇನ ಪವಿತ್ರೀಕೃತ ಮಾನಸಾಃ ॥ ೧೬ ॥

ಸಜ್ಜನಾಭಿಮತಾಃ ಪ್ರಾಜ್ಞಾಃ ಪುರಾಣಾಗಮ ಪಂಡಿತಾಃ ।
ಗೀತ ಗೀತಾಗಮಾಚಾರಾಃ ಸ್ಮೃತ್ಯಾಚಾರ ವಿದೋಽಪಿ ಚ ॥ ೧೭ ॥

ಮನ್ವಂತರೇಷು ಸರ್ವೇಷು ಚತುರ್ಯುಗವಿಭಾಗತಃ ।
ವರ್ಣಾಶ್ರಮಾಚಾರಕೃತಂ ಕರ್ಮಸಿದ್ಧ್ಯತ್ಯನುತ್ತಮಃ ॥ ೧೮ ॥

---

ನಾಗಿರುವುದು, ಗುರುಸೇವೆ, ಮನೋವಾಕ್ಕಾಯಗಳೆಂಬ ತ್ರಿಕರಣಗಳನ್ನೂ ತಡೆದಿಟ್ಟು ಕೊಳ್ಳುವುದು ಈ ಗುಣಗಳನ್ನು ಉಳ್ಳವರಾಗಿದ್ದರೆ ಅವರ ಬ್ರಾಹ್ಮಣ್ಯವು ವಿಶೇಷವಾಗಿ ಯಾವಾಗಲೂ ಬೆಳೆಯುತ್ತಿರುತ್ತದೆ.

೧೬. ಅವರು ವರ್ಣಕ್ಕೆ ಸಂಬಂಧವಾದ ಯಾವ ನಡವಳಿಕೆಗಳನ್ನಿಟ್ಟು ಕೊಂಡರೆ ತಮಗೆ ಇಷ್ಟವಾದ ರುಚಿ ಲಾಭವಾಗುವುದೋ ಆ ನಡವಳಿಕೆಯುಳ್ಳವರೂ, ಮಹಾತೇಜಸ್ವಿಗಳೂ, ಶಾಸ್ತ್ರವಿರೋಧವಿಲ್ಲದಂತೆ ಮನಸ್ಸನ್ನು ಶುದ್ಧವಾಗಿ ಇಟ್ಟು ಕೊಂಡವರೂ ಆಗಬೇಕು.

೧೭. ಮತ್ತು ಅವರು ಸತ್ಪುರುಷರಿಗೆ ಇಷ್ಟರಾದವರೂ, ವಿಶೇಷವಾಗಿ ತಿಳಿದ ವರೂ, ಪುರಾಣ, ಶಾಸ್ತ್ರ, ಇವುಗಳಲ್ಲಿ ಪಾಂಡಿತ್ಯವನ್ನು ಹೊಂದಿದವರೂ, ಗೀತಾಶಾಸ್ತ್ರ ದಲ್ಲಿ ಹೇಳುವ ನಡವಳಿಕೆಯನ್ನು ನಿರೂಪಣ ಮಾಡತಕ್ಕವರೂ, ಸ್ಮೃತಿಗಳಲ್ಲಿ ಹೇಳಿ ರುವ ಆಚಾರಗಳನ್ನು ಬಲ್ಲವರೂ ಎನಿಸಿರಬೇಕು.

೧೮. ಹೀಗಿದ್ದರೆ ಎಲ್ಲಾ ಮನ್ವಂತರಗಳಲ್ಲೂ ಹೇಳಿದ ಚತುರ್ಯುಗ ವಿಭಾಗಕ್ಕೆ ಅನುಸಾರವಾಗಿ ಇರುವ ಮತ್ತು ವರ್ಣಾಶ್ರಮಾಚಾರಾನುಸಾರವಾಗಿ ನಡೆಸುವ ಸರ್ವೋತ್ತಮವಾದ ಕರ್ಮವು ಸಿದ್ಧವಾಗುತ್ತದೆ.

ಸಂಸಿದ್ಧಾಯಾಂ ತು ವಾರ್ತಾಯಾಂ ತತಃ ತೇಷಾಂ ಸ್ವಯಂ ಪ್ರಭುಃ ।
ಮರ್ಯಾದಾಂ ಸ್ಥಾಪಯಾಮಾಸ ಯಥಾರಬ್ಧಾಂ ಪರಸ್ಪರಂ ॥ ೧೯ ॥

ಯೇ ವೈ ಪರಿಗೃಹೀತಾರಃ ತೇಷಾಂ ಸತ್ವಬಲಾಧಿಕಾಃ ।
ಇತರೇಷಾಂ ಕ್ಷತತ್ರಾಣಾನ್ ಸ್ಥಾಪಯಾಮಾಸ ಕ್ಷತ್ರಿಯಾನ್ ॥ ೨೦ ॥

ಉಪತಿಷ್ಠಂತಿ ಯೇ ತಾನ್ ವೈ ಯಾಚಂತೋ ನರ್ಮದಾಃ ಸದಾ ।
ಸತ್ಯಬ್ರಹ್ಮ ಸದಾಭೂತಂ ವದಂತೋ ಬ್ರಾಹ್ಮಣಾಸ್ತು ತೇ ॥ ೨೧ ॥

ಯೇ ಚಾನ್ಯೇ ಚಾ ಪ್ಯಬಲಾಸ್ತೇಷಾಂ ವೈಶ್ಯಕರ್ಮಣಿ ಸಂಸ್ಥಿತಾಃ ।
ಶೀಲಾನಿ ನಾಶಯಂತಿ ಸ್ಮ ಪೃಥಿವ್ಯಾಂ ಪ್ರಾಗತಂದ್ರಿತಾಃ ।
ವೈಶ್ಯಾನೇವ ತು ತಾನಾಹ ಕೀನಾಶಾ‌ನ್ ವೃತ್ತಿಮಾಶ್ರಿತಾನ್ ॥ ೨೨ ॥

---

೧೯. ಹೀಗೆ ಲೋಕವ್ಯವಹಾರ ಸಿದ್ಧವಾಗಲು ಆಮೇಲೆ ಸ್ವಯಂ ಸಮರ್ಥನಾದ ಸ್ವಾಮಿಯು ತಾನು ಉಪಕ್ರಮಿಸಿದಕ್ಕೆ ಅನುಸಾರವಾಗಿರುವಂತಹ ಅವುಗಳ ಪರಸ್ಪರ ಎಲ್ಲೆಗಳನ್ನು (ಮರ್ಯಾದೆ) ಸ್ಥಾಪಿಸಿದನು.

೨೦. ಹೆಚ್ಚಾದ ಸತ್ವಬಲವುಳ್ಳವರು ಮತ್ತು ಹಿಂದೆ ಹೇಳಿದ ಪರದುಃಖಾಸಹನ ಮುಂತಾದ ಧರ್ಮಗಳನ್ನು ಪರಿಗ್ರಹಿಸಿದ ಜನರು, ಇತರರಿಗೆ ಕ್ಷತದಿಂದ ಉಂಟಾಗುವ ದುಃಖವನ್ನು ತಪ್ಪಿಸಿ ಕಾಪಾಡತಕ್ಕ ಜನರು, ಇವರೇ ಕ್ಷತ್ರಿಯರೆಂದು ಸ್ಥಾಪಿಸಿದನು.

೨೧. ಯಾರು ಮನಸ್ಸಿಗೆ ಹಿತವಾದ ಶಾಸ್ತ್ರಗಳಿಂದ ಕ್ಷತ್ರಿಯರಿಗೆ ಅನುಕೂಲವಾದ ಚಿತ್ತವಿನೋದವುಂಟುಮಾಡುತ್ತ ತಮಗೆ ಬೇಕಾದ್ದನ್ನು ಯಾಚಿಸುವುದಕ್ಕಾಗಿ ಬಂದು ಅವರನ್ನು ಉಪಸರ್ಪಣೆಮಾಡುವರೋ ಮತ್ತು ಯಾವಾಗಲೂ ಇರುವ ಸತ್ಯವಾದ ಬ್ರಹ್ಮವನ್ನು ಕುರಿತು ಮಾತನಾಡುವರೋ ಅವರೇ ಬ್ರಾಹ್ಮಣರು ಎಂದು ಸ್ಥಾಪಿಸಿದನು.

೨೨. ವೈಶ್ಯಕರ್ಮದಲ್ಲಿ ನಿರತರಾದ ಬೇರೆ ಯಾವ ಜನರು ಬಲಹೀನರಾಗಿ ಭೂಲೋಕದಲ್ಲಿ ಪ್ರಸಿದ್ಧವಾದ ಸಚ್ಚರಿತ್ರ ಮಾರ್ಗಗಳನ್ನು ಹಿಂಜರಿಯದೆ ನಾಶಮಾಡುತ್ತಾರೋ ಅಂತಹವರನ್ನು ನಾಶವೃತ್ತಿಯನ್ನು ಆಶ್ರಯಿಸಿದವರು (ಯಮನಂತೆ ನಿಷ್ಕರುಣಿಗಳು) ಎಂದು ಹೇಳಿದ್ದಾನೆ.

ಶೋಚಂತಶ್ಚ ದ್ರವಂತಶ್ಚ ಪರಿಚರ್ಯಾಸು ಯೇ ನರಾಃ ॥
ನಿಸ್ತೇಜಸೋಽಲ್ಪವೀರ್ಯಾಶ್ಚ ಶೂದ್ರಾಂಸ್ತಾನಬ್ರವೀತ್ತು ಸಃ ॥ ೨೩ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಸ್ಪರಂ ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೨೪ ॥

ಶಮಸ್ತಪೋ ದಮಃ ಶೌಚಂ ಶಾನ್ತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ ॥ ೨೫ ॥

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಂ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ ॥ ೨೬ ॥

ಕೃಷಿಗೋರಕ್ಷವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಂ ।
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ॥ ೨೭ ॥

---

೨೩. ಸೇವೆ ಮಾಡುವುದರಲ್ಲಿ ಕ್ಲೇಶಪಡುತ್ತಾ ಆಗಾಗ್ಗೆ ಓಡಿಹೋಗುತ್ತಾ ತೇಜೋಹೀನರೂ, ಅಲ್ಪವೀರ್ಯರೂ ಆಗಿ ಇರುವ ಅವರನ್ನು ಶೂದ್ರರೆಂದು ಹೇಳಿದ್ದಾನೆ.

೨೪. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರುಗಳಿಗೆ ಅವರವರ ಸ್ವಭಾವ ಗುಣಗಳಿಗನುಸಾರವಾಗಿ ಕರ್ಮಗಳು ಬೇರೆಬೇರೆಯಾಗಿ ವಿಭಾಗಿಸಲ್ಪಟ್ಟಿವೆ.

೨೫. ಶಮ (ಅಂತರಿಂದ್ರಿಯ ನಿಗ್ರಹ) ಸ್ವಧರ್ಮಾಚರಣೆ, (ಬಹಿರಿಂದ್ರಿಯ ನಿಗ್ರಹ) ಶುಚಿತ್ವ, ಶಾನ್ತಿ, ಋಜುತ್ವ, ತಿಳಿವಳಿಕೆ, ಶಾಸ್ತ್ರಜ್ಞಾನ, ಆಸ್ತಿಕ್ಯಬುದ್ಧಿ ಇವೆಲ್ಲಾ ಬ್ರಾಹ್ಮಣನಿಗೆ ಸ್ವಾಭಾವಿಕವಾದುವು.

೨೬. ಶೌರ್ಯ, ತೇಜಸ್ಸು, ಧೈರ್ಯ, ನಿರ್ವಾಹಶಕ್ತಿ, ಯುದ್ಧದಲ್ಲಿ ಹಿಮ್ಮೆಟ್ಟದೇ ಇರುವುದು, ದಾನ ಕೊಡುವುದು, ಒಡೆತನ, ಇವು ಕ್ಷತ್ರಿಯನಿಗೆ ಸ್ವಭಾವ ಸಿದ್ಧವಾದುವು.

೨೭. ವ್ಯವಸಾಯ, ಗೋರಕ್ಷಣ, ವರ್ತಕತನ, ಇವೇ ವೈಶ್ಯಸ್ವಭಾವಕ್ಕೆ ತಕ್ಕವು. ಈ ವರ್ಣಗಳವರ ಸೇವೆಮಾಡುವ ಕರ್ಮವು ಶೂದ್ರನಿಗೆ ಸ್ವಾಭಾವಿಕ ವಾದುದು.

ಯೋಗಸ್ತಪೋ ದಯಾ ದಾನಂ ಸತ್ಯಂ ಧರ್ಮ ಶ್ರುತಿರ್ಘೃಣಾ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಏತದ್ಬ್ರಾಹ್ಮಣಲಕ್ಷಣಂ ॥ ೨೮ ॥

ಶಿಖಾ ಜ್ಞಾನಮಯೀ ಯಸ್ಯ ಪವಿತ್ರಂ ಚ ತಪೋಮಯಂ ।
ಬ್ರಾಹ್ಮಣ್ಯಂ ಪುಷ್ಕಲಂ ತಸ್ಯ ಮನುಃ ಸ್ವಾಯಂಭುವೋಽಬ್ರವೀತ್ ॥ ೨೯ ॥

ಯತ್ರ ವಾ ತತ್ರ ವಾ ವರ್ಣೇ ಉತ್ತಮಾಧಮ ಮಧ್ಯಮಾಃ ।
ನಿವೃತ್ತಃ ಪಾಪಕರ್ಮಭ್ಯೋ ಬ್ರಾಹ್ಮಣಃ ಸ ವಿಧೀಯತೇ ॥ ೩೦ ॥

ಶೂದ್ರೋಽಪಿ ಶೀಲಸಂಪನ್ನೋ ಬ್ರಾಹ್ಮಣಾದಧಿಕೋ ಭವೇತ್ ।
ಬ್ರಾಹ್ಮಣೋ ವಿಗತಾಚಾರಃ ಶೂದ್ರಾದ್ಧೀನತರೋ ಭವೇತ್ ॥ ೩೧ ॥

ನ ಸುರಾಂ ಸಂಧಯೇದ್ಯಸ್ತು ಆಪಣೇಷು ಗೃಹೇಷು ಚ ।
ನ ವಿಕ್ರೀಣಾತಿ ಚ ತಥಾ ಸಚ್ಛೂದ್ರೋ ಹಿ ಸ ಉಚ್ಯತೇ ॥ ೩೨ ॥

---

೨೮. ಮನೋನಿಗ್ರಹ, ಸ್ವಧರ್ಮಾಚರಣೆ, ಇತರರ ದುಃಖವನ್ನು ಹೋಗಲಾಡಿಸುವ ಇಚ್ಛೆ, ದಾನ, ಸತ್ಯ, ಧರ್ಮಶ್ರವಣ, ಅಕಾರ್ಯಮಾಡುವುದರಲ್ಲಿ ಜುಗುಪ್ಸೆ, ತಿಳಿವಳಿಕೆ, ಶಾಸ್ತ್ರಜ್ಞಾನ, ದೇವರಿದ್ದಾನೆಂಬ ಆಸ್ತಿಕ್ಯಬುದ್ಧಿ ಈ ಗುಣಗಳುಳ್ಳವರೇ ಬ್ರಾಹ್ಮಣರು ಅಂದರೆ ಇವು ಬ್ರಾಹ್ಮಣನ ಲಕ್ಷಣಗಳು.

೨೯. ಯಾವನಿಗೆ ಜ್ಞಾನರೂಪವಾದ ಶಿಖೆಯಿದೆಯೋ, ತಪೋರೂಪವಾದ ಪವಿತ್ರತೆಯಿರುವುದೋ ಅವನಲ್ಲೇ ಸಮೃದ್ಧವಾದ ಬ್ರಾಹ್ಮಣ್ಯವಿರುವುದೆಂದು ಸ್ವಾಯಂಭುವಮನುವು ಹೇಳಿದನು.

೩೦. ಎಲ್ಲ ವರ್ಣಗಳಲ್ಲೂ ಉತ್ತಮರು, ಮಧ್ಯಮರು, ಅಧಮರು ಎಂಬ ಭೇದಗಳಿದ್ದೇ ಇರುತ್ತವೆ. ಅವುಗಳಲ್ಲಿ ಪಾಪ ಕರ್ಮಗಳಿಂದ ನಿವೃತ್ತನಾದವನೇ ಬ್ರಾಹ್ಮಣನೆಂದು ಹೇಳಲ್ಪಡುತ್ತಾನೆ.

೩೧. ಜಾತಿಯಲ್ಲಿ ಶೂದ್ರನಾದರೂ ಸಚ್ಚರಿತ್ರನಾಗಿದ್ದ ಪಕ್ಷದಲ್ಲಿ ಅವನು ಬ್ರಾಹ್ಮಣನಿಗಿಂತ ಮೇಲೆನಿಸುವನು. ಜಾತಿಯಲ್ಲಿ ಬ್ರಾಹ್ಮಣನಾದರೂ ಆಚಾರಹೀನನಾಗಿದ್ದರೆ ಶೂದ್ರನಿಗಿಂತ ಬಹು ಕೀಳಾಗುವನು.

೩೨. ಯಾವನು ಅಂಗಡಿಯಮೇಲೆ ಕುಳಿತೇ ಆಗಲಿ, ಮನೆಗೆ ತಂದೇ ಆಗಲಿ ಹೆಂಡವನ್ನು ಕುಡಿಯುವುದಿಲ್ಲವೋ ಮತ್ತು ಮಾರಾಟಮಾಡುವುದೂ ಇಲ್ಲವೋ ಅವನು ಒಳ್ಳೆಯ ಶೂದ್ರನೆಂದು ಹೇಳಲ್ಪಡುತ್ತಾನೆ.

**ಯದ್ಯೇತಾ ಸ್ಫುಟಮೇವ ಜಾತಿರಪರಾ ಕೃತ್ಯಾತ್ಪರಂ ಭೇದಿನೀ ।**
**ಯದ್ವಾವ್ಯಾಹೃತಿರೇಕತಾಮಧಿಗತಾ ಯಚ್ಚಾನ್ಯಧರ್ಮಂ ಯಯೌ ॥**
**ಏಕೈಕಾಖಿಲ ಭಾವಭೇದನಿಧನೋತ್ಪತ್ತಿಸ್ಥಿತಿವ್ಯಾಪಿನೀ ।**
**ಕಿಂ ನಾಸೌ ಪ್ರತಿಪತ್ತಿಗೋಚರಪಥಂ ಯಾಯಾದ್ವಿಭಕ್ತ್ಯಾನೃಣಾಂ ॥ ೩೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಷಷ್ಠೀಕಲ್ಪೇ ವರ್ಣ ವಿಭಾಗ ವಿವೇಕವರ್ಣನಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ.**



೩೩. ಜಾತಿಯೆಂಬುದು ಸ್ಪಷ್ಟವಾಗಿ ಒಂದೇ ಆಗಿದ್ದರೂ ಮನುಷ್ಯನು ಮಾಡುವ ಕಸಬಿನ ಮೇಲಿಂದ ಕೃತ್ರಿಮಜಾತಿ ಎಂಬ ಮತ್ತೊಂದು ಭೇದವಾಗಿದ್ದರೂ ವ್ಯವಹಾರವು ಒಂದೇ ಬಗೆಯಾಗಿದ್ದುಕೊಂಡು ಮಾತು ಮಾತ್ರ ಅನ್ಯಜಾತಿಯವರ ಮಾತಿನ ಅನುಕರಣವಾದ ವ್ಯತ್ಯಾಸ ಸ್ವಭಾವ ಹೊಂದಿದ್ದರೂ, ಜಾತಿ ಒಂದೇ ಬಗೆಯಾದುದು ಎಂಬ ಭಾವನೆ ಮತ್ತು ಬೇರೆ ಬೇರೆ ಭೇದಗಳುಳ್ಳದ್ದು ಎಂಬ ಭಾವನೆ, ಜಾತಿ ನಾಶವಾಗತಕ್ಕದ್ದು ಎಂಬ ಭಾವನೆ, ನಿರುಪಾಧಿಕವಾಗಿ ಇರತಕ್ಕದ್ದು ಎಂಬ ಭಾವನೆ, ಹೊಸದಾಗಿ ಉತ್ಪತ್ತಿಯಾಗತಕ್ಕದೆಂಬ ಭಾವನೆ ಈ ಪ್ರಕಾರ, ಉತ್ಪತ್ತಿ, ಸ್ಥಿತಿ, ನಾಶ ಭಾವನೆಗಳೂ ನಿಜವಾಗಿರುವುದಾಗಿದ್ದರೆ ಈ ಭಾವಗಳಿಗನುಸಾರವಾಗಿ ಮನುಷ್ಯರ ಅವಗಾಹನೆಗೆ ಏಕೆ ಬರುವುದಿಲ್ಲ ?

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಷಷ್ಠೀ ಕಲ್ಪದಲ್ಲಿ ವರ್ಣವಿಭಾಗ ವಿವೇಕವರ್ಣನವೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪಂಚಚತ್ವಾರಿಂಶೋऽಧ್ಯಾಯಃ

॥ ಬ್ರಹ್ಮೋವಾಚ ॥

**ಇದಂ ಶೃಣು ಮಯಾಖ್ಯಾತಂ ತರ್ಕಪೂರ್ವಮಿದಂ ವಚಃ ।**
**ಯುಷ್ಮಾಕಂ ಸಂಶಯೇ ಜಾತೇ ಕೃತೇ ವೈ ಜಾತಿಕರ್ಮಣೋಃ ॥ ೧ ॥**

**ಪುನರ್ವಚ್ಮಿ ನಿಬೋಧ ತ್ವಂ ಸಮಾಸಾನ್ನ ತು ವಿಸ್ತರಾತ್ ।**
**ಸಂಸಿದ್ಧಿಂ ಯಾಂತಿ ಮನುಜಾಃ ಜಾತಿಕರ್ಮಸಮುಚ್ಚಯಾತ್ ॥ ೨ ॥**

**ಸಿದ್ಧಿಂ ಗಚ್ಛೇದ್ಯಥಾಕಾರ್ಯಂ ದೈವ ಕರ್ಮಸಮುಚ್ಚಯಾತ್ ।**
**ಏವಂ ಸಂಸಿದ್ಧಿಮಯಾತಿ ಪುರುಷೋ ಜಾತಿಕರ್ಮಣೋಃ ॥ ೩ ॥**

---

## ನಲವತ್ತೈದನೆಯ ಅಧ್ಯಾಯವು

೧. ಬ್ರಹ್ಮನು ಹೇಳುತ್ತಾನೆ—ಇಲ್ಲಿ ಕೇಳಿ. ಹಿಂದೆ ನಾನು ಜಾತಿಯ ವಿಚಾರದಲ್ಲೂ, ಕರ್ಮವಿಚಾರದಲ್ಲೂ, ನಿಮಗೆ ಸಂಶಯವುಂಟಾದಾಗ ಅನೇಕಸಲ ವಿಚಾರಪೂರ್ವಕವಾಗಿ ವಿಸ್ತಾರವಾಗಿ ಹೇಳಿದ್ದೆ. ಅದನ್ನೇ ಈಗ ಸಂಕ್ಷೇಪವಾಗಿ ಹೇಳುತ್ತೇನೆ.

೨-೩. ಜಾತಿ ಮತ್ತು ಅದಕ್ಕೆ ತಕ್ಕ ಕರ್ಮ ಇವೆರಡೂ ಸಂಘಟನೆಯಾದರೆ ಮನುಷ್ಯರು ಸರಿಯಾದ ಸಿದ್ಧಿಯನ್ನು ಪಡೆಯುತ್ತಾರೆ. ಹೇಗೆಂದರೆ, ಅದೃಷ್ಟ ಮತ್ತು ಪ್ರಯತ್ನ ಇವೆರಡರ ಸೇರುವಿಕೆಯಿಂದ ಕಾರ್ಯಸಿದ್ಧಿಯಾಗುತ್ತದಲ್ಲವೇ ? ಹಾಗೆಯೇ ಮನುಷ್ಯನ ಜಾತಿ ಮತ್ತು ಅದಕ್ಕೆ ವಿಹಿತವಾದ ಕರ್ಮಾಚರಣೆ ಇವೆರಡರ ಸೇರುವಿಕೆಯಿಂದ ಇಷ್ಟಾರ್ಥಸಿದ್ಧಿಯನ್ನು ಪಡೆಯುತ್ತಾನೆ.

ಇತ್ಯೇವಮುಕ್ತವಾನ್ ಪೂರ್ವಂ ಶಿಷ್ಯಾಣಾಂ ಬೋಧನೇ ಪುರಾ ।
ಯೋಗೇಶ್ವರೋ ಮಹಾತೇಜಾಃ ಸಮಾಸಾನ್ನ ತು ವಿಸ್ತರಾತ್ ॥ ೪ ॥

॥ ಸುಮಂತುರುವಾಚ ॥

ಇತಿ ಪೃಷ್ಟಃ ಪುರಾ ಬ್ರಹ್ಮಾ ಋಷೀನ್ ಪ್ರೋವಾಚ ಭಾರತ ।
ಸವಿತರ್ಕಮಿದಂ ವಾಕ್ಯಂ ವಿಪ್ರರ್ಷೇ ಜಾತಿಕರ್ಮಣೋಃ ॥ ೫ ॥

ತಸ್ಮಾತ್ ತ್ವಯಾ ಮಹಾಬಾಹೋ ನ ಕಾರ್ಯೋ ವಿಸ್ಮಯೋ ನೃಪ ।
ಕಾರ್ತಿಕೇಯಂ ಪ್ರತಿ ಸದಾ ದೇವಾನಾಂ ದುರ್ವಿದಾಗತಿಃ ॥ ೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣೀ ಷಷ್ಠೀಕಲ್ಪೇ
ಕಾರ್ತಿಕೇಯ ವರ್ಣನಂ ನಾಮಪಂಚಚತ್ವಾರಿಂಶೋಽಧ್ಯಾಯಂ.



---

೪. ಪೂರ್ವಕಾಲದಲ್ಲಿ ಮಹಾತೇಜಸ್ವಿಯಾದ ಯೋಗೇಶ್ವರನು ತನ್ನ ಶಿಷ್ಯರಿಗೆ ಬೋಧನೆಮಾಡುವಾಗ ಈ ವಿಷಯವನ್ನು ಅತಿ ವಿಸ್ತರಿಸಿ ಹೇಳದೆ ಸಂಕ್ಷೇಪವಾಗಿ ತಿಳಿಸಿದ್ದನು ಎಂದು ಬ್ರಹ್ಮನು ಹೇಳಿದನು.

೫-೬. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ಭರತಕುಲೋತ್ಪನ್ನನೇ! ಪೂರ್ವದಲ್ಲಿ ಬ್ರಹ್ಮನು ಋಷಿಗಳು ಇದೇ ಪ್ರಶ್ನೆಯನ್ನು ಕೇಳಿದಾಗ ಅವನು ಬ್ರಹ್ಮರ್ಷಿವರ್ಯರೇ! ಜಾತಿ ಕರ್ಮ ಇವುಗಳ ವಿಚಾರದಲ್ಲಿ ಹೇಳಿರುವ ಈ ಮಾತು ವಿಚಾರಯುಕ್ತವಾದುದು ಎಂದು ಉತ್ತರ ಹೇಳಿದ್ದನು. ಆದುದರಿಂದ ಎಲೈ ಮಹಾಬಾಹುವಾದ ಶತಾನೀಕನೇ! ನೀನು ಕಾರ್ತಿಕೇಯನ ವಿಚಾರವನ್ನು ಕುರಿತು ಆಶ್ಚರ್ಯಪಡಬೇಕಾಗಿಲ್ಲ. ದೇವತೆಗಳ ವಿಚಾರವು ದುರವಗಾಹವಾದುದಲ್ಲವೇ ?

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಹ್ಮಪರ್ವದ ಷಷ್ಠೀ ಕಲ್ಪದಲ್ಲಿ ಕಾರ್ತಿಕೇಯ
ವರ್ಣನೆಯೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಟ್‌ಚತ್ವಾರಿಂಶೋಽಧ್ಯಾಯಃ

---

॥ ಸುಮಂತುರುವಾಚ ॥

ಯೇಯಂ ಭಾದ್ರಪದೇ ಮಾಸಿ ಷಷ್ಠೀ ಚ ಭರತರ್ಷಭ ।
ಸುಪುಣ್ಯೇಯಂ ಪಾಪಹರಾ ಶಿವಾ ಶಾಂತಾ ಗುಹಪ್ರಿಯಾ ॥ ೧ ॥

ಸ್ನಾನದಾನಾದಿಕಂ ಸರ್ವಂ ಯಸ್ಯಾಮಕ್ಷಯಮುಚ್ಯತೇ ।
ಯೇಸ್ಯಾಂ ಪಶ್ಯಂತಿ ಗಾಂಗೇಯಂ ದಕ್ಷಿಣಾಪಥಮಾಶ್ರಿತಂ ॥ ೨ ॥

---

## ನಲವತ್ತಾರನೆಯ ಅಧ್ಯಾಯವು

೧. ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ಭರತಕುಲಶ್ರೇಷ್ಠನೇ! ಭಾದ್ರಪದಮಾಸದ ಶುಕ್ಲ ಷಷ್ಠಿಯು ಪುಣ್ಯಕರವೂ, ಪಾಪಹರವೂ, ಮಂಗಳಕರವೂ, ಶಾಂತಿಪ್ರದವೂ ಎನಿಸಿ ಷಣ್ಮುಖನಿಗೆ ಬಹು ಇಷ್ಟವಾದ ತಿಥಿಯಾಗಿದೆ.

೨. ಆದಿನ ಮಾಡಿದ ಸ್ನಾನ, ದಾನ, ಮುಂತಾದುವೆಲ್ಲವೂ ನಾಶರಹಿತಗಳಾಗಿ ಶಾಶ್ವತಗಳಾಗಿರುವುವು. ಈ ಷಷ್ಠಿಯಲ್ಲಿ ದಕ್ಷಿಣದೇಶದಲ್ಲಿ ನೆಲಸಿರುವ ಗಂಗಾ ಸಂಭೂತನಾದ ಕಾರ್ತಿಕೇಯನನ್ನು ದರ್ಶನಮಾಡಿದವರಿಗೆ ಬ್ರಹ್ಮಹತ್ಯೆಯೇ ಮುಂತಾದ ಸಮಸ್ತಪಾಪಗಳೂ ಪರಿಹಾರವಾಗುವುದರಲ್ಲಿ ಸಂಶಯವಿಲ್ಲ.

ಬ್ರಹ್ಮಹತ್ಯಾದಿಭಿಃ ಪಾಪೈಃ ಮುಚ್ಯಂತೇ ನಾತ್ರ ಸಂಶಯಃ ।
ತಸ್ಮಾದಸ್ಯಾಂ ಸದಾ ಪಶ್ಯೇತ್ ಕಾರ್ತಿಕೇಯಂ ನೃಪೋತ್ತಮ ॥ ೩ ॥

ಪೂಜಯಂತಿ ಗುಹಂ ಯೇಽಸ್ಯಾಂ ನರಾ ಭಕ್ತಿಸಮನ್ವಿತಾಃ ।
ಪ್ರಾಪ್ಯೇಹ ತೇ ಸುಖಾನ್ ಕಾಮಾನ್ ಗಚ್ಛಂತೀಂದ್ರ ಸಲೋಕತಾಂ ॥ ೪ ॥

ಯಸ್ತು ಕಾರಯತೇ ವೇಶ್ಮ ಸುದೃಢಂ ಸುಪ್ರತಿಷ್ಠಿತಂ ।
ದಾರ್ವಂ ಶೈಲಮಯಂ ಚಾಪಿ ಭಕ್ತ್ಯಾ ಶ್ರದ್ಧಾ ಸಮನ್ವಿತಃ ॥
ಗಾಂಗೇಯಂ ಯಾನಮಾರುಹ್ಯ ಗಚ್ಛೇತ್ ಗಾಂಗೇಯಸದ್ಮ ವೈ ॥ ೫ ॥

ಸಂಮಾರ್ಜನಾದಿ ಯಃ ಕರ್ಮ ಕುರ್ಯಾದ್ಗುಹಗೃಹೇ ನರಃ ।
ಧ್ವಜಸ್ಯಾರೋಪಣಂ ರಾಜನ್ ಸ ಗಚ್ಛೇದ್ರುದ್ರಸದ್ಮ ವೈ ॥ ೬ ॥

ಚಂದನಾಗರುಕರ್ಪೂರೈರ್ಯಶ್ಚ ಪೂಜಯತೇ ಗುಹಂ ।
ಗಜಾಶ್ವರಥಯಾನಾಢ್ಯಂ ಸೈನಾಪತ್ಯಮವಾಪ್ನುತೇ ॥ ೭ ॥

---

೩-೪. ಅಯ್ಯಾ ರಾಜಶ್ರೇಷ್ಠನೇ ! ಕೇಳು ಆ ಕಾರಣದಿಂದ ಈ ಷಷ್ಠಿಯಲ್ಲಿ ಯಾವಾಗಲೂ ತಪ್ಪದೆ ಕಾರ್ತಿಕೇಯನ ದರ್ಶನವನ್ನು ಮಾಡಬೇಕು. ಯಾರು ಭಕ್ತಿಯಿಂದ ಮತ್ತು ಶ್ರದ್ಧೆಯಿಂದ ಕೂಡಿದವರಾಗಿ ಆದಿನ ಗುಹನನ್ನು ಪೂಜಿಸುವರೋ ಅವರು ಈ ಲೋಕದಲ್ಲಿ ತಮಗೆ ಅಭೀಷ್ಟವಾದ ಸುಖಗಳನ್ನು ಪಡೆಯುವರಲ್ಲದೆ ಇಂದ್ರಲೋಕದಲ್ಲಿ ವಾಸಿಸುವ ಪುಣ್ಯವನ್ನೂ ಪಡೆಯುತ್ತಾರೆ.

೫. ಯಾವನು ಶ್ರದ್ಧಾಭಕ್ತಿಗಳಿಂದಕೂಡಿ ಮರದಿಂದಲೋ, ಕಲ್ಲಿನಿಂದಲೋ, ಷಣ್ಮುಖ ದೇವಾಲಯವನ್ನು ಗಟ್ಟಿಯಾಗಿರುವಂತೆ ಕಟ್ಟಿಸುವನೋ ಅವನು ಸುವರ್ಣ ವಿಮಾನವನ್ನು ಏರಿ ಕಾರ್ತಿಕೇಯನ ಲೋಕವನ್ನು ಸೇರುವನು.

೬. ಅಯ್ಯಾ ರಾಜನೇ ! ಯಾವನು ಸುಬ್ರಹ್ಮಣ್ಯ ದೇವಾಲಯವನ್ನು ಗುಡಿಸುವುದು, ಸಾರಿಸುವುದು, ಮುಂತಾದ ಕೆಲಸಗಳನ್ನು ಮಾಡುವನೋ ಮತ್ತು ಧ್ವಜಾರೋಹಣ ಕಾರ್ಯವನ್ನೂ ಸಹ ಮಾಡುತ್ತಾನೋ ಅವನು ರುದ್ರಲೋಕವನ್ನು ಸೇರುತ್ತಾನೆ.

೭. ಚಂದನ, ಅಗರುಚಕ್ಕೆ, ಕರ್ಪೂರಾದಿಗಳಿಂದ ಯಾರು ಷಣ್ಮುಖನನ್ನು ಪೂಜಿಸುವರೋ ಅವರು ಆನೆ ಕುದುರೆ ಮುಂತಾದುದನ್ನು ಏರುವ ಸೇನಾಪತಿಯ ಪದವಿಯನ್ನು ಪಡೆಯುತ್ತಾರೆ.

ರಾಜ್ಞಾಂ ಪೂಜ್ಯಃ ಸದಾ ಪ್ರೋಕ್ತಃ ಕಾರ್ತಿಕೇಯೋ ಮಹೀಪತೇ ।
ಕಾರ್ತಿಕೇಯಮೃತೇನಾನ್ಯಂ ರಾಜ್ಞಾಂ ಪೂಜ್ಯಂ ಪ್ರಚಕ್ಷತೇ ॥ ೮ ॥

ಸಂಗ್ರಾಮಂ ಗಚ್ಛಮಾನೋ ಯಃ ಪೂಜಯೇತ್ ಕೃತ್ತಿಕಾಸುತಂ ।
ಸ ಶತ್ರುಂ ಜಯತೇ ವೀರ ಯಥೇಂದ್ರೋ ದಾನವಾನ್ ರಣೇ ॥ ೯ ॥

ತಸ್ಮಾತ್ ಸರ್ವಪ್ರಯತ್ನೇನ ಪೂಜಯೇಚ್ಛಂಕರಾತ್ಮಜಂ ।
ಪೂಜಮಾನಸ್ತು ತಂ ಭಕ್ತ್ಯಾ ಚಂಪಕೈರ್ವಿವಿಧೈರ್ನೃಪ ॥
ಮುಚ್ಯತೇ ಸರ್ವಪಾಪೇಭ್ಯೋ ಗಚ್ಛೇಚ್ಛೈವಾಲಯಂ ತದಾ ॥ ೧೦ ॥

ತೈಲಂ ಷಷ್ಠ್ಯಾಂ ನ ಭುಂಜೀತ ನ ದಿವಾ ಕುರುನಂದನ ।
ಯತ್ತು ಷಷ್ಠ್ಯಾಂ ನರೋ ನಕ್ತಂ ಕುರ್ಯಾದ್ಧಿ ಭರತರ್ಷಭ ॥
ಸರ್ವಪಾಪೈಃ ಸ ನಿರ್ಮುಕ್ತೋ ಗಾಂಗೇಯಸ್ಯ ಸದೋ ವ್ರಜೇತ್ ॥ ೧೧ ॥

---

೮. ಅಯ್ಯಾ ರಾಜಶ್ರೇಷ್ಠನೇ! ರಾಜರು ಈ ಷಣ್ಮುಖ ಪೂಜೆಯನ್ನು ಸದಾ ಮಾಡಬೇಕೆಂದೂ, ಷಣ್ಮುಖನಿಗಿಂತ ಪೂಜಾರ್ಹರಾದ ದೇವರು ಮತ್ತಾರೂ ಇಲ್ಲವೆಂದೂ ಸಹ ಹೇಳಿದೆ.

೯. ಅಯ್ಯಾ ವೀರನೇ! ಯುದ್ಧಕ್ಕೆ ಹೊರಡುವುದಕ್ಕೆ ಮುಂಚೆ ರಾಜನು ಷಣ್ಮುಖನನ್ನು ಪೂಜಿಸಿದರೆ ದೇವೇಂದ್ರನು ರಾಕ್ಷಸರನ್ನು ಧ್ವಂಸಮಾಡಿದಂತೆ ಸಮಸ್ತ ಶತ್ರುಗಳನ್ನೂ ಜಯಿಸುತ್ತಾನೆ. ಆದುದರಿಂದ ಶಿವಕುಮಾರನಾದ ಸುಬ್ರಹ್ಮಣ್ಯನನ್ನು ಬಹು ಪ್ರಯತ್ನದಿಂದಲಾದರೂ ಪೂಜಿಸಬೇಕು.

೧೦. ಅಯ್ಯಾ ರಾಜನೇ! ಸಂಪಿಗೆ ಮುಂತಾದ ಹೂಗಳಿಂದ ಪೂಜಿಸಿದರೆ ಪೂಜಿಸಿದವನು ಸರ್ವಪಾಪಗಳಿಂದ ಬಿಡುಗಡೆಹೊಂದಿ ಶಿವಲೋಕಕ್ಕೆ ಹೋಗುತ್ತಾನೆ.

೧೧. ಅಯ್ಯಾ ಕುರುನಂದನನೇ! ಈ ಷಷ್ಠೀದಿನ ಹಗಲು ಊಟಮಾಡದೇ ಇದ್ದು, ರಾತ್ರಿ ಭೋಜನದಲ್ಲಿ ಎಣ್ಣೆಯನ್ನು ಉಪಯೋಗಿಸದ ಆಹಾರವಸ್ತುಗಳನ್ನು ಸೇವಿಸಬೇಕು.

ತ್ರಿಃ ಕೃತ್ವಾ ದಕ್ಷಿಣಾಮಾಶಾಂ ಗತ್ವಾ ಯಃ ಶ್ರದ್ಧಯಾನ್ವಿತಃ ।
ಪೂಜಯೇದ್ದೇವದೇವೇಶಂ ಸ ಗಚ್ಛೇಚ್ಛಾಂತಿಮಂದಿರಂ ॥ ೧೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಕಾರ್ತಿಕೇಯ
ಮಾಹಾತ್ಮ್ಯವರ್ಣನಂ ನಾಮ ಷಟ್‌ಚತ್ವಾರಿಂಶೋಽಧ್ಯಾಯಃ.



---

೧೨. ಭರತಕುಲೋತ್ಪನ್ನನೇ! ಕೇಳು ಷಷ್ಠಿಯದಿನ ಹಗಲು ಉಪವಾಸ ವಿದ್ದು ರಾತ್ರಿ ಭೋಜನಮಾಡಿದರೆ ಅವನ ಸಮಸ್ತ ಪಾಪಗಳೂ ಪರಿಹಾರವಾಗಿ ಷಣ್ಮುಖನ ಸಾನ್ನಿಧ್ಯವನ್ನು ಸೇರುವನು. ಭಕ್ತಿಯಿಂದ ಈ ವ್ರತವನ್ನು ಮೂರು ಪಕ್ಷಗಳಲ್ಲಿಮಾಡಿ ದಕ್ಷಿಣದೇಶದ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಹೋಗಿ ಸ್ವಾಮಿಯನ್ನು ಪೂಜಿಸಿದರೆ ಅವನು ಶಾಂತಿನಿಕೇತನವನ್ನು ಸೇರುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಕಾರ್ತಿಕೇಯಮಹಿಮೆ
ವರ್ಣನೆಯೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತಚತ್ವಾರಿಂಶೋಽಧ್ಯಾಯಃ

॥ ಸುಮಂತುರುವಾಚ ॥

**ಸಪ್ತಮ್ಯಾಂ ಸೋಪವಾಸಸ್ತು ನಕ್ತಾಹಾರೋಽಪಿ ವಾ ಭವೇತ್ ।**
**ಸಪ್ತಮ್ಯಾಂ ದೇವದೇವೇನ ಲಬ್ಧಂ ಸ್ವಂ ರೂಪಮಾದರಾತ್ ॥ ೧ ॥**

**ಅಂಡೇನ ಸಹ ಜಾತೋ ವೈ ಅಂಡಸ್ಥೋ ಬುದ್ಧಿಮಾಪ್ತವಾನ್ ।**
**ಅಂಡಸ್ಥಸ್ಯೈವ ದಕ್ಷೇಣ ಭಾರ್ಯಾ ದತ್ತಾ ಸ್ವಕಾ ಸುತಾ ॥ ೨ ॥**

**ನಾಮ್ನಾ ರೂಪೇತಿ ರೂಪೇಣ ನಾನ್ಯಾನಾರೀ ತಥಾ ಭವೇತ್ ।**
**ಅಂಡಸ್ಥ ಏವ ಸುಚಿರಂ ಸ್ಥಿತೋ ಮಾರ್ತಂಡ ಇತ್ಯತಃ ॥ ೩ ॥**

---

## ನಲವತ್ತೇಳನೆಯ ಅಧ್ಯಾಯವು

೧. ಸುಮಂತುಮುನಿವರ್ಯರು ಹೇಳುತ್ತಾರೆ----ಸಪ್ತಮೀ ದಿನದಲ್ಲಿ ಉಪವಾಸವನ್ನಾದರೂ, ಅಥವಾ ರಾತ್ರಿ ಭೋಜನವನ್ನಾದರೂ ಮಾಡಬಹುದು. ಆ ದಿನದ ಹಗಲು ಉಪವಾಸವನ್ನಾದರೂ ಮಾಡಬಹುದು. ಸಪ್ತಮಿಯ ದಿನದಲ್ಲಿ ದೇವದೇವನಾದ ಸೂರ್ಯನು ತನ್ನ ದಿವ್ಯಸ್ವರೂಪವನ್ನು ಸಂತೋಷದಿಂದ ಪಡೆದನು.

೨. ಆತನು ಅಂಡಸಹಿತನಾಗಿ ಹುಟ್ಟಿ, ಅಂಡದಲ್ಲೇ ಇದ್ದು ತಿಳವಳಿಕೆಯನ್ನು ಪಡೆದನು. ಅಂಡದಲ್ಲಿ ಇರುವಾಗಲೇ ದಕ್ಷನು ತನ್ನ ಮಗಳನ್ನು ಆತನಿಗೆ ಕೊಟ್ಟು ಮದುವೆಮಾಡಿದನು.

೩. ಸೌಂದರ್ಯದಲ್ಲಿ ಈಕೆಗೆ ಸಮನಾದ ಬೇರೆ ಯುವತಿಯರು ಯಾರೂ ಇರಲಿಲ್ಲ. ಆದುದರಿಂದ ಅವಳಿಗೆ " ರೂಪಾ " ಎಂದು ಹೆಸರಾಯಿತು. ಅಂಡದಲ್ಲಿಯೇ ಬಹುಕಾಲ ಇದ್ದುದರಿಂದ ಈತನಿಗೆ ಮಾರ್ತಂಡನೆಂದು ಹೆಸರಾಯಿತು.

ದಕ್ಷಾಜ್ಞಾಯ ವಿಶ್ವಕರ್ಮಾ ವಪುರಸ್ಯ ಪ್ರಕಾಶಯನ್ ।
ಪ್ರಕಾಶತಸ್ತತೋ ನಾಮ ತಸ್ಯ ಜಾತಂ ನರಾಧಿಪ ॥
ಅಂಡಸ್ಥಸ್ಯೈವ ಸಂಜಾತೋ ಯಮುನಾ ಯಮ ಏವ ಚ ॥ ೪ ॥

ದಾಕ್ಷಾಯಣೀ ತಸ್ಯ ಭಾರ್ಯಾ ವೈರಾಗ್ಯಾತ್ತನುಮಧ್ಯಮಾ ।
ಚಿಂತಯಾಮಾಸ ಸಾ ದೇವೀ ದುಃಖಾನ್ನಿರ್ವೇದಮಾಗತಾ ॥ ೫ ॥

ಅಹೋ ತೇಜೋಮಯಂ ರೂಪಂ ಕಾಂತಂ ಕಾಂತಸ್ಯ ಕಾಂತಿಮತ್ ।
ನ ಚಾಸ್ಯ ಕಿಂಚಿತ್ಪಶ್ಯಾಮಿ ಅಂಗ ತೇಜೋವಿಮೋಹಿತಂ ॥ ೬ ॥

ಶುಭಂ ಕನಕತುಲ್ಯಂ ಮೇ ರೂಪಂ ಕಾಂತಂ ಸುಕಾಂತಿಮತ್ ।
ಸಾಂಪ್ರತಂ ಶ್ಯಾಮತಾಂ ಯಾತಂ ದಗ್ಧಮೇತಸ್ಯ ತೇಜಸಾ ॥ ೭ ॥

ತಸ್ಮಾತ್ತಪ್ಸ್ಯೇ ತಪಶ್ಚಾಹಂ ಗತ್ವಾ ವೈ ಉತ್ತರಾನ್ ಕುರೂನ್ ।
ಸ್ವಾಂ ಛಾಯಾಮತ್ರ ನಿಕ್ಷಿಪ್ಯ ಭಯಾಚ್ಛಾಪಸ್ಯರೂಪಿಣೀ ॥ ೮ ॥

---

೪. ವಿಶ್ವಕರ್ಮನು ದಕ್ಷಬ್ರಹ್ಮನ ಅಪ್ಪಣೆಯಿಂದ ಸೂರ್ಯನ ಶರೀರವನ್ನು ಸಾಣೆಹಿಡಿದು ತೇಜೋಮಯವನ್ನಾಗಿ ಮಾಡಿದನು. ಎಲೈ ರಾಜನೇ ! ಅನಂತರ ಅವನಿಗೆ ಆ ಪ್ರಕಾಶದಿಂದ ಒಂದು ಹೆಸರಾಯಿತು. ಸೂರ್ಯನು ಅಂಡದಲ್ಲಿ ಇರುವಾಗಲೇ ಯಮುನೆಯೂ, ಯಮನೂ ಅವನಿಂದ ಹುಟ್ಟಿದರು.

೫. ಕೃಶವಾದ ಸೊಂಟವುಳ್ಳವಳೂ ದಕ್ಷಕನ್ಯೆಯೂ ಆತನ ಪ್ರೇಯಸಿಯೂ ಆದ ರೂಪೆಯು ವೈರಾಗ್ಯಯುಕ್ತಳಾಗಿ ಚಿಂತೆಯಿಂದ ಬೇಸತ್ತಳು.

೬. ಅಹಾ ! ನನ್ನ ಕಾಂತನ ತೇಜೋಮಯವಾದ ರೂಪವು ಬಲುಸುಂದರವಾಗಿದೆ. ಮತ್ತು ಲಾವಣ್ಯಯುಕ್ತವಾಗಿದೆ. ಈತನ ಯಾವ ಅವಯವವೂ ತೇಜೋಹೀನವಾಗಿರುವಂತೆ ನನಗೆ ತೋರುವುದಿಲ್ಲ.

೭. ಮಂಗಳಕರವಾದ ನನ್ನ ಈ ಸುವರ್ಣಸದೃಶವಾದ ರೂಪವು ಸೊಗಸಾದ ಕಾಂತಿಯಿಂದ ಕಂಗೊಳಿಸುತ್ತಿದ್ದಿತು. ಇಂತಹ ನನ್ನ ದೇಹವು ಈಗ ಈತನ ತೇಜಸ್ಸಿನಿಂದ ಸುಟ್ಟು ಕಪ್ಪಾಗಿಹೋಗಿದೆ.

೮-೯. ಆದುದರಿಂದ " ನಾನು ಉತ್ತರ ಕುರುದೇಶಕ್ಕೆ ಹೋಗಿ ತಪಸ್ಸುಮಾಡಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡು ಗಂಡನ ಶಾಪಭಯದಿಂದ ತನ್ನ ಛಾಯೆ

ನಿಕ್ಷಿಪ್ಯೋವಾಚ ತಾಂ ಬಾಲಾಂ ಮಾ ಚಾಸ್ಮೈ ವೈ ವದಿಷ್ಯಸಿ ।
ಏವಂ ಸಾ ನಿಶ್ಚಯಂ ಕೃತ್ವಾ ಗತಾ ವೈ ಉತ್ತರಾನ್ ಕುರೂನ್ ॥ ೯ ॥

ಸ್ವರೂಪಂ ತತ್ರ ನಿಕ್ಷಿಪ್ಯ ವಡವಾರೂಪಧಾರಿಣೀ ।
ಚಚಾರ ಸಾ ಮೃಗೈಃ ಸಾರ್ಧಂ ಬಹೂನ್ ವರ್ಷಗಣಾನ್-ನೃಪ ॥ ೧೦ ॥

ಅಸಾವಪಿ ಚ ಮಾರ್ತಂಡಃ ಛಾಯಾಂ ಭಾರ್ಯಾಮುಮನ್ಯತ ।
ಶನಿಂ ಚ ತಪತೀಂ ಚೈವ ದ್ವೇ ಅಪತ್ಯೇ ಚ ಜಜ್ಞಿವಾನ್ ॥ ೧೧ ॥

ಅಥ ಛಾಯಾತ್ಮಪತ್ಯಾನಿ ಸ್ನೇಹೇನ ಪರಿಪಾಲಯೇತ್ ।
ನಾತಿಸ್ನೇಹೇನ ಚಾಪಶ್ಯತ್ ಯಮುನಾಂ ಯಮಮೇವ ಚ ॥ ೧೨ ॥

ಅಥ ತಾಭ್ಯಾಂ ವಿವಾದೋऽಭೂತ್ ಆದಿತ್ಯದುಹಿತೃದ್ವಯೋಃ ।
ತೇ ಉಭೇ ವಿವದಂತ್ಯೌ ತು ಪರಸ್ಪರಮಸಂಮತಂ ॥
ಯಮುನಾ ತಪತೀ ಚೋಭೇ ನಿಮ್ನಗೇ ಸಂಬಭೂವತುಃ ॥ ೧೩ ॥

---

ಯನ್ನು ಒಬ್ಬ ಬಾಲಿಕೆಯನ್ನಾಗಿ ಮಾಡಿ ಅಲ್ಲಿ ಬಿಟ್ಟು ತಾನು ಬೇರೆ ರೂಪವನ್ನು ಧರಿಸಿ ಆ ಹುಡುಗಿಯನ್ನು ಕುರಿತು "ನನ್ನ ಸಮಾಚಾರವನ್ನು ಇತರರಿಗೆ ಹೇಳಬೇಡ" ಎಂದು ತಿಳಿಸಿದಳು.

೧೦. ಬಳಿಕ ತಾನು ಉತ್ತರ ಕುರುದೇಶಕ್ಕೆ ಹೋಗಿ ಹೆಣ್ಣು ಕುದುರೆಯ ರೂಪವನ್ನು ಧರಿಸಿ ಅನೇಕಕಾಲ ಮೃಗಗಳೊಡನೆ ತಿರುಗುತ್ತಿದ್ದಳು.

೧೧. ಈ ಮಾರ್ತಂಡನು ತನ್ನಬಳಿ ಆಕೆ ಬಿಟ್ಟು ಹೋಗಿದ್ದ ಛಾಯೆಯನ್ನೇ ನಿಜವಾದ ಕಾಂತೆಯೆಂದು ತಿಳಿದುಕೊಂಡು ಅವಳೊಡಗೂಡಿ ಇರುತ್ತಾ ಕಾಲಕ್ರಮದಲ್ಲಿ ಛಾಯೆಯಲ್ಲಿ ಶನಿ ಎಂಬ ಪುತ್ರ, ತಪತಿ ಎಂಬ ಪುತ್ರಿ, ಈ ಇಬ್ಬರು ಮಕ್ಕಳನ್ನು ಪಡೆದನು.

೧೨. ಛಾಯೆಯು ತಾನು ಹಡೆದ ಇಬ್ಬರು ಮಕ್ಕಳನ್ನು ಪ್ರೀತಿಯಿಂದ ಕಾಪಾಡುತ್ತಿದ್ದಳು. ತತ್ಪೂರ್ವವಾಗಿ ಜನಿಸಿದ್ದ ಯಮನನ್ನೂ, ಯಮುನೆಯನ್ನೂ ಅಷ್ಟು ಪ್ರೀತಿಯಿಂದ ಕಾಣುತ್ತಿರಲಿಲ್ಲ.

೧೩. ಹೀಗೆ ಮಾಡಿದುದು ಸರಿಬೀಳಲಿಲ್ಲ. ಸೂರ್ಯನ ಹೆಣ್ಣು ಮಕ್ಕಳಾದ ಯಮುನೆ ತಪತಿ ಇಬ್ಬರಿಗೂ ಪರಸ್ಪರ ಜಗಳ ಹತ್ತಿತು. ಅವರಿಬ್ಬರೂ ಅಸಮಾಧಾನದಿಂದ ಜಗಳವಾಡಿ ಕೊನೆಗೆ ನದಿಗಳಾಗಿ ಹೋದರು.

ಯಮೋಽಪಿ ಯಮುನಾ ಭ್ರಾತಾ ಛಾಯಯಾ ತಾಡಿತೋ ಭೃಶಂ ।
ಪಾದಮುದ್ಯಮ್ಯ ತಸ್ಯಾ ವೈ ತಸ್ಥೌ ಸಂಮುಖ ಏವ ಸಃ ॥ ೧೪ ॥

ಛಾಯಾ ಶಶಾಪ ತಂ ರೋಷಾತ್ ಯಸ್ಮಾತ್ಪಾದೋದ್ಯತೋ ಮಮ ।
ತಸ್ಮಾತ್ತೇ ಕರ್ಮಬೀಭತ್ಸಂ ಪ್ರಾಣಿನಾಂ ಪ್ರಾಣಹಿಂಸನಂ ॥ ೧೫ ॥

ಭವಿಷ್ಯತಿ ಚಿರಂ ಮೂಢ ಆಚಂದ್ರಾರ್ಕಂ ನ ಸಂಶಯಃ ।
ಪಾದಂ ಚ ಯದಿ ಭೂಮೌ ತ್ವಮಿಮಂ ಸಂಸ್ಥಾಪಯಿಷ್ಯಸಿ ॥ ೧೬ ॥

ಕೃಮಯೋ ಭಕ್ಷಯಿಷ್ಯಂತಿ ಮಚ್ಛಾಪಕಲುಷೀಕೃತಂ ।
ತೇಷಾಂ ವಿವದಮಾನಾನಾಂ ಮಾರ್ತಂಡೋಽಭ್ಯಾಗಮತ್ತತಃ ॥ ೧೭ ॥

ಯಮೋಽಪ್ಯಾಹ ಮಹಾತ್ಮಾನಂ ಮಾರ್ತಂಡಂ ಲೋಕಪಾವನಂ ।
ತಾತ ನಿತ್ಯಮಿಯಂ ಚಾಪಿ ಕ್ರೂರಭಾವೇನ ಪಶ್ಯತಿ ॥ ೧೮ ॥

---

೧೪. ಯಮುನೆಯ ಅಣ್ಣನಾದ ಯಮನನ್ನು ಛಾಯೆಯು ಬಲವಾಗಿ ಹೊಡೆದಳು. ಆಗ ಯಮನು ತಾಯಿಯನ್ನು ಒದೆಯಲು ಸಿದ್ಧನಾಗಿ ಆಕೆಯ ಎದುರಿಗೆ ಕಾಲನ್ನು ಎತ್ತಿದನು.

೧೫. ಆಗ ಕುಪಿತಳಾದ ಛಾಯೆಯು " ನೀನು ನನ್ನನ್ನು ಒದೆಯಲು ಯತ್ನಿಸಿದುದರಿಂದ ಪ್ರಾಣಿಗಳನ್ನು ಹಿಂಸಿಸುವುದೆಂಬ ಕೃತ್ಯವೇ ನಿನಗೆ ಒದಗಲಿ " ಎಂದು ಶಪಿಸಿದಳು.

೧೬. ಮತ್ತೆ ಎಲೈ ಮೂಢನೇ! ಸೂರ್ಯಚಂದ್ರರಿರುವ ಪರ್ಯಂತವೂ ಈ ಸ್ಥಿತಿಯೇ ನಿನಗೆ ಸಂಭವಿಸಲಿ. ನೀನು ನೆಲದಮೇಲೆ ಕಾಲನ್ನೂರಿದರೆ ನನ್ನ ಶಾಪಗ್ರಸ್ತವಾದ ನಿನ್ನ ಕಾಲನ್ನು ಹುಳುಗಳು ತಿನ್ನಲಿ " ಎಂದು ಶಪಿಸಿದಳು.

೧೭–೧೮. ಇವರು ಹೀಗೆ ವಿವಾದಮಾಡುತ್ತಿದ್ದಾಗ ಸೂರ್ಯನು ಅಲ್ಲಿಗೆ ಬಂದನು. ಆಗ ಯಮನು ಲೋಕಪಾವನನಾದ ಸೂರ್ಯನನ್ನು ಕುರಿತು " ಅಪ್ಪಾ ! ನನ್ನ ವಿಷಯದಲ್ಲಿ ಈಕೆಯು ಯಾವಾಗಲೂ ಕ್ರೂರವಾಗಿ ವರ್ತಿಸುತ್ತಾಳೆ. ಮಕ್ಕ

ನ ಚಾಸ್ಯಾಃ ಸುಸಮಾ ದೃಷ್ಟಿಃ ಅಸ್ಮಾಸ್ವಸ್ತೀತಿ ಲಕ್ಷ್ಯತೇ ।
ಪ್ರೋವಾಚಾಽಥ ಸ ತಾಂ ಛಾಯಾಂ ಮಾರ್ತಂಡೋ ಭೃಶಕೋಪನಃ ॥೧೯॥

ಸ ಮೇ ಅಪತ್ಯೇ ಕಿಂ ಮೂಢೇ ಸಮತ್ವಂ ನಾನುಪಶ್ಯಸಿ ।
ಯಮಃ ಪ್ರೋವಾಚ ಪಿತರಂ ನೇಯಂ ಮಾತಾ ಪಿತುರ್ಮಮ ॥ ೨೦ ॥

ಮಾತುಶ್ಛಾಯಾತ್ಮಿಯಂ ಪಾಪಾ ಶಪ್ತೋಽಹಮನಯಾ ಪಿತಃ ।
ಯಮುನಾ ತಪತೀವೃತ್ತಂ ತತ್ಸರ್ವಂ ವಿನ್ಯವೇದಯತ್ ॥ ೨೧ ॥

ಅಥ ಪ್ರೋವಾಚ ಮಾರ್ತಂಡೋ ಮಾ ತೇ ಪಾದೋ ಮಹೀತಲೇ ।
ಮಾಂಸಂ ರುಧಿರಮಾದಾಯ ಕೃಮಯೋ ಯಾಂತು ಭೂತಲಂ ॥ ೨೨ ॥

ಯಮುನಾಯಾಶ್ಚ ತತ್ತೋಯಂ ಗಂಗಾತುಲ್ಯಂ ಭವಿಷ್ಯತಿ ।
ನರ್ಮದಾಯಾ ತಪತ್ಯಾಶ್ಚ ಸಾಮ್ಯಂ ಪುಣ್ಯೇನ ವೈ ದ್ವಿಜ ॥ ೨೩ ॥

---

ಳಾದ ನಮ್ಮಗಳೆಲ್ಲರನ್ನೂ ನಿಷ್ಪಕ್ಷಪಾತವಾಗಿ ಕಾಣುವುದಿಲ್ಲ. ಈಕೆಯ ಹೃದಯವು ಸಮಭಾವನೆಯಿಂದ ಕೂಡಿದೆಯೆಂದು ಹೇಳಲಾರೆ" ಎಂದು ಹೇಳಿದನು.

೨೦. ಆಗ ಸೂರ್ಯನು ತುಂಬಾ ಕೋಪಗೊಂಡು ಛಾಯೆಯನ್ನು ಕುರಿತು— "ಎಲೈ ಮೂಢೆಯೇ! ಮಕ್ಕಳಿಬ್ಬರೂ ಸಮವಲ್ಲವೇ? ನೀನು ಏತಕ್ಕೆ ಇಬ್ಬರನ್ನೂ ಸಮದೃಷ್ಟಿಯಿಂದ ನೋಡುವುದಿಲ್ಲ" ಎಂದು ಆಕ್ಷೇಪಿಸಿದನು.

೨೧. ಇದೇ ಸಮಯದಲ್ಲಿ ಯಮನು ತನ್ನ ತಂದೆಯನ್ನು ಕುರಿತು ಮತ್ತೆ "ಎಲೈ ತಂದೆಯೇ! ಇವಳು ನಿಜವಾದ ತಾಯಿಯಲ್ಲ. ಈಕೆಯು ಛಾಯೆಯು, ತಾಯಿಯಂತೆ ನಟಿಸುವವಳು. ಆದುದರಿಂದ ನನ್ನನ್ನು ಶಪಿಸಿದ್ದಾಳೆ" ಎಂದು ಹೇಳಿ ಯಮುನೆ, ತಪತಿ ಇವರುಗಳಿಗೆ ನಡೆದ ವಿವಾದವನ್ನು ತಿಳಿಸಿದನು.

೨೨. ಆಗ ಸೂರ್ಯನು ಯಮನನ್ನು "ಕುರಿತು ನೀನು ಭೂಮಿಯಮೇಲೆ ಕಾಲನ್ನು ಇಡಲೂ ಬೇಡ, ನಿನ್ನ ರಕ್ತಮಾಂಸಗಳನ್ನು ಕ್ರಿಮಿಗಳು ಭೂಮಿಗೆ ಒಯ್ಯುವುದೂ ಬೇಡ."

೨೩. "ಯಮುನಾನದಿಯ ನೀರು ಗಂಗೆಯ ನೀರಿಗೆ ಸಮನಾಗಲಿ, ಅಯ್ಯಾ ದ್ವಿಜನೇ! ನರ್ಮದಾ ತಪತೀ ನದಿಗಳ ಜಲವೂ ಕೂಡ ಪುಣ್ಯ ಸಾಧನೆಯ ವಿಷಯದಲ್ಲಿ ವ್ಯತ್ಯಾಸವಿಲ್ಲದೇ ಸಮನಾಗಿ ಇರುವುವು."

ವಿಂಧ್ಯಸ್ಯ ದಕ್ಷಿಣೇನೇಹ ತಪತೀ ಪ್ರವಹಿಷ್ಯತಿ ।
ತತ್ತಾಯಯುಜ್ಯತಯಾ ಸಾರ್ಧಂ ಗಂಗಾ ಯಾಸ್ಯತಿ ಶೋಭನಾ ॥ ೨೪ ॥

ಗಂಗಾಮಾಸಾದ್ಯ ಯಮುನಾ ಗಂಗಾ ಸೈವ ಭವಿಷ್ಯತಿ ।
ಸೌರಸೌಮ್ಯೇ ಉಭೇ ಪುಣ್ಯೇ ಸರ್ವಪಾಪಪ್ರಣಾಶಿನೀ ॥ ೨೫ ॥

ಸೌರೀ ಚ ವೈಷ್ಣವೀ ಚೋಭೇ ಮಹಾಪಾಪಭಯಾಪಹೇ ।
ತ್ವಂ ಪುತ್ರ ಲೋಕಪಾಲತ್ವಂ ವಿಧಾತ್ರಾಜ್ಞಾಂ ಸಭಾಜಯನ್ ॥ ೨೬ ॥

ಅದ್ಯ ಪ್ರಭೃತಿ ಚ್ಛಾಯೇಯಂ ಸ್ವದೇಹಸ್ಥಾ ಭವಿಷ್ಯತಿ ।
ಏವಂ ಸಂಸ್ಥಾಪ್ಯ ಸ್ವಾಂ ಭಾರ್ಯಾಂ ಅಪತ್ಯಾನಿ ತಥೈವ ಚ ॥ ೨೭ ॥

ಆಜಗಾಮ ಸಕಾಶಂ ವೈ ದಕ್ಷಸ್ಯಾಹ ಚ ಕಾರಣಂ ।
ದಕ್ಷೋ ವಿಜ್ಞಾಯ ತತ್ಸರ್ವಂ ಮಾರ್ತಂಡಮಿದಮಾಹ ವೈ
ನ ಪಶ್ಯಂತೀ ತು ತೇ ರೂಪಂ ಭಾರ್ಯಾ ಸಾ ಚೋತ್ತರಾನ್‌ಗತಾ ॥ ೨೮ ॥

---

೨೪ "ತಪತಿಯು ನದಿಯಾಗಿ ವಿಂಧ್ಯಪರ್ವತದ ದಕ್ಷಿಣದಲ್ಲಿ ಪ್ರವಹಿಸುವುದು. ಅದರ ಜಲವನ್ನು ಗಂಗಾಜಲದೊಂದಿಗೆ ಸೇರಿಸುವುದರಿಂದ ಜಲವು ಶುಭಕಾರಿಯಾಗುವುದು.''

೨೫. ಯಮುನೆಯು ಗಂಗೆಯನ್ನು ಸೇರಿ ಗಂಗೆಯೇ ಆಗುವಳು. ಸೂರ್ಯ ಪುತ್ರಿಯರೂ ಶಾಂತೆಯರೂ ಆದ ಯಮುನಾ ತಪತಿಯರು ಪುಣ್ಯಕಾರಿಣಿಯರೂ ಸಮಸ್ತ ಪಾಪಹಾರಿಣಿಯರೂ ಆಗಿರುತ್ತಾರೆ. ಸೂರ್ಯ ಪುತ್ರಿಯಾದ ಯಮುನೆ, ವಿಷ್ಣು ಪುತ್ರಿಯಾದ ಗಂಗೆ ಈ ನದಿಗಳು ಮಹಾಪಾಪಗಳನ್ನು ನಾಶಮಾಡತಕ್ಕವುಗಳಾಗಿವೆ.

೨೬. "ಎಲೈ ಮಗನೇ! ನೀನು ಮಾತ್ರ ಬ್ರಹ್ಮನ ಆಜ್ಞೆಯನ್ನು ಪರಿಪಾಲಿಸುತ್ತಾ ಲೋಕಪಾಲಕತ್ವವನ್ನು ವಹಿಸಿ ಇರಬೇಕು. ಇಂದು ಮೊದಲುಗೊಂಡು ಛಾಯೆಯು ನನ್ನ ದೇಹದಲ್ಲಿ ಐಕ್ಯಳಾಗಲಿ".

೨೭-೨೮. ಎಂದು ಸೂರ್ಯನು ತನ್ನ ಪತ್ನಿಗೂ ಪುತ್ರನಿಗೂ ಕರ್ತವ್ಯ ಕರ್ಮಗಳನ್ನು ವಿಧಿಸಿ ಮಾವನಾದ ದಕ್ಷನ ಹತ್ತಿರಕ್ಕೆ ಬಂದನು. ಮತ್ತು ತಾನು ಬಂದ ಕಾರಣವನ್ನು ಆತನಿಗೆ ಹೇಳಿದನು. ದಕ್ಷನು ಅದನ್ನೆಲ್ಲಾ ಕೇಳಿ ತಿಳಿದುಕೊಂಡು ಮಾರ್ತಂಡನನ್ನು ಕುರಿತು ಹೀಗೆ ಹೇಳಿದನು.

ರೂಪಂ ತೇ ಪ್ರಕಟಿಷ್ಯಾಮಿ ಯದಿ ಶಕ್ಷ್ಯಸಿ ವೇದನಾಂ ।
ಅಸೌ ಪ್ರೋವಾಚ ಶಕ್ಷ್ಯೇಽಹಂ ಪ್ರಕಾಶೀಕುರು ಮೇ ವಪುಃ ॥ ೨೯ ॥

ಅಥ ಸಸ್ಮಾರ ತಕ್ಷಾಣಂ ಸ್ಮೃತ ಏವಾಜಗಾಮ ಸಃ ।
ಪ್ರೋವಾಚ ದಕ್ಷಸ್ತಕ್ಷಾಣಂ ಮಾರ್ತಂಡಂ ವೈ ಪ್ರಕಾಶಯ ॥ ೩೦ ॥

ತಕ್ಷಾ ಪ್ರೋವಾಚ ಮಾರ್ತಂಡಂ ವೇದನಾಂ ವಿಸಹಿಷ್ಯಸೇ ।
ವಿಸಹಿಷ್ಯೇಥ ಪ್ರೋವಾಚ ತಕ್ಷಾಣಂ ದಕ್ಷಚೋದಿತಃ ॥ ೩೧ ॥

ಅಥ ತಕ್ಷಾ ಪ್ರಕಾಶಂ ವೈ ತಸ್ಯ ರೂಪಂ ವಿಭಾವಸೋಃ ।
ಮುಖಾದಾರಭ್ಯ ಪಾದಾಂತಂ ತತಕ್ಷ ಕರಣೈಃ ಸ್ವಕೈಃ ॥
ಕರಣೈಸ್ತುದ್ಯಮಾನೇಷು ತಸ್ಯಾಂಗೇಷು ಪುನಃ ಪುನಃ ।
ಕ್ಷಣೇ ಕ್ಷಣೇ ಮೂರ್ಛಯತಿ ಮಾರ್ತಂಡೋ ವೇದನಾತುರಃ ॥ ೩೨ ॥

---

೨೯. "ನಿನ್ನ ಹೆಂಡತಿಯು ನಿನ್ನ ರೂಪವನ್ನು ನೋಡಲಾರದೇ ಉತ್ತರ ಕುರುದೇಶಕ್ಕೆ ಹೋದಳು. ನೀನು ನೋವನ್ನು ಸಹಿಸಿಕೊಳ್ಳುವೆಯಾದರೆ ಸಾಣೆ ಹಿಡಿದು ನಿನ್ನ ರೂಪವನ್ನು ಪ್ರಕಾಶಪಡಿಸುತ್ತೇನೆ" ಎಂದನು.

೩೦. ಸೂರ್ಯನು "ನಾನು ನೋವನ್ನು ಸಹಿಸುತ್ತೇನೆ. ನನ್ನ ಶರೀರವನ್ನು ಸಾಣೆ ಹಿಡಿದು ಪ್ರಕಾಶಪಡಿಸು" ಎಂದು ಹೇಳಿದನು.

೩೧. ಆಗ ವಿಶ್ವಕರ್ಮನು "ನೋವನ್ನು ಸಹಿಸಬಲ್ಲೆಯಾ" ಎಂದು ಮತ್ತೆ ಮಾರ್ತಂಡನನ್ನು ಕೇಳಿದನು. ದಕ್ಷನ ಪ್ರೇರಣೆಯಂತೆ ಸೂರ್ಯನು "ಎಷ್ಟು ನೋವಾದರೂ ಸಹಿಸುತ್ತೇನೆ" ಎಂದು ಹೇಳಿದಮ.

೩೨. ಅನಂತರ ವಿಶ್ವಕರ್ಮನು ಆತನ ರೂಪವನ್ನು ಪ್ರಕಾಶಗೊಳಿಸುವುದಕ್ಕಾಗಿ ತನ್ನ ಆಯುಧಾದಿ ಸಾಧನಗಳಿಂದ ಸೂರ್ಯನ ಮುಖದಿಂದ ಪಾದದವರೆಗೂ ಸಹ ಕೆತ್ತಿದನು. ತನ್ನ ಆಯುಧಾದಿ ಸಾಧನಗಳಿಂದ ಸೂರ್ಯನನ್ನು ಮತ್ತೆ ಮತ್ತೆ ಕೆತ್ತುತ್ತಿರಲು ಸೂರ್ಯನು ಬಹು ನೋವಿನಿಂದ ಪೀಡಿತನಾಗಿ ಪದೇ ಪದೇ ಮೂರ್ಛೆ ಹೋಗುತ್ತಿದ್ದನು.

ತಸ್ಯ ಶಾಪಭಯಾತ್ತಕ್ಷಾ ಪಾದೌ ಗುಲ್ಫಾದಿ ಯಾವತಃ ।
ಚಕಾರೋಥ ನಿರಾಕಾರಾ ಅಂಗುಲ್ಯೋಽನ ಪ್ರಕಾಶಯತ್ ॥ ೩೩ ॥

ಪರ್ಯಾಪ್ತಂ ತಕ್ಷಕರ್ಮೇದಂ ವೇದನಾ ಬಾಧತೇ ಹಿ ಮಾಂ ।
ತಕ್ಷಾ ಪ್ರೋವಾಚ ಮಾರ್ತಂಡಂ ವೇದನಾಂ ಜಹಿ ಗೋಪತೇ ॥ ೩೪ ॥

ಕರವೀರಸ್ಯ ಪುಷ್ಪಾಣಿ ರಕ್ತಚಂದನಮೇವ ಚ ।
ಕರಾದಾರಭ್ಯ ಗಾತ್ರಾಣಿ ಲಿಂಪ ದೇಹಂ ಚ ತೇ ರವೇ ॥ ೩೫ ॥

ತತ್ತತ್ಕೃತಂ ತಥಾ ತೇನ ಸರುಜಂ ತ್ಯಕ್ತವಾನ್ ರವಿಃ ।
ಅತಶ್ಚೇಮಾನಿ ಚೇಷ್ಟಾನಿ ಮಾರ್ತಂಡಸ್ಯೇಹ ಭೂಪತೇ ॥ ೩೬ ॥

ಕರವೀರಸ್ಯ ಪುಷ್ಪಾಣಿ ತಥಾ ವೈ ರಕ್ತಚಂದನಂ ।
ಇದಮಾಹ ಪುರಾ ದೇವೋ ಹ್ಯನೂರೋರಗ್ರತೋ ನೃಪ ॥ ೩೭ ॥

---

೩೩-೩೪. ಸೂರ್ಯನು ಶಾಪಕೊಟ್ಟಾನೆಂಬ ಭಯದಿಂದ ವಿಶ್ವಕರ್ಮನು ಕಾಲಿನ ಗುಲ್ಫದಿಂದ (ಹರಡು) ಕೆಳಕ್ಕೆ ಕಾಲು ಬೆರಳು ಮುಂತಾದುದನ್ನು ಬಿಡಿಸದೇ ಸಂಪೂರ್ಣ ಕಾಲಿನ ಆಕಾರ ಕಾಣದಂತೆ ಮಾಡಿದ್ದನು. ಅಷ್ಟರಲ್ಲಿ ಸೂರ್ಯನು " ಅಯ್ಯಾ ! ವಿಶ್ವ ಕರ್ಮನೇ ! ಇನ್ನು ಈ ಕೆಲಸಸಾಕು. ನನಗೆ ನೋವು ಬಹಳವಾಗಿದೆ" ಎನ್ನಲು ಆಗ ವಿಶ್ವಕರ್ಮನು, ಎಲೈ ಕಿರಣಾಧಿಪತಿಯಾದ ಸೂರ್ಯನೇ ! ಇನ್ನು ಬಾಧೆಯೆಲ್ಲಾ ಪರಿ ಹಾರವಾಗುವುದು.

೩೫. ಕಣಗಲೆ ಹೂ, ಕೆಂಪುಚಂದನ ಇವನ್ನು ನುಣ್ಣಗೆ ಅರೆದು ನಿನ್ನ ಕೈಗಳು ಮೊದಲುಗೊಂಡು ದೇಹದ ಅಂಗಗಳಿಗೆಲ್ಲಾ ಲೇಪನಮಾಡಿಕೋ ಎಂದನು.

೩೬. ಸೂರ್ಯನು ಅವನು ಹೇಳಿದ ಹಾಗೆಯೇ ಮಾಡಿದುದರಿಂದ ಆ ಬಾಧೆ ಯನ್ನೆಲ್ಲಾ ಕಳೆದುಕೊಂಡನು. ಎಲೈ ಭೂಪತಿಯೇ ! ಈ ಕಾರಣದಿಂದ ಸೂರ್ಯನಿಗೆ ಕರವೀರಪುಷ್ಪ, ರಕ್ತಚಂದನ, ಮೊದಲಾದುವು ಇಷ್ಟವಾದ ವಸ್ತುಗಳಾದುವು.

೩೭-೩೯. " ಅಯ್ಯಾ ನೃಪನೇ! ಕೇಳು ಯಾವನು ಕಣಗಲೆಹೂ, ರಕ್ತಚಂದನ, ಸುವಾಸನೆಯಾದ ಗುಗ್ಗುಳಧೂಪ ಇವನ್ನು ಭಕ್ತಿಯಿಂದ ನನಗೆ ಸಮರ್ಪಿಸುವನೋ

ಕರವೀರಸ್ಯ ಪುಷ್ಪಾಣಿ ರಕ್ತಚಂದನಮೇವ ಚ ।
ಇತಿಹಾಸಪುರಾಣಾಭ್ಯಾಂ ಸುಗಂಧಂ ಗುಗ್ಗುಲಂ ತಥಾ ॥ ೩೮ ॥

ಯಃ ಪ್ರಯಚ್ಛತಿ ಮೇ ಭಕ್ತ್ಯಾ ಸ ಮೇ ಪ್ರಾಣಾನ್ ಪ್ರಯಚ್ಛತಿ ।
ತಸ್ಮಾನ್ನದೇಯಮನ್ಯಸ್ಮೈ ಭಕ್ತಿಯುಕ್ತೇನ ಜಾನತಾ ॥ ೩೯ ॥

ಮಾರ್ತಂಡಸ್ಯಾಂಡಜಂ ತೇಜೋ ಗೃಹೀತ್ವಾ ಕಿಲ ಭಾರತಃ ।
ಚಕಾರ ವಜ್ರಮಜರಂ ಶತ್ರುಲೇಖಾದಿನಾಶನಂ ॥ ೪೦ ॥

ಮಾರ್ತಂಡಃ ಪರಿತುಷ್ಟೋಽಭೂತ್ ಲಬ್ಧ್ವಾ ರೂಪಂ ಗತವ್ಯಥಃ ।
ಜಗಾಮ ಸ ಕುರೂನ್ ವೇಗಾತ್ ಸ್ವಭಾರ್ಯಾದರ್ಶನೋತ್ಸುಕಃ ॥ ೪೧ ॥

ಮೃಗಮಧ್ಯಗತಾಂ ದೃಷ್ಟ್ವಾ ವಡವಾರೂಪಧಾರಿಣೀಂ ।
ಅಶ್ವರೂಪಂ ತತಃ ಕೃತ್ವಾ ಸ್ವಭಾರ್ಯಾಮಧಿರುಹ್ಯ ಸಃ ।
ಅವಾಸೃಜತ್ ಸ್ವಕಂ ತೇಜೋ ವೇಗೇನಾರುಹ್ಯ ಸೋಽಶ್ವವತ್ ॥ ೪೨ ॥

---

ಅವನು ನನಗೆ ಪ್ರಾಣದಾನಮಾಡಿದಹಾಗೆ ಎನ್ನಬೇಕು. ಭಕ್ತಿಯುಳ್ಳವನೂ ಜ್ಞಾನಿಯೂ ಆದ ಮನುಷ್ಯನು ನನಗೆ ಕರವೀರಪುಷ್ಪ, ರಕ್ತಚಂದನ, ಇವುಗಳನ್ನಲ್ಲದೆ ಬೇರೆ ಯಾವುದನ್ನೂ ಕೊಡತಕ್ಕದ್ದಲ್ಲವೆಂದು ಇತಿಹಾಸ ಪುರಾಣಗಳಲ್ಲಿ ಪ್ರಸಿದ್ಧವಾಗಲಿ" ಎಂಬದಾಗಿ ಅರುಣನ ಸಮಕ್ಷಮದಲ್ಲಿ ಸೂರ್ಯದೇವನೇ ಹೇಳಿದ್ದಾನೆ.

೪೦. ಎಲೈ ಭರತಕುಲೋತ್ಪನ್ನನೇ ! ಸೂರ್ಯನ ಅಂಡವನ್ನು ಕಡೆದುದರಿಂದ ಬಂದ ತೇಜಸ್ಸಿನ ಕಣಗಳನ್ನು ತೆಗೆದುಕೊಂಡು ಶತ್ರುಸಮೂಹವನ್ನು ನಾಶಮಾಡತಕ್ಕುದೂ ಮತ್ತು ಸ್ವಯಂ ನಾಶವಾಗದುದೂ ಆದ ವಜ್ರಾಯುಧವನ್ನು ನಿರ್ಮಿಸಿದನು.

೪೧. ಮಾರ್ತಂಡನು ತಾನು ಸುಂದರಾಕೃತಿಯನ್ನು ಹೊಂದಿದುದರಿಂದ ನೋವಿನ ವ್ಯಥೆಯಿಂದ ಮುಕ್ತನಾಗಿ ಸಂತೋಷವನ್ನು ಹೊಂದಿ ತನ್ನ ಪ್ರೇಯಸಿಯನ್ನು ನೋಡಬೇಕೆಂದು ಬಹಳ ವೇಗದಿಂದ ಉತ್ತರ ಕುರುದೇಶಕ್ಕೆ ಹೋದನು.

೪೨. ಆ ಉತ್ತರ ಕುರುದೇಶದಲ್ಲಿ ಹೆಣ್ಣು ಕುದುರೆಯ ರೂಪಿನಿಂದ ಮೃಗಗಳ ಮಧ್ಯದಲ್ಲಿ ಸಂಚರಿಸುತ್ತಿರುವ ತನ್ನ ಪತ್ನಿಯನ್ನು ಕಂಡು ತಾನು ಗಂಡು ಕುದುರೆಯ ರೂಪವನ್ನು ಧರಿಸಿ ಪತ್ನಿಯಾದ ಆಕೆಯನ್ನು ಆಶ್ರಯಿಸತೊಡಗಿ ವೇಗದಿಂದ ಅವಳ ಮೇಲೆ ಹಾರಿ ತನ್ನ ವೀರ್ಯವನ್ನು ವಿಸರ್ಜನೆಮಾಡಿದನು.

ಪರಪುರುಷಾಶಂಕಯಾ ಸಾ ಸ್ಥಿತಾ ದೇವಸ್ಯ ಸಂಮುಖೀ ।
ತೇಜೋ ನಾಸಾಪುಟಾಭ್ಯಾಂ ತು ಯುಗಪತ್ ಸಾऽಕ್ಷಿಪತ್ ಪುನಃ ॥ ೪೩ ॥

ತತ್ರ ಜಾತೌ ದೇವಭಿಷಜೌ ನಾಸತ್ಯಾವಶ್ವಿನಾವಿತಿ ।
ರೇತಸೋऽಂತೇ ತು ರೇವಂತೋ ವಿರೋಚನಸುತೋ ಮಹಾನ್ ॥ ೪೪ ॥

ತಪತೀ ಶನಿಶ್ಚ ಸಾವರ್ಣಿಃ ಛಾಯಾಪತ್ಯಾನಿ ವೈ ವಿದುಃ ।
ಯಮುನಾ ಯಮುಶ್ಚ ಪೂರ್ವೋಕ್ತೌ ಸಂಜ್ಞಾಯಾಶ್ಚ ತಥಾತ್ಮಜೌ ॥ ೪೫ ॥

ಭಾರ್ಯಾ ಲಬ್ಧಾ ವಪುರ್ದಿವ್ಯಂ ತಥಾ ಪುತ್ರಾಶ್ಚ ಭಾರತ ।
ಸಪ್ತಮ್ಯಾಂ ದೇವದೇವಸ್ಯ ಸರ್ವಮೇವಮಿದಂ ಯುತಃ ॥ ೪೬ ॥

ಅನೇನ ಕಾರಣೇನೇಷ್ಟಾ ಸದಾ ದೇವಸ್ಯ ಸಪ್ತಮೀ ।
ಸಪ್ತಮ್ಯಾಂ ಸೋಪವಾಸಸ್ತು ರಾತ್ರೌ ಭುಂಜೀತ ಯೋ ನರಃ ।
ಕೃತ್ವೋಪವಾಸಂ ಷಷ್ಠ್ಯಾಂ ತು ಪಂಚಮ್ಯಾಮೇಕಕಾಲಭುಕ್ ॥ ೪೭ ॥

---

೪೩. ಆಗ ಹೆಣ್ಣು ಕುದುರೆಯು ಇವನನ್ನು ಪರಪುರುಷನೆಂಬ ಸಂದೇಹ ದಿಂದ ತನ್ನ ಮೂಗಿನ ರಂಧ್ರದಿಂದ ಆ ವೀರ್ಯವನ್ನು ಏಕಕಾಲದಲ್ಲಿ ಹೊರಕ್ಕೆಬಿಟ್ಟಿತು.

೪೪ ಹಾಗೆ ಬಿಡಲಾಗಿ ಆ ಸ್ಥಳದಲ್ಲಿ ಅಶ್ವಿನೀ ದೇವತೆಗಳಾದ ದೇವವೈದ್ಯರು ಜನಿಸಿದರು. ರೇತಸ್ಸಿನ ಕೊನೆಯ ಭಾಗದಲ್ಲಿ ರೇವಂತನೆಂದು ಹೆಸರುಳ್ಳ ಸೂರ್ಯನ ಪುತ್ರನು ಉತ್ಪನ್ನನಾದನು.

೪೫. ತಪತಿ, ಶನಿ, ಸಾವರ್ಣಿ ಇವರು ಛಾಯೆಯ ಮಕ್ಕಳೆಂದು ಪ್ರಸಿದ್ಧಿ ಪಡೆದರು. ಹಿಂದೆ ಹೇಳಿದ ಯಮ ಮತ್ತು ಯಮುನೆ ಈ ಇಬ್ಬರೂ ಸಂಜ್ಞಾ ದೇವಿಯ ಮಕ್ಕಳು ಎನಿಸಿದರು.

೪೬. ಈ ಸಪ್ತಮಿಯಲ್ಲಿ ಸೂರ್ಯನಿಗೆ ಹೆಂಡತಿ ಸಿಕ್ಕಿದಳು. ಶರೀರವೂ ದಿವ್ಯ ಸುಂದರವಾಯಿತು ಹಾಗೆಯೇ ಮಕ್ಕಳೂ ಉಂಟಾದರು. ಹೀಗೆ ದೇವದೇವನಾದ ಸೂರ್ಯನಿಗೆ ಇವೆಲ್ಲವೂ ಸಪ್ತಮಿಯದಿನ ಲಬ್ಧವಾದುದರಿಂದ ಈ ಕಾರಣಕ್ಕಾಗಿ ಯಾವಾ ಗಲೂ ಸೂರ್ಯದೇವನಿಗೆ ಸಪ್ತಮಿ ತಿಥಿಯು ಇಷ್ಟವಾಯಿತು.

೪೭. ಪಂಚಮಿಯಲ್ಲಿ ಒಪ್ಪೊತ್ತು ಊಟಮಾಡಿ, ಷಷ್ಠಿಯದಿನ ನಿರಾಹಾರ ಮಾಡಿ ಸಪ್ತಮಿಯದಿನ ಹಗಲೆಲ್ಲಾ ಉಪವಾಸವಿದ್ದು ರಾತ್ರಿ ಭೋಜನಮಾಡತಕ್ಕದ್ದು, ಈ ವ್ರತದ ನಿಯಮ.

**ದತ್ವಾ ಸು ಸಂಸ್ಕೃತಂ ಶಾಕಂ ಭಕ್ಷ್ಯಭೋಜ್ಯೈಃ ಸಮನ್ವಿತಂ ।**
**ದೇವಾಯ ಬ್ರಾಹ್ಮಣೇಭ್ಯಶ್ಚ ರಾತ್ರೌ ಭುಂಜೀತ ವಾಗ್ಯತಃ ॥ ೪೮ ॥**

**ಯಾವಜ್ಜೀವಂ ನರಃ ಕಶ್ಚಿತ್ ವ್ರತಮೇತಚ್ಚರೇದ್ಯದಿ ।**
**ತಸ್ಯ ಶ್ರೀರ್ವಿಜಯಶ್ಚೈವ ತ್ರಿವರ್ಗಶ್ಚಾಪಿ ವರ್ಧತೇ ॥ ೪೯ ॥**

**ಮೃತಶ್ಚ ಸ್ವರ್ಗಮಾಯಾತಿ ವಿಮಾನವರಮಾಸ್ಥಿತಃ ।**
**ಸೂರ್ಯಲೋಕೇ ಸ ರಮತೇ ಮನ್ವಂತರಗಣಾನ್ ಬಹೂನ್ ।**
**ಇಹಚಾಗತ್ಯ ಕಾಲಾಂತೇ ನೃಪಕಾಂತಿಸಮನ್ವಿತಃ ॥ ೫೦ ॥**

**ಪುತ್ರ ಪೌತ್ರೈಃ ಪರಿವೃತೋ ದಾತಾ ಸ್ಯಾ ನ್ನೃಪತಿಶ್ಚಿರಂ ।**
**ಭುನಕ್ತಿ ಹಿ ಧರಾಂ ರಾಜನ್ ವಿಗ್ರಹೈಶ್ಚಾಜಿತಃ ಪರೈಃ ॥ ೫೧ ॥**

**ಯೇ ನರಾ ರಾಜಶಾರ್ದೂಲ ಶಾಕಾಹಾರೇಣ ಸಪ್ತಮೀಂ ।**
**ಉಪೋಷ್ಯ ಲಬ್ಧಂ ತತ್ತೀರ್ಥಂ ಪಿತ್ರ್ಯಂ ವೈರಾಜಸಂಜ್ಞಕಂ ॥ ೫೨ ॥**

---

೪೮. ಪರಿಷ್ಕಾರವಾಗಿ ಸಿದ್ಧಮಾಡಿದ ಭಕ್ಷ್ಯಗಳು ಭೋಜ್ಯವಸ್ತುಗಳು ಮತ್ತು ಕಾಯಿಪಲ್ಯ ಸಹಿತವಾದ ಅನ್ನ ಇವನ್ನು ದೇವರಿಗೆ ನಿವೇದನಮಾಡಿ ಬ್ರಾಹ್ಮಣ ಸಂತರ್ಪಣೆಯನ್ನುಮಾಡಿ ಮೌನದಿಂದ ಭೋಜನಮಾಡಬೇಕು.

೪೯, ಯಾವ ಮನುಷ್ಯನು ಬದುಕಿರುವವರೆಗೂ ಈ ವ್ರತವನ್ನು ಮಾಡುವನೋ ಅವನಿಗೆ ಸಂಪತ್ತು ಜಯ. ಧರ್ಮಾರ್ಥ ಕಾಮಮೋಕ್ಷಗಳೆಂಬ ತ್ರಿವರ್ಗ ಸಂಪಾದನೆ ಇವುಗಳು ಇಮ್ಮಡಿಯಾಗುತ್ತವೆ.

೫೦–೫೧. ಆತನು ದೇಹಾವಸಾನದಲ್ಲಿ ದಿವ್ಯವಾದ ವಿಮಾನವನ್ನೇರಿ ಸ್ವರ್ಗಕ್ಕೆ ಹೋಗುವನು. ಮತ್ತು ಅನೇಕ ಮನ್ವಂತರಗಳು ಕಳೆಯುವವರೆಗೂ ಸೂರ್ಯಲೋಕದಲ್ಲಿ ವಿಹರಿಸುತ್ತಾನೆ. ಎಲೈ ರಾಜನೇ ! ಕೇಳು ಈ ವಿಹಾರವೆಲ್ಲಾ ಕಳೆದ ಮೇಲೆ ಈ ಲೋಕವನ್ನು ಹೊಂದಿ ಮನಶ್ಶಾಂತಿಯುಕ್ತನಾದ ರಾಜನಾಗಿ ಪುತ್ರ ಪೌತ್ರರಿಂದಕೂಡಿ ಬಹುಕಾಲ ಪರ್ಯಂತ ದಾನಶೀಲನಾಗಿ ಶತ್ರುಗಳಿಂದ ಯಾವಾಗಲೂ ಪರಾಜಿತನಾಗದೇ ರಾಜ್ಯವನ್ನು ಪಾಲಿಸುತ್ತಾನೆ.

೫೨. ಅಯ್ಯಾ ರಾಜಶ್ರೇಷ್ಠನೇ ! ಯಾವ ಮಾನವನು ಶಾಕಾಹಾರಮಾಡಿ ಸಪ್ತಮಿಯದಿನ ಉಪವಾಸವನ್ನು ಮಾಡುತ್ತಾನೋ ಅವನಿಗೆ ಪಿತೃಸಂಬಂಧಿಯಾದ ವೈರಾಜವೆಂಬ ತೀರ್ಥವು ಲಭಿಸುವುದು.

ಕುರುಣಾ ತವ ಪೂರ್ವೇಣ ಶಾಕಾಹಾರೇಣ ಸಪ್ತಮೀಂ ।
ಧರ್ಮಕ್ಷೇತ್ರಂ ಕುರುಕ್ಷೇತ್ರಂ ಕೃತಂ ತಸ್ಯ ವಿವಸ್ವತಾ ॥ ೫೩ ॥

ಸಪ್ತಮೀ ನವಮೀ ಷಷ್ಠೀ ತೃತೀಯಾ ಪಂಚಮೀ ನೃಪ ।
ಕಾಮದಾಸ್ತಿಥಯೋ ಹ್ಯೇತಾ ಇಹೈವ ನರಯೋಷಿತಾಂ ॥ ೫೪ ॥

ಸಪ್ತಮೀ ಮಾಘಮಾಸೇ ತು ನವಮ್ಯಾಶ್ವಯುಜೇ ಮತಾ ।
ಷಷ್ಠೀ ಭಾದ್ರಪದೇ ಧನ್ಯಾ ವೈಶಾಖೇ ತು ತೃತೀಯಕಾ ॥ ೫೫ ॥

ಪುಣ್ಯಾ ಭಾದ್ರಪದೇ ಪ್ರೋಕ್ತಾ ಪಂಚಮೀ ನಾಗಪಂಚಮೀ ।
ಇತ್ಯೇತಾಸ್ತೇಷು ಮಾಸೇಷು ವಿಶೇಷಾಸ್ತಿಥಯಃ ಸ್ಮೃತಾಃ ॥ ೫೬ ॥

ಶಾಕಂ ಸುಸಂಸ್ಕೃತಂ ಕೃತ್ವಾ ಯಶ್ಚ ಭಕ್ತ್ಯಾ ಸಮನ್ವಿತಃ ।
ದತ್ವಾ ವಿಪ್ರೇ ಯಥಾಶಕ್ತಿ ಪಶ್ಚಾದ್ಭುಂಕ್ತೇ ನಿಶಿ ವ್ರತೀ ॥ ೫೭ ॥

---

೫೩. ಅಯ್ಯಾ ಶತಾನೀಕನೇ ! ನಿನ್ನ ಪೂರ್ವಜನು ಸಪ್ತಮೀದಿನ ಶಾಕಾಹಾರವನ್ನು ಮಾಡಿ ಪಿತೃಸಂಬಂಧವಾದ ವೈರಾಜತೀರ್ಥವನ್ನು ಪಡೆದುದರಿಂದ ಸೂರ್ಯದೇವನು ಕುರುಕ್ಷೇತ್ರವನ್ನು ಧರ್ಮಕ್ಷೇತ್ರವನ್ನಾಗಿ ಅನುಗ್ರಹಿಸಿದನು. ಅಂದರೆ ಸೂರ್ಯನ ಅನುಗ್ರಹದಿಂದ ಕುರುಕ್ಷೇತ್ರವು ಧರ್ಮಕ್ಷೇತ್ರವೆಂದು ಪ್ರಸಿದ್ಧವಾಯಿತು.

೫೪. ಸಪ್ತಮೀ, ನವಮೀ, ಷಷ್ಠೀ, ತೃತೀಯಾ, ಪಂಚಮೀ ಈ ತಿಥಿಗಳು ಗಂಡಸರಿಗೂ ಹೆಂಗಸರಿಗೂ ಈ ಲೋಕದಲ್ಲೇ ಇಷ್ಟಾರ್ಥಕೊಡುವ ತಿಥಿಗಳೆಂದು ಪ್ರಸಿದ್ಧವಾಗಿವೆ.

೫೫-೫೬. ಮಾಘಶುದ್ಧ ಸಪ್ತಮೀ, ಅಶ್ವೀಜಶುದ್ಧ ನವಮೀ, ಭಾದ್ರಪದಶುದ್ಧ ಷಷ್ಠೀ, ವೈಶಾಖ ಶುಕ್ಲ ತದಿಗೆ ಇವು ಪುಣ್ಯಕರಗಳು, ಭಾದ್ರಪದ ಶುದ್ಧ ಪಂಚಮಿಯು ನಾಗಪಂಚಮಿಯೆಂದು ಕೆಲವರು ಹೇಳುತ್ತಾರೆ. ಇವು ಆಯಾ ತಿಂಗಳುಗಳಲ್ಲಿ ವಿಶೇಷ ತಿಥಿಗಳೆಂದು ಹೇಳಲ್ಪಟ್ಟಿವೆ.

೫೭. ಅಯ್ಯಾ ಕುರುನಂದನನೇ ! ಕೇಳು, ವ್ರತಾಚರಣೆ ಮಾಡತಕ್ಕವನು ಚನ್ನಾಗಿ ಸಂಸ್ಕಾರಮಾಡಿದ ಕಾಯಿಪಲ್ಯವನ್ನು ಶಕ್ತಿಯಿದ್ದಷ್ಟುಮಟ್ಟಿಗೆ ಬ್ರಾಹ್ಮಣರಿಗೆ ಭಕ್ತಿಯಿಂದ ಕೊಟ್ಟು ಆಮೇಲೆ ತಾನು ರಾತ್ರಿ ಭೋಜನವನ್ನು ಮಾಡಬೇಕು.

**ಕಾರ್ತಿಕೇ ಶುಕ್ಲಪಕ್ಷಸ್ಯ ಗ್ರಾಹ್ಯೇಯಂ ಕುರುನಂದನ ।**
**ಚತುರ್ಭಿರ್ವಾಪಿ ಮಾಸೈಸ್ತು ಪಾರಣಂ ಪ್ರಥಮಂ ಸ್ಮೃತಂ ॥ ೫೮ ॥**

**ಅಗಸ್ತ್ಯಕುಸುಮೈಶ್ಚಾತ್ರ ಪೂಜಾಕಾರ್ಯಾ ವಿಭಾವಸೋಃ ।**
**ವಿಲೇಪನಂ ಕುಂಕುಮಂ ತು ಧೂಪೈಶ್ಚೈವಾಪರಾಜಿತೈಃ ॥ ೫೯ ॥**

**ಸ್ನಾನಂ ಚ ಪಂಚಗವ್ಯೇನ ತದೇವ ಪ್ರಾಶಯೇತ್ತತಃ ।**
**ನೈವೇದ್ಯಂ ಪಾಯಸಂ ಚಾತ್ರ ದೇವದೇವಸ್ಯ ಕೀರ್ತಿತಂ ॥ ೬೦ ॥**

**ತದೇವ ದೇಯಂ ವಿಪ್ರಾಣಾಂ ಶಾಕಂ ಭಕ್ಷ್ಯಮಥಾತ್ಮನಾ ।**
**ಶುಭಶಾಕ ಸಮಾಯುಕ್ತಂ ಭಕ್ಷ್ಯಪೇಯಸಮನ್ವಿತಂ ॥ ೬೧ ॥**

**ದ್ವಿತೀಯೇ ಪಾರಣೇ ರಾಜನ್ ಶುಭಗಂಧಾನಿ ಯಾನಿ ವೈ ।**
**ಪುಷ್ಪಾಣಿ ತಾನಿ ದೇವಸ್ಯ ತಥಾ ಶ್ವೇತಂ ಚ ಚಂದನಂ ॥ ೬೨ ॥**

---

೫೮. ಈ ವ್ರತವನ್ನು ಮಾಡಲು ಇಚ್ಛಿಸುವವನು ಕಾರ್ತಿಕಶುದ್ಧ ಸಪ್ತಮಿಯ ದಿನ ವ್ರತವನ್ನು ಹಿಡಿಯಬೇಕು. ನಾಲ್ಕುತಿಂಗಳು ವ್ರತವನ್ನು ಆಚರಿಸಿದಮೇಲೆ ಮೊದಲನೆಯ ಪಾರಣೆಯು ನಡೆಯುತ್ತದೆ.

೫೯. ಈ ಸಪ್ತಮೀ ವ್ರತವನ್ನು ಮಾಡುವಾತನು ಸೂರ್ಯನನ್ನು ಅಗಸೆ ಹೂವಿನಿಂದ ಪೂಜಿಸಬೇಕು. ಲೋಹಸೂರ್ಯಮಂಡಲಕ್ಕೆ ಕೇಸರಿಯನ್ನು ತೆಯ್ದು ಲೇಪನಮಾಡಬೇಕು. ಅನಂತರ ಅಪರಾಜಿತ ದ್ರವ್ಯವನ್ನು ಧೂಪಹಾಕಬೇಕು.

೬೦. ಪಂಚಗವ್ಯದಿಂದ ಸೂರ್ಯಮಂಡಲಕ್ಕೆ ಅಭಿಷೇಕಮಾಡಿ ಅದನ್ನೇ ಪಾನ ಮಾಡಬೇಕು. ಈ ವ್ರತಕಾಲದಲ್ಲಿ ಸೂರ್ಯದೇವನಿಗೆ ಪಾಯಸವನ್ನು ನಿವೇದನ ಮಾಡಬೇಕು ಎಂದು ಹೇಳಿದೆ.

೬೧. ಆಗ ತಾನು ಬ್ರಾಹ್ಮಣರಿಗೆ ಪಾಯಸ, ಕಾಯಿಪಲ್ಯ, ಭಕ್ಷ್ಯಗಳು ಇವುಗಳನ್ನು ದಾನಮಾಡಬೇಕು. ಒಳ್ಳೆಯ ಕಾಯಿಪಲ್ಯ, ಭಕ್ಷ್ಯ, ಪಾಯಸ, ಪಾನಕ, ಹಾಲು ಮುಂತಾದುವನ್ನು ದಾನಕೊಡಬೇಕು.

೬೨-೬೩. ಅಯ್ಯಾ ರಾಜನೇ ! ಕೇಳು ಎರಡನೆಯ ಪಾರಣೆದಿನ ದೇವರಿಗೆ ಪ್ರಿಯಗಳಾದ ಶ್ರೀಗಂಧ ಮೊದಲಾದ ಒಳ್ಳೆಯ ಅನುಲೇಪನಗಳಿಂದಲೂ, ಪುಷ್ಪಗ

ಅಗರುಶ್ಚಾಪಿ ಧೂಪೋತ್ರ ನೈವೇದ್ಯಂ ಗಡುಪೂಪಕಾಃ ।
ಸ್ನಾನಂ ಕುಶೋದಕೇನಾತ್ರ ಪ್ರಾಶನಂ ಗೋಮಯಸ್ಯ ತು ॥ ೬೩ ॥

ತೃತೀಯೇ ಕರವೀರಾಣಿ ತಥಾ ರಕ್ತಂ ಚ ಚಂದನಂ ।
ಧೂಪಾನಾಂ ಗುಗ್ಗುಲಶ್ಚಾತ್ರ ಪ್ರಿಯೋ ದೇವಸ್ಯ ಸರ್ವದಾ ॥ ೬೪ ॥

ಶಾಲ್ಯೋದನಂ ತು ನೈವೇದ್ಯಂ ದಧಿಮಿಶ್ರಂ ಮಹಾಮತೇ ।
ತದೇವ ಬ್ರಾಹ್ಮಣಾನಾಂ ಚ ಭಕ್ಷ್ಯಲೇಹ್ಯಸಮನ್ವಿತಂ ।
ಕಾಲಶಾಕೇನ ಚ ವಿಭೋ ಯುಕ್ತಂ ದದ್ಯಾದ್ವಿಚಕ್ಷಣಃ ॥ ೬೫ ॥

ಗೌರಸರ್ಷಪಕಲ್ಕೇನ ಸ್ನಾನಂಚಾತ್ರ ವಿದುರ್ಬುಧಾಃ ।
ತಸ್ಯೈವ ಪ್ರಾಶನಂ ಧನ್ಯಂ ಸರ್ವಪಾಪಹರಂ ಶುಭಂ ॥ ೬೬ ॥

---

ಳಿಂದಲೂ ಪೂಜಿಸಿ ಅಗಿಲು ಚಕ್ಕೆಯ ಧೂಪವನ್ನು ಹಾಕಿ, ಹಿಟ್ಟು ಬೆಲ್ಲ ಇವುಗಳಿಂದ ಮಾಡಿದ ಭಕ್ಷ್ಯಗಳನ್ನು ನಿವೇದಿಸಬೇಕು. ಈ ವಿಧಿಯಲ್ಲಿ ಕುಶೋದಕಸ್ನಾನವೂ, ಗೋಮಯಪ್ರಾಶನವೂ ಉಕ್ತವಾಗಿದೆ.

೬೪. ಅಯ್ಯಾ ರಾಜನೇ ! ಕೇಳು ಮೂರನೆಯ ಪಾರಣೆಯದಿನ ಅವನಿಗೆ ಇಷ್ಟವಾದ ಕಣಗಲೆ ಹೂ, ಕೆಂಪುಚಂದನ, ಗಂಧ, ಗುಗ್ಗುಲ, ಧೂಪ ಇವನ್ನು ಸೂರ್ಯನಿಗೆ ಸಮರ್ಪಿಸಬೇಕು.

೬೫. ಅಯ್ಯಾ ಮಹಾಮತಿಯೇ ! ಈ ಪಾರಣೆಯಲ್ಲಿ ಭತ್ತದ ಅಕ್ಕಿಯಅನ್ನ, ಮೊಸರು ಇವನ್ನು ನಿವೇದಿಸಬೇಕು. ವಿಚಕ್ಷಣನಾದ ಮನುಷ್ಯನು ಆ ಕಾಲದಲ್ಲಿ ಸಿಕ್ಕುವ ಕಾಯಿಪಲ್ಯಗಳನ್ನು ಭಕ್ಷ್ಯ ವ್ಯಂಜನ ಸಮೇತವಾಗಿ ದಧ್ಯನ್ನವನ್ನೂ ಬ್ರಾಹ್ಮಣರಿಗೆ ದಾನಮಾಡಬೇಕು.

೬೬. ಈ ವಿಧಿಯಲ್ಲಿ ಬಿಳಿಯ ಸಾಸುವೆಯನ್ನು ಅರೆದು ಕಲ್ಕಮಾಡಿ ಅದನ್ನು ಲೇಪಿಸಿಕೊಂಡು ಸ್ನಾನಮಾಡಬೇಕು ಎಂದು ವಿದ್ವಾಂಸರ ಅಭಿಪ್ರಾಯ. ಅದನ್ನೇ ಭಕ್ಷಿಸಿದರೆ ಸರ್ವಪಾಪ ನಿವಾರಕವೆಂದೂ, ಪುಣ್ಯಕರವೆಂದೂ, ಅಭಿಪ್ರಾಯ ಪಡುತ್ತಾರೆ.

ತೃತೀಯೇ ಪಾರಣಸ್ಯಾಂತೇ ಮಹದ್ಬ್ರಾಹ್ಮಣಭೋಜನಂ ।
ಶ್ರವಣಂ ಚ ಪುರಾಣಸ್ಯ ವಾಚನಂ ಚಾಪಿ ಶಸ್ಯತೇ ॥ ೬೭ ॥

ದೇವಸ್ಯ ಪುರತಸ್ತಾತ ಬ್ರಾಹ್ಮಣಾನಾಂ ತಥಾಗ್ರತಃ ।
ಬ್ರಾಹ್ಮಣಾದ್ವಾಚಕಾಚ್ಛ್ರಾವ್ಯಂ ನಾನ್ಯವರ್ಣಸಮುದ್ಭವಾತ್ ।
ಅಥ ತಾನ್ ಬ್ರಾಹ್ಮಣಾನ್ ಸರ್ವಾನ್ ಭಕ್ತ್ಯಾ ಶಕ್ತ್ಯಾ ಚ ಪೂಜಯೇತ್॥

ವಾಚಕಸ್ಯಾಮಲೇ ರಾಜನ್ ವಾಸಸೀ ಸಂನಿವೇದಯೇತ್ ।
ವಾಚಕೇ ಪೂಜಿತೇ ದೇವಃ ಸದಾ ತುಷ್ಯತಿ ಭಾಸ್ಕರಃ ॥ ೬೯ ॥

ಕರವೀರಂ ಯಥೇಷ್ಟಂ ತು ತಥಾ ರಕ್ತಂ ಚ ಚಂದನಂ ।
ಯಥೇಷ್ಟಂ ಗುಗ್ಗುಲಂ ತಸ್ಯ ಯಥೇಷ್ಟಂ ಪಾಯಸಂ ಸದಾ ॥ ೭೦ ॥

ಯಥೇಷ್ಟಾ ಮೋದಕಾಸ್ತಸ್ಯ ಯಥಾ ವೈ ತಾಮ್ರಭಾಜನಂ ।
ಯಥೇಷ್ಟಂ ಚ ಘೃತಂ ತಸ್ಯ ಯಥೇಷ್ಟೋ ವಾಚಕಃ ಸದಾ ॥ ೭೧ ॥

---

೬೭. ಮೂರನೆಯ ಪಾರಣೆಯ ಕೊನೆಯಲ್ಲಿ ಅನೇಕಮಂದಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಅನಂತರ ಪುರಾಣ ಹೇಳಿಸುವುದು, ಕೇಳುವುದು ಈ ಕಾರ್ಯಗಳು ಶ್ರೇಷ್ಠವಾದವುಗಳು.

೬೮. ತಾನು ಪುರಾಣಶ್ರವಣ ಮಾಡಬೇಕಾದರೆ ಬ್ರಾಹ್ಮಣರಿಂದ ಹೇಳಿಸಿ ತಾನು ಕೇಳಬೇಕು. ಅನ್ಯಜಾತಿಯವರಿಂದ ಹೇಳಿಸಿ ಕೇಳಬಾರದೆಂದು ಅಭಿಪ್ರಾಯ. ಪುರಾಣಹೇಳಿಸಿ ಆದಮೇಲೆ ಹೇಳಿದ ಬ್ರಾಹ್ಮಣರಿಗೆ ಭಕ್ತಿಯಿಂದ ಶಕ್ತಿಗನುಸಾರವಾಗಿ ಪೂಜೆಮಾಡಬೇಕು.

೬೯. ಪುರಾಣ ಹೇಳಿದವನಿಗೆ ಶುಭ್ರವಾದ ಒಂದುಜೊತೆ ವಸ್ತ್ರವನ್ನು ಸಮರ್ಪಿಸಬೇಕು.

೭೦–೭೧. ಅಯ್ಯಾ ಕುರುನಂದನನೇ ! ಕೇಳು, ಪುರಾಣ ಹೇಳಿದವರನ್ನು ಚನ್ನಾಗಿ ಪೂಜಿಸಿದರೆ ಸೂರ್ಯನು ಸಂತುಷ್ಟನಾಗುತ್ತಾನೆ. ಸೂರ್ಯನಿಗೆ ಕಣಗಲೆಹೂ, ರಕ್ತಚಂದನ, ಗುಗ್ಗುಳಧೂಪ, ಪಾಯಸ, ಮೋದಕ, (ಹುಯ್ಗಡುಬು) ತುಪ್ಪ, ತಾಮ್ರಪಾತ್ರೆ ಇವೆಲ್ಲಾ ಹೇಗೆ ಇಷ್ಟವೋ ಹಾಗೆಯೇ ಪುರಾಣವೂ ; ಇಷ್ಟ ವಾಚಕನೂ ಇಷ್ಟನಾದವನು.

**ಪುರಾಣಂ ಚ ಯಥೇಷ್ಟಂ ವೈ ಸವಿತುಃ ಕುರುನಂದನ ।**
**ಇತ್ಯೇಷಾ ಸಪ್ತಮೀ ಪುಣ್ಯಾ ಶಾಕಾಹ್ವಾ ಗೋಪತೇಃ ಸದಾ ।**
**ಯಾಮುಪೋಷ್ಯ ನರೋ ಭಕ್ತ್ಯಾ ಭಾಗ್ಯವಾಂಶ್ಚ ಪ್ರಜಾಯತೇ ॥ ೭೨ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ ಕಲ್ಪೇ ಶಾಕ ಸಪ್ತಮೀವ್ರತವರ್ಣನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ**



---

೭೨. ಕಾಯಿಪಲ್ಯಗಳ ಸೇವನೆಯಿಂದ ವ್ರತಮಾಡುವ ಶಾಕಸಪ್ತಮೀ ಎಂಬುದು ಯಾವಾಗಲೂ ಪುಣ್ಯಕರವೂ, ಕಿರಣಾಧಿಪತಿಯಾದ ಸೂರ್ಯನಿಗೆ ಪ್ರಿಯವೂ ಆಗಿರುವುದು. ಈ ಸಪ್ತಮಿಯಲ್ಲಿ ಭಕ್ತಿಯಿಂದ ಉಪವಾಸಮಾಡಿ ವ್ರತಮಾಡಿದವನು ಭಾಗ್ಯವಂತನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀ ಕಲ್ಪದಲ್ಲಿ ಶಾಕಸಪ್ತಮೀ ವ್ರತದ ವರ್ಣನೆ ಎಂಬ ನಲವತ್ತೇಳನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಚತ್ವಾರಿಂಶೋಽಧ್ಯಾಯಃ

---

॥ ಶತಾನೀಕ ಉವಾಚ ॥

ವಿಸ್ತರಾದ್ವದ ವಿಪ್ರೇಂದ್ರ ಸಪ್ತಮೀಕಲ್ಪಮುತ್ತಮಂ ।
ಮಹಾಭಾಗ್ಯಂ ಚ ದೇವಸ್ಯ ಭಾಸ್ಕರಸ್ಯ ಮಹಾತ್ಮನಃ ॥ ೧ ॥

॥ ಸುಮಂತುರುವಾಚ ॥

ಅತ್ರೈವಾಹುರ್ಮಹಾತ್ಮಾನಃ ಸಂವಾದಂ ಪುಣ್ಯಮುತ್ತಮಂ ।
ಕೃಷ್ಣೇನ ಸಹ ಸತ್ವೇನ ಸ್ವಪುತ್ರೇಣ ಮಹೀಪತೇ ॥ ೨ ॥

ಭಕ್ತ್ಯಾ ಪ್ರಣಮ್ಯ ವಿಧಿವದ್ವಾಸುದೇವಂ ಜಗದ್ಗುರುಂ ।
ಇಹಾಮುತ್ರ ಹಿತಂ ಸಾಂಬಃ ಪಪ್ರಚ್ಛ ಜ್ಞಾನಮುತ್ತಮಂ ॥ ೩ ॥

---

## ನಲವತ್ತೆಂಟನೆಯ ಅಧ್ಯಾಯ

೧. ಶತಾನೀಕರಾಜನು ಹೇಳುತ್ತಾನೆ—ಎಲೈ ಬ್ರಾಹ್ಮಣಶ್ರೇಷ್ಠನೇ! ಮಹಾತ್ಮನಾದ ಸೂರ್ಯದೇವನ ಮಹಾಭಾಗ್ಯರೂಪವಾದ ಉತ್ತಮವಾದ ಸಪ್ತಮೀಕಲ್ಪವನ್ನು ವಿಸ್ತರಿಸಿ ಹೇಳು ಎಂದನು.

೨. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ! ಈ ವಿಷಯದಲ್ಲಿ ಕೃಷ್ಣನಿಗೂ ಸತ್ವಶಾಲಿಯಾದ ಅವನ ಪುತ್ರನಿಗೂ ಉತ್ತಮವೂ, ಪುಣ್ಯಕರವೂ ಆದ ಸಂವಾದವು ನಡೆಯಿತೆಂದು ಮಹಾತ್ಮರು ಹೇಳುವರು.

೩. ಒಂದುಸಲ ಸಾಂಬನು ಜಗದ್ಗುರುವಾದ ವಾಸುದೇವನಿಗೆ ವಿಧಿಯಂತೆ ನಮಸ್ಕರಿಸಿ ಇಹಪರಗಳಲ್ಲಿ ಹಿತಕರವಾದ ಉತ್ತಮಜ್ಞಾನವನ್ನು ಕುರಿತು ಪ್ರಶ್ನಿಸಿದನು.

ಜಾತೋ ಜಂತುಃ ಕಥಂ ದುಃಖೈರ್ಜನ್ಮನೀಹ ನ ಬಾಧ್ಯತೇ ।
ಪ್ರಾಪ್ನೋತಿ ವಿವಿಧಾನ್ ಕಾಮಾನ್ ಕಥಂ ಚ ಮಧುಸೂದನ ॥ ೪ ॥

ಪರತ್ರ ಸ್ವರ್ಗಮಾಪ್ನೋತಿ ಸುಖಾನಿ ವಿವಿಧಾನಿ ಚ ।
ಅನುಭೂಯೋಚಿತಂ ಕಾಲಂ ಕಥಂ ಮುಕ್ತಿಮವಾಪ್ನುತೇ ॥ ೫ ॥

ದೃಷ್ಟ್ವೇದಂ ಮಮ ನಿರ್ವೇದೋ ಜಾತೋ ವ್ಯಾಧಿರ್ಜನಾರ್ದನ ।
ದೃಷ್ಟ್ವೇಮಂ ಜೀವಿತಾಶಾಪಿ ರೋಚತೇ ನ ಹಿ ಮೇ ಕ್ಷಣಂ ॥ ೬ ॥

ಕಿಂತ್ವೇವಮಕೃತಾರ್ಥೋಽಸ್ಮಿ ಯನ್ಮೇ ಪ್ರಾಣಾ ನ ಯಾಂತಿ ಹಿ ।
ಸಂಸಾರೇ ನ ಪತಿಷ್ಯಾಮಿ ಜರಾವ್ಯಾಧಿಸಮನ್ವಿತೇ ॥ ೭ ॥

ಯೇನೋಪಾಯೇನ ತನ್ಮೇಽದ್ಯ ಪ್ರಸಾದಂ ಕುರು ಸುವ್ರತ ।
ಆಧಿವ್ಯಾಧಿ ವಿನಿರ್ಮುಕ್ತೋ ಯಥಾಹಂ ಸ್ಯಾಂ ತಥಾ ವದ ॥ ೮ ॥

---

೪. "ಓ ತಂದೆಯಾದ ಮಧುಸೂದನನೇ! ಇಹಲೋಕದಲ್ಲಿ ಹುಟ್ಟಿದ ಜಂತುವು ದುಃಖಗಳಿಂದ ಬಾಧಿಸಲ್ಪಡದೇ ಇರಬೇಕಾದರೆ ಏನು ಮಾಡಬೇಕು? ಮತ್ತು ತನ್ನ ಬಗೆಬಗೆಯ ಬಯಕೆಗಳನ್ನು ಹೊಂದುವುದು ಹೇಗೆ?

೫. ದೇಹಾವಸಾನದಲ್ಲಿ ಸ್ವರ್ಗಲೋಕವನ್ನು ಪಡೆದು ಅಲ್ಲಿ ನಾನಾ ಸೌಖ್ಯಗಳನ್ನು ಉಚಿತವಾದಷ್ಟು ಅನುಭವಿಸಿ, ಅನಂತರ ಮೋಕ್ಷವನ್ನು ಹೊಂದುವುದು ಹೇಗೆ? ಜನಾರ್ದನನೇ! ಇದನ್ನೆಲ್ಲಾ ನೋಡಿ ನನಗೆ ವೈರಾಗ್ಯಹುಟ್ಟಿ ವ್ಯಾಧಿಯು ಪೀಡಿಸುವಂತೆ ಪೀಡಿಸುತ್ತಿದೆ

೬-೭. ಒಂದು ವ್ಯಕ್ತಿಯು ಮೋಕ್ಷಸಂಪಾದನೆ ಮಾಡುವುದಕ್ಕಿರುವ ಈ ಕಷ್ಟವನ್ನು ನೋಡಿ ನನಗೆ ಒಂದು ಕ್ಷಣವಾದರೂ ಬದುಕಿರಬೇಕೆಂಬ ಆಶೆಯೇ ಉಂಟಾಗುವುದಿಲ್ಲ. ಈ ನನ್ನ ಪ್ರಾಣಗಳು ಹೋಗದೇ ಇರುವುದರಿಂದ ನಾನು ಅಕೃತಾರ್ಥನಾಗಿದ್ದೇನೆ.

೮. ಓ ಸುವ್ರತನಾದ ತಂದೆಯೇ! ಯಾವ ಉಪಾಯವನ್ನು ಅನುಸರಿಸಿದರೆ ಮುಪ್ಪು ರೋಗ ಇವುಗಳಿಂದ ಕೂಡಿದ ಸಂಸಾರದಲ್ಲಿ ನಾವು ಬೀಳುವುದಿಲ್ಲವೋ ಆ ಉಪಾಯವನ್ನೂ, ಮನೋರೋಗ ದೇಹರೋಗಗಳಿಂದ ನಾನು ಹೇಗೆ ವಿಮುಕ್ತನಾಗುವೆನು? ಎಂಬುದನ್ನೂ ನನಗೆ ಅನುಗ್ರಹಮಾಡಿ ಹೇಳು" ಎಂದನು.

॥ ವಾಸುದೇವ ಉವಾಚ ॥

**ದೇವತಾಯಾಃ ಪ್ರಸಾದೋಽನ್ಯಃ ಸರ್ವಸ್ಯ ಪರಮೋ ಮತಃ ।**
**ಉಪಾಯಃ ಶಾಶ್ವತೋ ನಿತ್ಯ ಇತಿ ಮೇ ನಿಶ್ಚಿತಾ ಮತಿಃ** ॥ ೯ ॥

**ಅನುಮಾನಾಗಮಾದ್ಯೈಶ್ಚ ಸಮ್ಯಗುತ್ಪಾದಿತಾ ಮಯಾ ।**
**ಕದಾಚಿದನ್ಯಥಾ ಕರ್ತುಂ ಧೀಯತೇ ಕೇನಚಿತ್ಕ್ವಚಿತ್** ॥ ೧೦ ॥

**ಪ್ರಸಾದೋ ಜಾಯತೇ ತಸ್ಯ ಸಮ್ಯಗಾರಾಧನಕ್ರಿಯಾ ।**
**ಯದಾ ತಾಂ ಚ ಸಮುದ್ದಿಶ್ಯ ಕೃತಾ ತದ್ವೇದಿನಾ ತಥಾ** ॥ ೧೧ ॥

**ವಿಶಿಷ್ಟಾ ದೇವತಾ ಸಮ್ಯಗ್ವಿಶಿಷ್ಟೇನೈವ ದೇಹಿನಾ ।**
**ಆರಾಧಿತಾ ವಿಶಿಷ್ಟಂ ಚ ದದಾತಿ ಫಲಮೀಹಿತಂ** ॥ ೧೨ ॥

---

೯. ವಾಸುದೇವನು ಹೇಳಿದನು—ದೇವತಾನುಗ್ರಹವೆಂಬುದು ಸರ್ವರಿಗೂ ಶ್ರೇಷ್ಠವೂ, ನಾಶವಿಲ್ಲದುದೂ, ಶಾಶ್ವತವೂ, ಆದ ಪುರುಷಾರ್ಥ ಸಾಧನೋಪಾಯ ಎಂಬುದು ನನ್ನ ನಿಶ್ಚಿತವಾದ ಅಭಿಪ್ರಾಯ.

೧೦. ಅನುಮಾನ ಪ್ರಮಾಣದಿಂದಲೂ, ಶಾಸ್ತ್ರರೂಪವಾದ ಶಬ್ದಪ್ರಮಾಣ ದಿಂದಲೂ ಈ ತಿಳಿವಳಿಕೆಯನ್ನು ನಾನು ಚೆನ್ನಾಗಿ ಉಂಟುಮಾಡಿಕೊಂಡಿದ್ದೇನೆ. ನನಗೆ ಉಂಟಾಗಿರುವ ಈ ತಿಳಿವಳಿಕೆಯನ್ನು ಸ್ವಲ್ಪಮಟ್ಟಿಗೆ ಬದಲಾವಣೆ ಮಾಡು ವುದಕ್ಕೆ ಕೂಡ ಯಾರಿಗೂ ಯಾವಾಗಲೂ ಸಾಧ್ಯವಾಗದು.

೧೧-೧೨. ಯಾವನನ್ನೇ ಆಗಲಿ ಚೆನ್ನಾಗಿ (ಶ್ರದ್ಧೆಯಿಂದ) ಆರಾಧನೆಮಾಡು ವುದರಿಂದ ಅವನ ಮನಸ್ಸನ್ನು ಒಲಿಸಿಕೊಳ್ಳಬಹುದು. ಆರಾಧನ ಕ್ರಮವನ್ನು ಬಲ್ಲ ವನು ಚಿತ್ತಪ್ರಸಾದವನ್ನೇ ಉದ್ದೇಶವಾಗಿಟ್ಟುಕೊಂಡು ಯಾವಾಗ ಹಾಗೆ ಶ್ರದ್ಧೆಯಿಂದ ಇಷ್ಟದೇವತೆಯನ್ನು ಆರಾಧಿಸುವನೋ ಆಗ ಫಲಪ್ರದತ್ವರೂಪವಾದ ವಿಶೇಷದಿಂದ ಕೂಡಿದ ದೇವತೆಯು, ಆರಾಧನಕ್ರಮ ವಿಶೇಷವನ್ನು ತಿಳಿದ ವ್ಯಕ್ತಿಯಿಂದ ಚೆನ್ನಾಗಿ ಆರಾಧಿತವಾಗಿ, ಆತನಿಗೆ ಇಷ್ಟವಾದ ಸಮಸ್ತಫಲವನ್ನೂ ಕೊಡುತ್ತದೆ.

॥ ಸಾಂಬ ಉವಾಚ ॥

ಅಸ್ತಿತ್ವೇ ನ ಚ ಸಂದೇಹಃ ಕೇಷಾಂಚಿದ್ದೇವತಾಂ ಪ್ರತಿ ।
ನಾಸ್ತೀತಿ ನಿಶ್ಚಯೋಽನ್ಯೇಷಾಂ ವಿಶಿಷ್ಟಾಸ್ತ್ವಂ ಕಥಾಃ ಕುರು ॥ ೧೩ ॥

॥ ವಾಸುದೇವ ಉವಾಚ ॥

ಸಿದ್ಧಂ ತು ದೇವತಾಸ್ತಿತ್ವಂ ಆಗಮೇಷು ಬಹುಷ್ವಥ ।
ಪ್ರಮಾಣಮಾಗಮೋ ಯಸ್ಯ ತಸ್ಯಾಸ್ತಿತ್ವಂ ಚ ವಿದ್ಯತೇ ॥ ೧೪ ॥

ಅನುಮಾನೇನ ವಾಪ್ಯದ್ಯ ತದಸ್ತಿತ್ವಂ ಪ್ರಸಾಧ್ಯತೇ ।
ಪ್ರಮಾಣಮಸ್ತಿ ಯಸ್ಯೇದಂ ಸಿದ್ಧಾ ಯಸ್ಯೇಹ ಚಾಸ್ತಿತಾಃ ॥ ೧೫ ॥

ಪ್ರತ್ಯಕ್ಷೇಣಾಪಿ ಚಾಸ್ತಿತ್ವಂ ದೇವತಾಯಾಂ ಪ್ರಸಾಧ್ಯತೇ ।
ತಚ್ಚಾವಶ್ಯಂ ಪ್ರಮಾಣಂ ಚ ದೃಷ್ಟಂ ಸರ್ವಶರೀರಿಣಾಂ ॥ ೧೬ ॥

---

೧೩. ಸಾಂಬನು ಹೇಳುತ್ತಾನೆ—"ದೇವರೆಂಬವನು ಇದ್ದಾನೆ ಎನ್ನುವ ವಿಷಯ ವಲ್ಲಿ ಕೆಲವರಿಗೆ ಸಂಶಯವಿಲ್ಲ. (ನಂಬಿಕೆ ಇದೆ) ಇತರರಿಗೆ ದೇವರು ಇಲ್ಲ ಎಂಬ ನಿಶ್ಚ ಯವೇ ದೃಢವಾಗಿದೆ. ನೀನು ಈ ವಿಷಯದಲ್ಲಿ ವಿಶೇಷ ಯುಕ್ತಿಗಳಿಂದ ಚರ್ಚೆ ಮಾಡಿ ತೋರಿಸು" ಎಂದನು.

೧೪. ವಾಸುದೇವನು ಹೇಳುತ್ತಾನೆ—ದೇವರು ಇದಾನೆ ಎಂಬ ವಿಚಾರವು ಅನೇಕ ಶಾಸ್ತ್ರಗಳಲ್ಲಿ ನಿಶ್ಚಿತವಾಗಿದೆ. ಅನುಮಾನ ಪ್ರಮಾಣವೂ, ಶಾಸ್ತ್ರ ಮೊದಲಾದ ಶಬ್ದಪ್ರಮಾಣವೂ ಯಾವನಿಗೆ ಉಂಟೋ ಅವನಿಗೆ ದೇವತಾ ಅಸ್ತಿತ್ವವೂ ಉಂಟು.

೧೫–೧೬. ದೇವತಾ ಅಸ್ತಿತ್ವವೆಂಬುದು ಅನುಮಾನ ಪ್ರಮಾಣದಿಂದಲೂ, ಸಾಧಿತವಾಗುವುದು. ಯಾವನಿಗೆ ಶಾಸ್ತ್ರಾದಿ ಶಬ್ದಪ್ರಮಾಣವಿದೆಯೋ ಯಾವನಿಗೆ ದೇವತಾ ಅಸ್ತಿತ್ವವು ನಿಶ್ಚಿತವಾಗಿದೆಯೋ, ಅವನಿಗೆ ಪ್ರತ್ಯಕ್ಷಪ್ರಮಾಣದಿಂದಲೂ, ಕೂಡ ದೇವತೆಯ ಅಸ್ತಿತ್ವವು ಸಾಧಿತವಾಗುತ್ತದೆ. ಅದೇ (ಪ್ರತ್ಯಕ್ಷವು) ಸರ್ವದೇಹ ಧಾರಿಗಳಿಗೂ ಅವಶ್ಯಕವಾದ ದೃಷ್ಟಪ್ರಮಾಣವಾಗಿರುತ್ತದೆ.

**ಯದಿನಾಮೊ ವಿವೇಕಾಸ್ತು ತಿರ್ಯ್ಗ್ಯೋನಿಗತಾ ಅಪಿ ।**
**ನೋತ್ಪದ್ಯತೇ ತಥಾಹ್ಯಸ್ತಿ ವ್ಯವಹಾರೋ ಯಥಾಸ್ಥಿತಃ ॥ ೧೭ ॥**

**॥ ಸಾಂಬ ಉವಾಚ ॥**
**ಪ್ರತ್ಯಕ್ಷೇಣೋಪಲಭ್ಯಂತೇ ಸಮ್ಯಗ್ವೈ ಯದಿ ದೇವತಾಃ ।**
**ಅನುಮಾನಾಗಮಾಭ್ಯಾಂ ಚ ತದರ್ಥಂ ನ ಪ್ರಯೋಜನಂ ॥ ೧೮ ॥**

**॥ ವಾಸುದೇವ ಉವಾಚ ॥**
**ಪ್ರತ್ಯಕ್ಷೇಣೋಪಲಭ್ಯಂತೇ ನ ಸರ್ವಾ ದೇವತಾಃ ಕ್ವಚಿತ್ ।**
**ಅನುಮಾನಾಗಮೈರ್ಗಮ್ಯಾಃ ಸಂತಿ ಚಾನ್ಯಾಃ ಸಹಸ್ರಶಃ ॥ ೧೯ ॥**

**॥ ಸಾಂಬ ಉವಾಚ ॥**
**ಯಾಚಾಕ್ಷಗೋಚರಾಃ ಕಾಚಿತ್ ವಿಶಿಷ್ಟೇಷ್ಟ ಫಲಪ್ರದಾ ।**
**ತಾಮೇವಾದೌ ಮಮಾಚಕ್ಷ್ವ ಕಥಯಿಷ್ಯಸ್ಯಥಾಪರಾಂ ॥ ೨೦ ॥**

---

೧೭. ಮನಸ್ಸಿನಲ್ಲಿ ಪರಿಶುದ್ಧವಿಲ್ಲದೇ, ಅವಿವೇಕವುಳ್ಳವರಿಗೂ, ಚತುಷ್ಪಾದಿ ಜಂತುಗಳಿಗೂ ಮಾತ್ರ • ದೇವರಿದ್ದಾನೆ ಎಂಬ ಯಥಾಸ್ಥಿತವಾಗಿರುವ ಜ್ಞಾನವು ಹುಟ್ಟುವುದಿಲ್ಲ.

೧೮. ಸಾಂಬನು ಕೇಳುತ್ತಾನೆ—ದೇವರಿದ್ದಾನೆ ಎಂಬುದು ಪ್ರತ್ಯಕ್ಷ ಪ್ರಮಾಣ ದಿಂದಲೇ ಸಿದ್ಧವಾಗುವುದಾದರೆ ಸಾಕ್ಷಾತ್ಕಾರಕ್ಕಾಗಿ ಅನುಮಾನವೂ ಆಗಮಶಬ್ದ ಪ್ರಮಾಣವೂ ಅಪ್ರಯೋಜಕಗಳಾಗುವುದಿಲ್ಲವೇ ? ಎಂದು ಕೇಳಿದನು.

೧೯. ವಾಸುದೇವನು ಹೇಳುತ್ತಾನೆ—ಎಲ್ಲಾ ದೇವತೆಗಳೂ ಎಲ್ಲಿಯೂ ಪ್ರತ್ಯಕ್ಷವಾಗಿ ತಿಳಿವಳಿಕೆಗೆ ಬರುವುದಿಲ್ಲ. ಸಾವಿರಾರು ದೇವತೆಗಳು ಅನುಮಾನ ಪ್ರಮಾಣದಿಂದಲೂ ಶಬ್ದಪ್ರಮಾಣದಿಂದಲೂ ತಿಳಿಯಲು ಅರ್ಹರಾಗಿರುತ್ತಾರೆ ಎಂದನು.

೨೦. ಸಾಂಬನು ಪುನಃ ಕೇಳುತ್ತಾನೆ—ಯಾವ ದೇವತೆಯು ಇಂದ್ರಿಯಕ್ಕೆ ಪ್ರತ್ಯಕ್ಷವಾಗಿ ಗೋಚರವಾಗುವುದೋ ಮತ್ತು ವಿಶೇಷವಾಗಿ ಇಷ್ಟಫಲವನ್ನು ಕೊಡು ವುದೋ ಅಂಥ ದೇವತೆಯನ್ನು ನನಗೆ ಮೊದಲು ಹೇಳಿ ಆ ಮೇಲೆ ಇತರ ದೇವತೆಗಳನ್ನು ಹೇಳೋಣವಾಗಲಿ ಎಂದನು.

॥ ವಾಸುದೇವ ಉವಾಚ ॥

ಪ್ರತ್ಯಕ್ಷಂ ದೇವತಾ ಸೂರ್ಯೋ ಜಗಚ್ಚಕ್ಷುರ್ದಿವಾಕರಃ ।
ತಸ್ಮಾದಭ್ಯಧಿಕಾ ಕಾಚಿತ್ ದೇವತಾ ನಾಸ್ತಿ ಶಾಶ್ವತೀ ॥ ೨೦ ॥

ಯಸ್ಮಾದಿದಂ ಜಗಜ್ಜಾತಂ ಲಯಂ ಯಾಸ್ಯತಿ ಯತ್ರ ಚ ।
ಕೃತಾದಿ ಲಕ್ಷಣಃ ಕಾಲಃ ಸ್ಮೃತಃ ಸಾಕ್ಷಾದ್ದಿವಾಕರಃ ॥ ೨೨ ॥

ಗ್ರಹನಕ್ಷತ್ರಯೋಗಾಶ್ಚ ರಾಶಯಃ ಕರಣಾನಿ ಚ ।
ಆದಿತ್ಯಾ ವಸವೋ ರುದ್ರಾ ಅಶ್ವಿನೌ ವಾಯವೋಽನಲಃ ॥ ೨೩ ॥

ಶಕ್ರಃ ಪ್ರಜಾಪತಿಃ ಸರ್ವೇ ಭೂರ್ಭುವಃಸ್ವಂಸ್ತಥೈವ ಚ ।
ಲೋಕಾಃ ಸರ್ವೇ ನಗಾ ನಾಗಾಃ ಸರಿತಃ ಸಾಗರಾಸ್ತಥಾ ।
ಭೂತಗ್ರಾಮಸ್ಯ ಸರ್ವಸ್ಯ ಸ್ವಯಂ ಹೇತುರ್ದಿವಾಕರಃ ॥ ೨೪ ॥

---

೨೧. ವಾಸುದೇವನು ಹೇಳುತ್ತಾನೆ—ಲೋಕಕ್ಕೆ ಕಣ್ಣು ಎನಿಸಿಕೊಂಡವನಾಗಿ ಹಗಲಿನಲ್ಲಿ ಕಿರಣಗಳನ್ನು ಪ್ರಸಾರಮಾಡುವ ಸೂರ್ಯನೇ ಪ್ರತ್ಯಕ್ಷದೇವತೆ. ಅದಕ್ಕಿಂತ ಹೆಚ್ಚಿನದೂ, ಶಾಶ್ವತವೂ ಆದ ದೇವತೆಯು ಬೇರೆ ಯಾವುದೂ ಇಲ್ಲ.

೨೨. ಈ ಜಗತ್ತು ಯಾವನಿಂದ ಹುಟ್ಟಿತೋ ಮತ್ತು ಯಾವನಿಂದ ಲಯಹೊಂದುವುದೋ ಅಂಥ ದಿವಾಕರನೇ ಕೃತ ತ್ರೇತಾದಿ ಕಾಲಸ್ವರೂಪನೆಂದು ತಿಳಿಯಬೇಕು.

೨೩-೨೪. ಆದಿತ್ಯಾದಿ ನವಗ್ರಹಗಳು, ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳು, ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳು; ಮೇಷ ಮುಂತಾದ ಹನ್ನೆರಡು ರಾಶಿಗಳು, ಬವ, ಬಾಲವ ಮುಂತಾದ ಹನ್ನೆರಡು ಕರಣಗಳು; ದ್ವಾದಶಾದಿತ್ಯರು, ಏಕಾದಶ ರುದ್ರರು, ಅಷ್ಟವಸುಗಳು, ಅಶ್ವಿನೀದೇವತೆಗಳು, ಸಪ್ತ ಮರುತ್ತುಗಳು, ಅಗ್ನಿ, ಶುಕ್ರ, ಪ್ರಜಾಪತಿ, ಭೂಲೋಕ, ಭುವರ್ಲೋಕ, ಸುವರ್ಲೋಕ, ಮೊದಲಾದ ಸಮಸ್ತಲೋಕಗಳು, ಸಮಸ್ತಪರ್ವತಗಳು, ಎಲ್ಲಾ ನಾಗಗಳು ; ಎಲ್ಲಾ ಸಮುದ್ರಗಳು, ಎಲ್ಲಾ ನದಿಗಳು ಇವೇ ಮೊದಲಾದ ಸರ್ವಕ್ಕೂ ಸೂರ್ಯನೇ ಸಾಕ್ಷಾತ್ ಕಾರಣನು.

**ಅಸ್ಯೇಚ್ಛಯಾ ಜಗತ್ಸರ್ವಮುತ್ಪನ್ನಂ ಸ ಚರಾಚರಂ ।**
**ಸ್ಥಿತಂ ಪ್ರವರ್ತತೇ ಚೈವ ಸ್ವಾರ್ಥೇ ಚಾನುಪ್ರವರ್ತತೇ ॥ ೨೫ ॥**

**ಪ್ರಸಾದಾದಸ್ಯ ಲೋಕೋಽಯಂ ಚೇಷ್ಟಮಾನಃ ಪ್ರದೃಶ್ಯತೇ ।**
**ಅಸ್ಮಿನ್ನಭ್ಯುದಿತೇ ಸರ್ವಮುದೇದಸ್ತಮಿತೇ ಸತಿ ।**
**ಅಸ್ತಂ ಯಾತೀತ್ಯದೃಶ್ಯೇನ ಕಿಮೇತತ್ಕಥ್ಯತೇ ಮಯಾ ॥ ೨೬ ॥**

**ತಸ್ಮಾದತಃಪರಂ ನಾಸ್ತಿ ನ ಭೂತಂ ನ ಭವಿಷ್ಯತಿ ।**
**ಯೋ ವೈ ವೇದೇಷು ಸರ್ವೇಷು ಪರಮಾತ್ಮೇತಿ ಗೀಯತೇ ॥ ೨೭ ॥**

**ಇತಿಹಾಸಪುರಾಣೇ ತು ಅಂತರಾತ್ಮೇತಿ ಗೀಯತೇ ।**
**ಬಾಹ್ಯಾತ್ಮೇತಿ ಸುಷುಮ್ನಾಸ್ಥಃ ಸ್ವಪ್ನಸ್ಥೋ ಜಾಗ್ರತಃ ಸ್ಥಿತಃ ॥ ೨೮ ॥**

---

೨೫. ಚರಾಚರವಾದ ಸಮಸ್ತಜಗತ್ತೂ ಈ ಸೂರ್ಯನ ಆಜ್ಞೆಯಿಂದ ಉತ್ಪನ್ನವಾಯಿತು. ಆ ಪ್ರಪಂಚವು ಸ್ಥಿತಿಯನ್ನು (ಇರುವಿಕೆಯನ್ನು) ಹೊಂದಿ ಪರಾರ್ಥದಲ್ಲಿ ಪ್ರವೃತ್ತವಾಗುತ್ತದೆ.

೨೬. ಅಲ್ಲದೆ ಸ್ವಾರ್ಥದಲ್ಲಿಯೂ ಪ್ರವೃತ್ತವಾಗುವುದು. ಭಗವಂತನಾದ ಇವನ ಅನುಗ್ರಹದಿಂದ ಈ ಲೋಕದ ಸಮಸ್ತ ವ್ಯಾಪಾರವೂ ನಡೆಯುತ್ತದೆ. ಅವನಿಂದಲೇ ಈ ಲೋಕವು ಕೆಲಸಮಾಡುವಂತೆ ಕಾಣುತ್ತದೆ.

೨೭. ಈ ಸೂರ್ಯನು ಉದಯನಾದರೆ ಎಲ್ಲರೂ ಏಳುವರು (ಕಾರ್ಯದಲ್ಲಿ ತೊಡಗುವರು) ಅವನು ಅಸ್ತಮಿತನಾದರೆ ಎಲ್ಲರೂ ಕಾರ್ಯದಿಂದ ವಿರತರಾಗುವರು. ಅದೃಶ್ಯನಾದ ಮಾತ್ರಕ್ಕೆ ಅವನು ಅಸ್ತಹೊಂದಿದನೆಂದು ಹೇಳುವುದಕ್ಕಾದೀತೆ ? ಇವನನ್ನು ಬಿಟ್ಟು ಹಿಂದೆ ಯಾವುದೂ ಆಗಿ ಇರಲಿಲ್ಲ, ಮುಂದೆ ಆಗುವುದಿಲ್ಲ. ಈ ಸೂರ್ಯದೇವನು ಸರ್ವವೇದಗಳಲ್ಲೂ ಪರಮಾತ್ಮನೆಂದು ವ್ಯವಹೃತನಾಗಿದ್ದಾನೆ.

೨೮. ಇತಿಹಾಸ, ಪುರಾಣ, ಮುಂತಾದುವುಗಳಲ್ಲಿ ಅಂತರಾತ್ಮನೆಂದು ಹೇಳಲ್ಪಡುತ್ತಾನೆ. ಸುಷುಮ್ನಾನಾಡಿಯಲ್ಲಿ ಉಸಿರಾಡುವ ಯೋಗಾಭ್ಯಾಸಿಗಳು (ಸಮಾಧಿಯಲ್ಲಿರುವವರು) ಇವನನ್ನು ಬಾಹ್ಯಾತ್ಮನೆನ್ನುವರು. ಅವನು ನಿದ್ರಾವಸ್ಥೆಯಲ್ಲಿದ್ದಂತೆ ತೋರಿದರೂ ಜಾಗ್ರದವಸ್ಥೆಯಲ್ಲಿ ಇರುವನು.

ಅಸ್ತಂ ಯಾತೀತ್ಯದೃಷ್ಟೇನ ಕಿಮೇತತ್ಕಥ್ಯತೇ ಮಯಾ ।
ತಸ್ಮಾದತಃ ಪರಂ ನಾಸ್ತಿ ನ ಭೂತಂ ನ ಭವಿಷ್ಯತಿ ॥ ೨೯ ॥

ಯನ್ನವಾಹ ಇತಿ ಖ್ಯಾತಃ ಪ್ರೇರಕಃ ಸರ್ವದೇಹಿನಾಂ ।
ನಾನೇನ ರಹಿತಂ ಕಿಂಚಿತ್ ಭೂತಮಸ್ತಿ ಚರಾಚರಂ ॥ ೩೦ ॥

ಯೋ ವೇದೈರ್ವೇದವಿದ್ಭಿಶ್ಚ ವಿಸ್ತರೇಣೇಹ ಶಕ್ಯತೇ ।
ವಕ್ತುಂ ವರ್ಷಶತೈರ್ನಾಸೌ ಶಕ್ಯಃ ಸಂಕ್ಷೇಪತೋಮಯಾ ॥ ೩೧ ॥

ತಸ್ಮಾದ್ಗುಣಾಕರಃ ಖ್ಯಾತಃ ಸರ್ವತ್ರಾಯಂ ದಿವಾಕರಃ ।
ಸರ್ವೇಶಃ ಸರ್ವಕರ್ತಾಯಂ ಸರ್ವಭರ್ತಾಯಮವ್ಯಯಃ ।
ಜಾತಾ ಮತ್ಸ್ಯಾದಯಃ ಸಮ್ಯಗ್ಗತಿಮಂತೋ ಮಹೇಶ್ವರಾತ್ ॥ ೩೨ ॥

ಮಂಡಲವ್ಯತಿರಿಕ್ತಂ ಚ ಜಾನಾಮಿ ಪರಮಾರ್ಥತಃ ।

---

೨೯. ಕಣ್ಣಿಗೆ ಗೋಚರನಾಗದೇ ಮರೆಯಾದ ಮಾತ್ರಕ್ಕೆ ಅವನು ಅಸ್ತ ಹೊಂದಿದನೆಂದು ಹೇಳುವುದು ಹೇಗೆ ? ಆದುದರಿಂದ ಸೂರ್ಯನ ಸಮನಾದ ವಸ್ತುವು ಹಿಂದೆ ಯಾವುದೂ ಇರಲಿಲ್ಲ, ಮುಂದೆ ಯಾವುದೂ ಬರುವುದಿಲ್ಲ.

೩೦. ಇವತ್ತಿನ ಹಗಲಿಗಿಂತ ನಾಳಿನ ಹಗಲು ಹೊಸದೆಂಬುದು ಸ್ವತಃಸಿದ್ಧವಾದದ್ದು ಎಂಬದಾಗಿ ಪ್ರಾಣಿಗಳಿಗೆಲ್ಲಾ ಪ್ರೇರಣೆ ಮಾಡತಕ್ಕವನಾಗಿರುತ್ತಾನೆ. ಚರಾಚರಾತ್ಮಕವಾದ ಪ್ರಪಂಚದಲ್ಲಿ ಇವನಿಲ್ಲದೇ ಬೇರೆ ಯಾವ ಪ್ರಾಣಿಯೂ ಇಲ್ಲ.

೩೧. ವೇದಗಳೂ, ವೇದಗಳನ್ನು ಬಲ್ಲವರೂ, ನೂರುವರ್ಷಗಳವರೆಗಾದರೂ ವಿಸ್ತಾರವಾಗಿ ಹೇಳಲು ಸಾಧ್ಯವಾಗುವ ಈತನ ಮಹಿಮೆಯನ್ನು ನಾನು ಸಂಕ್ಷೇಪವಾಗಿ ಹೇಳುವುದಕ್ಕೆ ಸಹ ಶಕ್ತನಾಗಿಲ್ಲ.

೩೨. ಆದುದರಿಂದ ಸೂರ್ಯನು ಗುಣಗಳ ಗಣಿ ಎಂದು ಸರ್ವತ್ರ ಪ್ರಸಿದ್ಧನಾಗಿದ್ದಾನೆ. ಮತ್ತು ಸರ್ವಕ್ಕೂ ಅಧಿಪತಿಯೂ ಸರ್ವನಿರ್ಮಾಣಕರ್ತನೂ, ಸರ್ವವನ್ನೂ ಪೋಷಿಸುವವನೂ, ಸ್ವಯಂ ನಾಶರಹಿತನೂ ಆಗಿದ್ದಾನೆ.

೩೩. ಸಂಚಾರ ಶಕ್ತಿಯುಕ್ತಗಳಾದ ಮೀನು ಮುಂತಾದ ಪ್ರಾಣಿಗಳೂ ಸರ್ವೇಶ್ವರನಾದ ಸೂರ್ಯನಿಂದಲೇ ಉತ್ಪನ್ನವಾದವುಗಳು. ಸೂರ್ಯನು ಮಂಡಲ

**ತಥಾಸ್ಯ ಮಂಡಲಂ ಕೃತ್ವಾ ಯೋ ಹ್ಯೇನಮುಪತಿಷ್ಠತೇ ।**
**ಪ್ರಾತಃ ಸಾಯಂ ಚ ಮಧ್ಯಾಹ್ನೇ ಸ ಯಾತಿ ಪರಮಾಂ ಗತಿಂ ॥ ೩೪ ॥**

**ಕಿಂ ಪುನರ್ಮಂಡಲಸ್ಥಂ ಯಂ ಜಪತೇ ಪರಮಾರ್ಥತಃ ।**
**ವಿವಿಧಾಃ ಸಿದ್ಧಯಸ್ತಸ್ಯ ಭವಂತಿ ನ ತದದ್ಭುತಂ ॥ ೩೫ ॥**

**ಮಂಡಲೇ ಚ ಸ್ಥಿತಂ ದೇವಂ ದೇಹೇ ಜ್ವೈನಂ ವ್ಯವಸ್ಥಿತಂ ।**
**ಸ್ವಬುಧ್ಯೈವಮ ಮಸಂಮೂಢೋ ಯಃ ಪಶ್ಯತಿ ಸ ಪಶ್ಯತಿ ॥ ೩೬ ॥**

**ಧ್ಯಾತ್ವೈವಂ ಪೂಜಯೇದ್ಯಸ್ತು ಜಪೇದ್ಯೋ ಜುಹುಯಾಚ್ಚ ಯಃ ।**
**ಸ ಸರ್ವಾನ್ ಪ್ರಾಪ್ನುಯಾತ್ ಕಾಮಾನ್ ಗಚ್ಛೇದ್ಧರ್ಮಧ್ವಜಂ ತಥಾ ॥**

---

ರೂಪವಾಗಿ ಇರುವುದು ಮಾತ್ರವಲ್ಲ. ಮಂಡಲಕ್ಕಿಂತ ಅತಿರಿಕ್ತವಾದ ಸ್ವರೂಪದಲ್ಲಿಯೂ ಪರಮಾರ್ಥ ಸ್ವರೂಪದಿಂದಲೂ ಇದಾನೆ ಎಂದು ನಾನು ಭಾವಿಸುವೆನು.

೩೪. ಸೂರ್ಯಮಂಡಲವನ್ನು ರಚಿಸಿ ಅದರಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲದಲ್ಲಿ ಸೂರ್ಯನನ್ನು ಪೂಜಿಸಿ ಆರಾಧಿಸುವವನು ಶ್ರೇಷ್ಠವಾದ ಸದ್ಗತಿಯನ್ನು ಹೊಂದುತ್ತಾನೆ.

೩೫. ಪರಮಾರ್ಥವಾಗಿ ಮಂಡಲಾಂತರ್ಯಾಮಿಯಾದ ಪರಮಾತ್ಮನನ್ನು ವಸ್ತುಸ್ಥಿತಿಯನ್ನನುಸರಿಸಿ ಯಾರು ಜಪಿಸುವರೋ, ಅವರಿಗೆ ಬಗೆಬಗೆಯಾದ ಕಾರ್ಯಗಳು ಸಿದ್ಧಿಯಾಗುವುದರಲ್ಲಿ ಏನೂ ಆಶ್ಚರ್ಯವಿಲ್ಲ.

೩೬. ಮಂಡಲದಲ್ಲಿರುವ ಪರಮಾತ್ಮನೂ, ತನ್ನ ದೇಹದಲ್ಲಿರುವ ಪರಮಾತ್ಮನೂ, ಅಭಿನ್ನನೆಂಬದಾಗಿ ಯಾರು ಸ್ವಬುದ್ಧಿಯಿಂದ ತಿಳಿಯುವರೋ ಅವರೇ ಜ್ಞಾನಿಗಳು.

೩೭. ಈ ಪ್ರಕಾರದಲ್ಲಿ ಮಂಡಲರೂಪೀ ಪರಮಾತ್ಮ ಪೂಜೆಯನ್ನು ಯಾವನು ಮಾಡುವನೋ, ಧ್ಯಾನಮಾಡಿ ಜಪಿಸಿ ಹೋಮವನ್ನೂ ಮಾಡುವನೋ, ಅವನು ಎಲ್ಲಾ ಇಷ್ಟಾರ್ಥಗಳನ್ನೂ ಪಡೆದು ಧರ್ಮಧ್ವಜನ ಸಮೀಪಕ್ಕೆ ಹೋಗುತ್ತಾನೆ.

ತಸ್ಮಾತ್ತ್ವಮಿಹ ದುಃಖಾನಾಂ ಅಂತಂ ಕರ್ತುಂ ಯದಿಚ್ಛಸಿ ।
ಇಹಾಮುತ್ರ ಚ ಭೋಗಾನಾಂ ಭುಕ್ತಿಂ ಮುಕ್ತಿಂ ಚ ಶಾಶ್ವತೀಂ ॥ ೩೮ ॥

ಆರಾಧಯಾರ್ಕಮರ್ಕಸ್ಥೋ ಮಂತ್ರೈರಿಹ ತದಾತ್ಮನಿ ।
ಅಂಗೈರ್ವೃತಂ ವೃತೇ ಚೈವ ಸ್ಥಾನೇ ಶಾಸ್ತ್ರೇಣ ಶೋಧಿತೇ ॥ ೩೯ ॥

ಕವಚೇನ ಚ ಸಂಗುಪ್ತೇ ಸರ್ವತೋಽಸ್ತ್ರೇಣ ರಕ್ಷಿತೇ ।
ಏವಂ ಪ್ರಾಪ್ಸ್ಯಸಿ ಯತ್ನೇನ ಸರ್ವದಾ ಫಲಮೀಪ್ಸಿತಂ ॥ ೪೦ ॥

ದುಃಖಮಾಧ್ಯಾತ್ಮಿಕಂ ನೇಹ ತಥಾಚೈವಾಧಿಭೌತಿಕಂ ।
ಆಧಿದೈವಿಕಮತ್ಯುಗ್ರಂ ನ ಭವಿಷ್ಯತಿ ತೇ ಸದಾ ॥ ೪೧ ॥

ನ ಭಯಂ ವಿದ್ಯತೇ ತೇಷಾಂ ಪ್ರಪನ್ನಾ ಯೇ ದಿವಾಕರಂ ।
ಇಹಾಮುತ್ರ ಸುಖಂ ತೇಷಾಮಚ್ಛಿದ್ರಂ ಜಾಯತೇ ಸುಖಂ ॥ ೪೨ ॥

---

೩೮. ಆದುದರಿಂದ ಈ ಲೋಕದಲ್ಲಿ ಸುಖದುಃಖಗಳನ್ನು ಕೊನೆಗಾಣಿಸಬೇಕೆಂದು ನಿನಗೆ ಇಷ್ಟವಾದರೂ, ಇಹಪರಗಳಲ್ಲಿ ಭೋಗಾನುಭವವನ್ನೂ ಬಂಧನದಿಂದ ಮುಕ್ತಿಯನ್ನೂ ಶಾಶ್ವತವಾಗಿ ಉಂಟುಮಾಡಿಕೊಳ್ಳಲು ಅಪೇಕ್ಷೆ ಇದ್ದರೂ ಅರ್ಕವೃಕ್ಷದಲ್ಲಿ ಅಧಿಷ್ಠಿತನೂ ಅಂಗದೇವತಾ ಪರಿವೃತನೂ ಆದ ಸೂರ್ಯನನ್ನು ಸೂರ್ಯಮಂತ್ರಗಳಿಂದ ಆರಾಧನೆ ಮಾಡು.

೩೯-೪೦. ಪೂಜೆಗಾಗಿ ಗೊತ್ತುಮಾಡಿದ ಸ್ಥಳವನ್ನು ಶಾಸ್ತ್ರವತ್ತಾಗಿ ಶೋಧನೆ ಮಾಡಿ ಶುದ್ಧಿಪಡಿಸಿ, ಸೂರ್ಯಕವಚ ಜಪದಿಂದ ಅಂಗಗೋಪನಮಾಡಿ ಬೀಜ, ಅಸ್ತ್ರ, ಕೀಲಕಗಳಿಂದ ರಕ್ಷಿತವಾದ ಆ ಸೂರ್ಯಮಂತ್ರಗಳಿಂದ ಸೂರ್ಯಾರಾಧನೆಯನ್ನು ಪ್ರಯತ್ನದಿಂದ ಮಾಡಿದರೆ ನಿನಗೆ ಇಷ್ಟವಾದ ಫಲಗಳನ್ನು ಹೊಂದುವೆ.

೪೧. ಹೀಗೆ ಮಾಡಿದರೆ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ಅತಿ ಕ್ರೂರಗಳಾದ ತಾಪತ್ರಯ ಎಂಬ ದುಃಖಗಳು ಯಾವಾಗಲೂ ಉಂಟಾಗುವುದಿಲ್ಲ.

೪೨. ಯಾರು ಸೂರ್ಯನನ್ನು ಮರೆಹೋಗುವರೋ ಅವರಿಗೆ ಯಾವ ಭಯವೂ ಇಲ್ಲ. ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ನ್ಯೂನತೆಯಿಲ್ಲದ ಸುಖವು ಪ್ರಾಪ್ತವಾಗುವುದು.

**ಸೂರ್ಯೇಣೇದಂ ಮಮೋದ್ದಿಷ್ಟಂ ಸಾಕ್ಷಾ ದ್ಯಜ್ಜ್ಞಾನ ಮುತ್ತಮಂ ।**
**ಆರಾಧಿತೇನ ವಿಧಿವತ್ ಕಾಲೇನ ಬಹುನಾ ತಥಾ ।**
**ಪ್ರಾಪ್ಯತೇ ಪರಮಂ ಸ್ಥಾನಂ ಯತ್ರ-ಧರ್ಮಧ್ವಜಃ ಸ್ಥಿತಃ ॥ ೪೩ ॥**

**ಏತತ್ಸಂಕ್ಷಿಪ್ತ ಮುದ್ದಿಷ್ಟಂ ಕ್ಷಿಪ್ರಸಿದ್ಧಿಕರಂ ಪರಂ ।**
**ಯಥಾ ನಾನ್ಯದತೋಽಸ್ತೀತಿ ಸ್ವಯಂ ಸೂರ್ಯೇಣ ಭಾಷಿತಂ ॥ ೪೪ ॥**

**ಉಪಾಯೋಽಯಂ ಸಮಾಖ್ಯಾತಂ ತವ ಸಂಕ್ಷೇಪತಸ್ತ್ವಿಹ ।**
**ಯಸ್ಮಾತ್ಪರತರೋ ನಾಸ್ತಿ ಹಿತೋಪಾಯಃ ಶರೀರಿಣಾಂ ॥ ೪೫ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ ಕಲ್ಪೇ ಆದಿತ್ಯವರ್ಣನಂ ನಾಮ ಅಷ್ಟಚತ್ವಾರಿಂಶೋಽಧ್ಯಾಯಃ.**



---

೪೩. ಜ್ಞಾನಸಾಧಕವಾದ ಈ ವಿಷಯವನ್ನು ಸೂರ್ಯನೇ ನನಗೆ ಹೇಳಿದನು. ಬಹುಕಾಲ ನಾನು ಸೂರ್ಯನನ್ನು ಆರಾಧಿಸಿದ್ದುದರಿಂದ ಅವನು ನನಗೆ ಈ ಜ್ಞಾನವನ್ನನುಗ್ರಹಿಸಿದನು. ಶಾಸ್ತ್ರವಿಧಿ ಪ್ರಕಾರವಾಗಿ ಬಹುದಿನ ಆರಾಧಿಸಿದವನು ಈ ಧರ್ಮಧ್ವಜನು ವಾಸಮಾಡುವ ಸ್ಥಳದಲ್ಲಿ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾನೆ.

೪೪. ಶೀಘ್ರವಾಗಿ ಸಿದ್ಧಿಯನ್ನು ಉಂಟುಮಾಡುವ ಈ ವಿಚಾರವನ್ನು ಸಂಕ್ಷೇಪವಾಗಿ ಹೇಳಿ ಆಯಿತು. ಇದಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲವೆಂದು ಸೂರ್ಯನೇ ಹೇಳಿದ್ದನು.

೪೫. ಈಗ ನಿನಗೆ ಈ ಉಪಾಯವನ್ನು ಸಂಕ್ಷೇಪವಾಗಿ ಹೇಳಿದುದು ಆಯಿತು ದೇಹಧಾರಿಗಳಾದವರಿಗೆ ಉತ್ಕೃಷ್ಟವಾದ ಹಿತೋಪದೇಶವು ಇದಕ್ಕಿಂತ ಬೇರೆ ಯಾವುದೂ ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ಆದಿತ್ಯಮಹಿಮೆಯ ವರ್ಣನೆಯೆಂಬ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನಪಂಚಾಶತ್ತಮೋಽಧ್ಯಾಯಃ

॥ ವಾಸುದೇವ ಉವಾಚ ॥

ಅಥಾರ್ಚನವಿಧಿಂ ವಕ್ಷ್ಯೇ ಧರ್ಮಕೇತೋರನುತ್ತಮಂ ।
ಸರ್ವಕಾಮಪ್ರದಂ ಪುಣ್ಯಂ ವಿಘ್ನಘ್ನಂ ದುರಿತಾಪಹಂ ॥ ೧ ॥

ಸೂರ್ಯಮಂತ್ರೈಃ ಪುರಃ ಸ್ನಾತಃ ಯಜೇತ್ತೈರೇವ ಭಾಸ್ಕರಂ ।
ಯತ ಸ್ತತಃ ಪ್ರವಕ್ಷ್ಯಾಮಿ ಸ್ನಾನಮತ್ರ ಸಮಾಸತಃ ॥ ೨ ॥

ಆಚಾಂತಸ್ತಮುಪಾಲಭ್ಯ ಮುದ್ರಯಾ ಶುಚಿಶುದ್ಧಯಾ ।
ಕೃತ್ವಾ ನೀರಾಜನಂ ಪುತ್ರ ಸಂಶೋಧ್ಯ ಚ ಜಲಂ ತತಃ ॥ ೩ ॥

---

## ನಲವತ್ತೊಂಭತ್ತನೆಯ ಅಧ್ಯಾಯವು

೧. ವಾಸುದೇವನು ಹೇಳುತ್ತಾನೆ—ಈಗ ಸರ್ವೋತ್ತಮನಾದ ಧರ್ಮಧ್ವಜನ (ಎಂದರೆ ಸೂರ್ಯದೇವನ) ಆರಾಧನ ಕ್ರಮವನ್ನು ಹೇಳುತ್ತೇನೆ ಕೇಳು. ಅದು ಎಲ್ಲಾ ಇಷ್ಟಗಳನ್ನೂ ಕೊಡತಕ್ಕದ್ದು. ಪುಣ್ಯಕರವೂ, ವಿಘ್ನನಾಶಕವೂ, ಪಾಪನಾಶಕವೂ ಆದುದು.

೨. ಮೊದಲು ಸೂರ್ಯಮಂತ್ರದಿಂದ ಸ್ನಾನಮಾಡಿ ಅನಂತರ ಅದೇ ಮಂತ್ರದಿಂದ ಪೂಜಿಸಬೇಕು. ಆದುದರಿಂದ ಮೊದಲು ಸಂಕ್ಷೇಪ ಕ್ರಮದಲ್ಲಿ ಸ್ನಾನದ ವಿಧಿಯನ್ನು ಹೇಳುವೆನು.

೩. ಅಯ್ಯಾ ಪುತ್ರಾ! ಆಚಮನಮಾಡಿ ಶುಭಕರವೂ, ಪರಿಶುದ್ಧವೂ ಆದ ಮುದ್ರೆಯಿಂದ ಅವಯವಗಳನ್ನು ಸ್ಪರ್ಶಮಾಡಬೇಕು. ಜಲದೇವತೆಗೆ ನೀರಾಜನ

**ಸ್ನಾನಾತ್ ಹೃದಯಪೂತೇನ ಮಂತ್ರೇಣ ಮತ್ಕುಲೋದ್ವಹ ।**
**ಉತ್ಥಾಯಾಚಮ್ಯ ತೇನೈವ ವಾಸಸೀ ಪರಿಧಾಯ ಚ ॥ ೪ ॥**

**ದ್ವಿರಾಚಮ್ಯಾಥ ಸಂಪ್ರೋಕ್ಷ್ಯ ತನುಂ ಸಪ್ತಾಕ್ಷರೇಣ ಚ ।**
**ಉತ್ಥಾಯಾಚಮ್ಯ ತೇನೈವ ರವೇಃ ಕೃತ್ವಾರ್ಘ್ಯಮೇವ ಚ ॥ ೫ ॥**

**ದತ್ವಾ ತೇನ ಜಪಿತ್ವಾ ತಂ ಸ್ವಕಂ ಧೃತ್ವಾರ್ಕವದ್ಧೃದಿ ।**
**ಗತ್ವಾ ಚಾಯತನಂ ಶುಭ್ರಮಾರ್ಕಮಾರ್ಕೀಂತನುಂ ಯಜೇತ್ ॥ ೬ ॥**

**ಪೂರಕಂ ಕುಂಭಕಂ ಕೃತ್ವಾ ರೇಚಕಂ ಚ ಸಮಾಹಿತಃ ।**
**ಕೃತ್ವೋಂಕಾರೇಣ ದೋಷಾಂಸ್ತು ಹನ್ಯಾತ್ಕಾಯಾದಿ ಸಂಭವಾನ್ ॥ ೭ ॥**

---

ಮುದ್ರೆಯನ್ನು ತೋರಿಸಿ, ಜಲವನ್ನು ಶೋಧನೆಮಾಡಿ ಅಂದರೆ ಅಲ್ಲೇ ತೇಲಾಡುತ್ತಿರುವ ಕಸ ಮುಂತಾದುದನ್ನು ಅಕ್ಕಪಕ್ಕಕ್ಕೆ ಒತ್ತರಿಸಬೇಕು.

೪. ಅಯ್ಯಾ! ನನ್ನ ಕುಲದಲ್ಲಿ ಹುಟ್ಟಿದ ಸಾಂಬನೇ! ಮನಶ್ಶುದ್ಧಿಕರಗಳಾದ ಮಂತ್ರೋಚ್ಚಾರಣ ಪೂರ್ವಕವಾಗಿ ಸ್ನಾನಮಾಡಿ ಮೇಲಕ್ಕೆದ್ದು, ಸ್ನಾನಾಂಗವಾದ ಆಚಮನಮಾಡಿ ಮಂತ್ರಪೂರ್ವಕವಾಗಿ ವಸ್ತ್ರಗಳನ್ನು ಧರಿಸಬೇಕು.

೫. ವಸ್ತ್ರಧಾರಣಾನಂತರ ಎರಡುಸಾರಿ ಆಚಮನಮಾಡಿ ಆಮೇಲೆ ಸಪ್ತಾಕ್ಷರೀ ಮಂತ್ರದಿಂದ ಶರೀರವನ್ನು ಪ್ರೋಕ್ಷಿಸಿಕೊಂಡು ಎದ್ದು ಆಚಮನಮಾಡಿ ಸಪ್ತಾಕ್ಷರೀ ಮಂತ್ರದಿಂದಲೇ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಪುನಃ ಆಚಮನ ಮಾಡಬೇಕು.

೬. ಸೂರ್ಯಪ್ರೀತಗಳಾದ ಮಂತ್ರಗಳನ್ನು ಜಪಿಸಿ, ಸೂರ್ಯನನ್ನು ತನ್ನ ಹೃದಯದಲ್ಲಿರುವಂತೆ ಭಾವಿಸದೇಕು. ಬಳಿಕ ಸಾರಿಸಿ ಪರಿಶುದ್ಧಮಾಡಿದ ದೇವಾಲಯಕ್ಕೆ ಹೋಗಿ ಸೂರ್ಯಬಿಂಬವನ್ನೂ ಸೂರ್ಯಪ್ರತಿಮಾ ಶರೀರವನ್ನು ಪೂಜಿಸಬೇಕು.

೭. ಪೂರಕ, ಕುಂಭಕ, ರೇಚಕ ಎಂಬ ಮೂರು ಕ್ರಮವನ್ನು ಅನುಸರಿಸಿ ಓಂಕಾರ ಪೂರ್ವಕವಾಗಿ ಪ್ರಾಣಾಯಾಮವನ್ನುಮಾಡಿ ಶರೀರಜನ್ಯವಾದ ದೋಷಗಳನ್ನೆಲ್ಲಾ ಹೋಗಲಾಡಿಸಿಕೊಳ್ಳಬೇಕು.

ವಾಯವ್ಯಾಗ್ನೇಯಮಾಹೇಂದ್ರವಾರುಣೇಭಿರ್ಯಥಾಕ್ರಮಂ ।
ಕಿಲ್ಬಿಷಂ ವಾರುಣಾದ್ಭಿಶ್ಚ ಹನ್ಯಾತ್ ಸಿದ್ಧ್ಯರ್ಥಮಾತ್ಮನಃ ॥ ೮ ॥

ಶೋಷಣಂ ದಹನಂ ಸ್ತಂಭಂ ಪ್ಲಾವನಂ ಚ ಯಥಾಕ್ರಮಾತ್ ।
ವಾಯ್ವಗ್ನೀಂದ್ರಜನಾಖ್ಯಾಭಿಃ ಧಾರಣೇಭಿಃ ಕೃತೇ ಸತಿ ॥ ೯ ॥

ಧ್ಯಾತ್ವಾ ವಿಶುದ್ಧಮಾತ್ಮಾನಂ ಪ್ರಣಮೇದರ್ಕವಯಸ್ಥಿತಂ ।
ದೇಹಂ ತೇನೈವ ಸಂಚಿತತ್ಯ ಪಂಚಭೂತಮಯಂ ಪರಂ ॥ ೧೦ ॥

ಸೂಕ್ಷ್ಮಂ ಸ್ಥೂಲಂ ತಥಾಕ್ಷಾಣಿ ಸ್ವಸ್ಥಾನೇಷು ಪ್ರಕಲ್ಪ್ಯ ಚ ।
ವಿನ್ಯಸ್ಯಾಂಗಾನಿ ಖಾದೀನಿ ಹೃದಾದ್ಯಾನಿ ಹೃದಾದಿಷು (ಮನಸ್ಸು) ॥ ೧೧ ॥

ಖ ಸ್ವಾಹಾ ಹೃದಯಂ ಭಾನೋಃ ಖಮರ್ಕಾಯ ಶಿರಸ್ತಥಾ ।
ಉಲ್ಕಾ ಸ್ವಾಹಾ ಶಿಖಾರ್ಕಸ್ಯ ಯ್ಯೈ ಚ ಹುಂ ಕವಚಂ ಪರಂ ।
ಖಾಂ ಫಡಸ್ತ್ರಂ ಚ ಸಂಹಾರಶ್ಚಾದಿತಃ ಪ್ರಣವಃ ಕೃತಃ ॥ ೧೨ ॥

---

೮. ತನಗೆ ಸಿದ್ಧಿಯಾಗುವುದಕ್ಕಾಗಿ ವಾಯುವ್ಯದಿಕ್ಕು, ಆಗ್ನೇಯದಿಕ್ಕು, ಪೂರ್ವದಿಕ್ಕು, ಪಶ್ಚಿಮದಿಕ್ಕುಗಳಲ್ಲಿರುವ ವರುಣದೇವತಾಕವಾದ ಜಲವನ್ನು ಪಾಪ ಪರಿಹಾರಾರ್ಥವಾಗಿ ಪ್ರೋಕ್ಷಿಸಿಕೊಳ್ಳಬೇಕು.

೯. ವಾಯುವ್ಯದ ಜಲಪ್ರೋಕ್ಷಣೆಯಿಂದ ಪಾಪಶೋಷಣವೂ, ಆಗ್ನೇಯದ ಜಲಪ್ರೋಕ್ಷಣೆಯಿಂದ ಪಾಪದಹನವೂ, ಮಾಹೇಂದ್ರ (ಪೂರ್ವ) ದಿಕ್ಕಿನ ಜಲಪ್ರೋಕ್ಷಣೆಯಿಂದ ಪಾಪಸ್ತಂಭನವೂ ವಾರುಣ (ಪಶ್ಚಿಮ) ದಿಕ್ಕಿನ ಜಲಪ್ರೋಕ್ಷಣೆಯಿಂದ ಪಾಪ ಪ್ಲಾವನವೂ (ನಾಶವು) ಆಗುವುದು.

೧೦. ಸೂರ್ಯಬಿಂಬವನ್ನು ಆಕ್ರಮಿಸಿರುವ ಶುದ್ಧನಾದ ಆತ್ಮನನ್ನು ಧ್ಯಾನಿಸಿ, ನಮಸ್ಕರಿಸಬೇಕು. ಅದರಿಂದಲೇ ತನಗೆ ಮತ್ತೊಂದು ಪಂಚಭೂತಮಯ ದೇಹವು ಪ್ರಾಪ್ತನಾದಂತೆ ಭಾವನೆಮಾಡಬೇಕು.

೧೧. ಸೂಕ್ಷ್ಮದೇಹವನ್ನೂ, ಸ್ಥೂಲದೇಹವನ್ನೂ ಚಕ್ಷುರಾದೀಂದ್ರಿಯಗಳನ್ನೂ ತಮ್ಮ ತಮ್ಮ ಸ್ಥಾನಗಳಲ್ಲಿ ಕಲ್ಪಿಸಿ, ಮನಸ್ಸು ಮೊದಲಾದ ಅಂತರಂಗಗಳನ್ನು ಹೃದಯಾದಿ ಸ್ಥಾನಗಳಲ್ಲಿ ನ್ಯಾಸಮಾಡಿಕೊಳ್ಳಬೇಕು.

೧೨-೧೩. ಓಂ ಖ, ಭಾನವೇ ಸ್ವಾಹಾ, ಹೃದಯಾಯನಮಃ, ಓಂ ಖಂ ಅರ್ಕಾಯನಮಃ, ಶಿರಸೇ ಸ್ವಾಹಾ, ಓಂ ಉಲ್ಕಾ ಸ್ವಾಹಾ, ಶಿಖಾಯೈವಷಟ್, ಓಂ

**ಸ ಪೂರ್ವೇ ಪ್ರಣವಸ್ಯಾಥ ಮಂತ್ರಕರ್ಮಪ್ರಸಿದ್ಧಯೇ ।**
**ಏಭಿರ್ಜಲಂ ತ್ರಿಧಾ ಜಪ್ತ್ವಾ ಸ್ನಾನದ್ರವ್ಯಾಣಿ ತೇನ ಚ　　　॥ ೧೩ ॥**

**ಸಂಪ್ರೋಕ್ಷ್ಯ ಪೂಜಯೇತ್ಸೂರ್ಯಂ ಗಂಧಪುಷ್ಪಾದಿಭಿಃ ಶುಭೈಃ ।**
**ತತೋ ಮೂರ್ತಿಷು ಸರ್ವಾಸು ರಾತ್ರಾವಗ್ನೌ ಪ್ರಪೂಜಯೇತ್　　　॥ ೧೪ ॥**

**ಪ್ರಾಕ್ಪಶ್ಚಿಮೋದಗಭ್ಯಗ್ರಾಂ ಪ್ರಾತಃ ಸಾಯಂ ನಿಶಾಸು ವೈ ।**
**ಸಪ್ತಾಕ್ಷರೇಣ ಮಂತ್ರೇಣ ಧ್ಯಾತ್ವಾ ಪದ್ಮಸ್ಯ ಕರ್ಣಿಕಾಂ　　　॥ ೧೫ ॥**

**ಆದಿತ್ಯಮಂಡಲಾಂತಸ್ಥಂ ತತ್ರ ದೇಹಂ ಪ್ರಕಲ್ಪಯೇತ್ ।**
**ಪ್ರಭಾಮಂಡಲ ಮಧ್ಯಸ್ಥಂ ಧ್ಯಾತ್ವಾ ದೇಹಂ ಯಥಾಪುರಾ ।**
**ಸರ್ವಲಕ್ಷಣಸಂಪೂರ್ಣಂ ಸಹಸ್ರಕಿರಣೋಜ್ವಲಂ　　　॥ ೧೬ ॥**

---

ಅರ್ಕ ಸ್ಯಸ್ವಾಹಾ, ಕವಚಾಯ ಹುಂ, ಓಂ ಖಾಂ ನೇತ್ರತ್ರಯಾಯವೌಷಟ್, ಓಂ ಅಸ್ತ್ರಾಯ ಷಟ್.

೧೩. ಎಂದು ಪ್ರಣವಪೂರ್ವಕವಾಗಿಯೂ ಫಟ್ ಎಂಬುದು ಅಂತವಾಗಿಯೂ ಇದು ಎಲ್ಲಾ ಕರ್ಮಗಳಿಗೂ ಪ್ರಸಿದ್ಧವಾದ ಈ ಮಂತ್ರಗಳಿಂದ ಜಲವನ್ನು ಮೂರು ಸಾರಿ ಜಪಿಸಬೇಕು.

೧೪. ಆ ಜಲದಿಂದ ಸ್ನಾನ ದ್ರವ್ಯಗಳನ್ನು ಪ್ರೋಕ್ಷಿಸಿ ಒಳ್ಳೆಯ ಗಂಧ ಪುಷ್ಪಾದಿ ಗಳಿಂದ ಪೂಜಿಸಬೇಕು. ಹಗಲುಹೊತ್ತು ಸೂರ್ಯನನ್ನು ಎಲ್ಲಾ ಮೂರ್ತಿಗಳ ಲ್ಲಿಯೂ ರಾತ್ರಿಯ ಕಾಲದಲ್ಲಿ ಅಗ್ನಿಯಲ್ಲಿಯೂ ಪೂಜಿಸಬೇಕು.

೧೫. ಪ್ರಾತಃಕಾಲ ಸಾಯಂಕಾಲಗಳಲ್ಲಿ ಕ್ರಮವಾಗಿ ಪೂರ್ವ, ಪಶ್ಚಿಮ, ಉತ್ತರದಿಕ್ಕುಗಳಲ್ಲಿ ಸನ್ನಿಹಿತವಾಗಿರುವನೆಂದು ತಿಳಿದು ಆ ದಿಕ್ಕಿಗೆ ಅಭಿಮುಖವಾಗಿ ನಿಂತು ಸಪ್ತಾಕ್ಷರ ಮಂತ್ರದಿಂಡ ಯುಕ್ತವಾದ ಪದ್ಮಕರ್ಣಿಕೆಯನ್ನು ಧ್ಯಾನಿಸಬೇಕು.

೧೬ ಈಪ್ರಕಾರ ಸೂರ್ಯಮಂಡಲದೊಳಗೆ ಮೊದಲಿನಹಾಗೆ ದೇಹವು ಪ್ರಭಾ ಮಂಡಲ ಮಧ್ಯದಲ್ಲಿರುವಂತೆ ಕಲ್ಪಿಸಿ ಸರ್ವಲಕ್ಷಣ ಪೂರ್ಣನೂ, ಸಹಸ್ರಕಿರಣಗಳಿಂದ ಪ್ರಕಾಶಮಾನನೂ ಆದ ಸೂರ್ಯನನ್ನು ಧ್ಯಾನಮಾಡಬೇಕು.

ರಕ್ತೈಗಂಧೈಶ್ಚ ಪುಷ್ಪೈಶ್ಚ ಚರುಭಿರ್ಬಲಭಿಸ್ತಥಾ ।
ರಕ್ತಚಂದನ ಚಿತ್ರೈರ್ವಾ ವಸ್ತ್ರೈರಾಭರಣೈಃ ಶುಭೈಃ ॥ ೧೭ ॥

ಆವಾಹನಾದಿ ಕರ್ಮಾಣಿ ರಕ್ಷಾಂ ತು ಹೃದಯೇನ ಚ ।
ತಚ್ಚಿತ್ತಶ್ಚ ಸದಾ ಕುರ್ಯಾತ್ ಜ್ಞಾನಕರ್ಮ ಕ್ರಮಂ ಬುಧಃ ॥ ೧೮ ॥

ಕೃತ್ವಾ ಚಾವಾಹನಂ ಮಂತ್ರೈಃ ಏಕತ್ರ ಸ್ಥಾಪನಂ ತತಃ ।
ಯಾವದ್ಯಾಗಾವಸಾನಂ ತು ಸಾನ್ನಿಧ್ಯಂ ತತ್ರ ಕಲ್ಪಯೇತ್ ॥ ೧೯ ॥

ದತ್ವಾ ಪಾದ್ಯಾದಿಕಾಂ ಪೂಜಾಂ ಶಕ್ತ್ಯಾ ವಾರ್ಘ್ಯಂ ನಿವೇದಯೇತ್ ।
ಜಪಿತ್ವಾ ವಿಧಿವದ್ಧ್ಯಾತ್ವಾ ತತೋ ದೇವೀಂ ವಿಸರ್ಜಯೇತ್ ॥ ೨೦ ॥

ಏಷ ಕರ್ಮಕ್ರಮಃ ಪ್ರೋಕ್ತಃ ಸರ್ವೇಷಾಂ ಯಜನಕ್ರಮಾತ್ ।
ಪ್ರವಕ್ಷ್ಯಾಮಿ ಜಪಸ್ಥಾನಂ ಪದ್ಮೇಶಾವರಣೇ ತಥಾ ॥ ೨೧ ॥

---

೧೭. ಕೆಂಪುಬಣ್ಣದ ಗಂಧ ಪುಷ್ಪಗಳಿಂದಲೂ, ಚರುಗಳು, ಬಲಿಗಳು ಇವುಗಳಿಂದಲೂ, ರಕ್ತಚಂದನದಿಂದ ಚಿತ್ರಾಕಾರವಾದ ವಸ್ತ್ರಗಳಿಂದಲೂ ಆಭರಣಗಳಿಂದಲೂ ಪೂಜಿಸಬೇಕು.

೧೮. ವಿದ್ವಾಂಸನು ಕರ್ಮಕ್ರಮವನ್ನು ತಿಳಿದು, ಆ ಸೂರ್ಯನಲ್ಲೇ ಮನಸ್ಸಿಟ್ಟು ಆವಾಹನಾದಿ ಕರ್ಮಗಳಿಗೆ ಹೃದಯಾದಿಯಿಂದ ರಕ್ಷೆಯನ್ನು ಮಾಡಬೇಕು.

೧೯. ಆಮೇಲೆ ವೇದೋಕ್ತಮಂತ್ರಗಳಿಂದ ಆವಾಹಿಸಿ, ಒಂದೆಡೆಯಲ್ಲಿ ಸ್ಥಾಪಿಸಿ, ಪೂಜಾ ಸಮಾಪ್ತಿಪರ್ಯಂತರ ಆ ಬಿಂಬದಲ್ಲಿ ಸಾನ್ನಿಧ್ಯವನ್ನು ಕಲ್ಪಿಸಬೇಕು.

೨೦. ಯಥಾಶಕ್ತಿ ಪಾದ್ಯಾದಿ ಸಮರ್ಪಣದಿಂದ ಪೂಜೆಯನ್ನುಮಾಡಿ ಶಕ್ತ್ಯನುಸಾರ ಅರ್ಘ್ಯವನ್ನು ನಿವೇದಿಸಿ, ಆಮೇಲೆ ವಿಧಿಗನುಸಾರವಾಗಿ ಗಾಯತ್ರಿಯನ್ನು ಜಪಿಸಿ, ಅನಂತರ ಆ ದೇವಿಯನ್ನು ಧ್ಯಾನಿಸಿ ವಿಸರ್ಜನೆಮಾಡಬೇಕು.

೨೧-೨೨. ಎಲ್ಲರೂ ಅನುಸರಿಸಬಹುದಾದ ಈ ಕ್ರಮವನ್ನು ಹೇಳಿಯಾಯಿತು. ಇನ್ನು ಸೂರ್ಯಾವರಣದಲ್ಲಿ ಜಪಸ್ಥಾನವನ್ನು ಹೇಳುವೆನು. ಕರ್ಣಿಕೆಯಲ್ಲಿ ಆದಿತ್ಯನನ್ನೂ, ಪದ್ಮಗಳಲ್ಲಿ ಅಂಗದೇವತೆಗಳನ್ನೂ ಪೂರ್ವದಿಕ್ಕಿನಿಂದ ಆರಂಭಿಸಿ ಎಂಟು ದಿಕ್ಕು

**ಆದಿತ್ಯಂ ಕರ್ಣಿಕಾ ಸಂಸ್ಥಂ ದಲೇಷ್ವಾಂಗಾನಿ ಪೂರ್ವಶಃ ।**
**ಸೋಮಾದೀನ್ ರಾಹುಪರ್ಯಂತಾನ್ ಗ್ರಹಾಂಶ್ಚೈವೋದಗಾದಿತಃ ॥ ೨೨ ॥**

**ಮೂರ್ತಿಮಲ್ಲೋಕ ಪಾಲಾಂಶ್ಚ ಕ್ರಮಾದಾವರಣೇ ಷ್ವಥ ।**
**ತದಸ್ತ್ರಾಣಿ ಚ ರಕ್ಷಾರ್ಥಂ ಸ್ವಮಂತ್ರೈಃ ಪೂಜಯೇತ್ ಕ್ರಮಾತ್॥ ೨೩ ॥**

**ಪ್ರಣವೈಶ್ಚಾಭಿಧಾನೈಶ್ಚ ಚತುರ್ಥ್ಯಾಹ್ಯಭಿಯೋಜಿತೈಃ ।**
**ಸರ್ವೇಷಾಂ ಕಥಿತಾ ಮಂತ್ರಾಃ ಮುದ್ರಾಶ್ಚ ಕಥಯಾಮ್ಯತಃ ॥ ೨೪ ॥**

**ವ್ಯೋಮ ಮುದ್ರಾ ರತಿಃ ಪದ್ಮಾ ಮಹಾಶ್ವೇತಾಸ್ತ್ರಮೇವ ಚ ।**
**ಪಂಚಮುದ್ರಾಃ ಸಮಾಖ್ಯಾತಾಃ ಸರ್ವಕರ್ಮ ಪ್ರಸಿದ್ಧಯೇ ॥ ೨೫ ॥**

**ಉತ್ತಾನೌ ತು ಕರೌ ಕೃತ್ವಾ ಅಂಗುಲ್ಯೋ ಗ್ರಂಥಿತಾಃ ಕ್ರಮಾತ್ ।**
**ತರ್ಜನೀಂ ಯಾಂತಿ ಯಾವತ್ತಾಃ ಸಮೇವಾಧೋಮುಖೇ ಸ್ಥಿತೇ ॥ ೨೬ ॥**

---

ಗಳಲ್ಲೂ ಕ್ರಮವಾಗಿ ಚಂದ್ರ ಮೊದಲಾಗಿ ರಾಹು ಪರ್ಯಂತ ಗ್ರಹಗಳನ್ನೂ ಆವಾಹಿಸಬೇಕು.

೨೩. ಸೂರ್ಯಮಂಡಲದ ಉತ್ತರದಿಕ್ಕಿನಿಂದ ಆರಂಭಿಸಿ ಎಂಟು ದಿಕ್ಕುಗಳಲ್ಲಿಯೂ ಮೂರ್ತಿಮಂತರಾದ ಲೋಕಪಾಲರನ್ನು ಆವಾಹಿಸಬೇಕು, ಬಳಿಕ ಆವರಣಗಳಲ್ಲಿ ರಕ್ಷಣೆಗಾಗಿ ಅಸ್ತ್ರಗಳನ್ನು ಆಯಾ ಮಂತ್ರಗಳಿಂದ ಕ್ರಮವಾಗಿ ಪೂಜಿಸಬೇಕು.

೨೪. ಚತುರ್ಥೀ ವಿಭಕ್ತ್ಯಂತಗಳೂ ಪ್ರಣವಪೂರ್ವಗಳೂ ಆಗಿರುವಂತೆ ನಾಮಗಳನ್ನು (ಓಂ ಇಂದ್ರಾಯನಮಃ ಎಂಬಂತೆ) ಹೇಳಬೇಕು. ಇದುವರೆಗೆ ಎಲ್ಲವುಗಳಿಗೂ ಮಂತ್ರಗಳನ್ನು ಹೇಳಿದುದಾಯಿತು. ಇಲ್ಲಿಂದ ಮುಂದೆ ಮುದ್ರೆಗಳನ್ನು ಹೇಳುತ್ತೇನೆ.

೨೫. ವ್ಯೋಮಮುದ್ರಾ, ರತಿಮುದ್ರಾ, ಪದ್ಮಮುದ್ರಾ, ಮಹಾಶ್ವೇತಮುದ್ರಾ, ಅಸ್ತ್ರಮುದ್ರಾ ಎಂಬದಾಗಿ ಐದು ಮುದ್ರೆಗಳು ಪ್ರಸಿದ್ಧವಾಗಿವೆ. ಸರ್ವಕರ್ಮಗಳ ಸಿದ್ಧಿಗೂ ಇವು ಸಾಧಕಗಳು.

೨೬-೨೭. ಎರಡು ಅಂಗೈಗಳನ್ನು ಕೆಳಗುಮೇಲು ಆಗುವಂತೆ ಮಾಡಿಕೊಂಡು ಕ್ರಮವಾಗಿ ಬೆರಳುಗಳನ್ನು ಜೋಡಿಸಿಕೊಳ್ಳಬೇಕು. ಹೆಬ್ಬೆರಳುಗಳು ಮಧ್ಯಮ

ತರ್ಜನ್ಯೌ ಮಧ್ಯಮಸ್ಯೈವ ಜ್ಯೇಷ್ಠಾಗ್ರೇ ವಾನುಗೋಪರಿ ।
ಮುದ್ರೇಯಂ ಸರ್ವಮುದ್ರಾಣಾಂ ವ್ಯೋಮ ಮುದ್ರೇತಿಕೀರ್ತಿತಾ ॥ ೨೭ ॥

ಸರ್ವಕರ್ಮಸು ಯೋಗೋಯಂ ಯಥಾಸ್ಥಾನಂ ಪ್ರಕಲ್ಪ್ಯತೇ ।
ಪದ್ಮವತ್ ಪ್ರಸೃತಾಃ ಸರ್ವಾಃ ಮಹಾಶ್ವೇತಾ ರವೇಃ ಸ್ಮೃತಃ ।
ಜಪಸನ್ನಿಹಿತೋ ನಿತ್ಯಂ ರಥಾರೂಢೋರವಿಃ ಸ್ಮೃತಃ ॥ ೨೮ ॥

ಹಸ್ತಾವೂರ್ಧ್ವಮುಖೌ ಕೃತ್ವಾ ವಾಮಾಂಗುಷ್ಠೇನ ಯೋಜಿತೌ ।
ದ್ರವ್ಯಾಣಾಂ ಶೋಧನೇ ಯೋಗ್ಯಾ ರಕ್ಷಾರ್ಥಂ ಚ ವಿಶೇಷತಃ ॥ ೨೯ ॥

ಅನಯಾ ಮುದ್ರಯಾ ಸರ್ವಂ ರಕ್ಷಿತಂ ಶೋಧಿತಂ ಭವೇತ್ ।
ಅರ್ಘ್ಯಂ ದತ್ವಾ ಪ್ರಯೋಕ್ತವ್ಯಾ ಪೂಜಾಂತೇ ಚ ವಿಶೇಷತಃ ॥ ೩೦ ॥

---

ಅನಾಮಿಕಗಳ ಮೇಲೂ, ಒಂದು ತರ್ಜನಿಯು ಕನಿಷ್ಠಿಕೆಯ ಮೇಲೂ, ಮತ್ತೊಂದು ಕನಿಷ್ಠಿಕೆಯು ತರ್ಜನಿಯ ಮೇಲೂ, ಬರುವಂತೆ ಮಾಡಿದರೆ ಸರ್ವಮುದ್ರೆಗಳಲ್ಲಿ ಶ್ರೇಷ್ಠವಾದ ವ್ಯೋಮಮುದ್ರೆ ಎನ್ನಿಸಿಕೊಳ್ಳುವುದು. ಆಯಾ ಸ್ಥಾನಗಳಿಗೆ ಅನುಸಾರವಾಗಿ ಉಕ್ತವಾದ ಈ ಅಂಗುಳಿಗಳ ಈ ಸಂಯೋಗಕ್ರಮವು ಪ್ರಸಿದ್ಧವಾಗಿಯೇ ಇದೆ.

೨೮. ಕಮಲದ ಎಸಳಿನಂತೆ ಎಲ್ಲಾ ಬೆರಳುಗಳನ್ನೂ ನೀಡಿ ಹಿಡಿದರೆ ಅದು ಸೂರ್ಯಪ್ರಿಯವಾದ ಮಹಾಶ್ವೇತಮುದ್ರೆ ಎನಿಸಿಕೊಳ್ಳುವುದು. ಈ ಮುದ್ರಾಪೂರ್ವಕವಾಗಿ ಜಪಮಾಡಿದರೆ ರಥಾರೂಢನಾದ ರವಿಯು ವೇಗದಿಂದ ಬಂದು ಜಪಕಾಲಕ್ಕೆ ನಮಗೆ ಸನ್ನಿಹಿತನಾಗುತ್ತಾನೆ.

೨೯. ಎರಡು ಕೈಯನ್ನು ಮೇಲ್ಮುಖಮಾಡಿಕೊಂಡು ಜೋಡಿಸಿ ಎಡಗೈ ಹೆಬ್ಬೆರಳು ಎರಡು ಅಂಗೈಗಳನ್ನು ಸೋಂಕುವಂತೆ ಮಾಡಿಕೊಂಡರೆ ಈ ಎರಡೂ ದ್ರವ್ಯಶುದ್ಧಿಗೂ ವಿಶೇಷವಾಗಿ ದ್ರವ್ಯರಕ್ಷಣೆಗೂ ಉಪಯೋಗವಾಗುತ್ತದೆ.

೩೦. ಜಪ, ಧ್ಯಾನ ಇವು ಮುಗಿದಮೇಲೆ ಪೂಜೆಯ ಕೊನೆಯಲ್ಲಿ ಪುನರರ್ಘ್ಯಪ್ರದಾನದ ಅನಂತರ ಈ ಮುದ್ರೆಯನ್ನುಮಾಡಿದರೆ ಸರ್ವದ್ರವ್ಯವೂ ರಕ್ಷಿತವೂ ಶೋಧಿತವೂ ಆದಂತೆ ಆಗುತ್ತದೆ.

ಜಪಧ್ಯಾನಾವಸಾನೇ ಚ ಯದಿಚ್ಛೇತ್ಸಿದ್ಧಿಮಾತ್ಮನಃ ।
ಅನೇನ ವಿಧಿನಾ ನಿತ್ಯಂ ಜಪೇದಬ್ದಮತಂದ್ರಿತಃ ॥ ೩೧ ॥

ಸ ಲಭೇದೀಪ್ಸಿತಾನ್ ಕಾಮಾನ್ ಇಹಾಮುತ್ರ ನ ಸಂಶಯಃ ।
ರೋಗಾರ್ತೋ ಮುಚ್ಯತೇ ರೋಗಾತ್ ಧನಹೀನೋ ಧನಂ ಲಭೇತ್ ॥

ರಾಜ್ಯಭ್ರಷ್ಟೋ ಲಭೇದ್ರಾಜ್ಯಂ ಅಪುತ್ರಃ ಪುತ್ರಮಾಪ್ನುಯಾತ್ ।
ಪ್ರಜ್ಞಾಮೇಧಾಸಮೃದ್ಧೀಶ್ಚ ಚಿರಂ ಜೀವತಿ ಮಾನವಃ ।
ಸುರೂಪಾಂ ಲಭತೇ ಕನ್ಯಾಂ ಕುಲೀನಾಂ ಪುರುಷೋ ಧ್ರುವಂ ॥ ೩೩ ॥

ಸೌಭಾಗ್ಯಂ ಸ್ತ್ರೀಕುಲೀನಾಪಿ ಕನ್ಯಾ ಚ ಪುರುಷೋತ್ತಮಂ ।
ಅವಿದ್ಯೋ ಲಭತೇ ವಿದ್ಯಾಂ ಇತ್ಯುಕ್ತಂ ಭಾನುನಾ ಪುರಾ ॥ ೩೪ ॥

---

೩೧. ತನಗೆ ಮಂತ್ರಸಿದ್ಧಿಯಾಗಬೇಕೆಂಬ ಇಚ್ಛೆಯಿದ್ದರೆ ಸೋಮಾರಿತನವಿಲ್ಲದೆ ಈ ಹೇಳಿದ ವಿಧಿಯಂತೆ ಒಂದು ಸಂವತ್ಸರ ಪರ್ಯಂತ ಯಾವಾಗಲೂ ಜಪ ಮಾಡಬೇಕು.

೩೨. ಹೀಗೆ ಮಾಡಿದವನು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ, ತನಗೆ ಬೇಕಾದ ಇಷ್ಟಾರ್ಥಗಳನ್ನೆಲ್ಲಾ ಹೊಂದುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ. ರೋಗಪೀಡಿತನು ರೋಗದಿಂದ ಮುಕ್ತನಾಗುತ್ತಾನೆ. ಧನವಿಲ್ಲದವನು ಧನವನ್ನು ಪಡೆಯುತ್ತಾನೆ.

೩೩. ರಾಜ್ಯವನ್ನು ಕಳೆದುಕೊಂಡವನು ಪುನಃ ರಾಜ್ಯವನ್ನು ಪಡೆಯುತ್ತಾನೆ. ಪುತ್ರಹೀನನು ಪುತ್ರನನ್ನು ಪಡೆಯುತ್ತಾನೆ. ಇದನ್ನು ಆಚರಿಸಿದವರಿಗೆ ಚಾತುರ್ಯ, ಮೇಧಾಶಕ್ತಿ, ವಸ್ತುಸಮೃದ್ಧಿ ಇವು ಲಭಿಸುವುದಲ್ಲದೆ ಚಿರಂಜೀವಿತ್ವವೂ ಬರುವುದು.

೩೪. ವಿವಾಹವಿಲ್ಲದ ಪುರುಷನು ಈರೀತಿಮಾಡಿದರೆ ಸುಂದರಿಯೂ ಸತ್ಕುಲ ಪ್ರಸೂತೆಯೂ ಆದ ಕನ್ನಿಕೆಯನ್ನು ನಿಶ್ಚಯವಾಗಿ ಪಡೆಯುತ್ತಾನೆ. ಮದುವೆಯಾಗದೆ ಇರುವ ಕುಲಹೀನಳಾದ ಹೆಂಗಸು ಈರೀತಿಮಾಡಿದರೆ ಸೌಭಾಗ್ಯವನ್ನೂ ಶ್ರೇಷ್ಠನಾದ ಪತಿಯನ್ನೂ ಪಡೆಯುತ್ತಾಳೆ. ವಿದ್ಯಾವಿಹೀನನು ಈರೀತಿಮಾಡಿದರೆ ವಿದ್ಯಾವಂತನಾಗುವನೆಂದು ಪೂರ್ವದಲ್ಲಿ ಸೂರ್ಯನೇ ಹೇಳಿದ್ದಾನೆ.

ನಿತ್ಯಯಾಗಃ ಸ್ಮೃತೋ ಹ್ಯೇಷಃ ಧನಧಾನ್ಯಸುಖಾವಹಃ ।
ಪ್ರಜಾ ಪಶುವಿವೃದ್ಧಿಶ್ಚ ನಿಷ್ಕಾಮಸ್ಯಾಪಿ ಜಾಯತೇ ॥ ೩೫ ॥

ತದೇಕಃ ಸ್ತೂಯತೇ ಸ್ವರ್ಗೇ ಶಬ್ದ್ಯತೇ ಚ ನರೋತ್ತಮಃ ।
ಭಕ್ತ್ಯಾ ತಂ ಪೂಜಯೇದ್ಯಸ್ತು ನರಃ ಪುಣ್ಯತರಃ ಸದಾ ॥ ೩೬ ॥

ಇಹ ವೈ ಕಾಮಿತಂ ಪ್ರಾಪ್ಯ ತತೋ ಗಚ್ಛೇನ್ಮನೋಃ ಪದಂ ।
ದ್ವಿಜಾಸ್ತಸ್ಯ ಪ್ರಸಾದೇನ ತೇಜಸಾ ಬುಧಸನ್ನಿಭಾಃ ॥ ೩೭ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸೂರ್ಯ ಮಾಹಾತ್ಮ್ಯ ವರ್ಣನಂ ನಾಮ ಏಕೋನಪಂಚಾಶತ್ತಮೋಽಧ್ಯಾಯಃ.



---

೩೫. ಇದು ಧನ, ಧಾನ್ಯ, ಸುಖ ಇವುಗಳನ್ನು ಉಂಟುಮಾಡತಕ್ಕ ನಿತ್ಯ ಯಾಗವೆಂದು ಹೇಳಿಸಿಕೊಳ್ಳುತ್ತದೆ. ನಿಷ್ಕಾಮನಾಗಿ ಪೂಜಿಸಿದವನಿಗೂ ಸಹ ಪ್ರಜಾ ವೃದ್ಧಿ ಪುಣ್ಯವೃದ್ಧಿಗಳು ಆಗುತ್ತವೆ.

೩೬. ಸ್ವರ್ಗದಲ್ಲಿ ಹೊಗಳಿಸಿಕೊಳ್ಳುವುದರಲ್ಲೂ ಇವನೇ ಮುಖ್ಯನಾಗುವನು. ಸರ್ವೋತ್ತಮನೆಂಬದಾಗಿ ಸರ್ವತ್ರ ಸ್ತುತಿಸಲ್ಪಡುತ್ತಾನೆ. ಭಕ್ತಿಯಿಂದ ಈ ಸೂರ್ಯನನ್ನು ಯಾರು ಪೂಜಿಸುವರೋ ಅವರು ಅತ್ಯಂತ ಪುಣ್ಯವಂತರೆನಿಸುವರು.

೩೭. ಅವರು ಈ ಲೋಕದಲ್ಲಿ ಸಮಸ್ತ ಇಷ್ಟಗಳನ್ನೂ ಪಡೆದು ಅನಂತರ ಮನುಲೋಕವನ್ನು ಸೇರುತ್ತಾರೆ. ಈ ಸೂರ್ಯನ ಅನುಗ್ರಹವನ್ನು ಸಂಪಾದಿಸಿದ ಬ್ರಾಹ್ಮಣರಿಗೆ ದೇವತೇಜಸ್ಸಿಗೆ ಸದೃಶವಾದ ತೇಜಸ್ಸು ಲಭಿಸುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ಸೂರ್ಯಮಹಾತ್ಮೆಯ ವರ್ಣನವೆಂಬ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಾಶತ್ತಮೋಽಧ್ಯಾಯಃ

---

॥ ವಾಸುದೇವ ಉವಾಚ ॥

ನೈಮಿತ್ತಿಕಂ ತತೋ ವಕ್ಷ್ಯೇ ಯಜ್ಜ್ಞಾತ್ವಾ ಚ ಸಮಾಸತಃ ।
ಸಪ್ತಮ್ಯಾಂ ಗ್ರಹಣೇ ಚೈವ ಸಂಕ್ರಾಂತಿಷು ವಿಶೇಷತಃ ॥ ೧ ॥

ಶುಕ್ಲ ಪಕ್ಷಸ್ಯ ಸಪ್ತಮ್ಯಾಂ ಹವಿರ್ಭುಕ್ತ್ವೈಕದಾ ದಿವಾ ।
ಸಮ್ಯಗಾಚಮ್ಯ ಸಂಧ್ಯಾಯಾಂ ವಾರುಣಂ ಪ್ರಣಿಪತ್ಯ ಚ ॥ ೨ ॥

---

## ಐವತ್ತನೆಯ ಅಧ್ಯಾಯವು

೧. ವಾಸುದೇವನು ಹೇಳುತ್ತಾನೆ—ನಿತ್ಯವೂ ಮಾಡದೆ ಆಗಾಗ್ಗೆ ನೈಮಿತ್ತಿಕವಾಗಿ ಮಾಡಬೇಕಾದ ಸೂರ್ಯಾರಾಧನ ಕ್ರಮವನ್ನು ಹೇಳುತ್ತೇನೆ. ಅವನ್ನು ಸಂಕ್ಷೇಪವಾಗಿ ತಿಳಿದುಕೋ, ಸಪ್ತಮಿ, ಗ್ರಹಣಕಾಲ, ಸಂಕ್ರಮಣ, ಇಂತಹ ದಿನಗಳಲ್ಲಿ ಮಾಡುವ ಸೂರ್ಯಾರಾಧನೆಯು ನೈಮಿತ್ತಿಕವೆನಿಸುವುದು.

೨. ಶುಕ್ಲಪಕ್ಷದ ಸಪ್ತಮಿಯಲ್ಲಿ ಹಗಲು ಒಪ್ಪೊತ್ತು ಹವಿಷ್ಯಾನ್ನವನ್ನು ಭೋಜನಮಾಡಿ ಆಚಮನಮಾಡಿ ಸಂಧ್ಯಾಕಾಲದಲ್ಲಿ ಪಶ್ಚಿಮದಿಕ್ಕಿನಲ್ಲಿರುವ ಸೂರ್ಯನಿಗೆ ನಮಸ್ಕಾರಮಾಡಿ ಜಿತೇಂದ್ರಿಯನಾಗಿ ಸೂರ್ಯನನ್ನು ಧ್ಯಾನಿಸಬೇಕು.

ಇಂದ್ರಿಯಾಣಿ ಚ ಸಂಯಮ್ಯ ಕೃತಂ ಧ್ಯಾತ್ವಾ ಸ್ವಪೇದಧಃ ।
ದರ್ಭಶಯ್ಯಾಗತೋರಾತ್ರೌ ಪ್ರಾತಃ ಸ್ನಾತಃ ಸು ಸಂಯತಃ ॥ ೩ ॥

ತತಃ ಸಂಧ್ಯಾಮುಪಾಸ್ಯಾಥ ಪೂರ್ವೋಕ್ತಂ ಚ ಮನುಂ ಜಪೇತ್ ।
ಜುಹುಯಾಚ್ಚ ತದಾ ವಹ್ನಿಂ ಸೂರ್ಯಾಗ್ನೀ ಪರಿಕಲ್ಪ್ಯ ಚ ॥ ೪ ॥

ಸೂರ್ಯಾಗ್ನಿ ಕರಣಂ ವಕ್ಷ್ಯೇ ತರ್ಪಣಂ ಚ ಸಮಾಸತಃ ।
ಅರ್ಚನಾಗಾರಮುಲ್ಲಿಖ್ಯ ಪ್ರವಿಶ್ಯಾ ಚ್ಛೈರ್ಜನೈರ್ಜನಂ ॥ ೫ ॥

ಪ್ರಕ್ಷಿಪ್ಯಾಸ್ತೀರ್ಯ ದರ್ಭೈಶ್ಚ ಪಾತ್ರಾಣ್ಯಾಸಾದ್ಯ ಚ ಕ್ರಮಾತ್ ।
ಪವಿತ್ರಂ ದ್ವಿಕುಶಂ ಕೃತ್ವಾ ಸಾಗ್ರಂ ಪ್ರಾದೇಶಸಂಮಿತಂ ॥ ೬ ॥

ತೇನ ಪಾತ್ರಾಣಿ ಸಂಪ್ರೋಕ್ಷ್ಯ ಸಂಶೋಧ್ಯಾಥ ವಿಲೋಕ್ಯ ಚ ।
ಉದಗಗ್ರೇ ಸ್ಥಿತೇ ಪಾತ್ರೇ ಪ್ರಜ್ವಾಲ್ಯಾಥೋಲ್ಮುಕೇನ ಚ ॥ ೭ ॥

---

೩. ಹೀಗೆ ಧ್ಯಾನಿಸುತ್ತಾ ನೆಲದಮೇಲೆ ದರ್ಭೆಯನ್ನು ಹರಡಿ ಅದರಮೇಲೆ ಮಲಗಿಕೊಳ್ಳಬೇಕು. ಈರೀತಿ ರಾತ್ರಿಯನ್ನು ಕಳೆದು ಪ್ರಾತಃಕಾಲದಲ್ಲಿ ಸ್ನಾನಮಾಡಿ ನಿಯಮಯುಕ್ತನಾಗಿ ವರ್ತಿಸಬೇಕು.

೪. ಪ್ರಾತಃ ಸಂಧ್ಯಾವಂದನೆಮಾಡಿ ಪೂರ್ವೋಕ್ತ ಮಂತ್ರವನ್ನು ಜಪಿಸಬೇಕು ಮತ್ತು ಅಗ್ನಿಪ್ರತಿಷ್ಠಾಪನೆಮಾಡಿ ಅಗ್ನಿಯಲ್ಲಿ ಸೂರ್ಯನನ್ನು ಕಲ್ಪಿಸಿಕೊಂಡು, ಹೋಮ ಮಾಡಬೇಕು.

೫-೭. ಸೂರ್ಯಾಗ್ನಿಯನ್ನು ಮಾಡಿಕೊಳ್ಳುವ ವಿಧಾನವನ್ನೂ ಸೂರ್ಯತರ್ಪಣ ವಿಧಾನವನ್ನೂ ಸಂಕ್ಷೇಪವಾಗಿ ಹೇಳುತ್ತೇನೆ. ಅಗ್ನಿಪ್ರತಿಷ್ಠಾಪನ ಮಾಡಬೇಕಾದ ಸ್ಥಾನವನ್ನು (ಸ್ಥಂಡಿಲವನ್ನು) ಉಲ್ಲೇಖಮಾಡಿ ಆ ಸ್ಥಂಡಿಲದ ಹಿಂದುಗಡೆ ದರ್ಭೆಯನ್ನು ಹರಡಿ ಅಜಿನವನ್ನು ಹಾಸಿ ಅದರಮೇಲೆ ಕುಳಿತುಕೊಳ್ಳಬೇಕು. ಬಳಿಕ ಪಾತ್ರಾಸಾಧನೆಯನ್ನು ಮಾಡಬೇಕು ಸಮವಾಗಿಯೂ, ಅಗ್ರಸಹಿತವಾಗಿಯೂ, ಚೋಟುದ್ದದ ಎರಡು ದರ್ಭೆಯಲ್ಲಿ ಪವಿತ್ರವನ್ನು ಕಟ್ಟಿ ಪ್ರೋಕ್ಷಣ ಪಾತ್ರೆಯಲ್ಲಿ ಇಟ್ಟು ಅದಕ್ಕೆ ನೀರುಹಾಕಿ ಆ ನೀರಿನಲ್ಲಿ ಪವಿತ್ರವನ್ನು ಅದ್ದಿ ಪಾತ್ರೆಗಳ ಮೇಲೆಲ್ಲಾ ಪ್ರೋಕ್ಷಿಸಿ, ಆಜ್ಯಪಾತ್ರವನ್ನು ಸಂಸ್ಕರಿಸುವಾಗ ಆ ಪವಿತ್ರವನ್ನೇ ಆಜ್ಯಪಾತ್ರೆಯಮೇಲೆ ಇಟ್ಟು ಆಜ್ಯಕ್ಷೇಪಣಮಾಡಿ ಆಜ್ಯೋತ್ಪವನ (ಆಜ್ಯಶೋಧ) ಮಾಡಿ ಮುಖದವರೆಗೆ ಎತ್ತಿ

**ಪರ್ಯಗ್ನಿಕರಣಂ ಕೃತ್ವಾ ತಥಾಜ್ಯೋತ್ಪವನಂ ತ್ರಿಧಾ ।**
**ಪರಿಮೃಜ್ಯ ಸ್ರುವಾದೀಂಶ್ಚ ದರ್ಭೈಃ ಸಂಪ್ರೋಕ್ಷಯೇತ್ತತಃ ॥ ೮ ॥**

**ಅಭೂಮೌ ಸ್ಥಿತಪಾತ್ರೇಣ ವಿಷ್ಟರೇಣ ತು ಪಾಣಿನಾ ।**
**ದಾನೇನ ಯದುಶಾರ್ದೂಲ ನಾಂತರಿಕ್ಷೇ ಸ್ಥಲೇ ಕ್ವಚಿತ್ ॥ ೯ ॥**

**ದಕ್ಷಿಣೇನ ಸ್ರುವಂ ಗೃಹ್ಯ ಜುಹುಯಾತ್ಪಾವಕಂ ಬುಧಃ ।**
**ಹೃದಯೇನ ಕ್ರಿಯಾಃ ಸರ್ವಾಃ ಕರ್ತವ್ಯಾಃ ಪೂರ್ವಚೋದಿತಾಃ ॥ ೧೦ ॥**

**ಅರ್ಕಾದಾರಭ್ಯ ಸಂಜ್ಞಾರ್ಥಂ ದದ್ಯಾತ್ತೂಷ್ಣೀಂ ಹುತಿಂ ಸ್ಥಿತಃ ।**
**ವರುಣಾಯ ಶತೈರ್ಮಾಘೇ ಸಪ್ತಮ್ಯಾಂ ವರುಣಂ ಯಜೇತ್ ॥ ೧೧ ॥**

---

ಹಿಡಿದು ಪಾತ್ರೆಯಲ್ಲಿ ಇರುವ ತುಪ್ಪವನ್ನು ನೋಡಿ ಪವಿತ್ರಾಗ್ರವು ಉತ್ತರದಿಕ್ಕಿಗೆ ಬರುವಂತೆ ಪಾತ್ರೆಯನ್ನು ಹಿಡಿದು ಅನಂತರ ಜ್ವಲಿಸುವ ದರ್ಭೆಯಿಂದ ಬಳಸಬೇಕು.

೮. ಆಜ್ಯವನ್ನು ಮೂರುಸಲ ಉತ್ಪವನಮಾಡಿ (ಶೋಧಿಸಿ) ಸ್ರುಕ್, ಸ್ರುವ ಇವನ್ನು ದರ್ಭೆಯಿಂದ ಸಂಮಾರ್ಜನೆಮಾಡಿ ನೀರನ್ನು ಪ್ರೋಕ್ಷಿಸಿ ಆ ದರ್ಭೆಗಳನ್ನೂ ಅಗ್ನಿಗೆ ಹಾಕಬೇಕು. ಅನಂತರ ಅರ್ಕಸಮಿತ್ತನ್ನೂ ಹೀಗೆಯೇ ಸಂಸ್ಕರಿಸಬೇಕು.

೯. ಅಯ್ಯಾ ಯದುಶ್ರೇಷ್ಠನೇ ! ಆಜ್ಯಪಾತ್ರೆಯನ್ನು ನೆಲದಲ್ಲಿ ಹರಡಿದ ದರ್ಭೆಯಮೇಲೆ (ಭೂಮಿಗೆ ಸೋಕದಂತೆ) ಇಟ್ಟು ಎಡಗೈಯಲ್ಲಿ ಹಿಡಿದ ದರ್ಭೆಗಳಿಂದ ಆಜ್ಯಪಾತ್ರೆಯನ್ನು ಸ್ಪರ್ಶಮಾಡಿಕೊಳ್ಳಬೇಕು.

೧೦. ಬಲಗೈಯಲ್ಲಿ ಸ್ರುವವನ್ನು ಹಿಡಿದು ಅಗ್ನಿಯಲ್ಲಿ ಹೋಮಮಾಡಬೇಕು. ಹಿಂದೆ ಹೇಳಿದ ಈ ಕೆಲಸಗಳನ್ನು ಮಾಡುವಾಗ ಹೃದಯದಲ್ಲಿ ಮಂತ್ರದ ಅರ್ಥಾನುಸಂಧಾನವನ್ನು ಚೆನ್ನಾಗಿ ಮಾಡಬೇಕು.

೧೧. ಅರ್ಕನನ್ನು ಮನಸ್ಸಿನಲ್ಲಿ ಉದ್ದೇಶಮಾಡಿಕೊಂಡು ಬಾಯಲ್ಲಿ ಮಂತ್ರವನ್ನು ಹೇಳದೆ ಮೌನದಿಂದ ಹೋಮವನ್ನು ಮಾಡಬೇಕು. ಮಾಘಮಾಸದ ಸಪ್ತಮಿಯಲ್ಲಿ "ವರುಣಾಯ ಸ್ವಾಹಾ" ಎಂಬ ಮಂತ್ರದಿಂದ ನೂರು ಆವೃತ್ತಿ ಹೋಮದ್ರವ್ಯಗಳಿಂದ ಹೋಮಮಾಡಿ ವರುಣ ಸಂಜ್ಞಕವಾದ ಸೂರ್ಯನನ್ನು ಪೂಜಿಸಬೇಕು.

ಯಥಾಶಕ್ತ್ಯಾ ತು ವಿಪ್ರೇಭ್ಯಃ ಪ್ರದದ್ಯಾತ್ ಖಂಡವೇಷ್ಟಕಾನ್ ।
ದದ್ಯಾಚ್ಚ ದಕ್ಷಿಣಾಂ ಶಕ್ತ್ಯಾ ಪ್ರಾಪ್ನುತೇ ಯಾಚಿತಂ ಫಲಂ ॥ ೧೨ ॥

ಏವಂ ವೈ ಫಾಲ್ಗುನೇ ಸೂರ್ಯಂ ಚೈತ್ರೇ ವೈಶಾಖ ಏವ ಚ ।
ವೈಶಾಖೇ ಮಾಸಿ ಧಾತಾರಂ ಇಂದ್ರಂ ಜ್ಯೇಷ್ಠೇ ಯಜೇದ್ರವಿಂ ॥ ೧೩ ॥

ಆಷಾಢೇ ಶ್ರಾವಣೇ ಮಾಸಿ ಭರ್ಗಂ ಭಾದ್ರಪದೇ ಯಮಂ ।
ತಥಾಶ್ವಯುಜಿ ಪರ್ಜನ್ಯಂ ತ್ವಷ್ಟಾರಂ ಕಾರ್ತಿಕೇ ಯಜೇತ್ ॥ ೧೪ ॥

ಮಾರ್ಗಶೀರ್ಷೇ ಚ ಮಿತ್ರಂ ಚ ಪೌಷೇ ವಿಷ್ಣುಂ ಯಜೇದ್ವಧಿ ।
ಸಂವತ್ಸರೇಣ ಯತ್ಪ್ರೋಕ್ತಂ ಫಲಮಿಷ್ಟಂ ದಿನೇ ದಿನೇ ।
ತತ್ಸರ್ವಮಾಪ್ನುಯಾತ್ ಕ್ಷಿಪ್ರಂ ಭಕ್ತ್ಯಾ ಶ್ರದ್ಧಾನ್ವಿತೋ ವ್ರತೀ ॥ ೧೫ ॥

---

೧೨. ತನ್ನ ಶಕ್ತಿಗನುಸಾರವಾಗಿ ಬ್ರಾಹ್ಮಣರಿಗೆ ಕರಿಗಡುಬುಗಳನ್ನೂ ದಕ್ಷಿಣೆಗಳನ್ನೂ ಕೊಡಬೇಕು. ಹೀಗೆಮಾಡಿದರೆ ತಾನು ಇಷ್ಟಪಟ್ಟ ಫಲವನ್ನು ಹೊಂದುತ್ತಾನೆ.

೧೩. ಇದೇರೀತಿ ಫಾಲ್ಗುನ, ಚೈತ್ರ, ವೈಶಾಖ ಈ ಮೂರು ಮಾಸಗಳಲ್ಲಿ ಯೂ ಪೂಜಿಸುವಾಗ ಫಾಲ್ಗುನದಲ್ಲಿ ಸೂರ್ಯಸಂಜ್ಞೆಯಿಂದಲೂ, ಚೈತ್ರ ವೈಶಾಖಗಳಲ್ಲಿ ಧಾತೃಸಂಜ್ಞೆಯಿಂದಲೂ, ಜ್ಯೇಷ್ಠಮಾಸದಲ್ಲಿ ಇಂದ್ರಸಂಜ್ಞೆಯಿಂದಲೂ, ಹೋಮ ಮಾಡಬೇಕು.

೧೪. ಆಷಾಢ ಶ್ರಾವಣಗಳಲ್ಲಿ ಭರ್ಗಸಂಜ್ಞೆಯಿಂದಲೂ, ಭಾದ್ರಪದ ಮಾಸದಲ್ಲಿ ಯಮ ಸಂಜ್ಞೆಯಿಂದಲೂ, ಅಶ್ವಯುಜಮಾಸದಲ್ಲಿ ಪರ್ಜನ್ಯ ಸಂಜ್ಞೆಯಿಂದಲೂ ಕಾರ್ತಿಕಮಾಸದಲ್ಲಿ ತ್ವಷ್ಟೃಸಂಜ್ಞೆಯಿಂದಲೂ ಹೋಮಮಾಡಬೇಕು.

೧೫. ಮಾರ್ಗಶಿರಮಾಸದಲ್ಲಿ ಮಿತ್ರ ಸಂಜ್ಞೆಯಿಂದಲೂ, ಪುಷ್ಯಮಾಸದಲ್ಲಿ ವಿಷ್ಣು ಸಂಜ್ಞೆಯಿಂದಲೂ ಈರೀತಿ ಹನ್ನೆರಡು ತಿಂಗಳಲ್ಲೂ ಸೂರ್ಯಪ್ರೀತ್ಯರ್ಥವಾಗಿ ಹೋಮ ಮಾಡಿದ್ದೇ ಆದರೆ ಭಕ್ತಿಶ್ರದ್ಧೆಗಳಿಂದ ಕೂಡಿದ ಇತರ ವ್ರತವನ್ನು ಒಂದು ಸಂವತ್ಸರ ಕಾಲ ಆಚರಿಸಿದರೆ ಲಭಿಸಬಹುದಾದ ಫಲವನ್ನು ಒಂದೊಂದುದಿನ ಈವ್ರತ ಮಾಡಿದರೂ ಜಾಗ್ರತೆಯಾಗಿ ಹೊಂದುತ್ತಾನೆ.

**ಏವಂ ಸಂವತ್ಸರೇ ಪೂರ್ಣೇ ಕೃತ್ವಾ ವೈ ಕಾಂಚನಂ ರಥಂ ।**
**ಸಪ್ತಭಿರ್ವಾಜಿಭಿರ್ಯುಕ್ತಂ ನಾನಾರತ್ನೋಪಶೋಭಿತಂ ॥ ೧೬ ॥**

**ಆದಿತ್ಯಪ್ರತಿಮಾಂ ಮಧ್ಯೇ ಶುದ್ಧಹೇಮ್ನಾ ಕೃತಾಂ ಶುಭಾಂ ।**
**ರತ್ನೈರಲಂಕೃತಾಂ ಕೃತ್ವಾ ಹೇಮಪದ್ಮೋಪರಿಸ್ಥಿತಾಂ ॥ ೧೭ ॥**

**ತಸ್ಮಿನ್ ರಥವರೇ ಕೃತ್ವಾ ಸಾರಥಿಂ ಚಾಗ್ರತಃ ಸ್ಥಿತಂ ।**
**ವೃತಂ ದ್ವಾದಶಭಿರ್ವಿಪ್ರೈಃ ಕ್ರಮಾನ್ಮಾಸಾಧಿಪಾತ್ಮಭಿಃ ॥ ೧೮ ॥**

**ಮಧ್ಯೇ ಕೃತ್ವಾ ಸ್ವಮಾಚಾರ್ಯಂ ಪೂಜಯಿತ್ವಾ ಯಥಾಶ್ರುತಿ ।**
**ಸಂಚಿಂತ್ಯಾದಿತ್ಯರೂಪಂ ವೈ ವಸ್ತ್ರರತ್ನಾದಿನಾರ್ಹಯೇತ್ ॥ ೧೯ ॥**

**ಏವಂ ಮಾಸಾಧಿಪಾನ್ ವಿಪ್ರಾನ್ ಸಂಪೂಜ್ಯಾಥ ನಿವೇದಯೇತ್ ।**
**ಆಚಾರ್ಯಾಯ ರಥಂ ಛತ್ರಂ ಗ್ರಾಮಂ ಗಾಶ್ಚ ಮಹೀಂ ಶುಭಾಂ ॥ ೨೦ ॥**

**ಅಶ್ವಾನ್ ಮಾಸಾಧಿಪೇಭ್ಯಸ್ತು ದ್ವಾದಶಭ್ಯೋ ನಿವೇದಯೇತ್ ।**
**ಏವಂ ಭಕ್ತ್ಯಾ ಯಥಾಶಕ್ತಿ ಹೇಮರತ್ನಾದಿ ಭೂಷಣಂ ॥ ೨೧ ॥**

---

೧೬-೧೯. ಹೀಗೆ ಒಂದುವರ್ಷ ತುಂಬಿದಮೇಲೆ ಚಿನ್ನದಿಂದ ರಥವನ್ನು ಮಾಡಿಸಬೇಕು. ಅದಕ್ಕೆ ಏಳು ಕುದುರೆಗಳು ಸಹಿತವಾಗಿರುವಂತೆಯೂ, ನಾನಾ ರತ್ನಗಳಿಂದ ಶೋಭಿತವಾಗಿರುವಂತೆಯೂ, ಮಾಡಬೇಕು. ಚಿನ್ನದಿಂದಮಾಡಿದ ಸೂರ್ಯ ಮಂಡಲವನ್ನು ರತ್ನಗಳಿಂದ ಅಲಂಕರಿಸಿ, ರಥಸ್ಥವಾದ ಸುವರ್ಣ ಕಮಲದಮೇಲೆ ಇಡಬೇಕು. ಮುಂದುಗಡೆ ಸಾರಥಿಯನ್ನು ಇರಿಸಿ, ಹನ್ನೆರಡು ತಿಂಗಳಿಗೂ ಅಭಿಮಾನ ದೇವತಾ ಸ್ವರೂಪರಾದ ಹನ್ನೆರಡು ಮಂದಿ ಬ್ರಾಹ್ಮಣರನ್ನು ಕೂಡಿಸಿ, ಈ ಬ್ರಾಹ್ಮಣರ ಮಧ್ಯೆ ತನ್ನ ಆಚಾರ್ಯನನ್ನು ವೇದೋಕ್ತ ಕ್ರಮದಿಂದ ಪೂಜಿಸುವವನಾಗಿ ಆಚಾರ್ಯನನ್ನೇ ಆದಿತ್ಯಸ್ವರೂಪನೆಂದು ಭಾವಿಸಿ, ವಸ್ತ್ರರತ್ನಾದಿಗಳಿನ್ನು ಅರ್ಪಿಸಿ ಪೂಜಿಸಬೇಕು.

೨೦. ಮಾಸಾಭಿಮಾನ ದೇವತಾ ಸ್ವರೂಪರಾದ ಹನ್ನೆರಡುಮಂದಿ ಬ್ರಾಹ್ಮಣರನ್ನು ಪೂಜಿಸಬೇಕು. ಆಚಾರ್ಯನಿಗೆ ರಥವನ್ನೂ, ಛತ್ರಿಯನ್ನೂ, ಜೋಡೀಗ್ರಾಮವನ್ನೂ, ಗೋವುಗಳನ್ನೂ, ಫಲವತ್ತಾದ ಭೂಮಿಗಳನ್ನೂ ದಾನಮಾಡಬೇಕು.

೨೧. ಮಾಸಾಭಿಮಾನದೇವತಾ ಸ್ವರೂಪರಾದ ವಿಪ್ರರಿಗೆಲ್ಲಾ ಕುದುರೆಗಳನ್ನು ದಾನಮಾಡಬೇಕು. ಈರೀತಿ ಶಕ್ತ್ಯನುಸಾರವಾದ ಭಕ್ತಿಯಿಂದ ಸುವರ್ಣ ರತ್ನಯುಕ್ತವಾದ ಆಭರಣಗಳನ್ನು ಕೊಡಬೇಕು.

ದತ್ವಾ ತಸ್ಯ ನಮಸ್ಕೃತ್ಯ ವ್ರತಂ ಪೂರ್ಣಂ ತು ವಾಚಯೇತ್ ।
ಅತ ಊರ್ಧ್ವಂ ನ ದೋಷೋsತ್ರ ವ್ರತಸ್ಯಾಕರಣೇಷ್ವಪಿ ॥ ೨೨ ॥

ಏವಮಸ್ತ್ವಿತಿ ವಿಪ್ರೇಂದ್ರೈಃ ಸಹಾಚಾರ್ಯಃ ಪುನಃ ಪುನಃ ।
ಬಹ್ವೀಶ್ಚೈವಾಶಿಷೋ ದತ್ವಾ ಪ್ರವದೇತ್ ಪ್ರೀಯತಾಂ ರವಿಃ ॥ ೨೩ ॥

ಆದಿತ್ಯೋ ಯೇನ ಕಾಮೇನ ತ್ವಯಾ ಆರಾಧಿತೋ ವ್ರತೈಃ ।
ತುಭ್ಯಂ ದದಾತು ತಂ ಕಾಮಂ ಸಂಪೂರ್ಣಂ ಭವತು ವ್ರತಂ ॥ ೨೪ ॥

ಆಚಾರ್ಯ ವಿಪ್ರರೂಪೈಸ್ತು ಪ್ರವಿಷ್ಟೋ ಭಾಸ್ಕರಃ ಸ್ವಯಂ ।
ದಾಸ್ಯತ್ಯೇವ ವರಂ ಕರ್ತುಃ ಇತ್ಯುಕ್ತಂ ಭಾನುನಾ ಸ್ವಯಂ ॥ ೨೫ ॥

---

೨೨. ಬಳಿಕ ನಮಸ್ಕಾರಮಾಡಿ ಆಚರಣಮಾಡಿದ ವ್ರತವು ಸಂಪೂರ್ಣವಾಗಿ ಸಮಗ್ರ ಫಲದಾಯಕವಾಯಿತೆಂದು ಅವರಿಂದ ಹೇಳಿಸಬೇಕು. ಅಲ್ಲಿಂದ ಮುಂದೆ ವ್ರತಮಾಡದೆ ಬಿಟ್ಟರೂ ದೋಷವಿಲ್ಲವೆಂದೂ ಅವರಿಂದ ಹೇಳಿಸಬೇಕು.

೨೩. ಹೀಗೆಯೇ ಆಗಲಿ ಎಂಬದಾಗಿ ಹನ್ನೆರಡುಮಂದಿ ವಿಪ್ರರಿಂದ ಸಹಿತನಾದ ಆಚಾರ್ಯನು ಪುನಃ ಪುನಃ ಹೇಳಿ ಅನೇಕಸಲ ಆಶೀರ್ವಾದಗಳನ್ನು ಮಾಡಿ ಸೂರ್ಯದೇವನು ನಿನಗೆ ಸುಪ್ರೀತನಾಗಲಿ ಎಂದು ಹೇಳಬೇಕು.

೨೪. ಮತ್ತು ನೀನು ಯಾವ ಅಭೀಷ್ಟಸಿದ್ಧಿಗಾಗಿ ನಿಯಮವಿಶಿಷ್ಟನಾಗಿ ಈ ಸೂರ್ಯಾರಾಧನೆ ಮಾಡಿದೆಯೋ, ಆ ನಿನ್ನ ಇಚ್ಛೆಯನ್ನು ಸೂರ್ಯನು ಪೂರ್ಣ ಮಾಡಲಿ. ನಿನ್ನ ವ್ರತವು ಸಂಪೂರ್ಣ ಸಮಗ್ರಸಫಲಾವಾಪ್ತಿಯಾಗಲಿ ಎಂದು ಹೇಳಬೇಕು.

೨೫. ಆಚಾರ್ಯ ಮತ್ತು ಹನ್ನೆರಡುಮಂದಿ ಬ್ರಾಹ್ಮಣ ಸ್ವರೂಪದಿಂದ ಸೂರ್ಯನು ಸಾಕ್ಷಾತ್ತಾಗಿ ಆ ಸ್ಥಳಕ್ಕೆ ಬಂದು ಕರ್ತೃವಿಗೆ ವರವನ್ನು ಕೊಟ್ಟೇಕೊಡುವನೆಂದು ಸೂರ್ಯನೇ ಹೇಳಿದ್ದಾನೆ.

ವಿಪ್ರೇಭ್ಯೋ ಗುಣವದ್ಭ್ಯಶ್ಚ ನಿಸ್ವೇಭ್ಯಶ್ಚ ವಿಶೇಷತಃ ।
ದೀನಾಂಧಃಕೃಪಣೇಭ್ಯಶ್ಚ ಶಕ್ತ್ಯಾ ದತ್ವಾ ಚ ದಕ್ಷಿಣಾಂ ।
ಬ್ರಾಹ್ಮಣಾನ್ ಭೋಜಯಿತ್ವಾ ಚ ವ್ರತಮೇತತ್ಸಮಾಪಯೇತ್ ॥ ೨೬ ॥

ಕೃತ್ವೈಮಂ ಸಪ್ತಮೀಮಬ್ದಂ ರಾಜಾ ಭವತಿ ಧಾರ್ಮಿಕಃ ।
ಪುರುಷಃ ಸ್ತ್ರೀ ಭವೇದ್ರಾಜ್ಞಾಂ ತಾದೃಶಾಮಥ ವಲ್ಲಭಾ ॥ ೨೭ ॥

ಶತಯೋಜನ ವಿಸ್ತೀರ್ಣಂ ನಿಸ್ಸಪತ್ನಮಕಂಟಕಂ ।
ನಿಷ್ಪನ್ನಮಂಡಲಂ ಭುಂಕ್ತೇ ಸಾಗ್ರಂ ವರ್ಷಶತಂ ಸುಖೀ ॥ ೨೮ ॥

ವಿತ್ತಹೀನೋಽಪಿ ಯೋ ಭಕ್ತ್ಯಾ ಕೃತ್ವಾ ತಾಮ್ರಮಯಂ ರಥಂ ।
ದದ್ಯಾದ್ವ್ರತಾವಸಾನೇ ತು ಕೃತ್ವಾ ಸರ್ವಂ ಯಥೋದಿತಂ ।
ಸೋಽಶೀತಿಯೋಜನಂ ಭುಂಕ್ತೇ ವಿಸ್ತೀರ್ಣಂ ಮಂಡಲಂ ನೃಪ ॥ ೨೯ ॥

---

೨೬. ಗುಣವಂತರಾದ ಬ್ರಾಹ್ಮಣರಿಗೂ, ಏನೂಗತಿಇಲ್ಲದ ಬಹುಬಡವರಿಗೂ ದೀನರು, ಕುರುಡರು, ಮುಂತಾದವರಿಗೂ ಶಕ್ತ್ಯನುಸಾರ ದಕ್ಷಿಣೆಯನ್ನು ಕೊಟ್ಟು ಬ್ರಾಹ್ಮಣರಿಗೆ ಭೋಜನಮಾಡಿಸಿ ವ್ರತವನ್ನು ಮುಗಿಸಬೇಕು.

೨೭. ಈಪ್ರಕಾರ ಒಂದುವರ್ಷಕಾಲ ಬಿಡದೇಮಾಡುವ ಪುರುಷನು ಧರ್ಮಿಷ್ಠನಾದ ರಾಜನಾಗುತ್ತಾನೆ. ಒಂದುವರ್ಷ ಅವಿಚ್ಛಿನ್ನವಾಗಿ ಈ ವ್ರತಮಾಡಿದ ಸ್ತ್ರೀಯು ಅಂಥ ರಾಜನಿಗೆ ಪತ್ನಿಯಾಗುತ್ತಾಳೆ.

೨೮. ಆ ರಾಜನು ನೂರಾರು ಯೋಜನ ವಿಸ್ತಾರವೂ, ಶತ್ರುರಹಿತವೂ ಯಾವ ತೊಂದರೆ ಇಲ್ಲದುದೂ ಆದ ರಾಜ್ಯವನ್ನು ಸುಖವಾಗಿ ನೂರುವರ್ಷಗಳವರೆಗೂ ಅನುಭವಿಸುತ್ತಾನೆ.

೨೯. ಚಿನ್ನದ ರಥವನ್ನು ಮಾಡಿಸಲು ಶಕ್ತಿ ಇಲ್ಲದವನು ತಾಮ್ರದ ರಥವನ್ನಾದರೂ, ಮಾಡಿ ಹಿಂದೆ ಹೇಳಿದ ಕ್ರಮದಿಂದ ಎಲ್ಲವನ್ನೂ ನಡೆಸಿದರೆ ಎಂಭತ್ತು ಗಾವುದ ವಿಸ್ತಾರದ ಭೂಮಂಡಲಕ್ಕೆ ರಾಜನಾಗುತ್ತಾನೆ.

ಏವಂ ಪಿಷ್ಟಮಯಂ ಯೋऽಪಿ ವಿತ್ತಹೀನಃ ಕರೋತಿ ನಾ ।
ಆಷಷ್ಟಿಯೋಜನಂ ಭುಂಕ್ತೇ ದೀರ್ಘಾಯುರ್ನೀರುಜಃ ಸುಖೀ ।
ಸೂರ್ಯಲೋಕೇ ಚ ಕಲ್ಪಾಂತಂ ಯಾವತ್ ಸ್ಥಿತ್ವೇದಮಾಪ್ನುಯಾತ್ ॥೩೦॥

ಮನಸಾಪಿ ಹಿ ಯೋ ಭಕ್ತ್ಯಾ ಯಜೇದರ್ಕಮತಂದ್ರಿತಃ ।
ಸರ್ವಾವಸ್ಥಾಸು ಸೋऽಪ್ಯತ್ರ ವ್ಯಾಧಿಭಿರ್ಮುಚ್ಯತೇ ಭೃಶಂ ॥ ೩೧ ॥

ಆಪದೋ ನ ಸ್ಪೃಶಂತ್ಯೇನಂ ನೀಹಾರಾ ಇವ ಭಾಸ್ಕರಂ ।
ಕಿಂ ಪುನರ್ವ್ರತಸಂಪನ್ನಂ ಭಕ್ತಂ ಮಂತ್ರೈಶ್ಚ ರಕ್ಷಿತಂ ॥ ೩೨ ॥

ಯತ ಏವಂ ತತೋ ಜ್ಞಾತ್ವಾ ವಿಧಾನಂ ಕಲ್ಪಚೋದಿತಂ ।
ಸುಖೇನ ಫಲಸಿದ್ಧ್ಯರ್ಥಂ ಕುರ್ಯಾತ್ಸರ್ವಮಶೇಷತಃ ॥ ೩೩ ॥

---

೩೦. ಅಷ್ಟಕಷ್ಟ್ಮ ದ್ರವ್ಯಾನುಕೂಲ ಇಲ್ಲದವನು ಹಿಟ್ಟಿನಿಂದ ರಥವನ್ನು ಮಾಡಿ ಮೇಲೆ ಹೇಳಿದ ಕ್ರಮದಿಂದ ಎಲ್ಲವನ್ನೂ ನಡೆಸಿದರೆ, ಅರವತ್ತುಗಾವುದ ವಿಸ್ತಾರದ ರಾಜ್ಯವನ್ನು ಅನುಭವಿಸುವುದಲ್ಲದೆ ಈ ವ್ರತಿಗಳಂತೆ ದೀರ್ಘಾಯುವೂ, ನೀರೋಗಿಯೂ, ಸುಖಿಯೂ, ಆಗುವನು. ಕಲ್ಪಾಂತದವರೆಗೆ ಈತನು ಸೂರ್ಯಲೋಕದಲ್ಲಿ ವಾಸಿಸುತ್ತಾ ಆಮೇಲೆ ಈ ಫಲಗಳನ್ನು ಹೊಂದುತ್ತಾನೆ.

೩೧. ಪ್ರತ್ಯಕ್ಷವಾಗಿ ಈ ಕಾರ್ಯಗಳನ್ನು ಮಾಡಲಾರದವನು ಮನಸ್ಸಿನಲ್ಲಿ ಮಾಡಿದಂತೆ ಭಾವಿಸಿಯಾದರೂ ಸೂರ್ಯನನ್ನು ಪೂಜಿಸುವನೋ ಅವನು ಸರ್ವಪ್ರಕಾರದಿಂದಲೂ ರೋಗರಹಿತನಾಗಿರುತ್ತಾನೆ.

೩೨. ಹಿಮವು ಸೂರ್ಯನನ್ನು ಕಂಡರೆ ಭೀತಿಪಡುವಂತೆ ವಿಪತ್ತುಗಳು ಇವನನ್ನು ಸೋಂಕುವುದಿಲ್ಲ (ಕಂಡು ಹೆದರುತ್ತವೆ) ಮನಸ್ಸಿನಲ್ಲಿ ಕಲ್ಪಿಸಿಕೊಂಡ ವ್ರತಿಗೇ ಇಷ್ಟು ಫಲವಾದಮೇಲೆ ಸಾಕ್ಷಾದ್ವ್ರತಮಾಡಿದವನೂ, ಭಕ್ತನೂ ಆಗಿ, ಋಚಾದಿ ಮಂತ್ರರಕ್ಷಿತನಾದ ಆ ಮನುಷ್ಯನನ್ನು ವಿಪತ್ತುಗಳು ಮುಟ್ಟುವುದೂ ಕೂಡ ಇಲ್ಲವೆಂದು ಬೇರೆ ಹೇಳಬೇಕೇ ? ಎಂದಿಗೂ ಮುಟ್ಟಲಾರವು.

೩೩. ಫಲಶ್ರುತಿಯು ಈರೀತಿ ಪ್ರಸಿದ್ಧವಾಗಿರುವುದರಿಂದ ಕಲ್ಪೋಕ್ತ ವಿಧಾನವನ್ನು ತಿಳಿದುಕೊಂಡು ಸ್ವಲ್ಪವೂ ಲೋಪವಿಲ್ಲದಂತೆ ಸಮಗ್ರವಾಗಿ ಆಚರಿಸಬೇಕು.

ಇತ್ಯೇತತ್ಕಥಿತಂ ಸಾಂಬ ಪುರಾ ಸೂರ್ಯೇಣ ಮೇ ಶುಭಂ ।
ಕಲ್ಪೋಽಯಂ' ಪ್ರಥಮೇ ಕಲ್ಪೇ ಸರ್ವದಾ ಗೋಪಿತೋ ಮಯಾ ॥ ೩೪ ॥

ಅನೇನ ವಿಧಿನಾ ವತ್ಸ ವಿಶುದ್ಧೇನಾಂತರಾತ್ಮನಾ ।
ಭಾನುಮಾರಾಧಯೇತ್ ಕ್ಷಿಪ್ರಂ ಯದೀಚ್ಛೇಃ ಫಲಮುತ್ತಮಂ ॥ ೩೫ ॥

ಮಯಾಽಸ್ಯೈವ ಪ್ರಸಾದೇನ ಪ್ರಾಪ್ತಾಃ ಪುತ್ರಾಃ ಸಹಸ್ರಶಃ ।
ಅಸುರಾ ನಿರ್ಜಿತಾಶ್ಚೈವ ಸುರಾಃ ಸರ್ವೇ ವಶೀಕೃತಾಃ ॥ ೩೬ ॥

ತ್ವಯಾಽಪ್ಯಯಂ ಗೋಪಿತವ್ಯಃ ಕಲ್ಪಃ ಸೂರ್ಯಸ್ಯ ಸಮ್ಮತಃ ।
ಪ್ರಸಾದಾದಸ್ಯ ಕಲ್ಪಸ್ಯ ಸದಾ ಸನ್ನಿಹಿತೋ ರವಿಃ
ಚಕ್ರೇಽಸ್ಮಿನ್ನಿರ್ಜಿತಾ ಯೇನ ಸುರಾಸುರ ನರೋರಗಾಃ । ॥ ೩೭ ॥

ಯದಿ ನಾಧಿಷ್ಠಿತಂ ಚಕ್ರಮಿದಂ ಸೂರ್ಯಾಂಶುಭಿಃ ಸ್ವಯಂ ।
ಸತತಂ ಸ್ಯಾತ್ ಪ್ರಭಾಯುಕ್ತಂ ಕಥಮಧ್ಯಾಹತಂ ಭವೇತ್ ॥ ೩೮ ॥

---

೩೪. ಅಯ್ಯಾ ಸಾಂಬನೇ! ಈ ಶುಭಕರವಾದ ವ್ರತಮಹಿಮೆಯನ್ನು ಸೂರ್ಯನು ನನಗೆ ಹೇಳಿದ್ದನು. ಇದು ಮೊದಲನೆಯ ಕಲ್ಪದಲ್ಲಿ ನಡೆದದ್ದು ಸರ್ವದಾ ನಾನು ಇದನ್ನು ರಕ್ಷಿಸಿಕೊಂಡಿದ್ದೇನೆ.

೩೫. ಮಗೂ! ಪರಿಶುದ್ಧವಾದ ಮನಸ್ಸಿನಿಂದ ಈ ಹೇಳಿದ ವಿಧಿಯನ್ನು ಅನುಸರಿಸಿ ಸೂರ್ಯನನ್ನು ಆರಾಧಿಸಬೇಕು. ಈಪ್ಸಿತ ಫಲವು ಕ್ಷಿಪ್ರದಲ್ಲಿಯೇ ಲಭ್ಯವಾಗಲಿ ಎಂಬ ಇಚ್ಛೆ ಇದ್ದರೆ ಕಲ್ಪೋಕ್ತ ಪ್ರಕಾರವಾಗಿ ಮಾಡಬೇಕು.

೩೬. ಇವನ ಅನುಗ್ರಹದಿಂದ ನನಗೆ ಸಾವಿರಾರು ಮಕ್ಕಳು ಜನಿಸಿದರು. ರಾಕ್ಷಸರನ್ನೆಲ್ಲಾ ಜಯಿಸಿದೆನು. ದೇವತೆಗಳೆಲ್ಲಾ ನನ್ನ ಅನುವರ್ತಿಗಳಾದರು.

೩೭. ಸರ್ವಸಂಮತವಾದ ಈ ಸೂರ್ಯಕಲ್ಪವನ್ನು ನೀನು ಅನರ್ಹರಿಗೆ ಹೇಳದೆ ರಕ್ಷಿಸಿ ಇಟ್ಟುಕೋ. ಈ ಕಲ್ಪದ ಪ್ರಭಾವದಿಂದ ಯಾವಾಗಲೂ ಸೂರ್ಯನು ಪ್ರತಿಗೆ ಸನ್ನಿಹಿತನಾಗಿ ಇರುತ್ತಾನೆ. ನನ್ನ ಚಕ್ರವು ಅವನ ಸಾನ್ನಿಧ್ಯವುಳ್ಳದಾದುದರಿಂದ ಸುರ, ಸುರ, ನರ, ಉರಗ ಮೊಂತಾದವರೆಲ್ಲಾ ಸೋತು ಹೋದರು.

೩೮. ಇದರಲ್ಲಿ ಸೂರ್ಯ ತೇಜಸ್ಸು ಸಾಕ್ಷಾತ್ತಾಗಿ ವ್ಯಾಪ್ತವಾಗದೇ ಹೋಗಿದ್ದರೆ ಇದಕ್ಕೆ ಇಷ್ಟು ಕಾಂತಿಯೆಲ್ಲಿ ಇರುತ್ತಿದ್ದಿತು?

ಅಹಮೇತಂ ಜಪೇನ್ನಿತ್ಯಂ ಯಜನ್ ಧ್ಯಾಯಂಶ್ಚ ಶಕ್ತಿತಃ ।
ಜಾತೋಽಸ್ಮಿ ಸರ್ವಕಾಮಾನಾಂ ಪೂಜ್ಯಃ ಶ್ರೇಷ್ಠಶ್ಚ ತೇಜಸಾ ॥ ೩೯ ॥

ತ್ವಮಪ್ಯೇತೈರೇವ ಮನಸಾ ವಾಚಾ ವಾ ಕರ್ಮಣಾಽಪಿವಾ ।
ಕುರು ಭಕ್ತಿಮನೇನೈವ ವಿಧಿನಾ ಫಲಸಿದ್ಧಯೇ ॥ ೪೦ ॥

ಶೃಣುಯಾದ್ಭಕ್ತಿಯುಕ್ತೋ ಯೋ ನರಃ ಶ್ರದ್ಧಾಸಮನ್ವಿತಃ ।
ವಿಧಾನಮಾದಿತಃ ಪುತ್ರ ಸಪ್ತಮೀಂ ಕುರುತೇ ಚ ಯಃ ॥ ೪೧ ॥

ಸೇಹ ಪ್ರಾಪ್ಯಾಽಖಿಲಂ ಕಾಮಮಾರೋಗ್ಯಂ ಚ ಜಯಂ ತಥಾ ।
ಭಾರ್ಗವ್ಯಾ ಪರಯಾ ಯುಕ್ತೋ ಗಚ್ಛೇದ್ವೈರೋಚನಂ ಸದಃ ॥ ೪೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ
ಕಲ್ಪೇ ಸಪ್ತಮೀ ಮಹಾತ್ಮ್ಯವರ್ಣನಂ ನಾಮ
ಪಂಚಾಶತ್ತಮೋಽಧ್ಯಾಯಃ.

---

೩೯. ನಾನು ಇದನ್ನು ನಿತ್ಯಪೂಜೆ, ಜಪ, ಇವುಗಳಿಂದ ಆರಾಧಿಸುತ್ತಾ ಶಕ್ತ್ಯನುಸಾರ ಧ್ಯಾನಿಸುತ್ತಾ ಇರುವುದರಿಂದ ನಾನು ನನ್ನ ಅಭೀಷ್ಟಗಳನ್ನೆಲ್ಲಾ ಪಡೆದು ತೇಜೋವಂತನೂ, ಪೂಜ್ಯನೂ, ಶ್ರೇಷ್ಠನೂ ಆಗಿದ್ದೇನೆ.

೪೦. ಅಯ್ಯಾ ಸಾಂಬನೇ! ಫಲಸಿದ್ಧಿಯಾಗಬೇಕಾದರೆ ನೀನೂ ತ್ರಿಕರಣ ಪೂರ್ವಕವಾಗಿ (ಎಂದರೆ ಶರೀರ, ಮನಸ್ಸು, ವಾಕ್ಕು ಇವುಗಳಿಂದ ಏಕಪ್ರಕಾರವಾಗಿರುವಂತೆ) ಈ ವಿಧವಾದ ಜ್ಞಾನ ಭಕ್ತಿಯುತನಾಗಿ ಪೂಜೆಮಾಡು.

೪೧. ಅಯ್ಯಾ ಪುತ್ರನೇ! ಯಾವನು ಭಕ್ತಿಶ್ರದ್ಧೆಗಳಿಂದ ಕೂಡಿ ಸಪ್ತಮೀ ವ್ರತವನ್ನು ಕೇಳುವನೋ ಯಾವನು ವಿಧಿವಿಧಾನದಿಂದ ಸಪ್ತಮೀ ವ್ರತವನ್ನು ಆಚರಿಸುವನೋ,

೪೨. ಅವನು ಇಹದಲ್ಲಿ ಸಮಸ್ತ ಅಭೀಷ್ಟಗಳನ್ನೂ, ಆರೋಗ್ಯವನ್ನೂ, ಜಯವನ್ನೂ ಪಡೆದು ಶ್ರೇಷ್ಠವಾದ ಸಂಪತ್ತಿನಿಂದ ಕೂಡಿದವನಾಗಿ ಸೂರ್ಯಲೋಕಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸಪ್ತಮೀ ಮಹಾತ್ಮೆಯ ವರ್ಣನೆಯೆಂಬ ಐವತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಪಂಚಾಶತ್ತಮೋಽಧ್ಯಾಯಃ

॥ ವಾಸುದೇವ ಉವಾಚ ॥

ಮಾಘಸ್ಯ ಶುಕ್ಲಪಕ್ಷೇ ತು ಪಂಚಮ್ಯಾಂ ಮತ್ಕುಲೋದ್ವಹ ।
ಏಕಭಕ್ತಂ ಸದಾ ಖ್ಯಾತಂ ಷಷ್ಠ್ಯಾಂ ನಕ್ತಮುದಾಹೃತಂ ॥ ೧ ॥

ಸಪ್ತಮ್ಯಾಮುಪವಾಸಂ ತು ಕೇಚಿದಿಚ್ಛಂತಿ ಸುವ್ರತ ।
ಷಷ್ಠ್ಯಾಂ ಕೇಚಿದ್ವದಂತೀಹ ಸಪ್ತಮ್ಯಾಂ ಪಾರಣಂ ಕಿಲ ॥ ೨ ॥

ಕೃತೋಪವಾಸಃ ಷಷ್ಠ್ಯಾಂ ತು ಪೂಜಯೇದ್ಭಾಸ್ಕರಂ ಬುಧಃ ।
ರಕ್ತಚಂದನಮಿಶ್ರೈಸ್ತು ಕರವೀರೈಶ್ಚ ಸುವ್ರತ ॥ ೩ ॥

---

## ಐವತ್ತೊಂದನೆಯ ಅಧ್ಯಾಯ

೧. ವಾಸುದೇವನು ಹೇಳುತ್ತಾನೆ—ಅಯ್ಯಾ ವತ್ಸನೇ ! ಮಾಘಶುದ್ಧ ಪಂಚಮಿಯದಿನ ಹಗಲು ಒಪ್ಪೊತ್ತು ಊಟಮಾಡಿ, ರಾತ್ರಿಉಪವಾಸ, ಷಷ್ಠಿಯದಿನ ಹಗಲು ಉಪವಾಸ, ರಾತ್ರಿಭೋಜನ ಹೀಗೆ ಮಾಡಬೇಕು.

೨. ಬಳಿಕ ಸಪ್ತಮಿಯದಿವಸ ಪೂರ್ತ ಉಪವಾಸ ಮಾಡಬೇಕೆಂದು ಕೆಲವರ ಅಭಿಪ್ರಾಯ. ಷಷ್ಠಿಯ ದಿನವೇ ಪೂರಾ ಉಪವಾಸಮಾಡಿ ಸಪ್ತಮಿಯದಿನ ಪಾರಣೆ ಮಾಡಬೇಕೆಂದು ಕೆಲವರ ಅಭಿಪ್ರಾಯವಾಗಿದೆ.

೩. ಅಯ್ಯಾ ಸುವ್ರತನೇ ! ತಿಳಿದ ಮನುಷ್ಯನು ಷಷ್ಠಿಯಲ್ಲಿ ಉಪವಾಸ ಮಾಡಿ ರಕ್ತಚಂದನ, ಕಣಗಲೆಯಹೂವು ಇವುಗಳಿಂದಲೂ,

ಗುಗ್ಗುಲೇನ ಮಹಾಬಾಹೋ ಸಂಯಾವೇನ ಚ ಸುವ್ರತ ।
ಪೂಜಯೇದ್ದೇವದೇವೇಶಂ ಶಂಕರಂ ಭಾಸ್ಕರಂ ರವಿಂ ॥ ೪ ॥

ಏವಂ ಹಿ ಚತುರೋ ಮಾಸಾನ್ ಮಾಘಾದೀನ್ ಪೂಜಯೇದ್ರವಿಂ ।
ಆತ್ಮನಶ್ಚಾಪಿ ಶುದ್ಧ್ಯರ್ಥಂ ಪ್ರಾಶನಂ ಗೋಮಯಸ್ಯ ಚ ॥ ೫ ॥

ಸ್ನಾನಂ ಚ ಗೋಮಯೇನೇಹ ಕರ್ತವ್ಯಂ ಚಾತ್ಮಶುದ್ಧಯೇ ।
ಬ್ರಾಹ್ಮಣಾನ್ ದಿವ್ಯಭೌಮಾಂಶ್ಚ ಭೋಜಯೇಚ್ಚಾಪಿ ಶಕ್ತಿತಃ ॥ ೬ ॥

ಜ್ಯೇಷ್ಠಾದಿಷ್ವಥ ಮಾಸೇಷು ಶ್ವೇತಚಂದನಮುಚ್ಯತೇ ।
ಶ್ವೇತಾನಿ ಚಾಪಿಪುಷ್ಪಾಣಿ ಶುಭಗಂಧಾನ್ವಿತಾನಿ ವೈ ॥ ೭ ॥

ಕೃಷ್ಣಾಗರುಸ್ತಥಾ ಧೂಪೋ ನೈವೇದ್ಯಂ ಪಾಯಸಂ ಸ್ಮೃತಂ ।
ತೇನೈವ ಬ್ರಾಹ್ಮಣಾಂಸ್ತುಷ್ಟಾನ್ ಭೋಜಯೇಚ್ಚ ಮಹಾಮತೇ ॥ ೮ ॥

---

೪. ನಗ್ಗುಲ ಧೂಪ, ರವೆಯ ಸಜ್ಜಿಗೆ ಮುಂತಾದ ಪೂಜೋಪಹಾರಗಳಿಂದಲೂ ದೇವದೇವೇಶನೂ, ಶಂಕರನೂ, ಕಾಂತಿಯುಕ್ತನೂ ಆದ ಸೂರ್ಯನನ್ನು ಪೂಜಿಸಬೇಕು.

೫. ಈ ಪ್ರಕಾರ ಮಾಘಮಾಸ ಮೊದಲ್ಗೊಂಡು ನಾಲ್ಕು ತಿಂಗಳವರೆಗೆ ಪ್ರತಿ ಷಷ್ಠೀ, ಸಪ್ತಮಿಯಲ್ಲಿಯೂ ಸೂರ್ಯನನ್ನು ಪೂಜಿಸಬೇಕು. ಪೂಜೆಗೆ ಮುಂಚೆ ದೇಹ ಶುದ್ಧ್ಯರ್ಥವಾಗಿ ಗೋಮಯ ಪ್ರಾಶನವನ್ನು ಮಾಡಬೇಕು.

೬. ಮತ್ತು ಗೋಮಯೋದಕ ಸ್ನಾನವನ್ನೂ ಮಾಡಬೇಕು. ಪೂಜೆಯಾದ ಮೇಲೆ ತನ್ನ ಶಕ್ತಿಯಿದ್ದಷ್ಟು ಮಂದಿ ದಿವ್ಯರು, ಭೌಮರು ಎನಿಸಿದ ಶ್ರೇಷ್ಠರಾದ ವಿಪ್ರರಿಗೆ ಭೋಜನ ಮಾಡಿಸಬೇಕು.

೭. ಜ್ಯೇಷ್ಠ ಮುಂತಾದ ಮಾಸಗಳಲ್ಲಿ ಶ್ರೀಗಂಧ, ಸುವಾಸನಾಯುಕ್ತವಾದ ಬಿಳಿಯಹೂ, ಇವುಗಳನ್ನು ಉಪಯೋಗಿಸಬೇಕು.

೮. ಮತ್ತು ಕರಿಯ ಅಗರು ಚಕ್ಕೆಯ ಧೂಪ, ಪಾಯಸ ನೈವೇದ್ಯ ಇವುಗಳನ್ನು ಸಮರ್ಪಣೆಮಾಡಿ ಪೂಜಿಸಬೇಕು. ಬ್ರಾಹ್ಮಣರನ್ನು ಸಂತೋಷಪಡಿಸುವುದಕ್ಕಾಗಿ ಆ ಪಾಯಸ ಮುಂತಾದುದರಿಂದಲೇ ಭೋಜನ ಮಾಡಿಸಬೇಕು.

ಪ್ರಾಶಯೇತ್ಪಂಚಗವ್ಯಂ ತು ಸ್ನಾನಂ ತೇನೈವ ಪುತ್ರಕ ।
ಕಾರ್ತಿಕಾದಿಷು ಮಾಸೇಷು ಅಗಸ್ತಿಕುಸುಮೈಃ ಸ್ಮೃತಂ ॥ ೯ ॥

ಪೂಜಯೇನ್ನರಶಾರ್ದೂಲ ಧೂಪೈಶ್ಚೈವಾಪರಾಜಿತೈಃ ।
ನೈವೇದ್ಯಂ ಗುಡಪೂಪಂ ತು ತಥಾಚೇಕ್ಷುರಸಂ ಸ್ಮೃತಂ ॥ ೧೦ ॥

ತೇನೈವ ಬ್ರಾಹ್ಮಣಾಂಸ್ತಾತ ಭೋಜಯಸ್ವ ಸ್ವಶಕ್ತಿತಃ ।
ಕುಶೋದಕಂ ಪ್ರಾಶಯೇಥಾಃ ಸ್ನಾನಂ ಚ ಕುರು ಶುದ್ಧಯೇ ॥ ೧೧ ॥

ತೃತೀಯೇ ಪಾರಣಸ್ಯಾಂತೇ ಮಾಘೇ ಮಾಸಿ ಮಹಾಮತೇ ।
ಭೋಜನಂ ತತ್ರ ದಾನಂ ಚ ದ್ವಿಗುಣಂ ಸಮುದಾಹೃತಂ ॥ ೧೨ ॥

---

೯. ಅಯ್ಯಾ ಪುತ್ರನೇ ! ಕಾರ್ತಿಕ ಮುಂತಾದ ತಿಂಗಳುಗಳಲ್ಲಿ ಪೂಜೆಗೆ ಮುಂಚೆ ಪಂಚಗವ್ಯವನ್ನು ಪ್ರಾಶನಮಾಡಿ ಪಂಚಗವ್ಯ ಮಿಶ್ರಜಲದಿಂದಲೇ ಸ್ನಾನವನ್ನು ಮಾಡಬೇಕು. ಮತ್ತು ಅಗಸೆಯ ಹೂವಿನಿಂದ ಪೂಜೆಮಾಡಬೇಕು ಎಂದು ಹೇಳಿದೆ.

೧೦. ಅಲ್ಲದೆ ಅತ್ಯುತ್ತಮವಾದ ಅಪರಾಜಿತಾ ಎಂಬ ಧೂಪವನ್ನು ಹಾಕಿ ಹಿಟ್ಟು ಮತ್ತು ಬೆಲ್ಲ ಇವುಗಳಿಂದ ಮಾಡಿದ ಭಕ್ಷ್ಯವನ್ನೂ ಕಬ್ಬಿನ ರಸವನ್ನೂ ನೈವೇದ್ಯಮಾಡಬೇಕು.

೧೧. ವತ್ಸ ! ನೈವೇದ್ಯಕ್ಕೆಮಾಡಿದ ವಸ್ತುಗಳಿಂದಲೇ ತನ್ನ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಪೂಜೆಗೆ ಮುಂಚೆ ಕುಶೋದಕದಿಂದ ಸ್ನಾನ (ಪ್ರೋಕ್ಷಣ) ಮಾಡಬೇಕಲ್ಲದೆ ಅದನ್ನೇ ಪಾನಕ್ಕೂ ಉಪಯೋಗಿಸಬೇಕು.

೧೨. ಅಯ್ಯಾ ಮಹಾಬುದ್ಧಿಶಾಲಿಯೇ ! ಮಾಘಮಾಸದಲ್ಲಿ ನಡೆಯುವ ಮೂರನೆಯ ಪಾರಣೆಯ ಕೊನೆಯಲ್ಲಿ ಎಷ್ಟು ಬ್ರಾಹ್ಮಣರಿಗೆ ಭೋಜನಮಾಡಿಸುವನೋ ಎಷ್ಟು ಮಂದಿಗೆ ದಾನಕೊಡುವನೋ ಅದರಿಂದ ಪ್ರಾಪ್ತವಾಗಬೇಕಾದ ಫಲದ ಎರಡರಷ್ಟು ಫಲವು ಉಂಟಾಗುವುದು.

ದೇವದೇವಸ್ಯ ಪೂಜಾ ಚ ಕರ್ತವ್ಯಾ ಶಕ್ತಿತೋ ಬುಧೈಃ ।
ರಥಸ್ಯ ಚಾಪಿ ದಾನಂ ತು ರಥಯಾತ್ರಾ ತು ಸುವ್ರತ ॥ ೧೩ ॥

ವ್ರತಸ್ಯ ಪ್ರಾಪ್ತಿಹೇತೋರ್ವೈ ಕರ್ತವ್ಯಾ ವಿಭವೇ ಸತಿ ।
ಇತ್ಯೇಷಾ ಕಥಿತಾ ಪುತ್ರ ರಥಾಹ್ವಾ ಸಪ್ತಮೀ ಶುಭಾ ॥ ೧೪ ॥

ಮಹಾಸಪ್ತಮೀತಿ ವಿಖ್ಯಾತಾ ಮಹಾಪುಣ್ಯಾ ಮಹೋದಯಾ ॥ ೧೫ ॥

ಯಾಮುಪೋಷ್ಯ ಧನಂ ಪುತ್ರಾನ್ ಕೀರ್ತಿಂ ವಿದ್ಯಾಮವಾಪ್ನುಯಾತ್ ।
ತಥಾಽಖಿಲಂ ಕುವಲಯಂ ಚಂದ್ರೇಣ ಚ ಸಮೋರ್ಚಿಷಾ ॥ ೧೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಮಹಾಸಪ್ತಮೀ ವ್ರತವರ್ಣನಂ ನಾಮ ಏಕಪಂಚಾಶತ್ತಮೋಽಧ್ಯಾಯಃ.

---

೧೩. ವಿದ್ವಾಂಸರು ತಮಗೆ ಶಕ್ತಿಯಿದ್ದಷ್ಟು ಮಟ್ಟಿಗೆ ದೇವದೇವನಾದ ಸೂರ್ಯನ ಆರಾಧನೆಯನ್ನು ಮಾಡಬೇಕಾದುದು ಕರ್ತವ್ಯ. ಅಯ್ಯಾ ಸುವ್ರತನೇ ! ಬೇಕಾದರೆ ರಥೋತ್ಸವವನ್ನೂ ಮಾಡಿಸಬಹುದು.

೧೪. ದೇವರು ಅನುಕೂಲ ಕೊಟ್ಟಿದ್ದರೆ ವ್ರತಸಂಪೂರ್ಣತೆಗಾಗಿ ಸುವರ್ಣದ ಅಥವಾ ತಾಮ್ರದ ರಥವನ್ನು ಮಾಡಿಸಿ ಹಿಂದೆ ಹೇಳಿದ ರೀತಿಯಲ್ಲಿ ದಾನಮಾಡ ಬೇಕು.

೧೫. ಅಯ್ಯಾ ಪುತ್ರನೇ ! ಹೀಗೆ ಪ್ರಖ್ಯಾತವೂ ಶುಭಕರವೂ ಆದ ರಥಸಪ್ತ ಮಿಯ ವಿಚಾರವನ್ನು ಹೇಳಿದುದಾಯಿತು.

೧೬. ಈ ಮಹಾಸಪ್ತಮಿಯು ತುಂಬಾ ಪುಣ್ಯಕರವಾದುದು. ಮತ್ತು ಅಭಿ ವೃದ್ಧಿಕರವಾದುದು. ಇದರಲ್ಲಿ ಉಪವಾಸಮಾಡಿದರೆ ಧನವನ್ನೂ ಕೀರ್ತಿಯನ್ನೂ ಪುತ್ರರನ್ನೂ, ವಿದ್ಯೆಯನ್ನೂ ಪಡೆಯುವನು. ರಾಜನು ಆಚರಿಸಿದರೆ ಸಮಸ್ತ ಭೂಮಂಡಲಾಧಿಪತ್ಯವನ್ನೂ ಪಡೆಯುತ್ತಾನೆ. ಅಲ್ಲದೇ ಚಂದ್ರನಿಗೆ ಸಮನಾದ ತೇಜಸ್ಸನ್ನೂ ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ಮಹಾಸಪ್ತಮೀವ್ರತ ವರ್ಣನಂ ಎಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿಪಂಚಾಶತ್ತಮೋಽಧ್ಯಾಯಃ

---

॥ ಸುಮಂತುರುವಾಚ ॥

ಇತ್ಯುಕ್ತ್ವಾ ಭಗವಾನ್ ದೇವಃ ಶಂಖಚಕ್ರಗದಾಧರಃ ।
ಅಂತರ್ಧಾನಂ ಗತೋ ವೀರ ಸಾಂಬಸ್ಯೇಹ ಪ್ರಪಶ್ಯತಃ ॥ ೧ ॥

ಸಾಂಬೋಽಪಿ ಕೃತ್ವಾ ವಿಧಿವತ್ ಸಪ್ತಮೀಂ ರಥಸಪ್ತಮೀಂ ।
ಆದಿಭಿರ್ವ್ಯಾಧಿಭಿರ್ಮುಕ್ತೋ ಜಗಾಮಾಶು ಸ್ವಮಂದಿರಂ ॥ ೨ ॥

॥ ಶತಾನೀಕ ಉವಾಚ ॥

ರಥಯಾತ್ರಾ ಕಥಂ ಕಾರ್ಯಾ ರಥಃ ಕಾರ್ಯಃ ಕಥಂ ರವೇಃ ।
ಕೇನೇಹ ಮರ್ತ್ಯಲೋಕೇಷು ರಥಯಾತ್ರಾ ಪ್ರವರ್ತಿತಾ ॥ ೩ ॥

---

## ಐವತ್ತೆರಡನೆಯ ಅಧ್ಯಾಯವು

೧. ಸುಮಂತು ಮುನಿವರ್ಯರು ಹೇಳುತ್ತಾರೆ— ಪೂಜ್ಯನೂ, ಶಂಖಚಕ್ರ ಗದಾಧರನೂ ಆದ ಸ್ವಾಮಿಯು ಈರೀತಿ ಹೇಳಿ ಸಾಂಬನು ನೋಡುತ್ತಿದ್ದ ಹಾಗೆಯೇ ಅದೃಶ್ಯನಾದನು.

೨. ಸಾಂಬನೂ ಕೂಡ ವಿಧಿಗನುಸಾರವಾಗಿ ರಥಸಪ್ತಮಿಯೆಂಬ ಸಪ್ತಮೀ ವ್ರತವನ್ನು ಆಚರಿಸಿ ಆದಿವ್ಯಾಧಿಗಳಿಂದ ಬೇಗ ಬಿಡುಗಡೆ ಹೊಂದಿ ತನ್ನ ನಿವಾಸಕ್ಕೆ ಹೋದನು, ಎಂದು ಹೇಳಿದರು.

೩. ಶತಾನೀಕ ರಾಜನು ಕೇಳುತ್ತಾನೆ— ರಥೋತ್ಸವ ಮಾಡುವುದು ಹೇಗೆ? ಸೂರ್ಯ ರಥವನ್ನು ಹೇಗೆ ನಿರ್ಮಿಸಬೇಕು ? ಮನುಷ್ಯಲೋಕದಲ್ಲಿ ಸೂರ್ಯ ರಥೋತ್ಸವವನ್ನು ನಡೆಯಿಸಿದವರು ಯಾರಾದರೂ ಇರುವರೇ ? ಎಂದನು.

॥ ಸುಮಂತುರುವಾಚ ॥

ಇದಮರ್ಥಂ ಪುರಾ ಪೃಷ್ಟಃ ಪದ್ಮಯೋನಿಃ ಪ್ರಜಾಪತಿಃ ।
ರುದ್ರೇಣ ಕುರುಶಾರ್ದೂಲ ಆಸೀನಃ ಕಾಂಚನೇ ಗಿರೌ ॥ ೪ ॥

ಪದ್ಮಾಸನಂ ಪದ್ಮಯೋನಿಂ ಸುಖಾಸೀನಂ ಪ್ರಜಾಪತಿಂ ।
ಪ್ರಣಮ್ಯ ಶಿರಸಾ ದೇವೋ ರುದ್ರೋ ವಾಚಮುದೈರಯತ್ ॥ ೫ ॥

॥ ಶ್ರೀ ರುದ್ರ ಉವಾಚ ॥

ಯ ಏಷ ಭಗವಾನ್ ದೇವೋ ಭಾಸ್ಕರೋ ಲೋಕಭಾಸ್ಕರಃ ।
ಕಥಮೇಷ ಭ್ರಮೇದ್ದೇವೋ ರಥಸ್ಥೋ ವಿಮಲಸ್ಸದಾ ॥ ೬ ॥

॥ ಬ್ರಹ್ಮೋವಾಚ ॥

ಯಥಾ ದಿವಿ ಭ್ರಮೇತ್ತಾತ ರಥಾರೂಢೋ ರವಿಸ್ಸದಾ ।
ತಥಾ ತೇ ವರ್ತಯಿಷ್ಯೇಽಹಂ ರಥಂ ಚಾಸ್ಯ ತ್ರಿಲೋಚನ ॥ ೭ ॥

---

೪. ಸುಮಂತು ಮುನಿವರ್ಯರು ಹೇಳುತ್ತಾರೆ—ಪೂರ್ವಕಾಲದಲ್ಲಿ ಒಂದು ದಿವಸ ಕಮಲಸಂಭವನಾದ ಬ್ರಹ್ಮನು ಸುವರ್ಣಮಯವಾದ ಮೇರುಪರ್ವತದಲ್ಲಿ ಕುಳಿತಿರುವಾಗ ರುದ್ರನು ಅವನನ್ನು ಕುರಿತು ಈ ವಿಷಯವಾಗಿ ಪ್ರಶ್ನೆಮಾಡಿದನು.

೫. ಪದ್ಮದಲ್ಲಿ ಹುಟ್ಟಿದವನಾಗಿ ಪದ್ಮಾಸನದಲ್ಲಿ ಸುಖವಾಗಿ ಕುಳಿತಿರುವ ಬ್ರಹ್ಮನನ್ನು ರುದ್ರನು ತಲೆಬಾಗಿ ನಮಸ್ಕರಿಸಿ ಹೀಗೆ ಕೇಳಿದನು.

೬. ರುದ್ರನು ಕೇಳುತ್ತಾನೆ—ಲೋಕಕ್ಕೆ ಪ್ರಕಾಶವನ್ನು ಕೊಡತಕ್ಕವನೂ ಭಗವಂತನೂ ಆದ ಸೂರ್ಯನು ರಥದಲ್ಲಿ ಕುಳಿತುಕೊಂಡು ಇದ್ದರೂ ಅಷ್ಟು ಶುಭ್ರ ಪ್ರಕಾಶನಾಗಿ ಹೇಗೆ ಸುತ್ತುತ್ತಾನೆ ? ಎಂದನು.

೭. ಬ್ರಹ್ಮನು ಹೇಳುತ್ತಾನೆ—ಅಯ್ಯಾ ತ್ರಿಲೋಚನನೇ ! ರಥಾರೂಢನಾದ ಸೂರ್ಯನು ಹೇಗೆ ಹೇಗೆ ಸುತ್ತಾಡುತ್ತಿದ್ದರೂ ನಿನಗೆ ಕಾಣಿಸುವಂತೆ ಸರಿಯಾದ ರೀತಿಯಲ್ಲಿ ಅವನ ರಥವನ್ನು ನಾನು ನಡೆಯಿಸುತ್ತೇನೆ.

ರಥೇನ ಹ್ಯೇಕಚಕ್ರೇಣ ಪಂಚಾರೇಣ ತ್ರಿಣಾಭಿನಾ ।
ಹಿರಣ್ಮಯೇನ ಕಾಂತೇನ ಅಷ್ಟಬಂಧೈಕನೇಮಿನಾ ॥ ೮ ॥

ಚಕ್ರೇಣ ಭಾಸ್ವತಾ ಚೈವ ದಿವಿ ಸೂರ್ಯಃ ಪ್ರಸರ್ಪತಿ ।
ದಶಯೋಜನಸಾಹಸ್ರೋ ವಿಸ್ತಾರೋಽಪ್ಯಸ್ಯ ಕಥ್ಯತೇ ॥ ೯ ॥

ತ್ರಿಗುಣಾ ಚ ರಥೋಪಸ್ಥಾದೀಷಾದಂಡಪ್ರಮಾಣತಃ ।
ಯುಗಮಸ್ಯ ತು ವಿಸ್ತೀರ್ಣಮರುಣೋ ಯತ್ರ ಸಾರಥಿಃ ॥ ೧೦ ॥

ಪ್ರಾಸಂಗಃ ಕಾಂಚನೋ ದಿವ್ಯಃ ಯುಕ್ತಃ ಪವನಗೈರ್ಹಯೈಃ ।
ಛಂದೋಭಿರ್ವಾಜಿರೂಪೈಸ್ತು ಯತಶ್ಚಕ್ರಂ ತತಸ್ಥಿತೈಃ ॥ ೧೧ ॥

ಯೇನಾಸೌ ಪರ್ಯಟೇದ್ವ್ಯೋಮ್ನಿ ಭಾಸ್ವತಾ ತು ದಿವಸ್ಪತಿಃ ।
ಅಥೈತಾನಿ ತು ಸೂರ್ಯಸ್ಯ ಪ್ರತ್ಯಂಗಾನಿ ರಥಸ್ಯ ತು ॥ ೧೨ ॥

---

೮. ಸೂರ್ಯನ ರಥಕ್ಕೆ ಒಂದೇ ಚಕ್ರ ಐದು ಆರೆ ಕಾಲುಗಳು ಮೂರು ನಾಭಿಗಳು, ಉಳ್ಳದ್ದು, ಸುವರ್ಣನಿರ್ಮಿತವಾಗಿ ಮನೋಹರವಾಗಿರುವುದೂ ಎಂಟು ಬಂಧಗಳುಳ್ಳದ್ದೂ ಪ್ರಕಾಶಯುತವಾದದ್ದು ಆಗಿ

೯. ಹೀಗಿರುವ ಒಂದೇ ಚಕ್ರದ ಸಹಾಯದಿಂದ ಸೂರ್ಯನು ಅಂತರಿಕ್ಷದಲ್ಲಿ ಚರಿಸುತ್ತಾನೆ. ಇವನ ಸಂಚಾರಮಾರ್ಗದ ವಿಸ್ತಾರವು ಹತ್ತು ಸಹಸ್ರಯೋಜನ ಎಂದು ಉಕ್ತವಾಗಿದೆ.

೧೦-೧೧. ಆ ರಥದ ಚಕ್ರ ಹರಿಯುವ ಜಾಡು (ಅಗಲ ಆಳ) ಈಷಾದಂಡದ (ನೇಗಿಲು ಸಾಲಿನ) ಮೂರರಷ್ಟು ಪ್ರಮಾಣ ಉಳ್ಳದ್ದಾಗಿರುವುದು. ಇದರ (ತಿಕ್ಕಡಿಯು) ನೊಗವು ತಕ್ಕಷ್ಟು ವಿಸ್ತಾರವಾಗಿಯೇ ಇರುತ್ತದೆ. ಸಾರಥಿಯಾದ ಅರುಣನು ಅಲ್ಲಿ ಕುಳಿತುಕೊಳ್ಳುತ್ತಾನೆ. ಶ್ರೇಷ್ಠವಾದ (ಕಾಂಚನ) ಪ್ರಸಂಗ ಚಿನ್ನದ ನೊಗಕ್ಕೆ ವಾಯುವೇಗವುಳ್ಳ ಕುದುರೆಗಳನ್ನು ಕಟ್ಟಿದೆ. ಛಂದಸ್ಸುಗಳೇ ಕುದುರೆಯ ರೂಪಿನಿಂದ ಇದ್ದು ಚಕ್ರವಿರುವಕಡೆ ತಾವೂ ಇರುತ್ತವೆ.

೧೨. ದಿವಸ್ಪತಿಯಾದ ಈ ಸೂರ್ಯನು ಪ್ರಕಾಶಮಾನವಾದ ಈ ರಥದಿಂದ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಸೂರ್ಯನ ರಥದ ಪ್ರತ್ಯಂಗಗಳನ್ನು ಈ ಮುಂದೆ ಹೇಳಿದೆ.

ಸಂವತ್ಸರಸ್ಯಾವಯವೈಃ ಕಲ್ಪಿತಾನಿ ಯಥಾಕ್ರಮಂ ।
ನಾಭ್ಯಸ್ತಿಸ್ರಸ್ತು ಚಕ್ರಸ್ಯ ತ್ರಯಃ ಕಾಲಾಃ ಪ್ರಕೀರ್ತಿತಾಃ ॥ ೧೩ ॥

ಆರಾಃ ಪಂಚರ್ತವಸ್ತಸ್ಯ ನೇಮ್ಯಃ ಷಡೃತವಃ ಸ್ಮೃತಾಃ ।
ರಥವೇದೀ ಸ್ಮೃತೇ ತಸ್ಯ ಅಯನೇ ದಕ್ಷಿಣೋತ್ತರೇ ॥ ೧೪ ॥

ಮುಹೂರ್ತಾ ಇಷವಸ್ತಸ್ಯ ಶಮ್ಯಾಶ್ಚಾಸ್ಯ ಕಲಾಃ ಸ್ಮೃತಾಃ ।
ತಸ್ಯ ಕಾಷ್ಠಾಃ ಸ್ಮೃತಾಃ ಕೋಣಾ ಅಕ್ಷದಂಡಃ ಕ್ಷಣಾಃ ಸ್ಮೃತಾಃ ॥ ೧೫ ॥

ನಿಮೇಷಾಶ್ಚಾಸ್ಯ ಕರ್ಷಾಃ ಸ್ಯಾದೀಷಾದಂಡೋ ಲವಾಃ ಸ್ಮೃತಾಃ ।
ರಾತ್ರಿರ್ವರೂಥೋ ಧರ್ಮೋಽಸ್ಯ ಧ್ವಜಊರ್ಧ್ವಂ ಪ್ರತಿಷ್ಠಿತಃ ॥ ೧೬ ॥

ಯುಗಾಕ್ಷಕೋಟೀ ತೇ ತಸ್ಯ ಅರ್ಥಕಾಮಾವುಭೌ ಸ್ಮೃತೌ ।
ಅಶ್ವರೂಪಾಣಿ ಚ್ಛಂದಾಂಸಿ ವಹಂತೇ ವಾಮತೋ ಧುರಂ ॥ ೧೭ ॥

---

೧೩–೧೫. ಸಂವತ್ಸರದ ಒಳವಿಭಾಗಗಳಾಗಿರುವ ಅಯನ, ಋತು, ಮಾಸಾದಿಗಳು ಸೂರ್ಯನ ರಥದ ಪ್ರತ್ಯಂಗಗಳಾಗಿ ಕ್ರಮವಾಗಿ ಕಲ್ಪಿತವಾಗಿವೆ. ಮೂರು ಕಾಲಗಳೇ ಚಕ್ರದ ಮೂರು ಗುಂಬಗಳು, ಋತುಗಳೇ ಚಕ್ರದ ಆರೆಕಾಲುಗಳಾಗಿ ನೇಮಿಯಲ್ಲಿ ಜೋಡಿಸಿದ ಆರು ಮರಗಳಾಗಿವೆ. ಉತ್ತರಾಯನ, ದಕ್ಷಿಣಾಯನಗಳೆಂಬವು ರಥದ ವೇದಿಗಳೆಂದು ಉಕ್ತವಾಗಿದೆ. ಮುಹೂರ್ತಗಳೇ ರಥದ ಇಷುಗಳು, ಶಮ್ಯಗಳೆಂಬವು ರಥದ ಕಲಿಗಳು, ಕೋಣಗಳೆಂಬವು ರಥದ ಕಾಷ್ಟಗಳೂ, ಕ್ಷಣವೆಂಬುದು ರಥದ ಅಕ್ಷದಂಡವೂ ಆಗಿರುತ್ತವೆ.

೧೬–೧೭. ನಿಮೇಷಗಳೇ ಕರ್ಷಗಳೂ, (ರಥದ) ಕಾಲಸೂಕ್ಷ್ಮಾವಯವವಾದ ಲವಗಳು ಈಷಾದಂಡಗಳೂ ಆಗಿವೆ. ರಾತ್ರಿಯೆಂಬುದೇ ರಥಕ್ಕೆ ಹೊದ್ದಿಸುವ ಆವರಣವೂ ಧರ್ಮವೆಂಬುದು ರಥದ ಮೇಲ್ಗಡೆ ಎತ್ತಿ ನಿಲ್ಲಿಸಿರುವ ಬಾವುಟವೂ ಆಗಿದೆ. ಅರ್ಥ, ಕಾಮ ಇವುಗಳಲ್ಲಿ ಒಂದು ಯುಗಕೋಟಿ ಎಂದೂ ಮತ್ತೊಂದು ಅಕ್ಷಕೋಟಿ ಎಂದೂ ತಿಳಿಯಬೇಕು.

ಗಾಯತ್ರೀ ಚೈವ ತ್ರಿಷ್ಟುಪ್ ಚ ಜಗತ್ಯನುಷ್ಟುಭೇವ ಚ ।
ಪಙ್ಕ್ತಿಶ್ಚ ಬೃಹತೀ ಚೈವ ಉಷ್ಣಿಗೇವ ತು ಸಪ್ತಮೀ ॥ ೧೮ ॥

ಚಕ್ರಮಕ್ಷನಿಬದ್ಧಂ ಚ ಧ್ರುವೇ ಚಾಕ್ಷಃ ಸಮರ್ಪಿತಃ ।
ಸಹ ಚಕ್ರೇ ಭ್ರಮತ್ಯಕ್ಷಃ ಸಚಾಕ್ಷೋ ಭ್ರಮತಿ ಧ್ರುವೇ ॥ ೧೯ ॥

ಅಕ್ಷಃ ಸಹೈವ ಚಕ್ರೇಣ ಭ್ರಮತೇಽಸೌ ಧ್ರುವೇ ಸ್ಥಿತಃ ।
ಏವಮಕ್ಷವಶಾತ್ತಸ್ಯ ಸಂನಿವೇಶೋ ರಥಸ್ಯ ತು ॥ ೨೦ ॥

ತಥಾ ಸಂಯೋಗಭಾವೇನ ಸಂಸಿದ್ಧೋ ಭಾಸ್ಕರೋ ರಥಃ ।
ತೇನ ಚಾಸೌ ರವಿರ್ದೇವೋ ನಭಃ ಸಂಸರ್ಪತೇ ತದಾ ॥ ೨೧ ॥

ಯುಗಾಕ್ಷಕೋಟಿ ಸಂಬದ್ಧೇ ದ್ವೇ ರಶ್ಮೀ ಸ್ಯಂದನಸ್ಯ ತು ।
ಧ್ರುವೇ ತೇ ಭ್ರಮತೋ ರಶ್ಮೀ ನ ಚಕ್ರಯುಗಯೋಸ್ತು ವೈ ॥ ೨೨ ॥

---

೧೮. ವೇದರೂಪವಾಗಿರುವ ಗಾಯತ್ರಿ, ತ್ರಿಷ್ಟುಪ್, ಅನುಷ್ಟುಪ್, ಪಙ್ಕ್ತಿ, ಬೃಹತೀ, ಉಷ್ಣಿಕ್, ಜಗತಿ ಎಂಬ ಏಳು ಛಂದಸ್ಸುಗಳೇ ಏಳು ಕುದುರೆಗಳಾಗಿ ಭಾರವನ್ನು ಹೊರುತ್ತವೆ.

೧೯. ಚಕ್ರಕ್ಕೆ ಅಕ್ಷವು ಜೋಡಿಸಲ್ಪಟ್ಟಿದೆ. ಈ ಅಕ್ಷವು ಧ್ರುವಕ್ಕೆ ತಗುಲಿಸಲ್ಪಟ್ಟಿದೆ. ಚಕ್ರಸಹಿತವಾಗಿ ಅಕ್ಷವೂ ತಿರುಗುತ್ತಿರುತ್ತದೆ. ಅಕ್ಷವು ಚಕ್ರದೊಡಗೂಡಿ ಧ್ರುವದಲ್ಲಿದ್ದುಕೊಂಡೇ ತಿರುಗುತ್ತದೆ.

೨೦. ಹೀಗೆ ಅಕ್ಷವು ಇರುವುದಕ್ಕೆ ಅನುಸಾರವಾಗಿ ರಥದ ಸನ್ನಿವೇಶವೂ ಇರುತ್ತದೆ. ಸೂರ್ಯನ ರಥದ ಅವಯವವು ಹೀಗೆ ಪರಸ್ಪರ ಹೊಂದಿಕೊಂಡಿದೆ.

೨೧. ಹೀಗೆ ಪರಸ್ಪರ ಹೊಂದಿಕೆಯಾಗಿ ರಥವು ಸೂರ್ಯನ ಸಂಚಾರಕ್ಕೆ ಸಿದ್ಧವಾಗಿರುವುದು. ಇದರಿಂದ ಸೂರ್ಯನು ಸರ್ವದಾ ಆಕಾಶದಲ್ಲಿ ವೇಗವಾಗಿ ಸಂಚರಿಸುತ್ತಾನೆ.

೨೨. ನೊಗದ ತುದಿ, ದೂರಿಯ ತುದಿ, ಇವುಗಳಿಗೆ ಜೋಡಿಸಿ ಕಟ್ಟಲ್ಪಟ್ಟಿರುವ ಕುದುರೆಗೆ ಸಂಬಂಧಪಟ್ಟ ಹಗ್ಗವು; ಚಕ್ರ ಅಕ್ಷ ಇವೆರಡೂ ತಿರುಗುತ್ತಿದ್ದರೂ ತಾನು ತಿರುಗದೆ ಹಾಗೆಯೇ ಇರುತ್ತದೆ.

ಭ್ರಮತೋ ಮಂಡಲಾನ್ಯಸ್ಯ ರವೇರಸ್ಯ ರಥಸ್ಯ ತು ।
ಕುಲಾಲಚಕ್ರವದ್ಯಾತಿ ಮಂಡಲಂ ಸರ್ವತೋ ದಿಶಂ ॥ ೨೩ ॥

ಯುಗಾಕ್ಷಕೋಟೀ ತೇ ತಸ್ಯ ದಕ್ಷಿಣೇ ಸ್ಯಂದನಸ್ಯ ತು ।
ಋಗ್ಯಜುಭ್ಯಾಂ ಗೃಹೀತೇನ ವಿಚಕ್ರಾಶ್ವೇನ ವೈ ಧ್ರುವೇ ॥ ೨೪ ॥

ಹ್ರಸೇತೇ ತಸ್ಯ ರಶ್ಮೀ ತು ಮಂಡಲೇಷೂತ್ತರಾಯಣೇ ।
ದಕ್ಷಿಣೇಽಥ ಸಮ್ವೃದ್ಧೇ ತು ಭ್ರಮತೋ ಮಂಡಲಾನಿ ತು ॥ ೨೫ ॥

ಯುಗಾಕ್ಷಕೋಟೀ ತೇ ತಸ್ಯ ಭ್ರಮೇತೇ ಸ್ಯಂದನಸ್ಯ ತು ।
ಸಕ್ತಾಸಕ್ತಂ ಚ ಭ್ರಮತೇ ಮಂಡಲಂ ಸರ್ವತೋ ದಿಶಂ ॥ ೨೬ ॥

---

೨೩. ಸೂರ್ಯನ ರಥದ ಚಕ್ರವು ಹರಿಯುವ ಮಾರ್ಗವು (ಎಂದರೆ ಜಾಡು) ಹರಿಯುವ ಚಕ್ರಕ್ಕೆ ಆಶ್ರಯವಾಗಿ ಕುಂಬಾರ ಚಕ್ರವು ಒಂದು ಶಂಕುವಿನ ಆಶ್ರಯದ ಮೇಲೆ ವೇಗವಾಗಿ ತಿರುಗುವುದರಿಂದ ಬೀಳದೆ ಇರುವ ಹಾಗೆ ಈ ಸೂರ್ಯರಥ ಚಕ್ರವೂ ವೇಗವಾಗಿ ಉರುಳುವುದರಿಂದ ಅಕ್ಕಪಕ್ಕಗಳಿಗೆ ಬೀಳದೆ ಸುಗಮವಾಗಿ ಸಾಗುವುದು

೨೪. ಸೂರ್ಯ ರಥದ ಬಲಭಾಗದಲ್ಲಿರುವ ನೊಗದ ತುದಿ, ದೂರಿಯ ತುದಿ, ಇವುಗಳಿಗೆ ಕಟ್ಟಿರುವ ಋಗ್ವೇದ ಯಜುರ್ವೇದ ರೂಪವಾದ ಹಗ್ಗಗಳು (ಹಿಡಿಯಲ್ಪಟ್ಟವುಗಳಾಗಿ) ದೃಢವಾಗಿಯೂ ಒಂದೇ ಚಕ್ರದಿಂದ ಕೂಡಿಯೂ ಇರುವ ರಥದಿಂದ ಬಿಗಿಯಾಗಿ ನಿಂತಿವೆ.

೨೫. ಸೂರ್ಯರಥದ ಎರಡು ಹಗ್ಗಗಳೂ ಸಂಕುಚಿತವಾಗಿ ಉತ್ತರಾಯಣದಲ್ಲಿ ಮಂಡಲಗಳು ಮೋಟಾಗಿ ಇರುತ್ತವೆ. ದಕ್ಷಿಣಾಯನದಲ್ಲಿ ಈ ರಶ್ಮಿಗಳು ನೀಳವಾಗಿ ವಿಸ್ತಾರವಾಗಿ ಮಂಡಲಗಳನ್ನು ರಚಿಸಿಕೊಂಡು ತಿರುಗುತ್ತವೆ.

೨೬. ರಥದ ಯುಗಕೋಟಿ, ಅಕ್ಷಕೋಟಿಗಳೆರಡೂ ಸುತ್ತುತ್ತಿರುತ್ತವೆ. ಇವು ಸುತ್ತುವಾಗ ಸೂರ್ಯಮಂಡಲದ ಎಲ್ಲಾ ದಿಕ್ಕಿನಲ್ಲೂ ತಗುಲಿಯೂ ತಗಲದಂತೆ ಸುತ್ತುತ್ತವೆ.

ಆಕೃಷ್ಯೇತೇ ಧ್ರುವೇಣೇಹ ಸಮಂ ತಿಷ್ಠತಿ ಸುವ್ರತ ।
ತದಾ ಸಾಭ್ಯಂತರಂ ದೇವೋ ಭ್ರಮತೇ ಮಂಡಲಾನಿ ತು ॥ ೨೭ ॥

ಧ್ರುವೇಣ ಮುಚ್ಯಮಾನೇ ತು ಪುನಾ ರಶ್ಮಿಯುಗೇನ ವೈ ।
ತಥೈವ ಬಾಹ್ಯತಃ ಸೂರ್ಯೋ ಭ್ರಮತೇ ಮಂಡಲಾನಿ ತು ॥ ೨೮ ॥

ಅಶೀತಿಮಂಡಲಶತಂ ಕಾಷ್ಠಯೋರುಭಯೋರಪಿ ।
ಸ ರಥೋಽಧಿಷ್ಠಿತೋ ದೇವೈಃ ವಿಭ್ರಮೋದ್ವೃಷಿಭಿಃ ಸಹ ॥ ೨೯ ॥

ಗಂಧರ್ವೈರಪ್ಸರೋಭಿಶ್ಚ ಸರ್ವಗ್ರಾಮಣಿರಾಕ್ಷಸೈಃ ।
ಏತೈರ್ವಸತಿ ವೈ ಸೂರ್ಯೇ ಮಾಸೌ ದ್ವೌ ದ್ವೌ ಕ್ರಮೇಣ ತು ॥ ೩೦ ॥

ಧಾತಾರ್ಯಮಾ ಪುಲಸ್ತ್ಯಶ್ಚ ಪುಲಹಶ್ಚ ಪ್ರಜಾಪತಿಃ ।
ಖಂಡಕೋ ವಾಸುಕಿಶ್ಚೈವ ಸಚಕ್ಷುಃಕರ್ಣ ಏವ ಚ ॥ ೩೧ ॥

ತುಂಬುರುರ್ನಾರದಶ್ಚೈವ ಗಂಧರ್ವೌ ಗಾಯತಾಂ ವರೌ ।
ಋತುಸ್ಥಲಾಪ್ಸರಶ್ಚೈವ ಯಾ ಚ ಸಾ ಪುಂಜಿಕಸ್ಥಲಾ ॥ ೩೨ ॥

---

೨೭. ಅಯ್ಯಾ ಸುವ್ರತನೇ! ಇವೆರಡೂ ಧ್ರುವದಿಂದ ಆಕರ್ಷಿಸಲ್ಪಡುವದರಿಂದ ಸುಖವಾಗಿ ನಿಲ್ಲುತ್ತದೆ. ಆಗ ಸೂರ್ಯನು ಅವಕಾಶ ಮಾಡಿಕೊಂಡು ಮಂಡಲಗಳನ್ನು ಸುತ್ತುತ್ತಾನೆ.

೨೮–೨೯. ಧ್ರುವದ ಆಕರ್ಷಣೆ ತಪ್ಪಿದರೆ ಈ ಎರಡು ರಶ್ಮಿಗಳಿಂದ ಹೊರಗೆ ಸೂರ್ಯನು ಮಂಡಲಗಳನ್ನು ಸುತ್ತುತ್ತಾನೆ. ಹೀಗೆ ಅವನು ಎರಡು ಕಾಷ್ಟಗಳ ಕಾಲದಲ್ಲಿ ಎಂಭತ್ತು ನೂರು ಮಂಡಲಗಳನ್ನು ಸುತ್ತುತ್ತಾನೆ.

೩೦–೩೧. ಆ ರಥದಲ್ಲಿ ಸೂರ್ಯನ ಜೊತೆಯಲ್ಲಿ ದೇವತೆಗಳು, ಋಷಿಗಳು, ಗಂಧರ್ವರು, ಅಪ್ಸರರು, ನಾಗಪ್ರಮುಖರು, ರಾಕ್ಷಸರು ಇವರುಗಳ ಒಂದೊಂದು ಗುಂಪೂ ಸರದಿಯ ಪ್ರಕಾರ ಕ್ರಮವಾಗಿ ಎರಡೆರಡು ತಿಂಗಳು ಕಾಲ ಇರುತ್ತಾರೆ. ವಸಂತಋತುವಿನಲ್ಲಿ ಧಾತಾ, ಆರ್ಯಮಾ, ಎಂಬ ಆದಿತ್ಯರೂ; ಪುಲಸ್ತ್ಯ, ಪುಲಹ ಎಂಬ ಬ್ರಹ್ಮರೂ; ಕಣ್ಣೇ ಕಿವಿಯಾಗಿ ಉಳ್ಳ ಖಂಡಕ, ವಾಸುಕಿ ಎಂಬ ನಾಗರೂ;

೩೨–೩೩. ತುಂಬುರು, ನಾರದರು ಎಂಬ ಇಬ್ಬರು ಗಂಧರ್ವ ಗಾಯಕ ಶ್ರೇಷ್ಠರೂ; ಋತುಸ್ಥಲೆ ಪುಂಜಕಸ್ಥಲೆ ಎಂಬ ಇಬ್ಬರು ಅಪ್ಸರೆಯರೂ; ರಥಕೃತ್ಸ್ನ,

ಗ್ರಾಮಣೀರಥಕೃತ್ಸ್ನಶ್ಚ ರಥೌಜಾಶ್ವತರಾ ವುಭೌ ।
ರಕ್ಷೋಹೇತಿಃ ಪ್ರಹೇತಿಶ್ಚ ಯಾತುಧಾನೌ ಚ ತಾವುಭೌ ॥ ೩೩ ॥

ಮಧು ಮಾಧವಯೋರೇಷ ಗಣೋ ವಸತಿ ಭಾಸ್ಕರೇ ।
ತಥಾ ಗ್ರೀಷ್ಮೌ ತು ದ್ವೌ ಮಾಸೌ ಮಿತ್ರಶ್ಚ ವರುಣಶ್ಚ ಹ ॥ ೩೪ ॥

ಋಷಿರತ್ರಿರ್ವಶಿಷ್ಠಶ್ಚ ತಕ್ಷಕೋಽನಂತ ಏವ ಚ ।
ಮೇನಕಾ ಸಹಜನ್ಯಾ ಚ ಗಂಧರ್ವೌ ಚ ಹಹಾ ಹುಹೂಃ ॥ ೩೫ ॥

ರಥಸ್ವನಶ್ಚ ಗ್ರಾಮಣ್ಯೌ ರಥಚಿತ್ರಶ್ಚ ತಾವು ಭೌ ।
ಪೌರುಷೇಯೋ ವಧಶ್ಚೈವ ಯಾತುಧಾನೌ ಮಹಾಬಲೌ ॥ ೩೬ ॥

ಶುಚಿ ಶುಕ್ರೌ ತು ದ್ವೌ ಮಾಸೌ ವಸಂತ್ಯೇತೇ ದಿವಾಕರೇ ।
ಇಂದ್ರಶ್ಚೈವ ವಿವಸ್ವಾಂಶ್ಚ ಅಂಗಿರಾ ಭೃಗುರೇವ ಚ ॥ ೩೭ ॥

---

ರಥೌಜಾಶ್ವತರ ಎಂಬ ಸೇನಾಪತಿ ಗ್ರಾಮಣಿಗಳು; ರಕ್ಷೋಹೇತಿ ಪ್ರಹೇತಿ ಎಂಬ ಇಬ್ಬರು ರಾಕ್ಷಸರೂ ಇವರು.

೩೪-೩೫. ಚೈತ್ರ, ವೈಶಾಖ, ಎಂಬ ಎರಡು ತಿಂಗಳು ಸೂರ್ಯನ ಜೊತೆಯಲ್ಲಿ ಇರುತ್ತಾರೆ. ಗ್ರೀಷ್ಮಋತುವಿನಲ್ಲಿ ಮಿತ್ರ, ವರುಣ ಎಂಬ ಆದಿತ್ಯರು; ಅತ್ರಿ, ವಶಿಷ್ಠ ಎಂಬ ಋಷಿಗಳು; ತಕ್ಷಕ, ಅನಂತ ಎಂಬ ನಾಗಶ್ರೇಷ್ಠರು; ಮೇನಕೆ, ಸಹಜನ್ಯೆ ಎಂಬ ಅಪ್ಸರೆಯರು ಹಾಹಾ, ಹೂಹೂ ಎಂಬ ಗಂಧರ್ವ ಗಾಯಕರು

೩೬. ರಥಸ್ವನ, ರಥಚಿತ್ರ ಎಂಬ ಗ್ರಾಮಣಿಗಳು; ಪೌರುಷೇಯ, ವಧ, ಎಂಬ ಮಹಾ ಬಲಶಾಲಿಗಳಾದ ರಾಕ್ಷಸರು ಇವರೆಲ್ಲರೂ ಜೇಷ್ಠ ಆಷಾಢ ಈ ಎರಡು ತಿಂಗಳಲ್ಲೂ ಸೂರ್ಯನ ಜೊತೆ ಇರುತ್ತಾರೆ.

೩೭-೩೮. ವರ್ಷಋತುವಿನ ಸರದಿಯಲ್ಲಿ ಇಂದ್ರ, ವಿವಸ್ವಾನ್ ಎಂಬ ಆದಿತ್ಯರೂ; ಅಂಗಿರ, ಭೃಗು ಎಂಬ ಋಷಿಗಳೂ; ಏಲಾಪರ್ಣ, ಶಂಖಪಾಲ ಎಂಬ ನಾಗರೂ;

ಏಲಾಪರ್ಣಸ್ತಥಾ ಸರ್ಪಃ ಶಂಖಪಾಲಶ್ಚ ಪನ್ನಗಾಃ ।
ಪ್ರಮ್ಲೋಚಾ ದುಂದುಕಾಚೈವ ಗಂಧರ್ವೌ ಭಾನದುರ್ದುರೌ　　॥ ೩೮ ॥

ಯಾತುಧಾನೌ ತಥಾ ಸರ್ಪಸ್ತಥಾ ಬ್ರಾಹ್ಮಶ್ಚ ತಾವುಭೌ ।
ಏತೇ ನಭೋ ನಭಸ್ಯೌ ಚ ನಿವಸಂತಿ ದಿವಾಕರೇ　　॥ ೩೯ ॥

ಶರದ್ಯೇತೇ ಪುನಃ ಶುಭ್ರಾ ನಿವಸಂತಿ ಸ್ಮ ದೇವತಾಃ ।
ಪರ್ಜನ್ಯಶ್ಚೈವ ಪೂಷಾ ಚ ಭಾರದ್ವಾಜಃ ಸಗೌತಮಃ　　॥ ೪೦ ॥

ಚಿತ್ರಸೇನಶ್ಚ ಗಂಧರ್ವಃ ತಥಾ ವಸುರುಚಿಶ್ಚ ಯಃ ।
ವಿಶ್ವಾಚೀ ಚ ಘೃತಾಚೀ ಚ ತೇ ಉಭೇ ಪುಣ್ಯಲಕ್ಷಣೇ　　॥ ೪೧ ॥

ನಾಗಸ್ತ್ವೈರಾವತಶ್ಚೈವ ವಿಶ್ರುತಶ್ಚ ಧನಂಜಯಃ ।
ಸೇನಜಿಚ್ಚ ಸುಷೇಣಶ್ಚ ಸೇನಾನೀ ಗ್ರಾಮಣೀ ತಥಾ　　॥ ೪೨ ॥

ಆಪೋ ವಾತಶ್ಚ ದ್ವಾವೇತೌ ಯಾತುಧಾನೌ ಪ್ರಕೀರ್ತಿತೌ ।
ವಸಂತ್ಯೇತೇ ತು ವೈ ಸೂರ್ಯೇ ಇಷೋರ್ಜೌ ಕಾಲಪರ್ಯಯಾತ್॥ ೪೩॥

---

ಪ್ರಮ್ಲೋಚಾ, ದುಂದುಕಾ ಎಂಬ ಅಪ್ಸರೆಯರೂ ; ಭಾನು, ದರ್ದುರ ಎಂಬ ಗಂಧರ್ವರೂ

೩೯. ಅಲ್ಲದೆ ಸರ್ಪ, ಬ್ರಾಹ್ಮ ಎಂಬ ಇಬ್ಬರು ರಾಕ್ಷಸರೂ ; ಇವರೆಲ್ಲಾ ಶ್ರಾವಣ ಭಾದ್ರಪದ ಮಾಸಗಳಲ್ಲಿ ಸೂರ್ಯನೊಡನೆ ಇರುತ್ತಾರೆ.

೪೦-೪೧. ಶರದೃತುವಿನ ಸರದಿಯಲ್ಲಿ ಪರಿಶುದ್ಧರಾದ ಪರ್ಜನ್ಯ, ಪೂಷ, ಎಂಬ ಆದಿತ್ಯರು ; ಭಾರದ್ವಾಜ, ಗೌತಮ ಎಂಬ ಋಷಿಗಳು ; ಚಿತ್ರಸೇನ ವಸುರುಚಿ, ಎಂಬ ಗಂಧರ್ವರು ; ವಿಶ್ವಾಚೀ, ಘೃತಾಚೀ ಎಂಬ ಇಬ್ಬರು ಪುಣ್ಯಲಕ್ಷಣೆಯರಾದ ಅಪ್ಸರೆಯರು ಇರುವರು.

೪೨. ಪ್ರಸಿದ್ಧನಾದ ಐರಾವತ, ಧನಂಜಯ ಎಂಬ ನಾಗರೂ, ಸೇನಜಿತ್ತು, ಸುಷೇಣ ಎಂಬ ಸೇನಾಪತಿ ಗ್ರಾಮಣಿಗಳು (ಇವರೂ.)

೪೩. ಅಲ್ಲದೆ ಆಪೋ, ವಾತ, ಎಂಬ ಇಬ್ಬರು ರಾಕ್ಷಸರು ಇವರೆಲ್ಲರೂ ಆಶ್ವಯುಜ, ಕಾರ್ತಿಕ ಈ ಮಾಸಗಳಲ್ಲಿ ಸೂರ್ಯನ ಜೊತೆಯಲ್ಲಿ ವಾಸ ಮಾಡುತ್ತಾರೆ.

ಹೈಮಂತಿಕೌ ತು ದ್ವೌ ಮಾಸೌ ವಸಂತ್ಯೇತೇ ದಿವಾಕರೇ ।
ಅಂಶೋ ಭಗಶ್ಚ ದ್ವಾವೇತೌ ಕಶ್ಯಪಶ್ಚ ಋತುಸ್ತಥಾ ॥ ೪೪ ॥

ಭುಜಂಗಶ್ಚ ಮಹಾಪದ್ಮಃ ಸರ್ಪಃ ಕರ್ಕೋಟಕಸ್ತಥಾ ।
ಆಪೋ ವಾತಶ್ಚ ದ್ವಾವೇತೌ ಯಾತುಧಾನೌ ಪ್ರಕೀರ್ತಿತೌ ॥ ೪೫ ॥

ಚಿತ್ರಾಂಗದಶ್ಚ ಗಂಧರ್ವೋऽರುಣಾಯುಶ್ಚೈವ ತಾವುಭೌ ।
ಸಹೇ ಚೈವ ಸಹಸ್ಯೇ ಚ ವಸಂತ್ಯೇತೇ ದಿವಾಕರೇ ॥ ೪೬ ॥

ಪೂಷಾ ವಿಷ್ಣುರ್ಜಮದಗ್ನಿಃ ವಿಶ್ವಾಮಿತ್ರಸ್ತಥೈವ ಚ ।
ಕಾದ್ರವೇಯೌ ಮಹಾನಾಗೌ ಕಂಬಲಾಶ್ವತರಾವುಭೌ ॥ ೪೭ ॥

ಗಂಧರ್ವೌ ಧೃತರಾಷ್ಟ್ರಶ್ಚ ಸೂರ್ಯವರ್ಚಶ್ಚ ತಾವುಭೌ ।
ತಿಲೋತ್ತಮಾ ಚ ರಂಭಾ ಚ ಸರ್ವಲೋಕೇ ಚ ವಿಶ್ರುತೇ ॥ ೪೮ ॥

ಗ್ರಾಮಣೀಃ ಸೇನಜಿಚ್ಚೈವ ಸತ್ಯಜಿಚ್ಚ ಮಹಾತಪಾಃ ।
ಬ್ರಹ್ಮೋऽಪೇತಶ್ಚ ವೈ ರಕ್ಷೋ ಯಜ್ಞೋऽಯಜ್ಞಸ್ತಥೈವ ಚ ॥ ೪೯ ॥

---

೪೪-೪೬. ಹೇಮಂತಋತುವಿನ ಮಾರ್ಗಶಿರ ಪುಷ್ಯಮಾಸಗಳಲ್ಲಿ ಅಂಶು, ಭಗ ಎಂಬ ಆದಿತ್ಯರೂ; ಕಶ್ಯಪ, ಋತ, ಎಂಬ ಋಷಿಗಳೂ; ಮಹಾಪದ್ಮ, ಕರ್ಕೋಟಕ ಎಂಬ ನಾಗರೂ; ಆಪ, ವಾತ ಎಂಬ ಇಬ್ಬರು ರಾಕ್ಷಸರೂ, ಚಿತ್ರಾಂಗದ ಋಣಾಯು ಎಂಬ ಇಬ್ಬರು ಗಂಧರ್ವರೂ; ಇವರುಗಳು ಸೂರ್ಯನ ಜತೆ ವಾಸಿಸುತ್ತಾರೆ;

೪೭. ಶಿಶಿರಋತುವಿನಲ್ಲಿ ಎಂದರೆ ಮಾಘ ಫಾಲ್ಗುಣ ಮಾಸಗಳಲ್ಲಿ ಪೂಷಾ, ವಿಷ್ಣು, ಎಂಬ ಆದಿತ್ಯರೂ; ಜಮದಗ್ನಿ, ವಿಶ್ವಾಮಿತ್ರ ಎಂಬ ಋಷಿಗಳೂ; ಕಂಬಳ ಅಶ್ವತರ ಎಂಬ ಗಂಧರ್ವ ಗಾಯಕರೂ;

೪೮-೪೯. ಕದ್ರುದೇವೀ ಪುತ್ರರಾದ ಧೃತರಾಷ್ಟ್ರ, ಸೂರ್ಯವರ್ಚ ಎಂಬ ಇಬ್ಬರು ನಾಗರೂ; ತಿಲೋತ್ತಮೆ, ರಂಭೆ, ಎಂಬ ಇಬ್ಬರು ಲೋಕವಿಖ್ಯಾತೆಯರಾದ ಅಪ್ಸರಸೆಯರೂ; ಸೇನಜಿತ್, ಸತ್ಯಜಿತ್ ಎಂಬ ಮಹಾತಪರಾದ ಗ್ರಾಮಣೀ ಸೇನಾನಿಗಳೂ; ಬ್ರಹ್ಮೋಪೇತ, ಯಜ್ಞೋऽಯಜ್ಞ ಎಂಬ ಇಬ್ಬರು ರಾಕ್ಷಸರೂ; ಸೂರ್ಯನ ಜೊತೆಯಲ್ಲಿ ಇರುತ್ತಾರೆ.

ಏತೇ ತಪಸ್ತಪಸ್ಯೇ ಚ ನಿವಸಂತಿ ದಿವಾಕರೇ ।
ಅನ್ಯೇಽಪಿ ಯೇಚ ಮಂದೇಹಾಃ ರಾಕ್ಷಸಾಧೀಶ್ವರಾ ಮತಾಃ ।
ಗುಹ್ಯಾತಿಗುಹ್ಯ ಮಂತ್ರಸ್ಯ ರಕ್ಷಾರ್ಥಂ ಸಕಲೈಸ್ಸುರೈಃ ।
ಅಸ್ಮಾಭಿಃ ಸಂನಿಯುಕ್ತಾಂಸ್ತಾನ್ ಭವತೇ ಕಥಯಾಮ್ಯಹಂ ॥ ೫೦ ॥

॥ ರುದ್ರ ಉವಾಚ ॥
ವದ ಬ್ರಹ್ಮನ್ ಕಥಾಂ ದಿವ್ಯಾಂ ಯಾಮಹಂ ಪ್ರಷ್ಟುಮಾಗತಃ ।
ತಾಮೇವ ವಿಸ್ತರೇಣೈವ ಕಥಯಾಶು ಮಮ ಪ್ರಭೋ ॥ ೫೧ ॥

ದಿವಿಷ್ಠಂ ಭಾಸ್ಕರಂ ದೃಷ್ಟ್ವಾ ನಮೇತ್ ಕೇನ ವಿಧಾನತಃ ।
ಕಿಂ ಫಲಂ ತಸ್ಯ ವಾ ದೇವ ಸಮಾಪ್ತೇ ಭವತಿ ಕರ್ಮಣಿ ॥ ೫೨ ॥

॥ ಬ್ರಹ್ಮೋವಾಚ ॥
ಶೃಣು ರುದ್ರ ಸಮಾಸೇನ ಭಾಸ್ಕರಸ್ಯ ನತಿಕ್ರಿಯಾಂ ।
ಯಾಂ ಕೃತ್ವಾ ರೋಗದುಃಖಾರ್ತಾಃ ಮುಚ್ಯಂತೇ ಪಾಪಸಂಚಯಾತ್ ॥

---

೫೦. ಅಲ್ಲದೆ ಮಂದೇಹ ಎಂಬ ಬೇರೆ ರಾಕ್ಷಸಾಧೀಶ್ವರರನ್ನು ಸಂಹರಿಸಿ ಗುಹ್ಯಾತಿಗುಹ್ಯ ಮಂತ್ರದ ರಕ್ಷಣೆಗಾಗಿ ಸಕಲ ದೇವತೆಗಳೂ ಸೂರ್ಯನ ರಥದಲ್ಲಿ ವಾಸಿಸುತ್ತಾರೆ. ಕಟ್ಟಳೆಯ ಪ್ರಕಾರ ನಿಷ್ಕರ್ಷಿಸಲ್ಪಟ್ಟ ಇವರನ್ನೆಲ್ಲಾ ನಿನಗೋಸ್ಕರ ಹೇಳಿದೆನು.

೫೧. ರುದ್ರನು ಹೇಳುತ್ತಾನೆ—"ಅಯ್ಯಾ ಬ್ರಹ್ಮನೇ! ನಾನು ಯಾವ ವಿಚಾರವನ್ನು ಕೇಳಬೇಕೆಂದು ಬಂದಿರುವೆನೋ ಆ ವಿಚಾರವನ್ನು ನನಗೆ ವಿಸ್ತಾರವಾಗಿ ಬೇಗ ಹೇಳು.

೫೨. ಅಂತರಿಕ್ಷದಲ್ಲಿರುವ ಸೂರ್ಯನನ್ನು ನೋಡಿ ಯಾವ ವಿಧಾನದಿಂದ ನಮಸ್ಕಾರ ಮಾಡಬೇಕು? ಮತ್ತು ಆ ವ್ರತ ಸಮಾಪ್ತಿಯಾದಮೇಲೆ ಲಭಿಸುವ ಫಲವಾವುದು." ಎಂದನು.

೫೩. ಬ್ರಹ್ಮನು ಹೇಳುತ್ತಾನೆ—"ಅಪ್ಪಾ ರುದ್ರನೇ! ಸೂರ್ಯನಮಸ್ಕಾರ ಮಾಡುವ ಕ್ರಮವನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ಈ ಸೂರ್ಯ ನಮಸ್ಕಾರವನ್ನು ಮಾಡಿದವರು ರೋಗ ದುಃಖಾದಿ ಪೀಡಾಕಾರಣವಾದ ಪಾಪ ಸಮೂಹದಿಂದ ಬಿಡುಗಡೆ ಹೊಂದುತ್ತಾರೆ.

ಸ್ಥಂಡಿಲೇ ಮಂಡಲಂ ಕೃತ್ವಾ ದ್ವಾದಶಾಂಗುಲ ಮಾನತಃ ।
ಸದ್ಯೋ ಗೋಮಯಲಿಪ್ತೇ ಚ ತತ್ರೈವಾ ವಾಹಯೇದ್ರವಿಂ ॥ ೫೪ ॥

ಪೂಜಯಿತ್ವಾ ಗಣೇಶಾದೀನ್ ವಾಸುದೇವಂ ಚ ಸಾತ್ಯಕಿಂ ।
ಸತ್ಯಭಾಮಾಂ ತಥಾ ಲಕ್ಷ್ಮೀಂ ಉಮಾಂ ದೇವೀಂ ಚ ಶಂಕರಂ ॥ ೫೫ ॥

ಮಂಡಲಸ್ಯ ಸಮೀಪಸ್ಥಾ ಪೂರ್ವೋಕ್ತಾ ವೇದಮಂತ್ರವಿತ್ ।
ತತಃ ಪ್ರದಕ್ಷಿಣೀಕೃತ್ಯ ದಂಡವತ್ಪ್ರಣಮೇತ್ ಸಕೃತ್ ॥ ೫೬ ॥

ಶತಂ ಸಹಸ್ರಮಯುತಂ ಲಕ್ಷಂ ವಾ ನಿಜಪಾಪತಃ ।
ದೃಷ್ಟ್ವಾ ಶಕ್ತಿಂ ಪ್ರಣಮ್ಯಾಥ ಸದಾ ಸಂಯತಮಾನಸಃ ॥ ೫೭ ॥

ವಿಪ್ರಾಯ ದಕ್ಷಿಣಾಂ ದದ್ಯಾನ್ನಿರುಚ್ಛ್ವಾಸ್ವಃ ಸಮಾಹಿತಃ ।
ರಕ್ತಿಕೇ ಚ ಹಿರಣ್ಯಸ್ಯ ಶತಮಾತ್ರೇ ಸಹಸ್ರಕೇ ॥ ೫೮ ॥

---

೫೪. ಗೋಮಯದಿಂದ ಸಾರಿಸಿದ ನೆಲದ ಮೇಲೆ ಹನ್ನೆರಡು ಅಂಗುಲ ವ್ಯಾಸವುಳ್ಳ ಮಂಡಲವನ್ನು ರಚಿಸಿ ಆ ಮಂಡಲದಲ್ಲಿ ಸೂರ್ಯಾವಾಹನೆ ಮಾಡಬೇಕು.

೫೫-೫೬. ಮಂತ್ರಜ್ಞನು ಮೊದಲು ಗಣಪತಿಯ ಪೂಜೆಯನ್ನು ಮಾಡಿ ಆ ಮೇಲೆ ಕೃಷ್ಣ, ಸತ್ಯಭಾಮೆ, ಲಕ್ಷ್ಮಿ, ಸಾತ್ಯಕಿ, ಪಾರ್ವತೀ, ಪರಮೇಶ್ವರ, ಇವರನ್ನೆಲ್ಲಾ ಮಂಡಲ ಸಮೀಪದಲ್ಲಿ ಆವಾಹನೆ ಮಾಡಬೇಕು. ಅನಂತರ ಅನೇಕಸಾರಿ ದೀರ್ಘದಂಡ ಪ್ರಣಾಮವನ್ನು ಮಾಡಬೇಕು.

೫೭. ತನ್ನ ಶಕ್ತ್ಯನುಸಾರ ಸಹಸ್ರಾವೃತ್ತಿಯೋ ಹತ್ತುಸಾವಿರ ಸಲವೋ ಒಂದು ಲಕ್ಷಸಲವೋ ತನ್ನ ಪಾಪವು ಎಷ್ಟುಮಟ್ಟಿಗೆ ಅಧಿಕವಾಗಿದೆಯೋ ಅದಕ್ಕೆ ತಕ್ಕಷ್ಟು ಅಧಿಕವಾಗಿ ನಮಸ್ಕಾರ ಮಾಡಬೇಕು.

೫೮. ಹೀಗೆ ನಮಸ್ಕಾರ ಮಾಡುವಾಗ ಮನಸ್ಸನ್ನು ಚೆನ್ನಾಗಿ ನಿಗ್ರಹ ಮಾಡಿರಬೇಕು. ಅನಂತರ ನಿಟ್ಟುಸಿರು ಇಲ್ಲದ ಸಮಾಧಾನ ಚಿತ್ತದಿಂದ ಬ್ರಾಹ್ಮಣನಿಗೆ ದಕ್ಷಿಣೆ ಕೊಡಬೇಕು. ಸ್ವಲ್ಪ ಕೆಂಪು ಛಾಯೆಯುಳ್ಳ ಸುವರ್ಣ ನಿರ್ಮಿತವಾದ ನೂರು ಅಥವಾ ಸಾವಿರ ಸಂಖ್ಯೆಯ ನಾಣ್ಯಗಳ ದಕ್ಷಿಣೆಗಳನ್ನು ಬ್ರಾಹ್ಮಣರಿಗೆ ಕೊಡಬೇಕು.

ಮಾಷಕಾಣಾಂ ಚತುಷ್ಕಂ ಚಾಯುತಂ ದಶಗುಣಂ ದಿಶೇತ್ ।
ಪಕ್ಷೇ ದಶಗುಣಂ ಪ್ರೋಕ್ತಂ ದದ್ಯಾದ್ರೋಗವಿಮುಕ್ತಯೇ ॥ ೫೯ ॥

ಏವಂ ಕೃತೇ ವಿರೂಪಾಕ್ಷ ಸರ್ವರೋಗಾದ್ವಿಮುಚ್ಯತೇ ।
ಇದಂ ರಹಸ್ಯಂ ಪರಮಂ ಶೃಣುಯಾದ್ಯೋ ಹಿ ಮಾನವಃ ॥ ೬೦ ॥

ತಸ್ಯ ರೋಗಾ ವಿನಶ್ಯಂತಿ ಮಾರ್ತಂಡಸ್ಯ ಪ್ರಸಾದತಃ ।
ಅನ್ಯಚ್ಚ ತೇ ಪ್ರವಕ್ಷ್ಯಾಮಿ ಯಚ್ಚಾಪೃಷ್ಟಮುಮಾಪತೇ ।
ತಚ್ಛೃಣುಷ್ವ ಮಯಾ ಪ್ರೋಕ್ತಂ ರಥಯಂತೃನಿಯಾಮಕಂ ॥ ೬೧ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೂರ್ಯಪೂಜಾ ವರ್ಣನಂ ನಾಮ ದ್ವಿಪಂಚಾಶತ್ತಮೋಽಧ್ಯಾಯಃ.**



---

೫೯. ನಾಲ್ಕು ಚಿನ್ನದ ಉದ್ದಿನ ಕಾಳುಗಳನ್ನು ಕೊಟ್ಟರೆ ಹತ್ತುಸಾವಿರದಷ್ಟೋ ಅದರ ಹತ್ತರಷ್ಟೋ ಹೆಚ್ಚು ಫಲವನ್ನು ತೋರಿಸುವುದು. ರೋಗದಿಂದ ವಿಮುಕ್ತಿ ಹೊಂದಬೇಕಾದವನು ಹತ್ತರಷ್ಟನ್ನಾದರೂ ಕೊಡಬೇಕೆಂದು ಕೆಲವರ ಅಭಿಪ್ರಾಯ.

೬೦. ಅಯ್ಯಾ ವಿರೂಪಾಕ್ಷನೇ! ಹೀಗೆ ಮಾಡಿದರೆ ಸಮಸ್ತ ರೋಗಾದಿಗಳಿಂದ ವಿಮುಕ್ತಿ ಹೊಂದುವನು. ಈ ಪರಮ ರಹಸ್ಯವನ್ನು ಯಾವನು ಕೇಳುವನೋ ಅವನಿಗೆ ಸೂರ್ಯನ ಅನುಗ್ರಹದಿಂದ ರೋಗಾದಿಗಳೆಲ್ಲವೂ ಪರಿಹಾರವಾಗುವುವು.

೬೧. ಎಲೈ ಉಮಾಪತಿಯಾದ ರುದ್ರನೇ! ನೀನು ನನ್ನನ್ನು ಕೇಳದೆ ಇದ್ದರೂ ಇನ್ನೊಂದು ವಿಚಾರವನ್ನು ನಿನಗೆ ಹೇಳುವೆನು. ರಥಸಾರಥಿಯನ್ನು ನಿಯಮಿಸಿದ ವಿಚಾರವಾಗಿ ನಾನು ಹೇಳುವುದನ್ನು ಕೇಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೂರ್ಯಪೂಜಾ ವರ್ಣನೆಯೆಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಪಂಚಾಶತ್ತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ತತ್ರಾರುಣೋ ಮಯಾ ಪೂರ್ವಂ ಸಾರಥ್ಯೇ ಸನ್ನಿಯೋಜಿತಃ ।
ಇಂದ್ರೇಣ ಮಾಠರೋ ನಾಮ ವಾಯುನಾ ಕಲ್ಮಷಾಬಿಧಃ ॥ ೧ ॥

ವೈನತೇಯೇನ ತಾರ್ಕ್ಷ್ಯೋಪರಿ ವಿಮಲೋ ನಖ ।
ತುಂಡ ಪ್ರಹರಣಃ ಪುರೋಗಾಮಿಾ ನಿಯುಕ್ತ ಇತಿ ।
ಕಾಲೇನ ದಂಡೋ ಮಹಾದಂಡಾಯುಧೋ ಭವತಾ ।
ಶೇಷಾ ಮಹಾಗಣಾಧಿಪಾಃ ॥ ೨ ॥

ವೈರಾಜೇನ ರಾಜ್ಞಾ ವಸುಭಿದಾಯುಧಾಂಗಾ ।
ರಿಕ್ತೌ ದ್ವೌ ಅಗ್ನಿನಾ ಪಿಂಗಳಃ ।

---

## ಐವತ್ತಮೂರನೆಯ ಅಧ್ಯಾಯವು

೧. ಬ್ರಹ್ಮನು ಹೇಳುತ್ತಾನೆ—ನಾನು ಮೊದಲು ಸೂರ್ಯನ ಸಾರಥಿಯಾಗಿ ಅರುಣನನ್ನು ನೇಮಿಸಿದೆನು. ಇಂದ್ರನು ಮಾಠರನನ್ನೂ, ವಾಯುವು ಕಲ್ಮಾಷನನ್ನೂ

೨-೩. ಗರುಡನು ತಾರ್ಕ್ಷ್ಯನಾದಮೇಲೆ ನಖಮುಖಾಯುಧನಾದ ವಿಮಲನನ್ನೂ, ಅಗ್ರೇಸರನನ್ನಾಗಿ ನೇಮಕ ಮಾಡಿದನು. ಕಾಲ, ದಂಡ, ಮಹಾದಂಡ ಎಂಬುವರು ಮಿಕ್ಕ ಮಹಾಗಣಾಧಿಪರಾಗಿ ನಿಯತರಾದರು. ವೈರಾಜಲೋಕಾಧಿಪನಿಂದ ವಸುಭಿತ್, ಆಯುಧಾಂಗಾರಕ ಎಂಬ ಇಬ್ಬರೂ, ಅಗ್ನಿಯಿಂದ ಪಿಂಗಳನೆಂಬ

ಸಂಯಂತಾ ಮಹಾದಂಡಾಯುಧೋ ಭವತಾ ।
ಶೇಷೋ ಮಹಾಗಣಾಧಿಪಃ ॥ ೩ ॥

ಹಸ್ತೋ ಯಮೇನ ಪಾಶಹಸ್ತೋಽಂಬುಪತಿನಾ ।
ಸಮಿಂಧನಃ ಅಲಕಾಧಿಪತಿನಾ ವಿಷ್ಣುಃ ॥ ೪ ॥

ಅಶ್ವಿಭ್ಯಾಂ ಕಾಲೋಪಕಾಲೌ ವಾಕ್ಷಪ್ರಧಾನಕೌ ।
ನರನಾರಾಯಣಾಭ್ಯಾಂ ಕ್ಷಾರೌಧಾರೌ ಧಿಷಣ ಕೃಷ್ಣೌ ॥ ೫ ॥

ವೈರಾಜ ಶಂಖಪಾಲ ಪರ್ಜನ್ಯ ರಜಸಾಂ ದಿಶಾಸು ।
ವಿದಿಶಾಸು ದಿಶಾಂ ಪಾಲನಂ ವಿಶ್ವೇದೇವಾ ದದುಃ ॥ ೬ ॥

ಸಪ್ತೈತಾ ಲೋಕಮಾತರಃ ಸರ್ವ ಮರುತೋಽದರ್ದ ।
ಓಂಕಾರೋ ವಷಟ್ಕಾರೋ ವೇದನಿಸ್ವನಃ ಪಿನಾಕೀ ।
ವಿನಾಯಕಃ ಶೇಷೋಽನಂತೋ ವಾಸುಕಿಶ್ಚ ನಾಗ ।
ಸಹಸ್ರೇಣಾತ್ಮತುಲ್ಯೇನ ಆದಿತ್ಯಸ್ಯ ರಥಮನುಯಾಂತಿ ॥ ೭ ॥

---

ವನೂ, ಸಂಯಂತ್ಯವಿನಿಂನ ಮಹಾದಂಡಾಯುಧನೆಂಬುವನೂ, ನಿನ್ನಿಂದ ಶೇಷ ಎಂಬುವನೂ ಮಹಾಗಣಾಧಿಪರಾಗಿ ನೇಮಕವಾದರು.

೪. ಯಮನಿಂದ ಹಸ್ತನೆಂಬುವನೂ ವರುಣನಿಂದ ಪ್ರಕಾಶಮಾನವಾದ ಪಾಶಹಸ್ತನೆಂಬುನೂ, ಕುಬೇರನಿಂದ ವಿಷ್ಣುವೂ,

೫. ಅಶ್ವಿನೀ ದೇವತೆಗಳಿಂದ ಕಾಲೋಪಕಾಲ ; ವಾಕ್ಷಪ್ರಧಾನಕ ಇವರೂ ; ನರನಾರಾಯಣರಿಂದ ಕ್ಷಾರ, ಧಾರ ಎಂಬುವರೂ ; ಧಿಷಣ, ಕೃಷ್ಣ ಎಂಬುವರೂ ನಿಯಮಿತರಾದರು.

೬. ವೈರಾಜ, ಶಂಖಪಾಲ, ಪರ್ಜನ್ಯ, ರಜಸ್ಸು ಎಂಬುವರು ದಿಕ್ಕು ವಿದಿಕ್ಕುಗಳಲ್ಲಿ ನಿಯಮಿತರಾದರು. ವಿಶ್ವೇದೇವರು ದಿಕ್ಕುಗಳ ರಕ್ಷಣೆಯನ್ನು ಮಾಡಿದರು.

೭. ಬ್ರಾಹ್ಮ್ಯಾದಿ ಸಪ್ತ ಮಾತೃಕೆಯರೂ, ಆವಹವೇ ಮುಂತಾದ ಸಪ್ತ ಮರುತ್ತುಗಳೂ, ಓಂಕಾರ, ವಷಟ್ಕಾರ, ವೇದಧ್ವನಿ, ಇವೂ, ಶಿವ, ವಿನಾಯಕ ಇವರೂ ; ಶೇಷ, ಅನಂತ, ವಾಸುಕಿ ಮುಂತಾದ ನಾಗಗಳ ಅಧಿಪರೂ, ತಮಗೆ ಸಮಾನರಾದ ನಾಗಸಹಸ್ರದಿಂದ ಯುಕ್ತರಾಗಿ ಸೂರ್ಯನ ರಥವನ್ನು ಅನುಸರಿಸಿ ಹೋಗುವವರಾದರು.

ಗಾಯತ್ರೀ ಸಾವಿತ್ರೀ ರಥೇ ಸ್ಥಿತೇ ಉಭೇ ಸಂಧ್ಯೇ ।
ಸದಾ ಸಾ ದೇವತಾ ಯಾ ರವಿಮಂಡಲಂ ನಾಪ್ಯೈತಿ ।
ಭಗವಂತಂ ಸಹಸ್ರಕಿರಣಮುವಲಂಬಿತುಂ ॥ ೮ ॥

ಏತದ್ವೈ ಸರ್ವ ದೈವತ್ಯಂ ಮಂಡಲಂ ಬ್ರಹ್ಮವಾದಿನಂ ।
ಬ್ರಹ್ಮ ಯಜ್ಞ ವಾದಿನೀಂ ಯಜ್ಞಂ ಭಗವದ್ಭಕ್ತಾನಾಂ ।
ಪರಮಾದಿತ್ಯೋ ಯಂ ವಿಷ್ಣುರ್ಮಾಹೇಶ್ವರಾಣಾಂ ಮಹೇಶ್ವರಃ ॥ ೯ ॥

ಸ್ಥಾನಾಭಿಮಾನಿನೋ ಹ್ಯೇತೇ ಸದಾ ವೈ ವೃಷಭಧ್ವಜಃ ।
ಸೂರ್ಯಮಾಪ್ಯಾಯಯತ್ಯೈತತ್ತೇಜಸಾಂ ತೇಜ ಉತ್ತಮಂ ॥ ೧೦ ॥

ಗ್ರಥಿತೈಸ್ಸ್ವೈರ್ವಚೋಭಿಸ್ತು ಸ್ತುವಂತೇ ಋಷಯೋ ರವಿಂ ।
ಗಂಧರ್ವಾಪ್ಸರಸಶ್ಚೈವ ಗೀತತುಲ್ಯೈರುಪಾಸತೇ ॥ ೧೧ ॥

---

೮. ಗಾಯತ್ರೀ, ಸಾವಿತ್ರೀ ಎಂಬ ದೇವತೆಗಳೂ ; ಪ್ರಾತಸ್ಸಂಧ್ಯಾ ಸಾಯಂ ಸಂಧ್ಯಾ ಎಂಬೆರಡು ಸಂಧ್ಯೆಗಳೂ ; ರಥದಲ್ಲಿಯೇ ಇರುತ್ತವೆ. ಆ ದೇವತೆಗಳು ಸೂರ್ಯಮಂಡಲವನ್ನು ಬಿಟ್ಟು ಯಾವಾಗಲೂ ಹೋಗುವುದಿಲ್ಲ.

೯. ಹೀಗೆ ಈ ಸೂರ್ಯಮಂಡಲವು ಸಮಸ್ತ ದೇವತಾಮಯವಾದುದಾಗಿ ಬ್ರಹ್ಮವಾದಿಯಾದ ಮಹರ್ಷಿಯನ್ನೂ, ಬ್ರಹ್ಮವಾದಿನಿಯಾದ ಋಷಿಪತ್ನಿಯನ್ನೂ ಯಜ್ಞವನ್ನೂ ವಹಿಸುತ್ತದೆ. ಈ ಶ್ರೇಷ್ಠನಾದ ಸೂರ್ಯನು ವಿಷ್ಣುಭಕ್ತರಿಂದ ವಿಷ್ಣುವೆಂದೂ ಶಿವಭಕ್ತರಿಂದ ಶಿವನೆಂದೂ ಭಾವಿಸಲ್ಪಡುವನು. ಇವರೆಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಅಭಿಮಾನವುಳ್ಳವರು.

೧೦. ವೃಷಭಧ್ವಜನಾದ ಪರಮೇಶ್ವರನು ಈ ಸೂರ್ಯನಿಂದ ಯಾವಾಗಲೂ ವಹಿಸಲ್ಪಡುತ್ತಾನೆ. ತೇಜಸ್ಸುಗಳಲ್ಲೆಲ್ಲಾ ಸರ್ವೋತ್ತಮವಾದ ಈ ತೇಜಸ್ಸು ಸೂರ್ಯನನ್ನು ಸಂತೋಷ ಪಡಿಸುತ್ತದೆ.

೧೧. ಋಷಿಗಳು ಶಬ್ದಗಳನ್ನು ಸಂಘಟಿಸಿ ರಚಿಸಿದ ಸ್ತೋತ್ರರೂಪವಾದ ವಾಕ್ಯಗಳಿಂದ ಸೂರ್ಯನನ್ನು ಸ್ತೋತ್ರಮಾಡುತ್ತಾರೆ. ಗಂಧರ್ವರೂ ಅಪ್ಸರಸರೂ ಗಾನಕ್ಕೆ ಸಮಾನವಾದ ಮಂತ್ರಧ್ವನಿಗಳಿಂದ ಸೇವಿಸುತ್ತಾರೆ.

ವಿಯದ್ಭ್ರಮಣತೋ ರಕ್ಷಾಂ ಕುರ್ವಂತಿಸ್ಮ ಇಷುಗ್ರಹಂ ।
ಸರ್ಪಾ ವಹಂತಿ ವೈ ಸೂರ್ಯಂ ಯಾತುಧಾನಾಸ್ತು ಯಾಂತಿ ಚ ॥ ೧೨ ॥

ವಾಲಖಿಲ್ಯಾ ನಮಂತ್ಯೇತಂ ಪರಿಚರ್ಯೋದಯಾದ್ರವಿಂ ।
ದಿವಸ್ಪತಿ ಸ್ವಭೂಶ್ಚೋ ಭೌ ಅಗ್ರಗೌ ಯೋಜನಸ್ಯ ತು ॥ ೧೩ ॥

ಭರ್ಗೋಽಥ ದಕ್ಷಿಣೇ ಪಾರ್ಶ್ವೇ ಕಂಜಜೋ ವಾಮತಃ ಸ್ಥಿತಃ ।
ಸರ್ವೇ ತೇ ಪೃಷ್ಠಗಾ ಜ್ಞೇಯಾಃ ಗ್ರಹಾ ಲೋಕೇಷು ಪೂಜಿತಾಃ ॥ ೧೪ ॥

ಉಪರಾಗಶಿಖೀ ಚೋಭೌ ಅಗ್ರತೋ ನಾತ್ರ ಸಂಶಯಃ ।
ಮನುಷ್ಯಧರ್ಮಾ ದಕ್ಷಿಣತ ಉತ್ತರೇಣ ಪ್ರಚೇತಸಃ ॥ ೧೫ ॥

ಸಂಭವಂತಿ ತಥಾ ಕೃಷ್ಣ ಉಭಾವೇತೌ ಸದಾಗ್ರಗೌ ।
ವಾಮೇನ ವೀತಿಹೋತ್ರಸ್ತು ಪೃಷ್ಠತಸ್ತು ಹರಿಸ್ಸದಾ ॥ ೧೬ ॥

---

೧೨. ಸರ್ಪಗಳು ಇಷುಗ್ರಹವಮಾಡಿಕೊಂಡು ಆಕಾಶದಲ್ಲಿ ತಿರುಗುತ್ತಾ ಸೂರ್ಯನ ರಕ್ಷಣೆಯಲ್ಲಿ ಆಸಕ್ತಗಳಾಗಿರುತ್ತವೆ. ರಾಕ್ಷಸರು ಸೂರ್ಯನನ್ನು ಹೊತ್ತುಕೊಂಡು ಹೋಗುತ್ತಾರೆ.

೧೩. ವಾಲಖಿಲ್ಯರೆಂಬುವರು ಉದಯಕಾಲ ಮೊದಲುಗೊಂಡು ಈ ಸೂರ್ಯನನ್ನು ಸೇವಿಸಿ ನಮಸ್ಕರಿಸುತ್ತಾರೆ. ವಿಷ್ಣು, ಇಂದ್ರ, ಇವರಿಬ್ಬರೂ ಸೂರ್ಯನಿಗಿಂತ ಒಂದು ಯೋಜನ ಮುಂಭಾಗದಲ್ಲಿ ಹೋಗುತ್ತಾ ಇವನ ಆಗಮನದ ಮರ್ಯಾದೆಯನ್ನು ತೋರುತ್ತಾರೆ.

೧೪. ಈಶ್ವರನು ಸೂರ್ಯನ ರಥದ ಬಲಭಾಗದಲ್ಲಿಯೂ, ಬ್ರಹ್ಮನು ಎಡಭಾಗದಲ್ಲಿಯೂ, ಲೋಕಪೂಜಿತರಾದ ಎಲ್ಲಾ ಗ್ರಹಗಳೂ ರಥದ ಹಿಂಭಾಗದಲ್ಲಿಯೂ ಬರುತ್ತಾರೆ.

೧೫. ಉಪರಾಗ, ಶಿಖಿ ಎಂಬ ಇಬ್ಬರು ಮುಂಭಾಗದಲ್ಲಿ ಇರುತ್ತಾರೆ. ಕುಬೇರನು ದಕ್ಷಿಣ ದಿಕ್ಕಿನಲ್ಲಿಯೂ ವರುಣನು ಉತ್ತರ ದಿಕ್ಕಿನಲ್ಲಿಯೂ ಇರುವರು.

೧೬. ಸಂಬವಂತಿ, ಕೃಷ್ಣ, ಇವರಿಬ್ಬರೂ ಯಾವಾಗಲೂ ಸ್ವಲ್ಪ ಮುಂದೆ ಮುಂದೆ ಹೋಗುತ್ತಿರುತ್ತಾರೆ. ಅಗ್ನಿದೇವನು ಎಡಭಾಗದಲ್ಲೂ ಹಿಂಭಾಗದಲ್ಲಿ ಹರಿಯೂ ಸದಾ ಇರುತ್ತಾರೆ.

ರಥಪೀಠೇ ಕ್ಷಮಾ ಜ್ಞೇಯಾ ಅಂತರಾಲೇ ನಭಸ್ತಥಾ ।
ಆಶ್ರಿತ್ಯ ರಥಚಾಂ ಕಾಂತಿಂ ಖಂ ದಿವಃ ಸಮಯಃ ಸ್ಥಿತಃ ॥ ೧೭ ॥

ಧ್ವಜೋ ದಂಡಶ್ಚ ವಿಜ್ಞೇಯೌ ಧ್ವಜಾಗ್ರೇ ವೃಷ ಏವ ಚ ।
ಋದ್ಧಿರ್ವೃದ್ಧಿಸ್ತಥಾ ಶ್ರೀಶ್ಚ ಪತಾಕಾ ಪಾರ್ವತೀಪ್ರಿಯ ॥ ೧೮ ॥

ಧ್ವಜದಂಡಾಗ್ರೇ ಗರುಡಃ ತದಗ್ರೇ ವರುಣಾಲಯಃ ।
ಮೈನಾಕಶ್ಛತ್ರದಂಡಸ್ತು ಹಿಮವಾಂಶ್ಛತ್ರಮುಚ್ಯತೇ ॥ ೧೯ ॥

ಕೇಚಿದೇವಂ ವದಂತೀಹ ಲೋಕೇ ಚಾನ್ಯೇ ಮಹಾಮತೇ ।
ಛತ್ರದಂಡಸ್ತಥಾ ಕ್ಲೇಶಃ ಕ್ಲೇಶಂ ಛತ್ರಂ ವಿದುರ್ಬುಧಾಃ ॥ ೨೦ ॥

ಏತೇಷಾಮೇವ ದೇವಾನಾಂ ಯಥಾ ವೀರ್ಯಂ ತಥಾ ತಪಃ ।
ಯಥಾ ಯೋಗಂ ತಥಾ ಸತ್ವಂ ಯಥಾಸತ್ವಂ ತಥಾ ಬಲಂ ॥ ೨೧ ॥

---

೧೭. ರಥದ ಪೀಠಸ್ಥಾನದಲ್ಲಿ ಭೂಮಿಯೂ, ಮಧ್ಯದ ಅಂತರಾಳದಲ್ಲಿ ಆಕಾಶವೂ ಇರುತ್ತವೆ. ಆಕಾಶ ಸಂಕೇತವುಳ್ಳ ಖಂ ಎಂಬುದು ರಥದ ಕಾಂತಿಯನ್ನು ಆಶ್ರಯಿಸಿಕೊಂಡು ನಿಲ್ಲುವುದು.

೧೮, ಪಾರ್ವತೀ ಪ್ರಿಯನೇ! ರಥದ ಮೇಲುಗಡೆ ತುದಿಯಲ್ಲಿ ಧ್ವಜವೂ ಇರುತ್ತವೆ. ಧ್ವಜದಂಡದ ತುದಿಯಲ್ಲಿ ವೃಷಭವೂ ಮತ್ತು ಪತಾಕೆಯಲ್ಲಿ ಅತಿಶಯವೃದ್ಧಿಯೂ ಸಂಪತ್ತೂ ಇರುತ್ತವೆ.

೧೯. ಧ್ವಜದಂಡದ ತುದಿಯಲ್ಲಿ ಗರುಡನೂ ಅವನ ಮೇಲೆ ವರುಣಾಲಯನೂ ಇದೆ. ಮೈನಾಕಪರ್ವತವು ಛತ್ರಿಯ ದಂಡವೂ ಹಿಮವತ್ಪರ್ವತವು ವಿಸ್ತರಿಸಿದ ಛತ್ರಿಯೂ ಆಗಿ ಇದೆ ಎಂದೂ ಉಕ್ತವಾಗಿದೆ.

೨೦. ಅಯ್ಯಾ ಮಹಾಮತಿಯೇ! ಲೋಕದಲ್ಲಿ ಕೆಲವರು ಈ ಪ್ರಕಾರ ಹೇಳುತ್ತಾರೆ. ಜ್ಞಾನಿಗಳಾದ ಮತ್ತೆ ಕೆಲವರು ಕ್ಲೇಶವನ್ನು ಛತ್ರಿ ಮತ್ತು ಛತ್ರಿಯ ದಂಡ ಎಂದು ಹೇಳುವರು.

೨೧. ಸಾಮಾನ್ಯವಾಗಿ ದೇವತೆಗಳಿಗೆ ವೀರ್ಯವು ಇರುವುದಕ್ಕನುಸಾರವಾಗಿ ತಪಸ್ಸೂ, ಯೋಗಶಕ್ತಿ ಇರುವುದಕ್ಕೆ ತಕ್ಕಹಾಗೆ ಸತ್ವವೂ ಆ ಸತ್ವವಿರುವುದಕ್ಕೆ ತಕ್ಕಂತೆ ಬಲವೂ ಇರುವುದು.

ತಥಾ ತಪತ್ಯಸೌ ಸೂರ್ಯಃ ತೇಷಾಂ ಸಿದ್ಧಃ ಸ್ವತೇಜಸಾ ।
ಏತೇ ತಪಂತಿ ವರ್ಷಂತಿ ಯಾಂತಿ ವಿಶ್ವಂ ಸೃಜಂತಿ ಚ ॥ ೨೨ ॥

ಭೂತಾನಾಮಶುಭಂ ಕರ್ಮ ವ್ಯಪೋಹಂತಿ ಚ ಕೀರ್ತಿತಾಃ ।
ಏತೈಃ ಸಹೈವ ಸೂರ್ಯೇಣ ಭ್ರಮಂತೇ ಸಾನುಗಾ ದಿವಿ । ॥ ೨೩ ॥

ತಪಂತಶ್ಚ ಜಪಂತಶ್ಚ ಹ್ಲಾದಯಂತಶ್ಚ ವೈ ದ್ವಿಜಾಃ ।
ಗೋಪಾಯಂತಿಸ್ಮ ಭೂತಾನಿ ಇಹ ತೇ ಹ್ಯನುಕಂಪಯಾ ॥ ೨೪ ॥

ಪ್ರೀಣಾತಿ ದೇವಾನಮೃತೇನ ಸೂರ್ಯಃ ।
ಸೋಮೇನ ಸಕ್ತೇನ ವಿವರ್ಧಯಿತ್ವಾ ।
ಶುಕ್ಲೇನ ಪೂರ್ಣಾ ದಿವಸಕ್ರಮೇಣ ।
ತಂ ಕೃಷ್ಣಪಕ್ಷೇ ವಿಬುಧಾಃ ಪಿಬಂತಿ ॥ ೨೫ ॥

---

೨೨. ಈ ಸೂರ್ಯನು ತನ್ನ ಪೂರ್ಣವಾದ ತೇಜಸ್ಸಿನಿಂದ ಯುಕ್ತನಾಗಿ ಅವರವರ ತಪಸ್ಸು, ಸತ್ವ ಇವುಗಳಿಗೆ ಅನುಸಾರವಾಗಿ ಕಿರಣ ಪ್ರಸಾರಣ ಮಾಡಿ ತಪಿಸುತ್ತಾನೆ. ಈ ಕಿರಣಗಳು ಪ್ರಪಂಚವನ್ನೆಲ್ಲಾ ಸಂಚರಿಸುವುದು, ತಪಿಸುವುದು, ಮಳೆಗರೆಯುವುದು,' ಪ್ರಪಂಚದಲ್ಲಿ ಸೃಷ್ಟಿಸುವುದು ಈ ಕೆಲಸಗಳನ್ನೆಲ್ಲಾ ಮಾಡುತ್ತವೆ.

೨೩. ಇದಲ್ಲದೆ ಸೂರ್ಯನನ್ನು ಸ್ತೋತ್ರ ಮಾಡಿದ ಪ್ರಾಣಿಗಳ ಪಾಪಗನ್ನೆಲ್ಲಾ ಈ ಕಿರಣಗಳು ನಾಶಮಾಡುತ್ತವೆ. ಇವು ತನ್ನ ಪರಿವಾರ ವರ್ಗ ಸಮೇತನಾದ ಸೂರ್ಯನ ಜತೆಯಲ್ಲಿ ಆಕಾಶದಲ್ಲಿ ಸಂಚರಿಸುತ್ತವೆ.

೨೪. ಬ್ರಾಹ್ಮಣರು ತಾವು ಆಚರಿಸುವ ಜಪ ತಪಸ್ಸು ಇವುಗಳಿಂದ ಸೂರ್ಯತಾಪಸಂತಪ್ತರಿಗೆ ಆಹ್ಲಾದವುಂಟುಮಾಡುತ್ತಾ ಈರೀತಿ ದಯೆಯಿಟ್ಟು ಪ್ರಾಣಿಗಳನ್ನು ಕಾಪಾಡುತ್ತಾರೆ.

೨೫, ಸೂರ್ಯನು ತನ್ನಲ್ಲಿ ಸೇರಿದ ಚಂದ್ರರೂಪವಾದ ಉಪಕರಣಗಳಿಂದ ಅಮೃತವನ್ನು ಅಭಿವೃದ್ಧಿ ಪಡಿಸಿಕೊಂಡು ಆ ಮೂಲಕ ದೇವತೆಗಳನ್ನು ಅಮೃತದಿಂದ ಸಂತೋಷಪಡಿಸುತ್ತಾನೆ. ಶುಕ್ಲ ಪಕ್ಷದಲ್ಲಿ ದಿವಸಕ್ಕೆ ಒಂದು ಕಲೆಯಪ್ರಕಾರ ವೃದ್ಧಿಹೊಂದಿದ ಚಂದ್ರ ಕಲೆಯನ್ನು ಆ ಪಕ್ಷ ಪೂರ್ಣವಾದ ಮೇಲೆ ಕೃಷ್ಣಪಕ್ಷದಲ್ಲಿ ದಿವಸಕ್ಕೊಂದು ಕಲೆಯಂತೆ ದೇವತೆಗಳು ಪಾನಮಾಡುತ್ತಾರೆ.

ಪೀತಂ ಹಿ ಸೋಮಂ ದ್ವಿಕಲಾವಶೇಷಂ ।
ಕೃಷ್ಣೇ ತು ಪಕ್ಷೇ ರುಚಿಭಿರ್ಜ್ವಲಂತಂ ।
ಸುಧಾಮೃತಂ ತತ್ಪಿತರಃ ಪಿಬಂತಿ ।
ಊರ್ಜಾಶ್ಚ ಸೌಮ್ಯಾಶ್ಚ ತಥೈವ ಕಲ್ಪಾಃ ॥ ೨೬ ॥

ಸೂರ್ಯೇಣ ಗೋಭಿಶ್ಚ ಸಮುದ್ಧೃತಾಭಿಃ ।
ಅದ್ಭಿಃ ಪುನಶ್ಚೈವ ಸಮುಚ್ಛ್ರಿತಾಭಿಃ ।
ತಥಾ ದ್ರುಮೌಘಾಃ ಸಲಿಲಂ ಪಿಬಂತಿ ।
ಅತ್ಯಂತ ಪಾನೇನ ಕ್ಷುಧಾಂ ಜಯಂತಿ ॥ ೨೭ ॥

ಮಾಸಾರ್ಧತೃಪ್ತಿಸ್ತು ತಥಾsಭಿರದ್ಭಿಃ ।
ಮಾಸೇನ ತೃಪ್ತಿಸ್ಸ್ವಧಯಾ ಪಿತೄಣಾಂ ।
ಅನ್ನೇನ ಶಶ್ವದ್ವಿದಧಾತಿ ಮರ್ತ್ಯಂ ।
ತ್ವಯಂ ಜಗಚ್ಚೈವ ಬಿಭರ್ತಿ ಗೋಭಿಃ ॥ ೨೮ ॥

---

೨೬. ಈರೀತಿ ದೇವತೆಗಳು ಪಾನಮಾಡಿ ಚಂದ್ರನ ಎರಡು ಕಲೆಯನ್ನು ಶೇಷವಾಗಿ ಉಳಿಸಿರುವಾಗ ಕೃಷ್ಣಪಕ್ಷದಲ್ಲಿ ಕಾಂತಿಗಳಿಂದ ಪ್ರಕಾಶಿಸುತ್ತಿರುವ ಸುಧಾ ಸಂಭೂತವಾದ ಅಮೃತವನ್ನು ಊರ್ಜರು, ಸೌಮ್ಯರು, ಕಲ್ಪರು ಎಂಬ ಸಂಜ್ಞೆಯುಳ್ಳ ಪಿತೃದೇವತೆಗಳು ಪಾನಮಾಡುತ್ತಾರೆ,

೨೭. ಸೂರ್ಯನು ತನ್ನ ಕಿರಣ ಸಹಾಯದಿಂದ ಸಮುದ್ರಾದಿಗಳನ್ನು ಶೋಷಿಸಿ ಜಲಾಂಶವನ್ನು ಮೇಲಕ್ಕೆಳೆದುಕೊಂಡು ಪುನಃ ವೃಷ್ಟಿರೂಪವಾಗಿ ಕೆಳಕ್ಕೆ ಜಲವನ್ನು ಸುರಿಸಿ ಲೋಕವನ್ನೆಲ್ಲಾ ತೃಪ್ತಿಪಡಿಸುತ್ತಾನೆ, ವೃಕ್ಷ ಸಮೂಹಗಳು ಯಾವಾಗಲೂ ನೀರನ್ನು ಸಮೃದ್ಧಿಯಾಗಿ ಪಾನಮಾಡುವುದರಿಂದ ತಮ್ಮ ಹಸಿವನ್ನು ಅಡಗಿಸಿಕೊಳ್ಳುತ್ತವೆ.

೨೮. ಈರೀತಿ ಕಿರಣದಿಂದುಂಟಾದ ಜಲವನ್ನು ಇವು ಒಂದುಸಾರಿ ಸಮೃದ್ಧಿಯಾಗಿ ಪಾನಮಾಡಿದರೆ ಒಂದು ಪಕ್ಷದವರೆಗೆ ತೃಪ್ತಿಹೊಂದುತ್ತವೆ. ಈ ಕಿರಣಗಳಿಂದ ಏರ್ಪಟ್ಟ ಅನ್ನವನ್ನು ಸ್ವಧಾರೂಪದಿಂದ ಒಂದುಸಲ ಪಿತೃಗಳು ಸೇವಿಸುವುದರಿಂದ ಒಂದು ತಿಂಗಳಕಾಲ ತೃಪ್ತರಾಗುವರು. ಈ ಕಿರಣಜನಿತವಾದ ವೃಷ್ಟಿಯಿಂದ ಬೆಳೆದ ಸಸ್ಯರೂಪವಾದ ಅನ್ನದಿಂದ ಮನುಷ್ಯನು ಪುಷ್ಟನಾಗುವನು ಮತ್ತು ತೃಪ್ತಿಹೊಂದು

ಅಹೋರಾತ್ರಂ ರಥೇನಾಸೌ ಏಕಚಕ್ರೇಣ ವೈ ಭ್ರಮನ್ ।
ಸಪ್ತದ್ವೀಪಸಮುದ್ರಾಂತಂ ಸಪ್ತಭಿಶ್ಚ ಹಯೈಸ್ಸಹ ॥ ೨೯ ॥

ಛಂದೋಭಿರ್ವಾಜಿರೂಪೈಸ್ತೈಃ ಯತಶ್ಚಕ್ರಂ ತತಃಸ್ಥಿತೈಃ ।
ಕಾಮರೂಪೈಃ ಸಕೃದ್ಯುಕ್ತೈಃ ಅಂತರಸ್ಥೈರ್ಮನೋಜವೈಃ ॥ ೩೦ ॥

ಹರಿದ್ಭಿರವ್ಯಯೈರ್ವಶ್ಯೈಃ ಕ್ಷುಧಾಶ್ರಮವಿವರ್ಜಿತೈಃ ।
ದ್ವಾಶೀತಿಮಂಡಲಶತಂ ಊಹ್ಯಂತೇಽಬ್ದೇನ ವೈ ಹಯೈಃ ॥ ೩೧ ॥

ಬಾಹ್ಯತೋಽಭ್ಯಂತರಂ ಚೈವ ಮಂಡಲಂ ದಿವಸಕ್ರಮಾತ್ ।
ಕಲ್ಪಾದೌ ಸಂಪ್ರಯುಕ್ತಾಸ್ತೇ ವಹಂತ್ಯಾಭೂತಸಂಪ್ಲವಂ ॥ ೩೨ ॥

---

ವನು. ಈರೀತಿ ಸೂರ್ಯನು ತನ್ನ ಕಿರಣಗಳಿಂದಲೇ ಅನ್ನವನ್ನು ಸೃಷ್ಟಿಮಾಡಿ ಸಕಲ ಜಗತ್ತನ್ನೂ ಪೋಷಿಸುತ್ತಾನೆ.

೨೯. ಈ ಸೂರ್ಯನು ಒಂದೇ ಚಕ್ರವೂ, ಏಳು ಕುದುರೆಗಳೂ ಉಳ್ಳ ರಥದಿಂದ ಹಗಲೂ ರಾತ್ರಿ ಸುತ್ತುತ್ತಾ ಸಪ್ತ ದ್ವೀಪಗಳನ್ನೂ ಸಪ್ತ ಸಾಗರಗಳನ್ನೂ ಸಂಚರಿಸುತ್ತಾನೆ.

೩೦. ಸರ್ವದಾ ಚಕ್ರವಿರುವ ಕಡೆಯೇ ಇರುವಂಥ, ಅಶ್ವರೂಪವನ್ನು ಧರಿಸಿದ ವೇದಗಳು ಇಚ್ಛಾನುಸಾರ ಬೇರೆ ಬೇರೆ ಆಕಾರವನ್ನು ಹೊಂದಬಲ್ಲವೂ ಒಂದೇ ಆವೃತ್ತಿ ಕಲ್ಪಲ್ಪಟ್ಟು ಬದಲಾಯಿಸದೇ ಇರತಕ್ಕವೂ, ಮಧ್ಯೆ ತಕ್ಕಷ್ಟು ಅವಕಾಶವುಳ್ಳಹಾಗೆ ಜೋಡಿಸಲ್ಪಟ್ಟವೂ, ಮನೋವೇಗವುಳ್ಳವೂ ಆಗಿವೆ.

೩೧. ಅಲ್ಲದೆ ತಂಟೆ ಮಾಡದೆ ಸ್ವಾಧೀನವಾಗಿರತಕ್ಕವೂ, ಯಾವಾಗಲೂ ನಾಶರಹಿತಗಳಾದುವೂ, ಹಸಿವು ಬಾಯಾರಿಕೆಗಳಿಲ್ಲದಿರುವುವೂ, ಹರಿದ್ವರ್ಣವುಳ್ಳವೂ ಆದ ಆ ಕುದುರೆಗಳು ಸೂರ್ಯನನ್ನು ಒಂದು ವರ್ಷದಲ್ಲಿ ಎಂಭತ್ತೆರಡುನೂರು ಸುತ್ತುಗಳು ಸುತ್ತುವುವು.

೩೨. ದಿವಸಕ್ರಮದಲ್ಲಿ ಮಂಡಲದ ಒಳಗಡೆ ಹೊರಗಡೆಗಳಲ್ಲಿ ಸಂಚರಿಸುತ್ತಾ ಅವು ಒಂದು ವರ್ಷದಲ್ಲಿ ಮೇಲೆ ಹೇಳಿದಷ್ಟು ಸುತ್ತುಗಳನ್ನು ಸುತ್ತುವುವು. ಕಲ್ಪ ಪ್ರಾರಂಭದಲ್ಲಿ ಸೂರ್ಯ ರಥಕ್ಕೆ ಕಟ್ಟಿದ ಕುದುರೆಗಳು ಕಲ್ಪ ಮುಗಿಯುವ ಪ್ರಳಯ ಕಾಲ ಪರ್ಯಂತ ಕಟ್ಟಿಯೇ ಇರುತ್ತವೆ.

ಆವೃತಾ ವಾಲಖಿಲ್ಯೈಸ್ತ್ವೈಃ ಭ್ರಮಂತಿ ತಾನ್ಯಹಾನಿ ತು ।
ಗ್ರಥಿತೈಃ ಸ್ವೈ ರ್ವಚೋಭಿಸ್ತು ಸ್ತೂಯಮಾನೋ ಮಹರ್ಷಿಭಿಃ ॥ ೩೩ ॥

ಸೇವ್ಯತೇ ನೃತ್ಯಗೀತೈಶ್ಚ ಗಂಧರ್ವೈರಪ್ಸರೋಗಣೈಃ ।
ಪತಂಗಃ ಪತಗೈರಶ್ವೈರ್ವಸತೇ ಭ್ರಮಯನ್ ದಿವಿ ॥ ೩೪ ॥

ವೀಥ್ಯಾಗ್ರ್ಯಯಾ ವಿಚರತೇ ನಕ್ಷತ್ರಾಣಿ ಯಥಾ ಶಶೀ ।
ಮಧ್ಯಗಶ್ಚಾಮರಾವತ್ಯಾಂ ಯದಾ ಭವತಿ ಭಾಸ್ಕರಃ ॥ ೩೫ ॥

ವೈವಸ್ವತೇ ಸಂಯಮನೇ ಉತ್ತಿಷ್ಠನ್ ದೃಶ್ಯತೇ ತದಾ ।
ಸುಖಾಯಾಮರ್ಧರಾತ್ರಂ ತು ವಿಭಾಯಾಮಸ್ತಮೇತಿ ಚ ॥ ೩೬ ॥

ವೈವಸ್ವತೇ ಸಂಯಮನೇ ಮಧ್ಯಗಸ್ತು ರವಿರ್ಯದಾ ।
ಸುಖಾಯಾಮಥ ವಾರುಣ್ಯಾಮುತ್ತಿಷ್ಠನ್ ದೃಶ್ಯತೇ ತದಾ ॥ ೩೭ ॥

---

೩೩. ವಾಲಖಿಲ್ಯ ಮಹರ್ಷಿಗಳು ತಾವು ಶಬ್ದಗಳನ್ನು ಜೋಡಿಸಿ ರಚಿಸಿದ ಸ್ತೋತ್ರಗಳಿಂದ ಸ್ತುತಿಸುತ್ತಿರುವರು, ಗಂಧರ್ವರೂ ಅಪ್ಸರರೂ ನೃತ್ಯಗೀತಗಳಿಂದ ಅವನನ್ನು ಸೇವಿಸುತ್ತ ಇರುವರು.

೩೪. ಇಂತಹ ಸೂರ್ಯನು ನಕ್ಷತ್ರಮಾರ್ಗದಲ್ಲಿ ಚಂದ್ರನು ಸಂಚರಿಸುವಂತೆ ಶ್ರೇಷ್ಠವಾದ ವೇಗಾಶ್ವಯುತನಾಗಿ ಆಕಾಶದಲ್ಲಿಯೇ ತಾನೂ ಸಂಚರಿಸುತ್ತಾನೆ.

೩೫. ಸೂರ್ಯನು ಅಮರಾವತಿ ಪಟ್ಟಣದಲ್ಲಿ ಆಕಾಶ ಮಧ್ಯಕ್ಕೆ ಬಂದಾಗ (ಎಂದರೆ ಅಮರಾವತಿ ಪಟ್ಟಣದಲ್ಲಿ ಮಧ್ಯಾಹ್ನವಾಗಿರುವಾಗ) ಯಮರಾಜಧಾನಿಯಾದ ಸಂಯಮನೀ ಪಟ್ಟಣದಲ್ಲಿ ಉದಯವಾದಂತೆ ಕಾಣಿಸುತ್ತಾನೆ.

೩೬. ಸಂಯಮನೀ ಪಟ್ಟಣದಲ್ಲಿ ಸುಖಕರವಾಗಿದ್ದ ಅವನ ತೇಜಸ್ಸೆಲ್ಲವೂ ಮಧ್ಯರಾತ್ರಿಯಲ್ಲಿ ಅಸ್ತವಾದಂತಿರುವುದು.

೩೭. ಸಂಯಮನೀ ಪಟ್ಟಣದಲ್ಲಿ ಸೂರ್ಯನು ಆಕಾಶಮಧ್ಯಗತನಾದಾಗ (ಮಧ್ಯಾಹ್ನವಾದಾಗ) ಪಶ್ಚಿಮದಲ್ಲಿ ವರುಣಪುರಿಯಲ್ಲಿ ಉದಯಿಸುವಂತೆ ಕಾಣುತ್ತಾನೆ.

ರಾತ್ರ್ಯರ್ಧೇ ಚಾಮರಾವತ್ಯಾಮಸ್ತಮೇತಿ ಯಮಸ್ಯ ವೈ ।
ಸೋಮಪುರ್ಯಾಂ ವಿಭಾವರ್ಯಾಂ ಮಧ್ಯಗಶ್ಚಾರ್ಯಮಾ ಯದಾ ॥ ೩೮ ॥

ಮಹೇಂದ್ರಸ್ಯಾಮರಾವತ್ಯಾಮುತ್ತಿಷ್ಠತಿ ದಿವಾಕರಃ ।
ಅರ್ಧರಾತ್ರೇ ಸಂಯಮನೇ ವಾರುಣ್ಯಾಮಸ್ತಮೇತಿ ಚ ॥ ೩೯ ॥

ಏವಂ ಚತುರ್ಷು ಪಾರ್ಶ್ವೇಷು ಮೇರೋಃ ಕುರ್ವನ್ ಪ್ರದಕ್ಷಿಣಂ ।
ಉದಯಾಸ್ತಮಯೇ ಚಾಸೌ ಉತ್ತಿಷ್ಠತಿ ಪುನಃ ಪುನಃ ॥ ೪೦ ॥

ಪೂರ್ವಾಹ್ನೇ ಚಾಪರಾಹ್ನೇ ಚ ದ್ವೌ ದ್ವೌ ದೇವಾಲಯೌ ಪುನಃ ।
ತಪತ್ಯೇಕಂ ತು ಮಧ್ಯಾಹ್ನೇ ತಾಭಿರೇವ ಗಭಸ್ತಿಭಿಃ ॥ ೪೧ ॥

---

೩೮. ಇಂದ್ರನ ಅಮರಾವತಿಯಲ್ಲಿ ಅರ್ಧರಾತ್ರಿಯಾದಾಗ ಯಮಪುರಿಯಲ್ಲಿ ಅಸ್ತಮಯ ಸಮಯವಾಗಿರುವುದು. ಕುಬೇರನ ಸೋಮಪುರಿಯಾದ ಅಲಕಾವತಿಯಲ್ಲಿ ಮಧ್ಯರಾತ್ರಿಯಾದಾಗ ಅಮರಾವತಿಯಲ್ಲಿ ಸೂರ್ಯನು ಉದಯಿಸುವಂತೆ ಕಂಡುಬರುತ್ತಾನೆ.

೩೯. ಯಮಪುರಿಯಾದ ಸಂಯಮನಿಯಲ್ಲಿ ಅರ್ಧರಾತ್ರಿಯಾಗಿರುವಾಗ ವರುಣ ಪುರಿಯಲ್ಲಿ ಸೂರ್ಯಾಸ್ತಮಯ ಸಮಯವಾಗಿರುವುದು.

೪೦. ಈ ಪ್ರಕಾರ ಸೂರ್ಯನು ಮೇರುವಿನ ಸುತ್ತಲೂ ಪ್ರದಕ್ಷಿಣೆ ಮಾಡುವುದರಿಂದ ಉದಯಾಸ್ತಗಳೆರಡೂ ಹೀಗೆ ಕ್ರಮವನ್ನನುಸರಿಸಿ ಆಗುತ್ತಿದ್ದರೂ ಅವನು ಪುನಃ ಪುನಃ ಉದಯಿಸುತ್ತಾನೆ.

೪೧. ಸೂರ್ಯದೇವನು ಪೂರ್ವಾಹ್ಣದಲ್ಲಿ ಕ್ಲುಪ್ತವಾದ ಒಂದೇ ಸ್ಥಳದಲ್ಲಿದ್ದರೂ ಎರಡು ಕಡೆಯಿಂದ ಪೂಜೋಪಚಾರ ಸಲ್ಲುವುದು. ಅಪರಾಹ್ಣದಲ್ಲಿಯೂ ಹಾಗೆಯೇ ಒಂದೇ ಕಡೆ ಇದ್ದರೂ ವಿಭಿನ್ನ ದಿಕ್ಕುಗಳಿಂದ ಪೂಜೋಪಚಾರ ಪ್ರಾಪ್ತಿಯಾಗುವುದು. ಆದ್ದರಿಂದ ಪೂಜಾಸ್ವೀಕಾರ ನಿಮಿತ್ತದಿಂದ ಎರಡು ವಿಭಿನ್ನದಿಕ್ಕಿನಲ್ಲೂ ಅವನು ಇದ್ದ ಹಾಗೆಯೇ ಆಯಿತು.

ಉದಿತೋ ವರ್ಧಮಾನಾಭಿರಾಮಧ್ಯಾಹ್ನಾತ್ತಪೇದ್ರವಿಃ ।
ತತಃಪರಂ ಹ್ರಸಂತೀಭಿಃ ಗೋಭಿರಸ್ತಂ ನಿಯಚ್ಛತಿ ॥ ೪೨ ॥

ಯತ್ರೋರ್ದ್ಧ್ವಂ ದೃಶ್ಯತೇ ಸೂರ್ಯಃ ಸ ತೇಷಾಮುದಯಂ ಸ್ಮೃತಃ ।
ಪ್ರಣಾಶಂ ಗಚ್ಛತೇ ಯತ್ರ ಸ ತೇಷಾ ಮಸ್ತಮುಚ್ಯತೇ ॥ ೪೩ ॥

ಏವಂ ಪುಷ್ಕರಮಧ್ಯೇನ ತದಾ ಸರ್ಪತಿ ಭಾಸ್ಕರಃ ।
ತ್ರಿಂಶದ್ಭಾಗಂ ತು ಮೇದಿನ್ಯಾಂ ಮುಹೂರ್ತೇನ ಸ ಗಚ್ಛತಿ ॥ ೪೪ ॥

ಯೋಜನಾಯುಕ್ತ ಸಂಖ್ಯಾಂ ತು ಮುಹೂರ್ತಸ್ಯ ನಿಬೋಧ ಮೇ ।
ಪೂರ್ಣಂ ಶತಸಹಸ್ರಾಣಾಂ ಸಹಸ್ರಂ ತು ತ್ರಿಲೋಚನ ॥ ೪೫ ॥

ಪಂಚಾಶಚ್ಚ ತಥಾಲ್ಪಾನಿ ಸಹಸ್ರಾಣ್ಯಧಿಕಾನಿ ತು ।
ಮೌಹೂರ್ತಿಕೀಗತಿರ್ಹ್ಯೇಷಾ ಸೂರ್ಯಸ್ಯ ತು ವಿಧೀಯತೇ ॥ ೪೬ ॥

---

೪೨. ಒಂದೇ ಸ್ಥಾನದಲ್ಲಿದ್ದೇ ಕಿರಣ ಪ್ರಸಾರ ಮಾಡುವನಾದರೂ, ಒಂದು ಸ್ಥಳದವರಿಗೆ ಮಧ್ಯಾಹ್ನದಲ್ಲಿ ತಪಿಸುವಂತೆಯೂ, ಮತ್ತೊಂದು ಕಡೆಯವರ ಕಣ್ಣಿಗೆ ಪ್ರಾತಃಕಾಲದಲ್ಲಿ ಉದಯವಾಗಿ ಕ್ರಮವಾಗಿ ಏರುತ್ತಿರುವ ಕಿರಣದಿಂದ ಅವರಿಗೆ ಮಧ್ಯಾಹ್ನವಾಗುವವರೆಗೆ ತಪಿಸುವಂತೆಯೂ ಇರುತ್ತಾ ಆಮೇಲೆ ಕಿರಣಗಳು ಹ್ರಸ್ವವಾಗುತ್ತ ಬಂದು ಕೊನೆಗೆ ಅಸ್ತವನ್ನು ಹೊಂದುತ್ತಾನೆ.

೪೩. ಸೂರ್ಯನು ಒಂದು ಸ್ಥಳದಲ್ಲಿದ್ದವರಿಗೆ ಕಣ್ಣಿಗೆ ಕಾಣಿಸುವಂತಾದರೆ ಆಗ ಅಲ್ಲಿನ ಜನರಿಗೆ ಉದಯವಾದನೆಂದೂ, ಎಲ್ಲಿರುವ ಜನರ ಕಣ್ಣಿಗೆ ಸೂರ್ಯನು ಮರೆಯಾಗುವನೋ ಅಲ್ಲಿನ ಜನರಿಗೆ ಆಗ ಅಸ್ತನಾದನೆಂದೂ ವ್ಯವಹರಿಸಲ್ಪಡುವನು.

೪೪. ಹೀಗೆ ಸೂರ್ಯನು ಆಕಾಶ ಮಧ್ಯದಿಂದ ಸರಿಯುವಾಗ ಒಂದು ಮುಹೂರ್ತಕ್ಕೆ ಭೂಮಿಯ ಮೂವತ್ತರಲ್ಲೊಂದುಭಾಗದಷ್ಟು ಸಾಗುತ್ತಾನೆ.

೪೫. ಅಯ್ಯಾ ಮುಕ್ಕಣ್ಣನೇ! ಈಗ ನಾವು ನಿರ್ಣಯಿಸಿಕೊಂಡಿರುವ ಈ ಮುಹೂರ್ತಸಂಖ್ಯಾ ಪರಿಮಾಣವನ್ನು ತಿಳಿದುಕೊ. ಹೀಗೆ ನೂರುಸಾವಿರ ವರ್ಷಗಳೂ,

೪೬. ಅದರ ಮೇಲೆ ಇನ್ನೂ ಸ್ವಲ್ಪ ಹೆಚ್ಚು ಎಂದರೆ ಅಲ್ಪವಾದ ಐವತ್ತು ಸಾವಿರಗಳನ್ನು ಸೇರಿಸಬೇಕು. ಸೌರಮಾನದಲ್ಲಿ ಮುಹೂರ್ತಗತಿಯು ಇಷ್ಟು ಪ್ರಮಾಣವುಳ್ಳದ್ದೆಂದು ಹೇಳಿದೆ.

**ಯೋಜನಾನಾಂ ಸಹಸ್ರೇ ದ್ವೇ ದ್ವೇ ಶತೇ ದ್ವೇ ಚ ಯೋಜನೇ ।**
**ನಿಮೇಷಾಂತರ ಮಾತ್ರೇಣ ದಿವಿ ಸೂರ್ಯಃ ಪ್ರಸರ್ಪತಿ ॥ ೪೭ ॥**

**ಸ ಶೀಘ್ರಮೇವ ಪರ್ಯೇತಿ ಭಾಸ್ಕರೋಽಲಾತಚಕ್ರವತ್ ।**
**ಭ್ರಮನ್ ವೈ ಭ್ರಮಮಾಣೇಷು ಋಕ್ಷೇಷು ವಿಚರತ್ಯಸೌ ॥ ೪೮ ॥**

**ಇಂದ್ರಃ ಪೂಜಯತೇ ಸೂರ್ಯಮುತ್ತಿಷ್ಠಂತಂ ದಿನೇ ದಿನೇ ।**
**ಮಧ್ಯಾಹ್ನೇ ಚ ಯಮಃ ಪಶ್ಚಾದಸ್ತಂ ಯಾಂತಮಪಾಂಪತಿಃ ॥ ೪೯ ॥**

**ಸೋಮಸ್ತಥಾರ್ಧರಾತ್ರೇ ತು ಸದಾ ಪೂಜಯತೇ ರವಿಂ ।**
**ವಿಷ್ಣುರ್ಭವಾನಹಂ ರುದ್ರಃ ಪೂಜಯಾಮೋ ನಿಶಾಕ್ಷಯೇ ॥ ೫೦ ॥**

**ಏವಮಗ್ನಿರ್ನಿರ್ಋತಿಶ್ಚ ವಾಯುರೀಶಾನ ಏವ ಚ ।**
**ಪೂಜಯಂತಿ ಕ್ರಮೇಣೈವ ಭ್ರಮಮಾಣಂ ದಿವಾಕರಂ ।**

---

೪೭. ಸೂರ್ಯನು ಒಂದು ನಿಮಿಷದೊಳಗೆ ಎರಡುಸಾವಿರದ ಎರಡು ನೂರ ಎರಡು ಯೋಜನದೂರ ಆಕಾಶದಲ್ಲಿ ಸರಿಯುತ್ತಾನೆ.

೪೮. ಆಗ ಸೂರ್ಯನು ಗಿರ್ರನೆ ತಿರುಗುವ ಕೊಳ್ಳಿಯಿಂದೇರ್ಪಟ್ಟ ಜ್ವಾಲಾ ಚಕ್ರದಂತೆ, ವೇಗವಾಗಿ ಸುತ್ತುತ್ತಾನೆ. ಹೀಗೆ ಇವನು ಸುತ್ತುತ್ತಾ ಚಲಿಸುತ್ತಿರುವ ನಕ್ಷತ್ರಗಳಲ್ಲಿ ಬೆರಸುತ್ತಾನೆ.

೪೯. ಇಂದ್ರನು ಪ್ರತಿದಿನವೂ ಉದಯಿಸುತ್ತಿರುವ ಸೂರ್ಯನನ್ನೂ, ಯಮನು ಪ್ರತಿದಿನವೂ ಮಧ್ಯಾಹ್ನದ ಸೂರ್ಯನನ್ನೂ, ವರುಣನು ಪ್ರತಿದಿನವೂ ಅಸ್ತಮಿಸುತ್ತಿರುವ ಸೂರ್ಯನನ್ನೂ,

೫೦. ಕುಬೇರನು ಅರ್ಧರಾತ್ರಿಯ ವೇಳೆಯಲ್ಲಿ (ಅವನಿರುವ ಸ್ಥಳದಲ್ಲಿ ಕಾಣಿಸುವ) ಸೂರ್ಯನನ್ನೂ ಪೂಜಿಸುವರು. ವಿಷ್ಣುವೂ, ರುದ್ರನಾದ ನೀನೂ, ನಾನೂ, ಬೆಳಗಿನ ಜಾವದಲ್ಲಿ ಪೂಜಿಸುವೆವು.

ಶ್ರೇಯೋऽರ್ಥಂ ದೇವಶಾರ್ದೂಲ ।
ಸರ್ವೇ ಬ್ರಹ್ಮಾದಯಃ ಸುರಾಃ ॥ ೫೧ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ರಥ ಸಪ್ತಮೀ ಕಲ್ಪೇ ಸೂರ್ಯಗತಿ ವರ್ಣನಂ ನಾಮ ತ್ರಿಪಂಚಾಶತ್ತಮೋಽಧ್ಯಾಯಃ**



೫೧. ಅಯ್ಯಾ ದೇವಶ್ರೇಷ್ಠನೇ! ಹೀಗೆಯೇ ಅಗ್ನಿ, ನಿರ್ಋತಿ, ವಾಯು, ಈಶಾನ ಇವರೂ ಬ್ರಹ್ಮಾದಿ ದೇವತೆಗಳೆಲ್ಲರೂ ಚಲಿಸುತ್ತಿರುವ ಸೂರ್ಯನನ್ನು ತಮ್ಮ ಶ್ರೇಯಸ್ಸಿಗಾಗಿ ಕ್ರಮವಾಗಿ ಪೂಜಿಸುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೂರ್ಯನ ಚಲನೆಯ ವರ್ಣನೆಯೆಂಬ ಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುಷ್ಪಂಚಾಶತ್ತಮೋಽಧ್ಯಾಯಃ

॥ ರುದ್ರ ಉವಾಚ ॥

ಅಹೋ ಹಂಸಸ್ಯ ಮಾಹಾತ್ಮ್ಯಂ ವರ್ಣಿತಂ ಭವತೇದೃಶಂ ।
ಕಥ್ಯತಾಂ ಪುನರೇವೇದಂ ಮಾಹಾತ್ಮ್ಯಂ ಭಾಸ್ಕರಸ್ಯ ತು ॥ ೧ ॥

॥ ಬ್ರಹ್ಮೋವಾಚ ॥

ಆದಿತ್ಯಮಂತ್ರಮಖಿಲಂ ತ್ರೈಲೋಕ್ಯಂ ಸ ಚರಾಚರಂ ।
ಭವತ್ಯಸ್ಮಾಜ್ಜಗತ್ಸರ್ವಂ ಸದೇವಾಸುರಮಾನುಷಂ ॥ ೨ ॥

ರುದ್ರೇಂದ್ರೋಪೇಂದ್ರ ಚಂದ್ರಾಣಾಂ ವಿಪ್ರೇಂದ್ರ ತ್ರಿದಿವೌಕಸಾಂ ।
ಮಹಾದ್ಯುತಿಮತಾಂ ಕೃತ್ಸ್ನಂ ತೇಜೋ ಯತ್ಸಾರ್ವಲೌಕಿಕಂ ॥ ೩ ॥

---

## ಐವತ್ತನಾಲ್ಕನೆಯ ಅಧ್ಯಾಯ

೧. ರುದ್ರನು ಹೇಳುತ್ತಾನೆ—ಆಹಾ! ನೀನು ಸೂರ್ಯನ ಮಾಹಾತ್ಮ್ಯವನ್ನು ಎಷ್ಟು ಚನ್ನಾಗಿ ವರ್ಣಿಸಿದೆ. ಈ ಭಾಸ್ಕರನ ಮಹಿಮೆಯನ್ನು ಇನ್ನಷ್ಟು ಹೇಳು.

೨. ಬ್ರಹ್ಮನು ಹೇಳುತ್ತಾನೆ—ಸೂರ್ಯಮಂತ್ರವೆಂಬುದು ಸ್ಥಾವರ ಜಂಗ ಮಾತ್ಮಕವಾದ ಸಮಸ್ತ ಪ್ರಪಂಚಸ್ವರೂಪವಾದುದು. ಈ ಸೂರ್ಯನಿಂದಲೇ ದೇವ, ಅಸುರ, ಮಾನುಷರಿಂದ ಯುಕ್ತವಾದ ಸರ್ವಪ್ರಪಂಚವೂ ಉತ್ಪನ್ನವಾಗಿರುತ್ತದೆ.

೩. ರುದ್ರ, ಇಂದ್ರ, ಉಪೇಂದ್ರ, ಚಂದ್ರ, ಬ್ರಾಹ್ಮಣಶ್ರೇಷ್ಠರು, ಸ್ವರ್ಗ ವಾಸಿಗಳು ಎಂಬ ಈ ಮಹಾತೇಜಸ್ವಿಗಳ ಸರ್ವಲೋಕವ್ಯಾಪ್ತವಾದ ಪೂರ್ಣ ತೇಜ ಸ್ಸೆಲ್ಲವೂ ಸೂರ್ಯ ತೇಜಸ್ಸೇ ಆಗಿದೆ.

ಸರ್ವಾತ್ಮಾ ಸರ್ವಲೋಕೇಶೋ ದೇವದೇವಃ ಪ್ರಜಾಪತಿಃ ।
ಸೂರ್ಯ ಏಷ ತ್ರಿಲೋಕಸ್ಯ ಮೂಲಂ ಪರಮದೈವತಂ ॥ ೪ ॥

ಅಗ್ನೌ ಪ್ರಾಸ್ತಾಹುತಿ ಸ್ಸಮ್ಯಗಾದಿತ್ಯಮುಪತಿಷ್ಠತಿ ।
ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥ ೫ ॥

ಸೂರ್ಯಾತ್ಪ್ರಸೂಯತೇ ಸರ್ವಂ ತತ್ರ ಚೈವ ಪ್ರಲೀಯತೇ ।
ಭಾವಾಭಾವೌ ಹಿ ಲೋಕಾನಾಂ ಆದಿತ್ಯಾನ್ನಿ ಸ್ಸೃತೌ ಪುರಾ ॥ ೬ ॥

ಏತತ್ತು ಧ್ಯಾನಿನಾಂ ಧ್ಯಾನಂ ಮೋಕ್ಷಶ್ಚಾಪ್ಯೇಷ ಮೋಕ್ಷಿಣಾಂ ।
ಅತ್ರ ಗಚ್ಛಂತಿ ನಿರ್ವಾಣಂ ಜಾಯತೇಽಸ್ಮಾತ್ಪುನಃ ಪ್ರಜಾಃ ॥ ೭ ॥

ಕ್ಷಣಾಮುಹೂರ್ತಾ ದಿವಸಾ ನಿಶಾಃ ಪಕ್ಷಾಶ್ಚ ನಿತ್ಯಶಃ ।
ಮಾಸಾಸ್ಸಂವತ್ಸರಾಶ್ಚೈವ ಋತವೋಽಥ ಯುಗಾನಿ ಚ ॥ ೮ ॥

---

೪. ಸರ್ವಾತ್ಮನೂ ಸರ್ವಲೋಕಾಧಿಪತಿಯೂ, ದೇವದೇವನೂ, ಪ್ರಜೇಶ್ವರನೂ ಆದ ಈ ಸೂರ್ಯನು ಮೂರು ಲೋಕಗಳಿಗೂ ಮುಖ್ಯ ಕಾರಣನಾದ ಶ್ರೇಷ್ಠ ದೈವತವು.

೫. ಅಗ್ನಿಯಲ್ಲಿ ಹಾಕಿದ ಆಹುತಿಯು ಸೂರ್ಯನಿಗೆ ತಲಪಿ, ಸೂರ್ಯನಿಂದ ಮಳೆಯಾಗುವುದು. ಮಳೆಯಿಂದ ಆಹಾರವಸ್ತು ಬೆಳೆಯುವುದು. ಅದರಿಂದಲೇ ಪ್ರಜೆಗಳು ಜೀವಿಸುತ್ತಾರೆ.

೬. ಸೂರ್ಯನಿಂದಲೇ ಎಲ್ಲವೂ ಹುಟ್ಟಿ ಸೂರ್ಯನಲ್ಲೇ ಅಡಗುವುದು. ಲೋಕಗಳ ಉತ್ಪತ್ತಿ ನಾಶಗಳು ಪೂರ್ವದಲ್ಲಿ ಸೂರ್ಯನಿಂದಲೇ ಉಂಟಾದುವು.

೭. ಧ್ಯಾನ ಮಾಡುವವರಿಗೆ ಈ ಸೂರ್ಯಮಂಡಲವೇ ಧ್ಯಾನಸಾಧನವು ಮೋಕ್ಷಾಪೇಕ್ಷಿಗಳಿಗೆ ಇದೇ ಮೋಕ್ಷಕಾರಣವು. ಇದರಲ್ಲಿಯೇ ಮೋಕ್ಷವನ್ನು ಹೊಂದಿ ಇದರಿಂದಲೇ ಪ್ರಜೆಗಳು ಪುನಃ ಹುಟ್ಟುತ್ತಾರೆ.

೮. ಕ್ಷಣಗಳೆಂಬವು ಸೂಕ್ಷ್ಮಕಾಲಗಳು, ಇಂತಹ ಹನ್ನೆರಡು ಹನ್ನೆರಡು ಕ್ಷಣಗಳು ಕೂಡಿ ಮುಹೂರ್ತಗಳಾಗುವುವು. ಮುವತ್ತು ಮುಹೂರ್ತಗಳು ಸೇರಿ ಅಹೋರಾತ್ರ್ಯಾತ್ಮಕವಾದ ದಿವಸಗಳಾಗುವುವು. ಇಂತಹ ಹದಿನೈದು ದಿನಗಳು

ಸದಾದಿತ್ಯಾದೃತೇ ಹ್ಯೇಷಾ ಕಾಲಸಂಖ್ಯಾ ನ ವಿದ್ಯತೇ ।
ಕಾಲಾದೃತೇ ನ ನಿಯಮೋ ನಾಗ್ನಿರ್ನಹವನಕ್ರಿಯಾ ॥ ೯ ॥

ಋತೂನಾಮವಿಭಾಗಾಚ್ಚ ಪುಷ್ಪಮೂಲಫಲಂ ಕುತಃ ॥ ೧೦ ॥

ಅಭಾವೋ ವ್ಯವಹಾರಾಣಾಂ ಜಂತೂನಾಂ ದಿವಿ ಚೇಹ ಚ ।
ಜಗತ್ಪ್ರತಪನಮ್ಯತೇ ಭಾಸ್ಕರಂ ವಾರಿತಸ್ಕರಂ ॥ ೧೧ ॥

ನಾವೃಷ್ಟ್ಯಾ ತಪತೇ ಸೂರ್ಯೋ ನಾವೃಷ್ಟ್ಯಾ ಪರಿವಿಶ್ಯತೇ ।
ನಾವೃಷ್ಟ್ಯಾ ವಿಕೃತಿಂ ಧತ್ತೇ ವಾರಿಣಾ ದೀಪ್ಯತೇ ರವಿಃ ॥ ೧೨ ॥

ವಸಂತೇ ಕಪಿಲಸ್ಸೂರ್ಯೋ ಗ್ರೀಷ್ಮೇ ಕಾಂಚನಸಪ್ರಭಃ ।
ಶ್ವೇತೋ ವರ್ಣೇನ ವರ್ಷಾಸು ಪಾಂಡುಃ ಶರದಿ ಭಾಸ್ಕರಃ ॥ ೧೩ ॥

---

ಒಟ್ಟುಗೂಡಿ ಪಕ್ಷಗಳಾಗುವುವು. ಇಂತಹ ಎರಡು ಪಕ್ಷಗಳು ಸೇರಿ ಮಾಸಗಳಾಗುವುವು. ಹೀಗೆ ಋತುಗಳು, ಸಂವತ್ಸರಗಳು, ಯುಗಗಳು ಎಂಬ ಕಾಲಭೇದವೂ ವುಂಟು.

೯. ಪ್ರಸಕ್ತನಾದ ಸೂರ್ಯನನ್ನು ಬಿಟ್ಟರೆ ಕಾಲದ ಲೆಖ್ಖವು ಸಾಧ್ಯವಿಲ್ಲ. ಕಾಲ ತಿಳಿಯದಿದ್ದರೆ ನಿಯಮ, ಅಗ್ನಿಯಲ್ಲಿ, ಹೋಮಕಾರ್ಯ ಇವು ಯಾವುದೂ ಸಾಧ್ಯವಿಲ್ಲ.

೧೦. ಋತುಗಳ ವಿಭಾಗವಿಲ್ಲದೆ ಗೆಡ್ಡೆಗೆಣಸುಗಳೂ, ಹೂಗಳೂ ಎಲ್ಲಿ ಬಿಡಬೇಕು. ಪೈರುಗಳು ಎಲ್ಲಿಂದ ಹುಟ್ಟಬೇಕು, ತೃಣ ಔಷಧಿ ಇವುಗಳು ಎಲ್ಲಿರುತ್ತವೆ.

೧೧. ಊರ್ಧ್ವಲೋಕದವರಿಗೂ ಈ ಲೋಕದ ಪ್ರಾಣಿಗಳಿಗೂ ಸಂಭಾಷಣೆಗಳು ಇಲ್ಲದಿರಬಹುದು. ಜಲಶೋಷಣ ಮಾಡುವ ಸೂರ್ಯನಿಂದ ಹೊರತು ಅವನನ್ನು ಬಿಟ್ಟು ಯಾವ ವ್ಯವಹಾರವೂ ಇಲ್ಲ

೧೨. ಸೂರ್ಯನು ಮಳೆಗರೆವ ಸಂದರ್ಭವನ್ನು ಬಿಟ್ಟು ಉಳಿದ ವೇಳೆಯಲ್ಲಿ ಅಷ್ಟು ತಪಿಸುವುದಿಲ್ಲ. ಮಳೆಯಿಲ್ಲದಾಗ ವಸ್ತುಗಳೊಳಗೆ ಪ್ರವೇಶಿಸುವುದಿಲ್ಲ. ಮಳೆಯಿಲ್ಲದೆ ಯಾವ ವಿಕಾರವನ್ನೂ ಹೊಂದುವುದಿಲ್ಲ. ಸೂರ್ಯನು ಜಲದಿಂದಲೇ ಪ್ರಕಾಶಿಸುತ್ತಾನೆ.

೧೩. ವಸಂತ ಋತುವಿನಲ್ಲಿ ಸೂರ್ಯನು ಕೆಂಪುಬಣ್ಣವಾಗಿಯೂ, ಗ್ರೀಷ್ಮ ಋತುವಿನಲ್ಲಿ ಚಿನ್ನದ ಬಣ್ಣವಾಗಿಯೂ, ಮಳೆಗಾಲದಲ್ಲಿ ಬೆಳ್ಳಗೂ, ಶರತ್ಕಾಲದಲ್ಲಿ ಬೂದುಬಣ್ಣವಾಗಿಯೂ ಇರುತ್ತಾನೆ.

ಹೇಮಂತೇ ತಾಮ್ರವರ್ಣಸ್ತು ಶಿಶಿರೇ ಲೋಹಿತೋ ರವಿಃ ।
ಇತಿ ವರ್ಣಾಃ ಸಮಾಖ್ಯಾತಾಃ ಶೃಣು ವರ್ಣಫಲಂ ಹರ ॥ ೧೪ ॥

ಕೃಷ್ಣೋ ಭಯಾಯ ಜಗತಃ ತಾಮ್ರಸ್ಸೇನಾಪತಿಂ ವಿನಾಶಯತಿ ।
ಪೀತೋ ನರೇಂದ್ರ ಪುತ್ರಂ ಶ್ವೇತಸ್ತು ಪುರೋಹಿತಂ ಹಂತಿ ॥ ೧೫ ॥

ಚಿತ್ರೋಥವಾಪಿ ಧೂಮ್ರೋ ರವೀ ರಶ್ಮಿವ್ಯಾಕುಲಂ ಕರೋತ್ಯುಚ್ಚೈಃ ।
ತಸ್ಕರ ಶಸ್ತ್ರನಿಪಾತೈಃ ಯದಿ ನ ಸಲಿಲಮಾಶು ತಾಪಯತಿ ॥ ೧೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ರಥಸಪ್ತಮೀ
ಕಲ್ಪೇ ಸೂರ್ಯಮಹಿಮಾವರ್ಣನಂ ನಾಮ
ಚತುಷ್ಪಂಚಾಶತ್ತಮೋಧ್ಯಾಯಃ.

---

೧೪. ಸೂರ್ಯನು ಹೇಮಂತ ಋತುವಿನಲ್ಲಿ ಅಚ್ಚ ಕೆಂಪಗೂ, ಶಿಶಿರಋತುವಿನಲ್ಲಿ ಸಾಮಾನ್ಯ ಕೆಂಪುಳ್ಳವನಾಗಿಯೂ ಇರುವನು. ಸೂರ್ಯನ ಬಣ್ಣಗಳನ್ನು ಹೇಳಿದುದಾಯಿತು. ಎಲೈ ರುದ್ರನೇ! ಈಗ ಆ ಬಣ್ಣಗಳ ಫಲವನ್ನು ಕೇಳು.

೧೫. ಸೂರ್ಯನು ಕಪ್ಪುವರ್ಣಮಿಶ್ರಿತನಾಗಿದ್ದರೆ ಜಗತ್ತಿಗೆ ಭಯವನ್ನುಂಟು ಮಾಡುವನು. ಕೆಂಪಗಿದ್ದರೆ ಸೇನಾಪತಿಯನ್ನು ನಾಶಮಾಡುವನು. ಹಳದಿಯಾಗಿದ್ದರೆ ದೊರೆಯ ಮಗನಿಗೆ ಹಾನಿ. ಬೆಳ್ಳಗಿರಲು ಪುರೋಹಿತನಿಗೆ ನಾಶ ಸಂಭವಿಸುವುದು.

೧೬ ಚಿತ್ರವರ್ಣವೋ ಬೂದುಬಣ್ಣವೋ ಆಗಿರುವ ಸೂರ್ಯರಶ್ಮಿಯು ಬಹಳ ವ್ಯಾಕುಲತೆಯನ್ನುಂಟುಮಾಡುವುದು. ಮಂಡಲವು ನಿರ್ಜಲವಾಗಿದ್ದರೆ ಕಳ್ಳರು ಬಿದ್ದಾಗಲಿ, ಆಯುಧಗಳ ಏಟು ಬಿದ್ದಾಗಲಿ ಬೇಗನೆ ತಾಪವುಂಟಾಗುತ್ತದೆ.

ಇಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ರಥಸಪ್ತಮೀ ಕಲ್ಪದಲ್ಲಿ
ಸೂರ್ಯಮಹಿಮಾವರ್ಣನೆಯೆಂಬ ಐವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಪಂಚಾಶತ್ತಮೋಽಧ್ಯಾಯಃ

---

॥ ರುದ್ರ ಉವಾಚ ॥

ರಥಯಾತ್ರಾ ಕಥಂ ಕಾರ್ಯಾ ಭಾಸ್ಕರಸ್ಯೇಹ ಮಾನವೈಃ ।
ಫಲಂ ಚ ಕಿಂ ಭವೇತ್ತೇಷಾಂ ಯಾತ್ರಾಂ ಕುರ್ವಂತಿ ಯೇ ರವೇಃ ॥ ೧ ॥

ವಿಧಿನಾ ಕೇನ ಕರ್ತವ್ಯಾ ಕಸ್ಮಿನ್ ಕಾಲೇ ಸುರೋತ್ತಮ ।
ಕಥಂ ಚ ಭ್ರಮಯೇದ್ದೇವಂ ರಥಾರೂಢಂ ದಿವಾಕರಂ ॥ ೨ ॥

ದೇವಸ್ಯ ಯೇ ರಥಂ ಭಕ್ತ್ಯಾ ಭ್ರಮಯಂತಿ ವಹಂತಿ ಚ ।
ತೇಷಾಂ ಚ ಕಿಂ ಫಲಂ ಪ್ರೋಕ್ತಂ ಯೇ ಚ ನೃತ್ಯಕರಾ ನರಾಃ ॥ ೩ ॥

---

## ಐವತ್ತೈದನೆಯ ಅಧ್ಯಾಯ

೧. ರುದ್ರನು ಪ್ರಶ್ನೆ ಮಾಡುತ್ತಾನೆ—ಮನುಷ್ಯನು ಈ ಲೋಕದಲ್ಲಿ ಸೂರ್ಯನ ರಥೋತ್ಸವವನ್ನು ಹೇಗೆ ನಡೆಯಿಸಬೇಕು? ಹಾಗೆ ಯಾತ್ರೆ ನಡೆಯಿಸಿದವರಿಗೆ ಉಂಟಾಗುವ ಫಲವೇನು?

೨. ದೇವಶ್ರೇಷ್ಠನೇ! ಯಾವ ಕಾಲದಲ್ಲಿ ಯಾವ ವಿಧಿಯಿಂದ ಈ ಯಾತ್ರೆಯನ್ನು ನಡೆಯಿಸಬೇಕು? ರಥಾರೂಢನಾದ ಸೂರ್ಯನನ್ನು ಗ್ರಾಮಪ್ರದಕ್ಷಿಣೆ ಮಾಡುವಾಗ ಅನುಸರಿಸಬೇಕಾದ ಕ್ರಮವಾವುದು?

೩. ಆ ಸೂರ್ಯದೇವನ ರಥವನ್ನು ಭಕ್ತಿಯಿಂದ ಹಿಡಿದು ಎಳೆದವರಿಗೆ ಏನು ಫಲಪ್ರಾಪ್ತಿಯೆಂದು ಹೇಳಿದೆ? ಆ ರಥೋತ್ಸವ ಕಾಲದಲ್ಲಿ ನರ್ತನ, ಕೋಲಾಟ, ಮುಂತಾದ್ದನ್ನು ಮಾಡುವ ಜನರಿಗೆ ಆಗುವ ಫಲಪ್ರಾಪ್ತಿಯೇನು?

ಭ್ರಮಂತಿ ಯೇ ಚ ದೇವೇನ ನೃತ್ಯಗೀತಪರಾಯಣಾಃ ।
ಪ್ರಜಾಗರಂ ಚ ಕುರ್ವಂತಿ ಭಕ್ತ್ಯಾ ಶ್ರದ್ಧಾಸಮನ್ವಿತಾಃ ॥ ೪ ॥

ತೇಷಾಂ ಚ ಕಿಂ ಫಲಂ ಪ್ರೋಕ್ತಂ ರಥಂ ಯಚ್ಛಂತಿ ಯೇ ರವೇಃ ।
ಬಲಿಂ ಭಕ್ತಂ ಚ ಯೇ ಭಕ್ತ್ಯಾ ದಿಶಂತ್ಯಾಹ್ನಿಕಭೋಜನಂ ॥ ೫ ॥

ಏತನ್ಮೇ ಬ್ರೂಹಿ ನಿಖಿಲಂ ಸುರಜ್ಯೇಷ್ಠ ಸವಿಸ್ತರಂ ।
ಲೋಕಾನಾಂ ಶ್ರೇಯಸೇ ದೇವ ಪರಂ ಕೌತೂಹಲಂ ಹಿ ಮೇ ॥ ೬ ॥

॥ ಬ್ರಹ್ಮೋವಾಚ ॥

ಸಾಧು ಪೃಷ್ಟೋಽಸ್ಮಿ ಭೂತೇಶ ಗಣೇಶೋಽಸಿ ತ್ರಿಲೋಚನ ।
ಶೃಣುಷ್ವೈಕಮನಾ ವಚ್ಮಿ ಯಥಾಪ್ರಶ್ನಂ ಸವಿಸ್ತರಂ ॥ ೭ ॥

ದೇವಸ್ಯ ರಥಯಾತ್ರೇಯಂ ಭಾಸ್ಕರಸ್ಯ ಮಹಾತ್ಮನಃ ।
ಇಂದ್ರೋತ್ಸವಸ್ತಥಾ ರುದ್ರ ಮಯಾಹ್ಯೇತೌ ಪ್ರಕೀರ್ತಿತೌ ॥ ೮ ॥

---

೪-೬. ರಥಾರೂಢನಾದ ಸೂರ್ಯನ ರಥದ ಮುಂದೆ ಗಾನ, ನರ್ತನ ಮಾಡಿಕೊಂಡು ಸುತ್ತುವವರು ಯಾವ ಫಲವನ್ನು ಹೊಂದುತ್ತಾರೆ? ಭಕ್ತಿಶ್ರದ್ಧೆಯಿಂದ ಕೂಡಿ ಜಾಗರಣೆಮಾಡಿದವರಿಗೂ, ರಥೋತ್ಸವ ಕಾಲದಲ್ಲಿ ಸ್ವರ್ಣರಥವನ್ನು ರಚಿಸಿ ದಾನಮಾಡಿದವರಿಗೂ, ಬಲಿಯ ಅನ್ನವನ್ನು ಭಕ್ತಿಯಿಂದ ಸಮರ್ಪಿಸಿದವರಿಗೂ, ಆ ದಿನ ಹಗಲು ಸಂತರ್ಪಣೆ ನಡೆಯಿಸಿದವರಿಗೂ ಪ್ರಾಪ್ತವಾಗುವ ಫಲವೇನು? ಅಯ್ಯಾ ಸುರಜ್ಯೇಷ್ಠನಾದ ಬ್ರಹ್ಮನೇ! ಲೋಕದ ಶ್ರೇಯಸ್ಸಿಗಾಗಿ ಇದೆಲ್ಲವನ್ನೂ ವಿಸ್ತಾರವಾಗಿ ಹೇಳು. ಇದನ್ನು ಕೇಳಬೇಕೆಂದು ನನಗೆ ಕುತೂಹಲವು ಬಹಳವಾಗಿದೆ ಎಂದನು.

೭. ಬ್ರಹ್ಮನು ಹೇಳುತ್ತಾನೆ—ಮುಕ್ಕಣ್ಣನಾದ ಶಿವನೇ! ಪ್ರಮಥ ಗಣಗಳಿಗೆಲ್ಲಾ ಅಧಿಪತಿಯಾದ ನೀನು ಕೇಳಿದ್ದು ಸಮಂಜಸವಾಗಿದೆ. ನೀನು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ವಿಸ್ತಾರವಾಗಿ ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೮. ಮಹಾತ್ಮನಾದ ಸೂರ್ಯನ ರಥೋತ್ಸವ, ಇಂದ್ರೋತ್ಸವ ಇವೆರಡರ ವಿಚಾರವನ್ನೂ ನಾನು ಹಿಂದೆ ಒಂದುಸಾರಿ ಹೇಳಿದ್ದೆನು.

ಮರ್ತ್ಯಲೋಕೇ ಶಾಂತಿಹೇತೋಃ ಲೋಕಾನಾಂ ಲೋಕಪೂಜಿತ ।
ಪ್ರವರ್ತಿತಾವುಭೌ ಯಸ್ಮಿನ್ ದೇಶೇ ದೇವಮಹೋತ್ಸವೌ ॥ ೯ ॥

ನ ತತ್ರೋಪದ್ರವಾಸ್ಸಂತಿ ರಾಜ ತಸ್ಕರಸಂಭವಾಃ ।
ತಸ್ಮಾತ್ತ್ಕಾರ್ಯಾವಿಮೌ ಭಕ್ತ್ಯಾ ದುರ್ಭಿಕ್ಷಸ್ಯೇಹ ಶಾಂತಯೇ ॥ ೧೦ ॥

ಶುಕ್ಲಪಕ್ಷೇ ತು ಸಪ್ತಮ್ಯಾಂ ಮಾಸಿ ಭಾದ್ರಪದೇ ಹರ ।
ಘೃತೇನಾಭ್ಯಂಗಯೇದ್ದೇವಂ ಪಂಚಪೂತಾಂಗಜೇನ ವೈ ॥ ೧೧ ॥

ಅಭ್ಯಂಗಯೇದ್ಗ್ರಹೇಶಂ ಯಃ ಸರ್ಷಪೈಃ ಶ್ರದ್ಧಯಾನ್ವಿತಃ ।
ದಿನೇದಿನೇ ಜಗನ್ನಾಥಂ ಪ್ರವಿಷ್ಟಂ ವರ್ಣಕೇ ರವಿಂ ॥ ೧೨ ॥

ಸ ಗಚ್ಛೇದ್ಯಾನಮಾರೂಢೋ ಗೈರಿಕಂ ಕಿಂಕಿಣೀಕೃತಂ ।
ವೈಶ್ವಾನರಪುರಂ ದಿವ್ಯಂ ಗಂಧರ್ವಾಪ್ಸರಶೋಭಿತಂ ॥ ೧೩ ॥

---

೯. ಅಯ್ಯಾ ಲೋಕಪೂಜಿತನಾದ ಶಿವನೇ! ಮನುಷ್ಯಲೋಕದಲ್ಲಿ ಜನಗಳ ಶಾಂತಿಗೋಸ್ಕರವಾಗಿ ಈ ಸೂರ್ಯರಥೋತ್ಸವ, ಇಂದ್ರೋತ್ಸವಗಳನ್ನು ನಡೆಯಿಸುವರು.

೧೦. ಹೀಗೆ ನಡೆಯಿಸಿದ ದೇಶಗಳಲ್ಲಿ ರಾಜಕೃತವಾದ ಉಪದ್ರವವಾಗಲೀ, ಕಳ್ಳರಿಂದ ಒದಗುವ ಉಪದ್ರವವಾಗಲೀ ಉಂಟಾಗುವುದಿಲ್ಲ. ಆದ್ದರಿಂದ ದೇಶದಲ್ಲಿ ದುರ್ಭಿಕ್ಷಗಳ ನಿವಾರಣೆಗಾಗಿ ಈ ಎರಡು ಉತ್ಸವಗಳನ್ನೂ ಭಕ್ತಿಯಿಂದ ಮಾಡಬೇಕು.

೧೧. ಅಯ್ಯಾ ಶಿವನೇ! ಭಾದ್ರಪದಮಾಸದ ಶುಕ್ಲಪಕ್ಷದ ಸಪ್ತಮಿಯ ದಿನ ಸೂರ್ಯದೇವನಿಗೆ ತುಪ್ಪದಿಂದ ಅಭ್ಯಂಗಮಾಡಿಸಬೇಕಲ್ಲದೆ, ಪಂಚಾಮೃತಾಭಿಷೇಕವನ್ನೂ ಮಾಡಬೇಕು.

೧೨. ಲೋಕಾಧಿಪತಿಯೂ, ಗ್ರಹಗಳ ಅಧಿಪತಿಯೂ ತೇಜೋವಂತನೂ ಆದ ಸೂರ್ಯನಲ್ಲಿ ಶ್ರದ್ಧಾಯುಕ್ತನಾಗಿ ಸಾಸುವೆಯ ಚೂರ್ಣವನ್ನು ಲೇಪಿಸಿ ಅಭ್ಯಂಗ ಮಾಡಿಸಬೇಕು.

೧೩. ಹೀಗೆ ಅಭ್ಯಂಗಮಾಡಿಸಿದವನು ಗೈರಿಕವರ್ಣಯುಕ್ತವಾದುದೂ, ಕಿರುಗಂಟೆಗಳಿಂದ ಕೂಡಿದುದೂ ಆದ ವಿಮಾನವನ್ನು ಏರಿಕೊಂಡು ಗಂಧರ್ವರಿಂದಲೂ

ಶಾಲ್ಯೋದನಂ ಖಂಡಮಿಶ್ರಂ ವಜ್ರಂ ವಜ್ರಸಮನ್ವಿತಂ ।
ವರ್ಣಭಕ್ತಂ ಪ್ರಯಚ್ಛೇದ್ಯೋ ಭಾಸ್ಕರಾಯ ದಿನೇದಿನೇ ॥ ೧೪ ॥

ಆರೂಢಃ ಸ ವಿಮಾನಂ ತು ಜ್ವಾಲಾಮಾಲಾಕುಲಂ ಶುಭಂ ।
ಗಚ್ಛೇನ್ಮಮಪುರಂ ದೇವ ಸ್ತೂಯಮಾನೋ ಮಹರ್ಷಿಭಿಃ ॥ ೧೫ ॥

ತಸ್ಮಾತ್ಸರ್ವಪ್ರಯತ್ನೇನ ಭಾಸ್ಕರಾಯ ನರೈಃ ಶಿವ ।
ವರ್ಣಭಕ್ತಂ ಪ್ರದಾತವ್ಯಂ ಪ್ರವಿಷ್ಟಸ್ಯೇಹ ವರ್ಣಕಂ ॥ ೧೬ ॥

ಘೃತಪೂರ್ಣಂ ಖಂಡವೇಷ್ಟಂ ಕಾಸಾರಂ ಮೋದಕಂ ಪಯಃ ।
ದಧ್ಯೋದನಂ ಪಾಯಸಂ ಚ ಸಂಯಾವಂ ಗುಡಪೂಪಕಾ ॥ ೧೭ ॥

ಯೇ ಪ್ರಯಚ್ಛಂತಿ ದೇವಸ್ಯ ಭಾಸ್ಕರಸ್ಯೇಹ ವರ್ಣಕಂ ।
ತೇ ಗಚ್ಛಂತಿ ನ ಸಂದೇಹೋ ನರಾ ವೈ ಮಂದಿರಂ ಮಮ ॥ ೧೮ ॥

---

ಅಪ್ಸರಸರಿಂದಲೂ ಶೋಭಿತವಾದ ಅಗ್ನಿದೇವನ ತೇಜೋವತೀ ಪಟ್ಟಣಕ್ಕೆ ಹೋಗುತ್ತಾನೆ.

೧೪-೧೫. ಶಾಲ್ಯನ್ನ, ಕಲ್ಲುಸಕ್ಕರೆ, ತುಪ್ಪ, ಖರ್ಜೂರ, ಲಾಮಂಚ ಇವನ್ನು ಹಾಕಿ, ಬಣ್ಣದಿಂದ ಶೋಭಿಸುವಂತೆ ಮಾಡಿ ದಿನದಿನವೂ ಸೂರ್ಯನಿಗೆ ನಿವೇದನ ಮಾಡುವವರು ಜ್ವಾಲಾಮಾಲೆಗಳಿಂದ ಅಲಂಕೃತವಾದ ಮಂಗಳಕರವಾದ ವಿಮಾನವನ್ನೇರಿ ಮಹರ್ಷಿಗಳಿಂದ ಹೊಗಳಿಸಿಕೊಳ್ಳುವವರಾಗಿ ನನ್ನ ಪಟ್ಟಣಕ್ಕೆ ಬರುತ್ತಾರೆ (ಎಂದರೆ ಬ್ರಹ್ಮಲೋಕಕ್ಕೆ ಹೋಗುತ್ತಾರೆ.)

೧೬. ಅಯ್ಯಾ ಶಿವನೇ! ಸೂರ್ಯನನ್ನುದ್ದೇಶಿಸಿಕೊಂಡು ಅವನು ಬಣ್ಣವೇರಿರುವಾಗ ಮನುಷ್ಯರು ಸರ್ವಪ್ರಯತ್ನಗಳಿಂದ ಆರೀತಿ ವರ್ಣಮಿಶ್ರಿತ ಅನ್ನವನ್ನು ಕೊಡಬೇಕು.

೧೭-೧೮. ಕಲ್ಲುಸಕ್ಕರೆ ಹಾಕಿ ತುಪ್ಪದಲ್ಲಿ ಕರಿದು ಸಾರವುಳ್ಳದಾಗುವಂತೆ ಮಾಡಿದ ಕರಿಗಡುಬು, ಪ್ರಶಸ್ತವಾದ ಹಾಲು, ಮೊಸರು, ಪಾಯಸ ಚೆನ್ನಾಗಿ ಮಾಡಿದ ಗೋಧಿರವೆಯ ಸಜ್ಜಿಗೆ, ಹಿಟ್ಟು ಬೆಲ್ಲ ಇವುಗಳಿಂದ ಮಾಡಿದ ಭಕ್ಷ್ಯ, ನಾನಾವರ್ಣಯುಕ್ತಗಳಾದ ಅನ್ನ ಮುಂತಾದ ದ್ರವ್ಯ ಇವುಗಳನ್ನು ಯಾರು ಸೂರ್ಯನಿಗೆ ಸಮರ್ಪಿಸುವರೋ ಅವರು ನಿಸ್ಸಂದೇಹವಾಗಿ (ನನ್ನ) ಬ್ರಹ್ಮಲೋಕಕ್ಕೆ ಹೋಗುತ್ತಾರೆ.

ಅಹನ್ಯಹನಿ ಯೋ ಭಕ್ತ್ಯಾ ಭಾಸ್ಕರಾಯ ಪ್ರಯಚ್ಛತಿ ।
ಅಭ್ಯಂಗಾಯ ಘೃತಂ ದೇಯಂ ಸ ಯಾತಿ ಪರಮಾಂ ಗತಿಂ ॥ ೧೯ ॥

ತಥಾ ಯೋ ವರ್ಣಭಕ್ತಂ ಚ ಅಹನ್ಯಹನಿ ಭಕ್ತಿತಃ ।
ಸ ಪ್ರಾಪ್ಯೇಹ ಶುಭಾನ್ ಕಾಮಾನ್ ಗಚ್ಛೇತ್ಸ ಭವಸಾಲಯಂ ॥ ೨೦ ॥

ಚೂರ್ಣಮುದ್ವರ್ತನಾಯೇಹ ಯಃ ಪ್ರಯಚ್ಛೇಚ್ಛುಭಂ ರವೇಃ ।
ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ದಿವಾಕರಃ ॥ ೨೧ ॥

ತತಸ್ತಂ ಸ್ನಾಪಯೇದ್ದೇವಂ ಪೌಷೇ ಮಾಸಿ ವಿಧಾನತಃ ।
ಸಪ್ತಮ್ಯಾಂ ಶುಕ್ಲಪಕ್ಷಸ್ಯ ಶೃಣುಷ್ವೈಕಮನಾಸ್ತಥಾ ॥ ೨೨ ॥

ತೀರ್ಥೋದಕಮುಪಾನೀಯ ಅನ್ಯದ್ವಾಥ ಜಲಂ ಶುಭಂ ।
ವೇದೋಕ್ತೇನ ವಿಧಾನೇನ ಪ್ರತಿಮಾಂ ಸ್ನಾಪಯೇದ್ಬುಧಃ ॥ ೨೩ ॥

---

೧೯. ಸೂರ್ಯದೇವನಿಗೆ ಅಭ್ಯಂಗಮಾಡುವುದಕ್ಕೆ ಅರ್ಹವಾದ (ಮಾಸಲಾದ) ತುಪ್ಪವನ್ನು ಯಾವನು ನಿತ್ಯವೂ ಭಕ್ತಿಯಿಂದ ಕೊಡುವನೋ ಅವನು ಉತ್ತಮಗತಿಯನ್ನು ಹೊಂದುತ್ತಾನೆ.

೨೦. ಅದೇರೀತಿಯಾಗಿ ಯಾರು ಬಣ್ಣಬಣ್ಣದ ಅನ್ನವನ್ನು ನಿತ್ಯವೂ ಭಕ್ತಿಯಿಂದ ಸೂರ್ಯನಿಗೆ ಸಮರ್ಪಿಸುವನೋ ಅವನು ಇಲ್ಲಿ ಮಂಗಳಕರವಾದ ತನ್ನ ಇಚ್ಛೆಗಳನ್ನು ನೆರವೇರಿಸಿಕೊಂಡು ಶಿವಲೋಕವನ್ನು ಸೇರುವನು.

೨೧. ಸೂರ್ಯನಿಗೆ ಉಜ್ಜಿಕೊಳ್ಳುವುದಕ್ಕೆ ಯಾವನು ಹರಿದ್ರಾದಿ ಚೂರ್ಣಗಳನ್ನು ಕೊಡುವನೋ ಅವನು ಶ್ರೇಷ್ಠವಾದ ಸೂರ್ಯಲೋಕಕ್ಕೆ ಹೋಗುವನು.

೨೨. ಇದೇರೀತಿ ಪುಷ್ಯ ಶುದ್ಧ ಸಪ್ತಮಿಯಲ್ಲಿಯೂ ವಿಧಿವಿಧಾನದಿಂದ ಸೂರ್ಯನಿಗೆ ಸ್ನಾನಮಾಡಿಸಬೇಕು. ಆ ದಿನ ಅಭಿಷೇಕಮಾಡಬೇಕಾದ ಕ್ರಮವನ್ನು ದೃಢಚಿತ್ತನಾಗಿ ಕೇಳು.

೨೩. ಪ್ರಾಜ್ಞನು ಗಂಗಾದಿ ಪುಣ್ಯತೀರ್ಥಗಳ ನೀರನ್ನಾಗಲಿ, ಅಥವಾ ಬೇರೆ ಜಲವನ್ನಾಗಲಿ ತಂದು ವೇದೋಕ್ತಕ್ರಮದಿಂದ ಸೂರ್ಯಪ್ರತಿಮೆಗೆ ಅಭಿಷೇಕ ಮಾಡಬೇಕು.

ಯಜೇದ್ಧಿ ತೀರ್ಥನಾಮಾನಿ ಮನಸಾ ಸಂಸ್ಮರ್ರ ಬುಧಃ ।
ಪ್ರಯಾಗಂ ಪುಷ್ಕರಂ ದೇವಂ ಕುರುಕ್ಷೇತ್ರಂ ಚ ನೈಮಿಷಂ ॥ ೨೪ ॥

ಪೃಥೂದಕಂ ಚಂದ್ರಭಾಗಾಂ ಶೋಣಂ ಗೋಕರ್ಣಮೇವ ಚ ।
ಬ್ರಹ್ಮಾವರ್ತಂ ಕುಶಾವರ್ತಂ ಬಿಲ್ವಕಂ ನೀಲಪರ್ವತಂ ॥ ೨೫ ॥

ಗಂಗಾದ್ವಾರಂ ತಥಾ ಪುಣ್ಯಂ ಗಂಗಾಸಾಗರಮೇವ ಚ ।
ಕಾಲಪ್ರಿಯಂ ಮಿತ್ರವನಂ ಶುಂಡೀರಸ್ವಾಮಿನಂ ತಥಾ ॥ ೨೬ ॥

ಚಕ್ರತೀರ್ಥಂ ತಥಾ ಪುಣ್ಯಂ ರಾಮತೀರ್ಥಂ ತಥಾ ಶಿವಂ ।
ವಿತಸ್ತಾ ಹರ್ಷಪಂಥಾ ವೈ ತಥಾ ವೈ ದೇವಿಕಾ ಸ್ಮೃತಾ ೨೭ ॥

ಗಂಗಾ ಸರಸ್ವತೀ ಸಿಂಧುಃ ಚಂದ್ರಭಾಗಾ ಸ ನರ್ಮದಾ ।
ವಿಪಾಶಾ ಯಮುನಾ ತಾಪೀ ಶಿವಾ ವೇತ್ರವತೀ ತಥಾ ॥ ೨೮ ॥

ಗೋದಾವರೀ ಪಯೋಷ್ಣೀ ಚ ಕೃಷ್ಣವೇಣ್ಯಾ ತಥಾ ನದೀ ।
ಶತರುದ್ರಾ ಪುಷ್ಕರಿಣೀ ಕೌಶಿಕೀ ಸರಯೂಸ್ತಥಾ ॥ ೨೯ ॥

---

೨೪. ತತ್ಕಾಲದಲ್ಲಿ ಪುಣ್ಯತೀರ್ಥಗಳ ಹೆಸರನ್ನೆಲ್ಲಾ ಮನಸ್ಸಿನಲ್ಲಿ ಸ್ಮರಿಸುತ್ತಾ ಅಭಿಷೇಕಮಾಡುತ್ತಾ ಇರಬೇಕು. ಆಗ ಸ್ಮರಿಸಬೇಕಾದ ಕ್ಷೇತ್ರ, ತೀರ್ಥಗಳನ್ನು ಇಲ್ಲಿ ಸೂಚಿಸಿದೆ.

೨೫–೨೭. ಪ್ರಯಾಗ, ಪುಷ್ಕರ, ಕುರುಕ್ಷೇತ್ರ, ನೈಮಿಷ, ಪೃಥೂದಕ, ಚಂದ್ರ ಭಾಗಾ, ಶೋಣಾ, ಗೋಕರ್ಣ, ಬ್ರಹ್ಮಾವರ್ತ, ಕುಶಾವರ್ತ, ಬಿಲ್ವಾರಣ್ಯ, ನೀಲ ಪರ್ವತತೀರ್ಥ, ಹರಿದ್ವಾರ, ಗಂಗಾಸಾಗರಸಂಗಮ, ಕಾಲಪ್ರಿಯತೀರ್ಥ, ಮಿತ್ರವನ ತೀರ್ಥ, ಶುಂಡೀರಸ್ವಾಮಿತೀರ್ಥ, ಮಹಾಪುಣ್ಯಕರವಾದ ಚಕ್ರತೀರ್ಥ, ರಾಮತೀರ್ಥ, ಶಿವತೀರ್ಥ, ವಿತಸ್ತಾತೀರ್ಥ, ಹರ್ಷಪಂಥಾತೀರ್ಥ, ದೇವಿಕಾ ಈ ತೀರ್ಥದೇವತೆ ಗಳ ಸಾನ್ನಿಧ್ಯವುಂಟಾಗುವಂತೆ ಸ್ಮರಿಸಬೇಕು.

೨೮–೩೦. ಗಂಗೆ, ಸರಸ್ವತಿ, ಸಿಂಧು, ಚಂದ್ರಭಾಗಾ, ನರ್ಮದಾ, ವಿಪಾಶಾ, ಯಮುನಾ, ತಾಪೀ, ಶಿವಾ, ವೇತ್ರವತೀ, ಕೌಶಿಕೀ, ಸರಯೂ ಮುಂತಾದ ಪುಣ್ಯ ಕ್ಷೇತ್ರಗಳ ಮತ್ತು ನದಿಗಳ ತೀರ್ಥಗಳೂ, ಇತರ ಸಾಗರಗಳ ತೀರ್ಥಗಳೂ ಇವೆಲ್ಲದರ

**ತಥಾಷ್ಟೇ ಸಾಗರಾಶ್ಚೈವ ಸಾನ್ನಿಧ್ಯಂ ಕಲ್ಪಯಂತು ವೈ ।**
**ತಥಾಶ್ರಮಾಃ ಪುಣ್ಯತಮಾಃ ದಿವ್ಯಾನ್ಯಾಯತನಾನಿ ಚ ॥ ೩೦ ॥**

**ಏವಂ ಸ್ನಾನವಿಧಿಂ ಕೃತ್ವಾ ಅರ್ಚಯಿತ್ವಾ ಪ್ರಣಮ್ಯ ಚ ।**
**ಧೂಪಮರ್ಘ್ಯಂ ಪ್ರದತ್ವಾ ತು ಪ್ರತಿಮಾಮಧಿವಾಸಯೇತ್ ॥ ೩೧ ॥**

**ತ್ರಿರಾತ್ರಂ ಸಪ್ತರಾತ್ರಂ ವಾ ಮಾಸಂ ಮಾಸಾರ್ಧಮೇವ ಚ ।**
**ಸ್ಥಿತಂ ಸ್ನಾನಗೃಹೇ ದೇವಂ ಪೂಜಯೇದ್ಭಕ್ತಿತೋ ನರಃ ॥ ೩೨ ॥**

**ಚತ್ವರೇ ಲೇಪಯೇದ್ವೇದಿಂ ಚತುರಸ್ರಾಂ ಶುಭಾಂ ಕೃತಾಂ ।**
**ಚತುರ್ದಿಶಃ ಶ್ವೇತಕುಂಭೈಃ ವಿತಾನವರಶೋಭಿತಾಂ ॥ ೩೩ ॥**

**ಕೃಷ್ಣಪಕ್ಷೇ ತು ಮಾಘಸ್ಯ ಸಪ್ತಮ್ಯಾಂ ತ್ರಿಪುರಾಂತಕ ।**
**ಕೃತ್ವಾಗ್ನಿಕಾರ್ಯಂ ವಿಧಿವತ್ ಕೃತ್ವಾ ಬ್ರಾಹ್ಮಣಭೋಜನಂ ॥ ೩೪ ॥**

---

ಸಾನ್ನಿಧ್ಯವು ಈ ಜಲದಲ್ಲಿಯೂ ಮತ್ತು ಆ ಪುಣ್ಯಸ್ಥಳಗಳ ಸಾನ್ನಿಧ್ಯವು ಈ ಪ್ರದೇಶದಲ್ಲಿಯೂ ಉಂಟಾಗಲಿ ಎಂಬದಾಗಿಯೂ ಹೇಳುತ್ತಾ ಅಭಿಷೇಕಮಾಡಬೇಕು

೩೧. ಅಭಿಷೇಕವಾದ ಮೇಲೆ ಪ್ರತಿಮೆಯನ್ನು ಒರಸಿ ವಸ್ತ್ರ, ಗಂಧ, ಪುಷ್ಪಾದಿಗಳಿಂದ ಪೂಜಿಸಿ ಧೂಪ ಅರ್ಘ್ಯಾದಿಗಳನ್ನು ಕೊಟ್ಟು, ನಮಸ್ಕರಿಸಿ ಅನಂತರ ಪ್ರತಿಮೆಯನ್ನು ಅಧಿವಾಸಮಾಡಿಸಿ ಇಡಬೇಕು.

೩೨. ಈರೀತಿಯಾಗಿ ಮೂರು ರಾತ್ರಿಯೋ, ಏಳು ರಾತ್ರಿಯೋ, ಒಂದು ತಿಂಗಳೋ, ಅಥವಾ ಒಂದೂವರೆ ತಿಂಗಳೋ ಅಧಿವಾಸಮಾಡಿಸಿ ಆ ಮೇಲೆ ಈಚೆಗೆ ತೆಗೆದು ಭಕ್ತಿಯಿಂದ ಪೂಜಿಸಬೇಕು.

೩೩. ಪ್ರಾಕಾರಾಂಗಳದಲ್ಲಿ ಮಂಗಳಕರವಾಗಿಯೂ ಮೇಲ್ಕಟ್ಟಿನಿಂದ ಶೋಭಿತವಾಗಿಯೂ ಇರುವ ಚೌಕನಾಗಿ ಮಾಡಿದ ಜಗುಲಿಯನ್ನು ಸಾರಿಸಿ ರಂಗವಲ್ಲಿ ಹಾಕಿ ನಾಲ್ಕು ದಿಕ್ಕಿನಲ್ಲೂ ಕಲಶಗಳನ್ನು ಇರಿಸಬೇಕು.

೩೪. ಅಯ್ಯಾ ತ್ರಿಪುರದಹನಮಾಡಿದ ಶಿವನೇ! ಮಾಘಕೃಷ್ಣ ಸಪ್ತಮಿಯಲ್ಲಿ ಶಾಸ್ತ್ರೋಕ್ತವಾಗಿ ಹವನ, ಹೋಮ, ಬ್ರಾಹ್ಮಣಭೋಜನಮಾಡಿಸಬೇಕೆಂದು ಕೆಲವರ ಮತ.

ಶಂಖಭೇರೀ ನಿನಾದೈಸ್ತು ಬ್ರಹ್ಮಘೋಷೈಶ್ಚ ಪುಷ್ಕಲೈಃ ।
ಪುಣ್ಯಾಹ ಘೋಷೈರ್ವಿವಿಧೈಃ ಬ್ರಾಹ್ಮಣಾನ್ ಸ್ವಸ್ತಿವಾಚ್ಯ ಚ ॥ ೩೫ ॥

ತತೋಽಸ್ಯ ಪರಯಾ ಭಕ್ತ್ಯಾ ಸೂರ್ಯಸ್ಯ ಪರಮಾತ್ಮನಃ ।
ರಥೇನ ದರ್ಶನೀಯೇನ ಕಿಂಕಿಣೀ ಜಾಲಮಾಲಿನಾ ।
ಸೂರ್ಯಂ ಚ ಭ್ರಾಮಯೇದ್ದೇವಂ ಮಹೋತ್ಸವಪುರಸ್ಸರಂ ॥ ೩೬ ॥

ಶುಕ್ಲಪಕ್ಷೇ ತು ಮಾಘಸ್ಯ ರಥಮಾರೋಪಯೇದ್ರವಿಂ ।
ಕೃತ್ವಾಗ್ನಿಹೋಮಂ ವಿಧಿವತ್ ತಥಾ ಬ್ರಾಹ್ಮಣಭೋಜನಂ ॥ ೩೭ ॥

ಪ್ರೀಣಯಿತ್ವಾ ಜನಂ ಸರ್ವಂ ದಕ್ಷಿಣಾ ಭೋಜನಾದಿನಾ ।
ಪ್ರಪೂಜ್ಯ ಬ್ರಾಹ್ಮಣಾನ್ ದಿವ್ಯಾನ್ ಭೌಮಾಂಶ್ಚಾಪಿ ಸುವಾಚಕಾನ್ ॥ ೩೮ ॥

ಇತಿಹಾಸಪುರಾಣಾಭ್ಯಾಂ ವಾಚಕೋ ಬ್ರಾಹ್ಮಣೋತ್ತಮಃ ।
ತತೋ ದೇವಶ್ಚ ಇಷ್ಟಶ್ಚ ಸಂಪೂಜ್ಯೋ ಯತ್ನತಸ್ತದಾ ॥ ೩೯ ॥

---

೩೫. ಹೀಗೆ ಕಲಶಗಳನ್ನಿರಿಸಿ ಓಲಗ, ಶಂಖ, ನಗಾರಿ ಮುಂತಾದವುಗಳ ಧ್ವನಿಗಳಾಗುತ್ತಿರಲು ಸಮೃದ್ಧಿಯಾದ ವೇದಘೋಷಗಳಿಂದಲೂ ಪುಣ್ಯಾಹಮಂತ್ರದ ವಿವಿಧ ಧ್ವನಿಯಿಂದಲೂ ಯುಕ್ತವಾಗುವಂತೆ ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಬೇಕು.

೩೬-೩೭. ಬಳಿಕ ಕಿರುಗಂಟೆಗಳ ಸಮೂಹದಿಂದ ಕೂಡಿ ನೋಡಲು ಸೊಗಸಾಗುವಂತೆ ರಥವನ್ನು ಅಲಂಕರಿಸಬೇಕು. ಮಾಘಶುದ್ಧ ಸಪ್ತಮಿಯ ದಿನ ಪರಮಾತ್ಮನಾದ ಸೂರ್ಯದೇವನ ಪ್ರತಿಮೆಯನ್ನು ಆ ರಥದ ಸುತ್ತ ಭಕ್ತಿಯಿಂದ ಉತ್ಸವಪೂರ್ವಕವಾಗಿ ತಂದು ರಥದ ಮೇಲಕ್ಕೆ ಏರಿಸಿ ವೈಭವದೊಡನೆ ಗ್ರಾಮದಲ್ಲೆಲ್ಲಾ ಪ್ರದಕ್ಷಿಣವಾಗಿ ಎಳೆಯಬೇಕು.

೩೮. ಯಾಗಶಾಲೆಯಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ ವಿಧಿವಿಧಾನದಿಂದ ಹೋಮಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ಭೋಜನವನ್ನೂ ಮಾಡಿಸಿ ದಕ್ಷಿಣೆ ಮುಂತಾದ್ದನ್ನು ಕೊಡಬೇಕು. ಸಮಸ್ತ ಜನರಿಗೂ ಭೋಜನದಿಂದ ತೃಪ್ತಿಪಡಿಸಬೇಕು.

೩೯. ಮಂತ್ರಪಾಠಕರಾದ ದಿವ್ಯರು, ಭೌಮರು ಎಂಬ ಶ್ರೋತ್ರಿಯ ಬ್ರಾಹ್ಮಣರನ್ನೂ, ಇತರ ಭೂಸುರರನ್ನೂ, ಇತಿಹಾಸ ಪುರಾಣಾದಿಗಳು, ಸ್ವಸ್ತಿವಾಚನ

**ಮಾಘಸ್ಯ ಶುಕ್ಲಪಕ್ಷಸ್ಯ ಪಂಚಮ್ಯಾಮೇಕಭುಕ್ತಕಂ ।**
**ಅಯಾಚಿತಂ ಚತುರ್ಥ್ಯಾಂ ತು ಷಷ್ಠ್ಯಾಂ ನಕ್ತಂ ಪ್ರಕೀರ್ತಿತಂ ॥ ೪೦ ॥**

**ಸಪ್ತಮ್ಯಾಮುಪವಾಸಂ ತು ಆಶ್ರಮಾದ್ರೋಪಯೇದ್ರಥಂ ।**
**ಅಗ್ನಿಕಾರ್ಯಂ ತು ವೈ ಕೃತ್ವಾ ರಥಸ್ಯ ಪುರತಃ ಶಿವ ॥ ೪೧ ॥**

**ಷಷ್ಠ್ಯಾಂ ಚ ರಾತ್ರೌ ಭೂತೇಶ ರಥಸ್ಯೇಹಾಧಿವಾಸನಂ ।**
**ಬ್ರಾಹ್ಮಣಾನ್ ಭೋಜಯಿತ್ವಾ ತು ದಿವ್ಯಾನ್ ಭೌಮಾಂಶ್ಚ ವಾಚಕಾನ್॥ ೪೨ ॥**

**ರಥಮಾರೋಪಯೇದ್ದೇವಂ ಸಪ್ತಮ್ಯಾಂ ಭೂತಭಾವನಂ ।**
**ಸಿತಾಯಾಂ ಮಾಘಮಾಸೇ ತು ತಸ್ಯ ದೇವಾಲಯಾಗ್ರತಃ ॥ ೪೩ ॥**

---

ಇವುಗಳನ್ನು ಹೇಳುವ ಪೌರಾಣಿಕ ಬ್ರಾಹ್ಮಣರನ್ನೂ ಪೂಜಿಸಬೇಕು. ಈ ನೈಮಿತ್ತಿಕ ಕಾರ್ಯಗಳ ಪೂರ್ವವೇ ನಿತ್ಯವೂ ಮಾಡುವ ಇಷ್ಟದೇವತಾಪೂಜೆಯನ್ನು ಯತ್ನ ದಿಂದಾದರೂ ಮಾಡಬೇಕು.

೪೦. ಮಾಘಶುದ್ಧ ಚತುರ್ಥಿಯದಿನ ಅಯಾಚಿತವಾಗಿ ಯಾರಾದರೂ ತಂದು ಕೊಟ್ಟದ್ದನ್ನು ಭುಜಿಸುವುದು. ಪಂಚಮಿಯಲ್ಲಿ ಒಂದುಹೊತ್ತು ಊಟ. ಷಷ್ಠಿ ಯಲ್ಲಿ ನಕ್ತಭೋಜನ ಎಂದು ಉಕ್ತವಾಗಿದೆ.

೪೧. ಸಪ್ತಮಿಯ ದಿನ ಉಪವಾಸದಲ್ಲಿ ಮೂಲಪೀಠದಿಂದ ದೇವರನ್ನು ರಥದ ಮೇಲಕ್ಕೆ ಬಿಜಮಾಡಿಸಬೇಕು. ಅಯ್ಯಾ ಶಿವನೇ! ಚಿನ್ನದ ಅಥವಾ ಬೆಳ್ಳಿಯ ರಥ ವನ್ನು ದಾನಕ್ಕಾಗಿ ಸಿದ್ಧಪಡಿಸಿದ್ದರೆ ರಥದ ಮುಂದೆ ಅಗ್ನಿಕಾರ್ಯವನ್ನು ಮಾಡಿ ಷಷ್ಠೀ ರಾತ್ರಿಯಲ್ಲಿ ರಥವನ್ನು ಅಧಿವಾಸಮಾಡಬೇಕು.

೪೨. ಅನಂತರ ದಿವ್ಯರು, ಭೌಮರು ಎಂಬ ಬ್ರಾಹ್ಮಣರಿಗೂ ಪುರಾಣವಾಚನ ಮಾಡುವವರಿಗೂ ಭೋಜನಮಾಡಿಸಬೇಕು.

೪೩. ಮಾಘ ಶುಕ್ಲಪಕ್ಷ ಸಪ್ತಮಿಯ ದಿನ ಭೂತಭಾವನವಾದ ದೇವನನ್ನು ರಥಾರೋಹಣಮಾಡಿಸಬೇಕು. ಹೀಗೆ ಮಾಡಿ ಆ ದೇವಾಲಯದ ಮುಂಭಾಗದಲ್ಲಿ ಯೇ ರಥವನ್ನು ನಿಲ್ಲಿಸಿರಬೇಕು.

ತತ್ರಸ್ಥಸ್ಯೈವ ದೇವಸ್ಯ ಕುರ್ಯಾದ್ರಾತ್ರೌ ಪ್ರಜಾಗರಂ ।
ನಾನಾವಿಧೈಃ ಪ್ರೇಕ್ಷಣಕೈಃ ದೀಪವೃಕ್ಷೋಪಶೋಭಿತೈಃ ॥ ೪೪ ॥

ಶಂಖತೂರ್ಯನಿನಾದೈಶ್ಚ ಬ್ರಹ್ಮಘೋಷೈಶ್ಚ ಪುಷ್ಕಲೈಃ ।
ಕುರ್ಯಾತ್ಪ್ರಜಾಗರಂ ಭಕ್ತ್ಯಾ ದೇವಸ್ಯ ಪುರತೋ ನಿಶಿ ॥ ೪೫ ॥

ತತೋಽಷ್ಟಮ್ಯಾಂ ಚ ಯತ್ನೇನ ದೇವಂ ರಥಗತಂ ನಯೇತ್ ।
ನಗರಸ್ಯೋತ್ತರಂ ದ್ವಾರಂ ಶಂಖಭೇರೀನಿನಾದಿತಂ ॥ ೪೬ ॥

ತತಃ ಪೂರ್ವಂ ದಕ್ಷಿಣಂ ಚ ದ್ವಾರಂ ಚಾಪಿ ತಥಾಪರಂ ।
ಏವಂ ಹಿ ಕ್ರಿಯಮಾಣಾಯಾಂ ಯಾತ್ರಾಯಾಂ ವತ್ಸರಾವಧೌ ॥ ೪೭ ॥

ಮಾನವಾಸ್ಸುಖಮೇಧಂತೇ ರಾಜಾ ಜಯತಿ ಚಾಹಿತಾನ್ ।
ನೀರುಜಶ್ಚ ಜನಾಸ್ಸರ್ವೇ ಗವಾಂ ಶಾನ್ತಿರ್ಭವೇತ್ತದಾ ॥ ೪೮ ॥

---

೪೪. ದೇವರು ರಥದಲ್ಲಿಯೇ ಇರುವಾಗ, ರಾತ್ರಿಯಲ್ಲಿ ದೀಪವೃಕ್ಷ(ಕಂದೀಲು)ಗಳಿಂದ ಒಪ್ಪುತ್ತಿರುವ ನಾಟಕ ಮೊದಲಾದ ಆಟಗಳಿಂದ ಕೂಡಿ ಜಾಗರಣ ಮಾಡಬೇಕು.

೪೫. ಶಂಖಧ್ವನಿ, ಓಲಗ, ಮೊದಲಾದುವುಗಳಿಂದಲೂ ಸಮೃದ್ಧಿಯಾದ ವೇದಧ್ವನಿಗಳಿಂದಲೂ ದೇವರ ಮುಂದೆ ರಾತ್ರಿಯೆಲ್ಲ ಭಕ್ತಿಯಿಂದ ಎಚ್ಚರವಾಗಿರಬೇಕು. ಎಂದರೆ ಜಾಗರಣೆ ಮಾಡಬೇಕು.

೪೬–೪೭. ಈರೀತಿ ಶಂಖಧ್ವನಿ, ನಗಾರಿಯಧ್ವನಿಗಳ ಸಮೇತ ರಥದಲ್ಲಿರುವ ದೇವರನ್ನು ಎಂದರೆ ದೇವಮೂರ್ತಿಸಹಿತವಾದ ರಥವನ್ನು ಮಾರನೆಯ ದಿನ ಎಂದರೆ ಅಷ್ಟಮಿಯ ದಿನ ನಗರದ ಉತ್ತರದ ದಿಕ್ಕಿನ ಬಾಗಿಲವರೆಗೆ ಎಳೆಯಬೇಕು. ಆ ಮಾರನೆ ದಿನ ಅಲ್ಲಿಂದ ಪೂರ್ವದ ದಿಕ್ಕಿನ ಬಾಗಿಲಿಗೂ, ಮಾರನೆಯ ದಿನ ಅಲ್ಲಿಂದ ದಕ್ಷಿಣದ ಬಾಗಿಲವರೆಗೂ ಹಾಗೆಯೇ ಮರುದಿನ ಪಶ್ಚಿಮದ ಬಾಗಿಲಿಗೂ ರಥವನ್ನು ಎಳೆದುಕೊಂಡು ಹೋಗಬೇಕು. ಒಂದು ಸಂವತ್ಸರದ ಅವಧಿಯಲ್ಲಿ ಒಂದುಸಾರಿ ನಡೆಯಿಸುವ ಯಾತ್ರೆಯನ್ನು ಹೀಗೆ ಕ್ರಮವಾಗಿ ಮಾಡಬೇಕು.

೪೮. ಈರೀತಿ ಯಾತ್ರೆಮಾಡಿದ ಮನುಷ್ಯನು ಸುಖವಾಗಿ ವೃದ್ಧಿಹೊಂದುವನು. ಈ ಯಾತ್ರೆಮಾಡಿಸಿದ ರಾಜನು ಶತ್ರುಗಳನ್ನು ಜಯಿಸುತ್ತಾನೆ. ಈ ಉತ್ಸವ

ಕರ್ತಾರಶ್ಚಾಪಿ ಯಾತ್ರಾಯಾಃ ಸ್ವರ್ಗಭಾಜೋ ಭವಂತಿ ಹಿ ।
ವೋಢಾರಶ್ಚ ತಥಾ ವತ್ಸ ಸೂರ್ಯಲೋಕಂ ವ್ರಜಂತಿ ಹಿ　　॥ ೪೯ ॥

॥ ರುದ್ರ ಉವಾಚ ॥
ಕಥಂ ಸಂಚಾಲ್ಯತೇ ಬ್ರಹ್ಮನ್ ಸ್ಥಾಪಿತಾ ಪ್ರತಿಮಾ ಸಕೃತ್ ।
ಏತನ್ಮೇ ವದ ದೇವೇಶ ಸುಮಹಾನ್ ಸಂಶಯೋ ಹಿ ಮೇ　　॥ ೫೦ ॥

॥ ಬ್ರಹ್ಮೋವಾಚ ॥
ಪೂರ್ವಮೇವ ಸಹಸ್ರಾಂಶೋರ್ಯಾನಹೇತೋರ್ಮಹಾತ್ಮನಃ ।
ಸಂವತ್ಸರಸ್ಯಾವಯವೈಃ ಕಲ್ಪಿತೋऽಸ್ಯ ರಥೋ ಮಯಾ　　॥ ೫೧ ॥

ಸರ್ವೇಷಾಂ ತು ರಥಾನಾಂ ವೈ ಸ ರಥಃ ಪ್ರಥಮಃ ಸ್ಮೃತಃ ।
ತಂ ದೃಷ್ಟ್ವಾ ತು ತತಸ್ತ್ವನ್ಯೇ ಸ್ಯಂದನಾ ವಿಶ್ವಕರ್ಮಣಾ　　॥ ೫೨ ॥

---

ನಡೆದ ದೇಶದ ಜನರೆಲ್ಲಾ ರೋಗರಹಿತರಾಗುವುದಲ್ಲದೆ ಗೋವುಗಳಿಗೂ ಸುಖಪ್ರದ ವಾಗುವುದು.

೪೯. ಈ ಯಾತ್ರೆಯನ್ನು ನಡೆಯಿಸಿದವನು ಸ್ವರ್ಗವನ್ನು ಪಡೆಯುತ್ತಾನೆ. ಅಯ್ಯಾ ವತ್ಸನೇ! ದೇವರ ಉತ್ಸವವನ್ನು ಹೊರತಕ್ಕವರು ಸೂರ್ಯಲೋಕವನ್ನು ಹೊಂದುತ್ತಾರೆ.

೫೦. ರುದ್ರನು ಕೇಳುತ್ತಾನೆ—ಎಲೈ ಬ್ರಹ್ಮನೇ! ಒಂದುಸಲ ನೆಲದಲ್ಲಿ ಪ್ರತಿಷ್ಠಿತವಾದ ಪ್ರತಿಮೆಯನ್ನು ಅಲ್ಲಾಡಿಸುವುದುಂಟೇ? ಹೀಗಿರುವಾಗ ಆ ಪ್ರತಿಮೆಗೆ ಚಲನವೂ ಉತ್ಸವವೂ ಹೇಗೆ ಸಂಭವಿಸುತ್ತದೆ? ಈ ವಿಷಯದಲ್ಲಿ ನನಗೆ ಬಹು ಸಂದೇಹವಾಗಿದೆ ಎನ್ನಲು,

೫೧. ಬ್ರಹ್ಮನು ಹೇಳಿದನು—ಮಹಾತ್ಮನೂ, ಸಹಸ್ರಕಿರಣನೂ ಆದ ಸೂರ್ಯನ ಪ್ರಯಾಣಕ್ಕಾಗಿ ಮೊದಲೇ ಸಂವತ್ಸರಾವಯುವಗಳಿಂದ ನಾನು ರಥವನ್ನು ಕಲ್ಪಿಸಿದೆನು.

೫೨. ಆ ರಥವೇ ಎಲ್ಲಾ ರಥಗಳಿಗಿಂತ ಮೊದಲನೆಯದೆಂದು ನಾನು ತಿಳಿದಿದ್ದೇನೆ. ವಿಶ್ವಕರ್ಮನು ಈ ರಥವನ್ನು ನೋಡಿ ಚಂದ್ರ ಮೊದಲಾದ ಸಮಸ್ತ ಗ್ರಹ ದೇವತೆಗಳಿಗೂ ಅನೇಕ ಪ್ರಕಾರವಾದ ರಥಗಳನ್ನು ಕಲ್ಪಿಸಿದನು.

ಕಲ್ಪಿತಾಃ ಸರ್ವದೇವಾನಾಂ ಸೋಮಾದೀನಾಮನೇಕಶಃ ।
ವಿಶ್ವಕರ್ಮಕೃತಂ ಪ್ರಾಪ್ಯ ರಥಂ ದೇವೇನ ಶಂಕರ ॥ ೫೩ ॥

ಪೂಜಾರ್ಥಮಾತ್ಮನೋ ದತ್ತಂ ಮನವೇ ಸತ್ಕುಲೋದ್ವಹ ।
ಮನುನೇಕ್ಷ್ವಾಕವೇ ದತ್ತಂ ಮರ್ತ್ಯೈಃ ಸಂಪೂಜ್ಯತಾಂ ರವಿಃ ॥ ೫೪ ॥

ಅತಸ್ತು ರಥಯಾನೇನ ಚಾಲನಂ ವಿಹಿತಂ ರವೇಃ ।
ತಸ್ಮಾನ್ನ ಚಾಲನೇ ದೋಷಃ ಸವಿತಾ ಚಲ ಏವ ಸಃ ॥ ೫೫ ॥

ಯಸ್ಮಾದ್ರಥೇನ ಪರ್ಯೇತಿ ಭಾಸ್ಕರಃ ಪೃಥಿವೀಮಿಮಾಂ ।
ಗಚ್ಛನ್ನದೃಶ್ಯತೇ ಚೈತನ್ಮಂಡಲಂ ಸವಿತುಸ್ತಥಾ ॥ ೫೬ ॥

ಅದೃಷ್ಟಂ ಚಲತೇ ಯಸ್ಮಾತ್ತಸ್ಮಾದ್ವೈ ಪಾರ್ವತೀಪ್ರಿಯ ।
ತದೇವಂ ರಥಯಾತ್ರಾಸು ದೃಷ್ಟಂ ಭಾನೋರ್ಮನೀಷಿಭಿಃ ॥ ೫೭ ॥

---

೫೩-೫೪. ಅಯ್ಯಾ ಶಿವನೇ! ವಿಶ್ವಕರ್ಮನು ತನಗೆ ಮಾಡಿಕೊಟ್ಟ ರಥವನ್ನು ಸೂರ್ಯನು ತೆಗೆದುಕೊಂಡು ಬ್ರಹ್ಮನು ಮಾಡಿಕೊಟ್ಟ ರಥವನ್ನು ಪೂಜೆಗಾಗಿ ಮನುವಿಗೆ ಕೊಟ್ಟನು. ಆ ಮನುವು ಮನುಷ್ಯರೆಲ್ಲರೂ ಸೂರ್ಯಾರಾಧನೆ ಮಾಡಲಿ ಎಂದು ಇಕ್ಷ್ವಾಕುವಿಗೆ ಕೊಟ್ಟನು.

೫೫. ಈ ರಥರೂಪವಾದ ಯಾನಸಾಮಗ್ರಿಯಿಂದ ಸೂರ್ಯಪ್ರತಿಮೆಗೆ ಚಲನವು ವಿಹಿತವಾಗಿದೆ. ಆದ್ದರಿಂದ ಆ ಸೂರ್ಯನು ಚಲಿಸುವವನೇ ಆಗಿದಾನೆ. ಆದ್ದರಿಂದ ಅದನ್ನು ಅಲ್ಲಾಡಿಸಿದರೆ ದೋಷವಾಗುವುದಿಲ್ಲ.

೫೬. ಆದ್ದರಿಂದ ಸೂರ್ಯನು ರಥದಿಂದ ಈ ಭೂಮಿಯನ್ನೆಲ್ಲಾ ಸುತ್ತುತ್ತಾನೆ. ಈ ಸೂರ್ಯಮಂಡಲವು ವೇಗವಾಗಿ ಹೋಗುತ್ತಿರುವಾಗ ಅದರ ನಿಜ ಸ್ವರೂಪವು ಗೋಚರಿಸುವುದಿಲ್ಲ.

೫೭. ಅಯ್ಯಾ ಪಾರ್ವತೀ ಪ್ರಿಯನೇ ! ಹಾಗೆ ಸೂರ್ಯನು 'ಕಣ್ಣಿಗೆ ಕಾಣಿಸದಷ್ಟು ವೇಗವಾಗಿ ತಿರುಗುವುದರಿಂದ ಆ ಸೂರ್ಯರಥವು ಕಣ್ಣಿಗೆ ಕಾಣಿಸತಕ್ಕದಲ್ಲವೆಂದೇ ವಿದ್ವಾಂಸರ ತಿಳಿವಳಿಕೆಯಾಗಿದೆ.

**ಅನ್ಯೇಷಾಂ ಚಾಲನಂ ನೇಷ್ಟಂ ದೇವಾನಾಂ ಪಾರ್ವತೀಪ್ರಿಯ ।**
**ಬ್ರಹ್ಮವಿಷ್ಣುಶಿವಾದೀನಾಂ ಸ್ಥಾಪಿತಾನಾಂ ವಿಧಾನತಃ　　॥ ೫೮ ॥**

**ತಸ್ಮಾದ್ರಥೇನ ದೇವಸ್ಯ ಯಾತ್ರಾ ಕಾರ್ಯಾ ವಿಧಾನತಃ ।**
**ಪ್ರಜಾನಾಮಿಹ ಶಾಂತ್ಯರ್ಥಂ ಪ್ರತಿಸಂವತ್ಸರಂ ಸದಾ　　॥ ೫೯ ॥**

**ಕಾಂಚನೋ ವಾಥ ರೌಪ್ಯೋ ವಾ ದೃಢದಾರುಮಯೋಽಪಿ ವಾ ।**
**ದೃಢಾಕ್ಷಯುಗಚಕ್ರಶ್ಚ ರಥಃ ಕಾರ್ಯಃ ಸುಯಂತ್ರಿತಃ　　॥ ೬೦ ॥**

**ತಸ್ಮಿನ್ ರಥವರೇ ಶ್ರೇಷ್ಠೇ ಕಲ್ಪಿತೇ ಸುಮನೋರಮೇ ।**
**ಆರೋಪ್ಯ ಪ್ರತಿಮಾಂ ಯತ್ನಾತ್ ಯೋಜಯೇದ್ವಾಜಿನಃ ಶುಭಾನ್॥ ೬೧ ॥**

**ಹರಿಲ್ಲಕ್ಷಣ ಸಂಪನ್ನಾನ್ ಸುಮುಖಾನ್ ವಶವರ್ತಿನಃ ।**
**ಕುಂಕುಮೇನ ಸಮಾಲಬ್ಧಾನ್ ಚಾಮರಸ್ರಗ್ವಿಭೂಷಿತಾನ್　　॥ ೬೨ ॥**

---

೫೮. ವಿಧಿ ಪ್ರಕಾರವಾಗಿ ಪ್ರತಿಷ್ಠಿತವಾದ ಬ್ರಹ್ಮ, ವಿಷ್ಣು, ಶಿವ ಮೊದಲಾದ ಇತರ ದೇವತೆಗಳ ಪ್ರತಿಮೆಗಳನ್ನು ಮಾತ್ರ ಅಲುಗಿಸುವುದು ಸೂಕ್ತವಲ್ಲ.

೫೯. ಹೀಗಿರುವುದರಿಂದ ಪ್ರಜಾವರ್ಗಕ್ಕೆ ಶಾಂತಿ ಶ್ರೇಯಸ್ಸುಂಟಾಗುವುದಕ್ಕಾಗಿ ವರ್ಷವರ್ಷವೂ ಸೂರ್ಯ ರಥೋತ್ಸವ ಯಾತ್ರೆಯನ್ನು ವಿಧಿಯಪ್ರಕಾರ ಮಾಡಬೇಕು.

೬೦. ಚಿನ್ನದ್ದಾಗಲಿ, ಬೆಳ್ಳಿಯದಾಗಲಿ, ದೃಢವಾದ ಮರದ್ದಾಗಲಿ ಮಜಬೂತಾದ ಅಕ್ಷ, ನೊಗ, ಚಕ್ರ ಇವುಗಳ ಒಂದೊಂದನ್ನೂ ಇಟ್ಟುಕೊಂಡು ಇವುಗಳನ್ನು ಅಚ್ಚುಕಟ್ಟಾಗಿ ಜೋಡಿಸಿ ರಥವನ್ನು ಸಿದ್ಧಮಾಡಬೇಕು.

೬೧-೬೨. ಅಂದವಾಗಿ ಸಿದ್ಧಮಾಡಲ್ಪಟ್ಟು ಮನೋಹರವೂ ಶ್ರೇಷ್ಠವೂ ಆದ ಆ ರಥದಲ್ಲಿ ಸೂರ್ಯಪ್ರತಿಮೆಯನ್ನು ಆರೋಹಣಮಾಡಿಸಿ ಹಸರು ಬಣ್ಣವುಳ್ಳವೂ ಸರ್ವಲಕ್ಷಣಸಂಪನ್ನಗಳೂ, ಸುಮುಖಗಳೂ, ತಂಟೆಮಾಡದೆ ಸ್ವಾಧೀನವಾಗಿರತಕ್ಕವೂ ಆದ ಒಳ್ಳೆಯ ಕುದುರೆಗಳ ಮೈಗೆ ಕೇಸರಿಯನ್ನು ಲೇಪಿಸಿ ಪಾರಿಜಾತಾದಿ ಸುರಲೋಕ ಪುಷ್ಪಗಳ ಮಾಲೆಗಳಿಂದ ಅಲಂಕರಿಸಬೇಕು.

**ಸದಶ್ವಾನ್ ಯೋಜಯಿತ್ವಾ ತು ರಥಸ್ಯಾರ್ಘ್ಯಂ ಪ್ರದಾಯ ಚ ।**
**ವಿಬುಧಾನ್ ಪೂಜಯಿತ್ವಾ ತು ಧೂಪಮಾಲ್ಯಾನುಲೇಪನೈಃ ॥ ೬೩ ॥**

**ಆಹಾರೈರ್ವಿವಿಧೈಶ್ಚಾಪಿ ಭೋಜಯಿತ್ವಾ ದ್ವಿಜೋತ್ತಮಾನ್ ।**
**ದೀನಾಂಧಕೃಪಣಾದೀಂಶ್ಚ ಸರ್ವಾನ್ ಸಂತರ್ಪ್ಯ ಶಕ್ತಿತಃ ॥ ೬೪ ॥**

**ನ ಕಿಂಚಿದ್ವಿಮುಖಂ ಕುರ್ಯಾತ್ ಉತ್ತಮಾಧಮ ಮಧ್ಯಮಂ ।**
**ಸೂರ್ಯ ಕ್ರತೌ ತು ವಿತತೇ ಏವ ಮಾಹುರ್ಮನೀಷಿಣಃ ॥ ೬೫ ॥**

**ಯಶ್ಚಿಂತಯತಿ ಭಗ್ನಾಶಃ ಕ್ಷುಧಾವಾತಪ್ರಪೀಡಿತಃ ।**
**ಅದಾತುರ್ಹಿ ಪಿತೄಂಸ್ತೇನ ಸ್ವರ್ಗಸ್ಥಾನಪಿ ಪಾತಯೇತ್ ॥ ೬೬ ॥**

---

೬೩. ಆ ಕುದುರೆಗಳನ್ನು ರಥಕ್ಕೆ ಹೂಡಿ ಸೂರ್ಯದೇವನಿಗೆ ಅರ್ಘ್ಯವನ್ನು ಕೊಟ್ಟು ರಥಸ್ಥರಾದ ಇತರ ದೇವತೆಗಳಿಗೂ ಗಂಧ ಪುಷ್ಪ ಧೂಪಾದಿಗಳಿಂದ ಪೂಜೆಯನ್ನು ಮಾಡಬೇಕು.

೬೪. ಬಗೆಬಗೆಯಾದ ಪಾಕಗಳನ್ನು ಸಿದ್ಧಪಡಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ದೀನರು, ಅನಾಥರು, ಕುರುಡರು ಮುಂತಾದವರನ್ನು ಶಕ್ತ್ಯನುಸಾರ ತೃಪ್ತಿಪಡಿಸಬೇಕು.

೬೫. ಈ ಪ್ರಕಾರ ದೊಡ್ಡದಾಗಿ ಏರ್ಪಡಿಸುವ ಸೂರ್ಯ ರಥೋತ್ಸವಯಾತ್ರೆ ಎಂಬ ಯಜ್ಞದಲ್ಲಿ ಉತ್ತಮರು, ಮಧ್ಯಮರು, ಅಧಮರು, ಮುಂತಾದ ಯಾರಿಗೂ ಆಶಾಭಂಗಮಾಡಿ ಅವರನ್ನು ಖಿನ್ನರನ್ನಾಗಿ ಮಾಡಬಾರದು ಎಂದು ವಿದ್ವಾಂಸರು ಹೇಳುತ್ತಾರೆ.

೬೬. ಸೂರ್ಯ ಯಾತ್ರೋತ್ಸವಕ್ಕೆ ಹೋಗಿದ್ದವರಲ್ಲಿ ಯಾರಿಗಾದರೂ ಆಶಾಭಂಗವಾಗಿ ಅನ್ನವಿಲ್ಲದೆ ಹಸಿವಿನಿಂದಾಗಲಿ, ಮಲಗಲು ಸ್ಥಳವಿಲ್ಲದೆ ಛಳಿಯಿಂದಲಾಗಲಿ, ಪೀಡಿತರಾದರೆ ಇದನ್ನು ಏರ್ಪಡಿಸಿದ ದಾನಿಯ ಪಿತೃಗಳು ಸ್ವರ್ಗದಲ್ಲಿದ್ದರೂ ಈ ಕ್ಲೇಶಪೀಡಿತ ಮನುಷ್ಯನ ಕ್ಲೇಶಜನಿತವಾದ ಪಾಪವು ಆ ಸ್ವರ್ಗದಲ್ಲಿದ್ದವರನ್ನು ಕೂಡ ಅಧೋಗತಿಗಿಳಿಸುವುದು.

**ಯಜ್ಞಶ್ಚ ದಕ್ಷಿಣಾಹೀನಃ ಸವಿತುರ್ನ ಪ್ರಶಸ್ಯತೇ ।**
**ತಸ್ಮಾನ್ನಾನಾವಿಧೈಃ ಕಾಮ್ಯೈರ್ಭಕ್ಷ್ಯೈಲೇಹ್ಯ ಸಮನ್ವಿತೈಃ ॥ ೬೭ ॥**

**ಪೂಜಯಿತ್ವಾ ಜನಂ ಸರ್ವಮಿಮಮುಚ್ಚಾರಯೇನ್ಮನುಂ ।**
**ಬಲಿಂ ಗೃಹ್ಣಂತು ಮೇ ದೇವಾ ಆದಿತ್ಯಾ ವಸವಸ್ತಥಾ ॥ ೬೮ ॥**

**ಮರುತೋಥಾಶ್ವಿನೌ ರುದ್ರೌ ಸುಪರ್ಣಾಃ ಪನ್ನಗಾ ಗ್ರಹಾಃ ।**
**ಅಸುರಾ ಯಾತುಧಾನಾಶ್ಚ ರಥಸ್ಥಾ ಯಾಸ್ತು ದೇವತಾಃ ॥ ೬೯ ॥**

**ದಿಕ್ಪಾಲಾ ಲೋಕಪಾಲಾಶ್ಚ ಯೇ ಚ ವಿಘ್ನವಿನಾಯಕಾ ।**
**ಜಗತ ಸ್ಸ್ವಸ್ತಿ ಕುರ್ವಂತು ಯೇ ಚ ದಿವ್ಯಾ ಮಹರ್ಷಯಃ ॥ ೭೦ ॥**

**ಮಾ ವಿಘ್ನಂ ಮಾ ಚ ಮೇ ಪಾಪಂ ಮಾ ಚ ಮೇ ಪರಿಪಂಥಿನಃ ।**
**ಸೌಮ್ಯಾ ಭವಂತು ತೃಪ್ತಾಶ್ಚ ದೇವಾ ಭೂತಗಣಾಸ್ತಥಾ ॥ ೭೧ ॥**

---

೬೭. ಈ ಸೂರ್ಯ ಯಾತ್ರೋತ್ಸವವೆಂಬ ಯಜ್ಞದಲ್ಲಿ ದಕ್ಷಿಣೆಕೊಡದೆ ಇರುವುದು ಪ್ರಶಸ್ತವೇ ಅಲ್ಲ. ದೀನರು, ಕುರುಡರು ಮೊದಲಾದವರಿಗೂ ಶಕ್ತ್ಯನುಸಾರ ದುಡ್ಡು ಕೊಟ್ಟು ತೃಪ್ತಿಪಡಿಸಬೇಕು: ಆದ್ದರಿಂದ ಬಗೆಬಗೆಯಾದ ಇಷ್ಟವಾದ ಪದಾರ್ಥಗಳಿಂದಲೂ, ಲೇಹ್ಯ (ವ್ಯಂಜನ) ಸಹಿತವಾದ ಭಕ್ಷ್ಯಗಳಿಂದಲೂ ಎಲ್ಲ ಜನರನ್ನೂ ತೃಪ್ತಿಪಡಿಸಬೇಕು.

೬೮. ಸಮಸ್ತಜನರನ್ನೂ ಈರೀತಿ ಆರಾಧನೆಮಾಡಿ ಆಮೇಲೆ ಈ ಅರ್ಥವುಳ್ಳ ಮಂತ್ರವನ್ನು ಹೇಳಬೇಕು. ದೇವತೆಗಳು, ಆದಿತ್ಯರು, ವಸುಗಳು,

೬೯. ಮರುತ್ತುಗಳು, ಅಶ್ವಿನೀ ದೇವತೆಗಳು, ರುದ್ರರು, ಗರುಡರು, ನಾಗರು, ಗ್ರಹಗಳು, ಅಸುರರು, ಯಾತುಧಾನರು, ರಥದಲ್ಲಿರುವ ದೇವತೆಗಳು,

೭೦. ಮತ್ತು ದಿಕ್ಪಾಲಕರು, ಲೋಕಪಾಲಕರು, ವಿಘ್ನವಿನಾಯಕರು ಇವರೆಲ್ಲರೂ ಈ ಉಪಹಾರವನ್ನು ಸ್ವೀಕರಿಸಲಿ. ಈ ದೇವಾಧೀಶರೂ ದೇವರ್ಷಿಗಳೂ ಮಹರ್ಷಿಗಳೂ ಜಗತ್ತಿಗೆ ಕ್ಷೇಮವನ್ನುಂಟುಮಾಡಲಿ.

೭೧. ನನಗೆ ಯಾವ ವಿಘ್ನಗಳೂ ಪಾಪಗಳೂ ಶತ್ರುಗಳೂ ಇಲ್ಲದಂತೆ ಮಾಡು. ದೇವಗಣಗಳೂ, ಭೂತಗಣಗಳೂ ತೃಪ್ತರೂ ಸೌಮ್ಯರೂ ಆಗಲಿ.

ವಾಮದೇವ್ಯೈಃ ಪವಿತ್ರೈಶ್ಚ ಮಾನಸ್ತೋಕರಥಂತರೈಃ ।
ಅಕೃಷ್ಣೇನರಜಸಾ ಋಚಮೇಕಾಮುದಾಹರೇತ್ ॥ ೭೨ ॥

ತತಃ ಪುಣ್ಯಾಹಶಬ್ದೇನ ಕೃತವಾದಿತ್ರನಿಸ್ವನೈಃ ।
ರಥ ಕ್ರಮಣಕಂ ಕುರ್ಯಾದ್ವರ್ತ್ಮನಾ ಸು ಸಮೇನ ತು ।
ಪುರುಷೈಶ್ಚಾಪಿ ವೋಢವ್ಯಃ ಸೂರ್ಯಭಕ್ತಿಸಮನ್ವಿತೈಃ ॥ ೭೩ ॥

ಸುಕೃತೈಃ ಪ್ರಗ್ರಹೈರ್ದಾಂತೈರ್ಬಲೀವರ್ದೈರಥಾಪಿ ವಾ ।
ಯಥಾ ಪರ್ಯಟನಂ ಚ ಸ್ಯಾದ್ವಿಷಮೇ ಪಥಿ ಗಚ್ಛತಃ ॥ ೭೪ ॥

ಉಪವಾಸಸ್ಥಿತೈ ರ್ವಿಪ್ರೈಃ ದಿವ್ಯೈರ್ಭೌಮೈಶ್ಚ ಸುವ್ರತೈಃ ।
ತ್ರಿಂಶದ್ಭಿಃ ಷೋಡಶೈರ್ವಿಪ್ರೈಃ ಪ್ರತಿಮಾಂ ಭಾಸ್ಕರಸ್ಯ ತು ॥ ೭೫ ॥

---

೭೨. ರಥೋತ್ಸವವು ನಡೆಯುತ್ತಿರುವಾಗ ಪರಿಶುದ್ಧವಾದ ವಾಮದೇವ್ಯ ಸಾಮಗಳು, ಮಾನಸ್ತೋಕಸಾಮಗಳು, ರಥಂತರಸಾಮಗಳು, ಇವನ್ನು ಪಠಿಸಬೇಕು. ‘ ಅಕೃಷ್ಣೇನ ರಜಸಾ ’ ಎಂಬ ಒಂದು ಋಕ್ಕನ್ನು ಹೇಳಬೇಕು.

೭೩. ಆಮೇಲೆ ಪುಣ್ಯಾಹವಾಚನಧ್ವನಿ ವಾದ್ಯಧ್ವನಿಸಹಿತ ಹಳ್ಳದಿಣ್ಣೆಗಳಿಲ್ಲದೆ ಸಮನಾದ ದಾರಿಯಲ್ಲಿ ರಥವನ್ನು ನಡೆಸಬೇಕು. ಸೂರ್ಯದೇವನಲ್ಲಿ ಭಕ್ತಿಯುಳ್ಳ ಬ್ರಾಹ್ಮಣರು ದೇವರನ್ನು ಹೊರಬೇಕು. (ತೇರಿನಮೇಲೆ ದೇವರು ಏರುವುದಕ್ಕೆ ಮುಂಚೆ ಇದು ನಡೆಯುವುದು)

೭೪. ಚೆನ್ನಾಗಿ ಹೊಸೆದು ತಯಾರಿಸಿದ ದೃಢಗಳಾದ ಹಗ್ಗಗಳಿಂದ ರಥವನ್ನು ಎಳೆಯಬೇಕು. ಅಥವಾ ಎತ್ತುಗಳನ್ನಾದರೂ ಕಟ್ಟಿ ಎಳೆಯಿಸಬೇಕು. ದೇವರನ್ನು ಹೊರುವ ಮಾರ್ಗದಲ್ಲಿ ಹಳ್ಳತಿಟ್ಟುಗಳಿದ್ದರೆ ಹೋಗುವಾಗ ಸರಿಯಾಗಿ ಸಂಚಾರ ವಾಗಲು ಅನುಕೂಲಪಡಿಸಿರಬೇಕು.

೭೫. ಉಪವಾಸವಾಗಿರುವ ಸುವ್ರತರಾದ ದಿವ್ಯರೂ, ಭೌಮರೂ ಎಂಬ ಪಂಗಡದ ಮೂವತ್ತು ಮಂದಿ ಅಥವಾ ಹದಿನಾರು ಮಂದಿ ಬ್ರಾಹ್ಮಣರು ಸೂರ್ಯನ ಪ್ರತಿಮೆಯನ್ನು ವಹಿಸಬೇಕು.

**ಸ್ಥಾನಾತ್ ಪ್ರಚಾಲ್ಯ ವೈ ರುದ್ರ ರಥಮಾರೋಪಯೇಚ್ಛನೈಃ ।**
**ರಾಜ್ಞೀ ಚ ನಿಕ್ಷುಭಾ ರುದ್ರ ಭಾರ್ಯೇ ತಸ್ಯ ಮಹಾತ್ಮನಃ　　॥ ೭೬ ॥**

**ಶನೈರಾರೋಪಯೇದ್ರುದ್ರ ಉಭಯೋಃ ಪಾರ್ಶ್ವಯೋ ರಥೇ ।**
**ನಿಕ್ಷುಭಾಂ ದಕ್ಷಿಣೇ ಪಾರ್ಶ್ವೇ ರಾಜ್ಞೀಂ ಚಾಪ್ಯುತ್ತರೇ ತಥಾ　　॥ ೭೭ ॥**

**ದ್ವಾವೇವ ಬ್ರಾಹ್ಮಣೌ ತಸ್ಮಿನ್ ದಿವ್ಯೋ ಭೌಮಶ್ಚ ಪಾರ್ಶ್ವಯೋಃ ।**
**ಬ್ರಹ್ಮಕಲ್ಪಸ್ತಥಾ ಭೌಮಃ ಕೂಬರಸ್ಯೋಪರಿ ಸ್ಥಿತಃ　　॥ ೭೮ ॥**

**ಗರುಡಂ ಪೃಷ್ಠತಶ್ಚಾಸ್ಯ ವಲ್ಗಮಾನಂ ಪ್ರಕಲ್ಪಯೇತ್ ।**
**ಆತಪತ್ರಂ ತಥಾ ಶ್ವೇತಂ ಸ್ವರ್ಣದಂಡಮನೌಪಮಂ　　॥ ೭೯ ॥**

**ಸುವರ್ಣಬಿಂದುಭಿಶ್ಚಿತ್ರಂ ಮಣಿಮುಕ್ತಾಫಲೋಜ್ವಲಂ ।**
**ತತಸ್ತ್ವಿಂದ್ರಧನುಃ ಪ್ರಖ್ಯಂ ಸ್ವರ್ಣದಂಡಮಥಾವ್ರಣಂ　　॥ ೮೦ ॥**

---

೭೬. ಅವರು ಸೂರ್ಯನ ಪ್ರತಿಮೆಯನ್ನು ಇದ್ದ ಸ್ಥಲದಿಂದ ಕದಲಿಸಿ ಮೆಲ್ಲನೆ ರಥಕ್ಕೇರಿಸಬೇಕು. ಎಲೈ ರುದ್ರನೇ ! ಆ ಮಹಾತ್ಮನ ಹೆಂಡತಿಯರಾದ ರಾಜ್ಞೀ, ನಿಕ್ಷುಭಾ ಎಂಬ ಎರಡು ವಿಗ್ರಹಗಳನ್ನೂ ಎರಡು ಪಾರ್ಶ್ವಗಳಲ್ಲಿಡಬೇಕು.

೭೭. ಅದಕ್ಕಾಗಿ ಆ ಪ್ರತಿಮೆಗಳನ್ನೂ ಮೆಲ್ಲನೆ ರಥಕ್ಕೇರಿಸಬೇಕು. ನಿಕ್ಷುಭಾ ಪ್ರತಿಮೆಯನ್ನು ಬಲಪಾರ್ಶ್ವದಲ್ಲೂ ರಾಜ್ಞೀ ಪ್ರತಿಮೆಯನ್ನು ಎಡ ಪಾರ್ಶ್ವದಲ್ಲೂ ಇರಿಸಬೇಕು.

೭೮. ಪಕ್ಕದಲ್ಲಿ ದಿವ್ಯ, ಭೌಮ ಎಂಬ ಇಬ್ಬರು ಬ್ರಾಹ್ಮಣರಿರಬೇಕು. ಭೌಮ ವಿಪ್ರನು ಬ್ರಹ್ಮಕಲ್ಪನಾಗಿ ಕೂಬರದ (ಮೂಕಿಯ) ಮೇಲೆ ಕುಳಿತಿರಬೇಕು.

೭೯. ಇವರ ಬೆನ್ನ ಕಡೆಯಲ್ಲಿ ಗರುಡನು ಚಲಿಸುತ್ತಿರುವಂತೆ ರಚಿಸಬೇಕು. ಹಾಗೆಯೇ ಸ್ವರ್ಣದಂಡದಿಂದ ಕೂಡಿದ ಅಸದೃಶವಾದ ಶ್ವೇತಛತ್ರಿಯನ್ನು ಹಿಡಿಯಬೇಕು.

೮೦. ಚಿನ್ನದ ಬಿಂದುಗಳಿಂದ ಕೂಡಿ ಆಶ್ಚರ್ಯಕರವಾಗಿಯೂ ರತ್ನಮುತ್ತು ಇವುಗಳಿಂದ ಶೋಭಿಸುತ್ತಲೂ, ಕಾಮನ ಬಿಲ್ಲಿನಂತೆ ನಾನಾವರ್ಣಗಳಿಂದ ಕೂಡಿಯೂ ಇರುವಂತೆ ಚಿನ್ನದ ದಂಡವನ್ನು ರಚಿಸಬೇಕು.

ಧ್ವಜಂ ಪ್ರಕಲ್ಪಯೇತ್ತಸ್ಯ ಪತಾಕಾಭಿರಲಂಕೃತಂ ।
ಭೂತೇಶ ನಾನಾವರ್ಣಾಭಿಃ ಸಪ್ತಭಿಃ ಕಾಮನಾಶನ ॥ ೮೧ ॥

ಧ್ವಜೋಪರಿಚರಂ ವ್ಯೋಮ ಅರುಣಾಧಿಷ್ಠಿತಂ ಭವೇತ್ ।
ರಥತುಂಡಗತಾನ್ ವಿಪ್ರಾನ್ ನಯೇದ್ರಥವರಂ ರವೇಃ ॥ ೮೨ ॥

ಸಾರಥ್ಯಂ ರುದ್ರ ಕುರ್ಯಾದ್ವೈ ಶ್ರೇಯೋರ್ಥಮಾತ್ಮನಸ್ಸದಾ ।
ನಾರುಹೇತ ರಥೇಽಶ್ರದ್ಧೋ ಯದೀಚ್ಛೇ ಚ್ಛ್ರೇಯಮಾತ್ಮನಃ ॥ ೮೩ ॥

ರಥ ಮಾರೋಹತಸ್ತಸ್ಯ ಕ್ಷಯಂ ಗಚ್ಛತಿ ಸಂತತಿಃ ।
ಸ ರಥೋ ದೇವದೇವಸ್ಯ ವೋಢವ್ಯೋ ಬ್ರಾಹ್ಮಣೈಸ್ಸದಾ ॥ ೮೪ ॥

ಕ್ಷತ್ರಿಯೈಶ್ಚಾಪಿ ವೈಶ್ಯೈಶ್ಚ ನ ತು ಶೂದ್ರೈಃ ಕದಾಚನ ।
ಯೇತ್ವನ್ಯದೇವತಾಭಕ್ತಾ ಯೇ ಚ ಮದ್ಯಪ್ರವರ್ತಕಾಃ ॥ ೮೫ ॥

---

೮೧. ಅಯ್ಯಾ ಭೂತೇಶನೇ ! ಆ ದಂಡಾಗ್ರದಲ್ಲಿ ಹರಿದುಹೋಗದೆ ಇರುವುದೂ ನಾನಾ ಬಣ್ಣದ ಏಳು ಸಣ್ಣ ಬಾವುಟಗಳಿಂದ ಅಲಂಕರಿಸಲ್ಪಟ್ಟದ್ದೂ ಆದ ಧ್ವಜವನ್ನು ಕಲ್ಪಿಸಬೇಕು.

೮೨. ಧ್ವಜದ ಮೇಲ್ಗಡೆ ಇರುವ ವ್ಯೋಮ ಸ್ಥಲವು ಅರುಣನಿಂದ ಆಕ್ರಾಂತವಾಗಿರುವುದು. ರಥದ ಮುಂಭಾಗದಲ್ಲಿನ ಬ್ರಾಹ್ಮಣರನ್ನು ಸೂರ್ಯನ ರಥಕ್ಕೆ ಕರೆದುಕೊಳ್ಳಬೇಕು.

೮೩. ಎಲೈ ರುದ್ರನೇ ! ತನಗೆ ಶ್ರೇಯಸ್ಸಾಗುವುದಕ್ಕಾಗಿ ಯಾವಾಗಲೂ, ಸೂರ್ಯರಥದ ಸಾರಥ್ಯವನ್ನು ಮಾಡಬೇಕು. ಶ್ರದ್ಧೆಯಿಲ್ಲದವನು ತನಗೆ ಒಳ್ಳೆಯದಾಗಬೇಕಾದರೆ ರಥಕ್ಕೆ ಹತ್ತಬಾರದು.

೮೪. ಅಂತಹವನು ರಥವನ್ನು ಏರಿದರೆ ಅವನ ಸಂತತಿಯು ನಾಶಹೊಂದುವುದು. ಬ್ರಾಹ್ಮಣರು ಯಾವಾಗಲೂ ದೇವದೇವನ ರಥವನ್ನು ವಹಿಸತಕ್ಕದ್ದು ರೂಢಿ.

೮೫–೮೬. ಕ್ಷತ್ರಿಯರೂ, ವೈಶ್ಯರೂ ರಥವನ್ನು ವಹಿಸಬಹುದು. ಶೂದ್ರರು ಮಾತ್ರ ಯಾವಾಗಲೂ ವಹಿಸಕೂಡದು. ಅನ್ಯದೇವತೆಗಳ ಭಕ್ತರಾದವರೂ ಮದ್ಯವನ್ನು ತಯಾರಿಸುವವರೂ ರಥವನ್ನು ವಹಿಸಬಾರದು. ಇತರ ಜನರು ಯಾವಾಗಲೂ

**ನೈತ್ಯೈಃ ಶೂದ್ರೈಶ್ಚ ವೋಢವ್ಯ ಇತರೈಸ್ತು ಸದೋಹ್ಯತೇ ।**
**ಉಪವಾಸ ವ್ರತೋಪೇತೈಃ ವೋಢವ್ಯಃ ಪಾರ್ವತೀ ಪ್ರಿಯ ॥ ೮೬ ॥**

**ಸ್ವಸ್ಥಾನಾಚ್ಚಲಿತೋ ರುದ್ರ ಪೂರ್ವದ್ವಾರಂ ವ್ರಜೇತ ವೈ ।**
**ದಿನಮೇಕಂ ವಸೇತ್ತತ್ರ ಪೂಜ್ಯಮಾನೋ ನೃಪೇಣ ವೈ ॥ ೮೭ ॥**

**ನಾನಾವಿಧೈಃ ಪ್ರೇಕ್ಷಣಕೈಃ ಪುರಾಣಶ್ರವಣೇನ ಚ ।**
**ನಾನಾವಿಧೈಃ ಬ್ರಹ್ಮಘೋಷೈಃ ಬ್ರಾಹ್ಮಣಾನಾಂ ಚ ತರ್ಪಣೈಃ ॥ ೮೮ ॥**

**ಸ್ಥಿತ್ವಾ ತು ತತ್ರಾಷ್ಟಮ್ಯಂತಂ ನವಮ್ಯಾಂ ಚಲತೇ ಪುನಃ ।**
**ವ್ರಜೇತ ದಕ್ಷಿಣಂ ದ್ವಾರಂ ನಗರಸ್ಯ ತ್ರಿಲೋಚನ ॥ ೮೯ ॥**

**ತತ್ರಾಪಿ ದಿನಮೇಕಂ ತು ತಿಷ್ಠತೇಂಧಕಸೂದನ ।**
**ಸಿತೇತ್ರ ತೈಃ ಪೂಜ್ಯಮಾನೋ ಯಥಾ ರಾಜ್ಞಾ ತಥಾ ನೃಪೈಃ ॥ ೯೦ ॥**

---

ವಹಿಸಬಹುದು. ಎಲೈ ಪಾರ್ವತೀ ಪ್ರಿಯನೇ! ಉಪವಾಸವಿರುವವರು ಮಾತ್ರ ಇದನ್ನು ವಹಿಸಬೇಕು.

೮೭. ಎಲೈ ರುದ್ರನೇ ! ರಥವು ಸ್ವಸ್ಥಾನದಿಂದ ಚಲಿಸಿ ನಗರದ ಪೂರ್ವ ದಿಕ್ಕಿನ ಬಾಗಿಲಿಗೆ ಹೋಗಬೇಕು. ಅಲ್ಲಿ ರಾಜನು ಸೇವಾರ್ಥ ನಡೆಸಬೇಕು. ಒಂದು ದಿನ ಪೂರ್ತಿ ಅಲ್ಲಿ ನಿಲ್ಲಿಸಿರಬೇಕು.

೮೮. ಅಯ್ಯಾ ಮುಕ್ಕಣ್ಣನೇ ! ಜನರ ಹರ್ಷಕ್ಕಾಗಿ ಬಗೆಬಗೆಯ ದೃಶ್ಯಗಳನ್ನೂ ಪುರಾಣ ಶ್ರವಣಗಳನ್ನೂ ಬಗೆಬಗೆಯ ವೇದಘೋಷಗಳನ್ನೂ ಬ್ರಾಹ್ಮಣರಿಗೆ ಸಂತರ್ಪಣೆಗಳನ್ನೂ ಮಾಡಿಸಬೇಕು.

೮೯. ಅಲ್ಲಿ ಅಷ್ಟಮೀಪರ್ಯಂತವಿದ್ದು ನವಮಿಯದಿನ ಪುನಃ ಅಲ್ಲಿಂದ ಚಲಿಸಿ ಊರಿನ ದಕ್ಷಿಣಬಾಗಿಲಿಗೆ ಎಳೆದುಕೊಂಡು ಹೋಗಬೇಕು.

೯೦. ಎಲೈ ಅಂಧಕಾಸುರನ ನಾಶಕನಾದ ಶಿವನೇ ! ಆ ಬಾಗಿಲಿನಲ್ಲಿಯೂ ಒಂದುದಿನ ಪೂರ್ತಿಯಾಗಿ ನಿಲ್ಲಿಸಬೇಕು. ಹೀಗೆ ಅಲ್ಲಿರುವಾಗ ಹಿಂದಿನದಿನ ರಾಜರು ಸೇವಾರ್ಥ ನಡೆಯಿಸಿದಂತೆ ಈ ದಿನ ಪಾಳೆಯಗಾರರ ಪೂಜೆ ನಡೆಯಬೇಕು.

ತಸ್ಮಾದಪಿ ಚಲೇದ್ರುದ್ರ ದ್ವಾರಂ ಪಶ್ಚಾತ್ತತೋತ್ತರಂ ।
ತತ್ರಾಪಿ ಪೂಜ್ಯಃ ಶುದ್ಧೈಸ್ತು ವಿಧಿವತ್ಪ್ರಿಯದರ್ಶನ ॥ ೯೧ ॥

ತಸ್ಮಾಚ್ಚ ಚಲತೇ ರುದ್ರ ವ್ರಜೇನ್ಮಧ್ಯಂ ಪುರಸ್ಯ ತು ।
ತತ್ರಸ್ಥಂ ಪೂಜಯಂತಿ ಸ್ಮ ಬ್ರಾಹ್ಮಣಾಃ ಶ್ರದ್ಧಯಾನ್ವಿತಾಃ ॥ ೯೨ ॥

ಶಂಖವಾದಿತ್ರನಿರ್ಘೋಷೈಸ್ತಥಾ ಪ್ರೇಕ್ಷಣಕೈರ್ವರೈಃ ।
ಬ್ರಹ್ಮಘೋಷೈಶ್ಚ ವಿವಿಧೈಃ ಸಮಂತಾದ್ದೀಪಕೈಃ ಶುಭೈಃ ॥ ೯೩ ॥

ನಾನಾವಿಧೈರ್ವಿತ್ತದಾನೈ ಬ್ರಾಹ್ಮಣಾನಾಂ ಚ ತರ್ಪಣೈಃ ।
ದೀನಾಂಧಕೃಪಣಾನಾಂ ಚ ತರ್ಪಣೈಸ್ತ್ರಿಪುರಾಂತಕ ॥ ೯೪ ॥

ಪುರಮಧ್ಯಾತ್ತು ಚಲಿತಃ ತಿಷ್ಠೇತ್ಪ್ರಾಪ್ಯ ಸ್ವಮಂದಿರಂ ।
ಇತ್ಥಂ ಪ್ರಾಪ್ಯ ಸ್ಥಿತೋ ದೇವಃ ಪುರತೋ ಮಂದಿರಸ್ಯ ತು ॥ ೯೫ ॥

---

೯೧. ಎಲೈ ಮಂಗಳಕರನೇ! ಅಲ್ಲಿಂದ ಪಶ್ಚಿಮ ಬಾಗಿಲಿಗೂ, ಆಮೇಲೆ ಉತ್ತರ ಬಾಗಿಲಿಗೂ ಹೋಗತಕ್ಕದ್ದು. ಎಲೈ ಪ್ರಿಯದರ್ಶನನೇ! ಅಲ್ಲಿಯೂ ಶುದ್ಧ ರಾದ ಭಕ್ತರಿಂದ ವಿಧಿಪ್ರಕಾರ ಪೂಜೆ ನಡೆಯಬೇಕು.

೯೨. ಅಯ್ಯಾ ರುದ್ರನೇ! ಆಮೇಲೆ ಆ ಸ್ಥಳದಿಂದ ರಥವನ್ನು ಎಳೆದು ಊರಿನ ಮಧ್ಯಕ್ಕೆ ತರಬೇಕು. ರಥವು ಅಲ್ಲಿ ನಿಂತಾಗ ಶ್ರದ್ಧೆಯಿಂದ ಕೂಡಿದ ಬ್ರಾಹ್ಮಣರು ಸೇವಾರ್ಥ ನಡೆಯಿಸಬೇಕು.

೯೩. ಉತ್ಸವವು ಶಂಖಧ್ವನಿ, ವಾದ್ಯಧ್ವನಿ ಇವುಗಳಿಂದಲೂ, ಶ್ರೇಷ್ಠವಾದ ದೃಶ್ಯಗಳಿಂದಲೂ, ಬಗೆಬಗೆಯ ವೇದಘೋಷಗಳಿಂದಲೂ, ಸುತ್ತಲೂ ಮಂಗಳಕರ ವಾದ ದೀಪಗಳಿಂದಲೂ ಯುಕ್ತವಾಗಿರಬೇಕು.

೯೪. ಎಲೈ ತ್ರಿಪುರಾರಿಯೇ! ಅಲ್ಲಿ ಬಗೆಬಗೆಯಾದ ದ್ರವ್ಯದಾನಗಳಿಂದಲೂ, ಬ್ರಾಹ್ಮಣರ ಸಂತರ್ಪಣೆಗಳಿಂದಲೂ, ದರಿದ್ರರು, ಕುರುಡರು, ಮೊದಲಾದವರನ್ನು ತೃಪ್ತಿಪಡಿಸುವುದರಿಂದಲೂ ಕಾಲವನ್ನು ಕಳೆಯಬೇಕು.

೯೫–೯೬. ಪುರಮಧ್ಯದಿಂದ ಹೊರಡಿಸಿದ ರಥವನ್ನು ದೇವಾಲಯದ ಮುಂಭಾಗಕ್ಕೆ ಎಳೆದು ತರಬೇಕು. ಹೀಗೆ ದೇವಾಲಯದ ಮುಂದೆ ತೇರಮೇಲೆ

**ತತ್ರಸ್ಥಿತಃ ಪೂಜನೀಯೋ ಭವೇತ್ಪೌರೇಣ ಕೃತ್ಸ್ನಶಃ ।**
**ಪೂಜ್ಯಮಾನಸ್ತ್ವಹೋರಾತ್ರಂ ರಥಾರೂಢಸ್ತು ತಿಷ್ಠತಿ ॥ ೯೬ ॥**

**ಅಪರೇ ದಿನೇ ವ್ರಜೇತ್ ಸ್ಥಾನಂ ತಚ್ಚಿರಂತನಮಾದರಾತ್ ।**
**ತ್ರಯೋದಶ್ಯಾಂ ವ್ಯತೀತಾಯಾಂ ಚತುರ್ದಶ್ಯಾಂ ತ್ರಿಲೋಚನ ॥ ೯೭ ॥**

**ಸದೈವಂ ಭ್ರಾಮಯೇದ್ದೇವಂ ಗ್ರಹೇಶಂ ದುರಿತಾಪಹಂ ।**
**ಪರಿವಾರಯುತಂ ರುದ್ರ ಸಾನುಗಂ ಪರಮೇಶ್ವರಂ ॥ ೯೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ರಥಸಪ್ತಮೀ ಕಲ್ಪೇ ರಥಯಾತ್ರಾವರ್ಣನಂ ನಾಮ ಪಂಚಪಂಚಾಶತ್ತಮೋಽಧ್ಯಾಯಃ.**



---

ಇರುವ ಸ್ವಾಮಿಗೆ ಪಟ್ಟಣಿಗರು ಯಥೇಚ್ಛವಾಗಿ ಪೂಜೆಮಾಡಿಸಬೇಕು. ಹೀಗೆ ಆ ದಿನ ಹಗಲು ರಾತ್ರಿಯೆಲ್ಲಾ ಸ್ವಾಮಿಯು ರಥದ ಮೇಲೆಯೇ ಇರಬೇಕು.

೯೭. ಅಯ್ಯಾ ರುದ್ರನೇ! ತ್ರಯೋದಶಿಯು ಕಳೆದ ಮೇಲೆ ಚತುರ್ದಶಿಯ ದಿವಸ ರಥವನ್ನು ಆ ಪುರಾತನ ಸ್ಥಳಕ್ಕೆ ಎಂದರೆ ಮೊದಲು ಇದ್ದ ಸ್ಥಳಕ್ಕೆ ಎಳೆದು ನೆಲೆಗೆ ನಿಲ್ಲಿಸಬೇಕು.

೯೮. ಅಯ್ಯಾ ರುದ್ರನೇ! ಗ್ರಹಗಳ ಅಧಿಪತಿಯೂ, ಪಾಪನಾಶಕನೂ, ಪರಿವಾರಯುಕ್ತನೂ, ಅನುಯಾಯಿಗಳೊಡಗೂಡಿದವನೂ ಆದ ಸ್ವಾಮಿಗೆ ಪ್ರತಿ ವರ್ಷವೂ ಹೀಗೆ ರಥೋತ್ಸವ ಮಾಡಿಸಿ ಊರಿನ ಸುತ್ತ ಸುತ್ತಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ರಥಸಪ್ತಮೀಕಲ್ಪದಲ್ಲಿ ರಥ ಯಾತ್ರೆಯ ವರ್ಣನೆಯೆಂಬ ಐವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಟ್‌ಪಂಚಾಶತ್ತಮೋಽಧ್ಯಾಯಃ

॥ ಶ್ರೀ ರುದ್ರ ಉವಾಚ ॥

ಕಥಂ ಪ್ರಚಾಲಯೇದ್ಬ್ರಹ್ಮನ್ ರಥಸ್ಥಂ ತಮನಾಶನಂ ।
ಅನುಗಾಶ್ಚ ಕಥಂ ಚಾಸ್ಯ ಕೇ ಚ ತೇ ಅನುಗಾಃ ಕ್ರಮಾತ್ ॥ ೧ ॥

ಭೂಯೋಭೂಯಃ ಸುರಶ್ರೇಷ್ಠ ವಿಸ್ತರಾನ್ಮಮ ಶ್ರೇಯಸೇ ।
ವದ ಸರ್ವಂ ಜಗನ್ನಾಥ ಪರಂ ಕೌತೂಹಲಂ ಹಿ ಮೇ ॥ ೨ ॥

॥ ಬ್ರಹ್ಮೋವಾಚ ॥

ಶನೈರ್ನಯೇದ್ರಥಂ ರುದ್ರ ವರ್ತ್ಮನಾ ಸು ಸಮೇನ ತು ।
ಯಥಾ ಪರ್ಯಟನಂ ಕುರ್ಯಾದ್ವಿಷಮೇ ಪಥಿ ಗಚ್ಛತಃ ॥ ೩ ॥

---

### ಐವತ್ತಾರನೆಯ ಅಧ್ಯಾಯ

೧. ರುದ್ರನು ಪ್ರಶ್ನಿಸುತ್ತಾನೆ—ಕತ್ತಲೆಯನ್ನು ಹೋಗಲಾಡಿಸುವ ಸೂರ್ಯ ದೇವನನ್ನೂ ಅವನ ಅನುಯಾಯಿಗಳನ್ನೂ ರಥದಲ್ಲಿಟ್ಟು ಹೇಗೆ ಚಲನಮಾಡಿಸ ಬೇಕು ? ಅವನ ಅನುಯಾಯಿಗಳೆಂದರೆ ಯಾರು ?

೨. ಜಗನ್ನಾಥನಾದ ಸುರಶ್ರೇಷ್ಠನೇ ! ಲೋಕದ ಶ್ರೇಯಸ್ಸಿಗಾಗಿ ಈ ಎಲ್ಲ ವಿಚಾರವನ್ನೂ ವಿಸ್ತಾರವಾಗಿ ಹೇಳು. ಕೇಳುವುದಕ್ಕೆ ನನಗೆ ಬಹಳ ಕುತೂಹಲ ವಾಗಿದೆ ಎಂದನು.

೩. ಬ್ರಹ್ಮನು ಹೇಳುವನು—ಅಯ್ಯಾ ರುದ್ರನೇ ! ದೇವರನ್ನು ರಥದಲ್ಲಿಟ್ಟ ಮೇಲೆ ತೇರನ್ನು ಸಮತಳವಾದ ಮಾರ್ಗದಲ್ಲಿ ನಿಧಾನವಾಗಿ ಎಳೆಯಬೇಕು. ದಾರಿ

**ಪ್ರತೀಹಾರ ರಥಂ ಪೂರ್ವಂ ನಯೇನ್ಮಾರ್ಗವಿಶುದ್ಧಯೇ ।**
**ತಸ್ಮಾದನಂತರಂ ರುದ್ರ ದಂಡನಾಯಕಮಾದರಾತ್ ॥ ೪ ॥**

**ಪಿಂಗಲಂ ಚ ತತಸ್ತಸ್ಯ ಪೃಷ್ಠಗಂ ಚಾದರಾನ್ನಯೇತ್ ।**
**ರಕ್ಷಕೋ ದ್ವಾರತೋ ಯಸ್ಮಾದ್ರಥಾರೂಢೌ ತು ಪೃಷ್ಠತಃ ॥ ೫ ॥**

**ರಥಾರೂಢಸ್ತಥಾ ದಿಂಡೀ ದೇವಸ್ಯ ಪುರತಃ ಸ್ಥಿತಃ ।**
**ತಸ್ಮಾದಪಿ ತಥಾ ರುದ್ರ ಲೇಖಕೋ ಭಾಸ್ಕರಪ್ರಿಯಃ ॥ ೬ ॥**

**ಶನೈಃಶನೈರ್ನಯೇದ್ರುದ್ರ ರಥಂ ದೇವಸ್ಯ ಯತ್ನತಃ ।**
**ಯುಗಾಕ್ಷ ಚಕ್ರಭಂಗೋ ವಾ ಯಥಾ ನಸ್ಯಾತ್ತ್ರಿಲೋಚನ ॥ ೭ ॥**

---

ಯಲ್ಲಿ ಹಳ್ಳತಿಟ್ಟುಗಳಿದ್ದರೂ ಗತಿಭಂಗವಾಗದಂತೆ ತೇರನ್ನು ಅದರಲ್ಲೇ ನಿಧಾನವಾಗಿ ಊರಸುತ್ತಲೂ ಎಳೆಯಬೇಕು.

೪–೫. ಅಯ್ಯಾ ರುದ್ರನೇ! ಮಾರ್ಗವು ಸರಿಯಾಗಿದೆಯೋ ಇಲ್ಲವೋ ಎಂದು ನೋಡುವುದಕ್ಕಾಗಿ ಮೊದಲು ಸೂರ್ಯಪ್ರತೀಹಾರರನ್ನು ಕೂರಿಸಿರುವ ರಥವನ್ನು ಎಳೆಯಿಸಬೇಕು. ಅದರ ಹಿಂದೆ ದಂಡನಾಯಕನ ರಥವನ್ನೂ, ಅದರ ಹಿಂದೆ ಪಿಂಗಳನ ರಥವನ್ನೂ ಆದರದಿಂದ ಸಾಗಿಸಬೇಕು. ದ್ವಾರಪಾಲಕನು ಬಾಗಿಲಲ್ಲಿ ಕಾವಲಾಗಿದ್ದು ಒಳಗಿರುವವರನ್ನು ಸುರಕ್ಷಿತವಾಗಿಟ್ಟಿರುವಂತೆ ಈ ಪ್ರತೀಹಾರ ರಥವು ತಾನು ಮುಂದೆ ಹರಿದು ಮಾರ್ಗವನ್ನು ಸುಗಮ ಮಾಡಿ ತನ್ನ ಹಿಂದೆ ಬರುವ ಮುಖ್ಯ ರಥವನ್ನು ರಕ್ಷಿಸುವುದು.

೬. ಅಯ್ಯಾ ರುದ್ರನೇ! ದಿಂಡಿ ಎಂಬವನ ರಥವು ಸೂರ್ಯನ ರಥದ ಮುಂದೆ ಇರುವುದು. ಅಲ್ಲಿಂದ ಮುಂದೆ ಸೂರ್ಯಪ್ರಿಯನಾದ ಲೇಖಕನ ರಥವಿರಬೇಕು.

೭ ಅಯ್ಯಾ ಮುಕ್ಕಣ್ಣನೇ! ನೊಗ, ಅಚ್ಚು, ಚಕ್ರ ಇವು ಯಾವುವುಗಳಿಗೂ ಅಪಾಯವಾಗದಂತೆ ಸೂರ್ಯರಥವನ್ನು ಪ್ರಯತ್ನದಿಂದ ಮೆಲ್ಲಗೆ ಎಳೆದುಕೊಂಡು ಹೋಗಬೇಕು.

ಈಷಾಭಂಗೇ ದ್ವಿಜಭಯಂ ಭಗ್ನೇಽಕ್ಷೇ ಕ್ಷತ್ರಿಯಕ್ಷಯಃ ।
ತುಲಾಭಂಗೇ ತು ವೈಶ್ಯಾನಾಂ ಶಯ್ಯಾ ಶೂದ್ರಕ್ಷಯೋ ಭವೇತ್ ॥ ೮ ॥

ಯುಗಭಂಗೇತ್ವನಾವೃಷ್ಟಿಃ ಪೀಠಭಂಗೇ ಪ್ರಜಾಭಯಂ ।
ಪರಚಕ್ರಾಗಮಂ ವಿದ್ಯಾಚ್ಚಕ್ರಭಂಗೇ ರಥಸ್ಯ ತು ॥ ೯ ॥

ಧ್ವಜಸ್ಯ ಪತನೇ ಚಾಪಿ ನೃಪಭಂಗಂ ವಿನಿರ್ದಿಶೇತ್ ।
ವ್ಯಂಗಿತಪ್ರತಿಮಾಯಾಂ ತು ರಾಜ್ಞೋ ಮರಣಮಾದಿಶೇತ್ ॥ ೧೦ ॥

ಛತ್ರಭಂಗಾದ್ಭಯಂ ರುದ್ರ ಯುವರಾಜ್ಞೋ ವಿನಿರ್ದಿಶೇತ್ ।
ಉತ್ಪನ್ನೇಷ್ವೇವಮಾದ್ಯೇಷು ಉತ್ಪಾತೇಷ್ವಶುಭೇಷು ಚ ॥ ೧೧ ॥

ಬಲಿಕರ್ಮ ಪುನಃ ಕುರ್ಯಾತ್ ಶಾಂತಿಹೋಮಂ ತಥೈವ ಚ ।
ಬ್ರಾಹ್ಮಣಾನ್ ವಾಚಯೇದ್ಭೂಯೋ ದದ್ಯಾದ್ದಾನಾನಿ ಚೈವ ಹಿ ॥ ೧೨ ॥

---

೮. ಸೂರ್ಯ ರಥದ ಈಚು ಮುರಿದರೆ ಬ್ರಾಹ್ಮಣರಿಗೆ ಕೇಡಾಗುವುದು. ಅಚ್ಚು (ದೂರಿ) ಮುರಿದರೆ ಕ್ಷತ್ರಿಯರಿಗೆ ಕೇಡು. ತುಲೆಯು ಮುರಿದರೆ ವೈಶ್ಯರಿಗೆ ನಾಶಕರವೂ ಶಯ್ಯಾಭಾಗವು (ತಿಕ್ಕಡಿ) ಭಂಗವಾದರೆ ಶೂದ್ರರಿಗೆ ಹಾನಿಯೂ ಆಗುವುದು.

೯. ರಥದ ನೊಗ ಮುರಿದರೆ ಮಳೆಯೇ ಆಗುವುದಿಲ್ಲ. ಪೀಠವು ಮುರಿದರೆ ಪ್ರಜೆಗಳಿಗೆಲ್ಲಾ ಭಯ. ರಥದ ಚಕ್ರ ಮುರಿದರೆ ಶತ್ರುಸೈನ್ಯವು ಆ ರಾಜ್ಯವನ್ನು ಮುತ್ತಿಗೆ ಹಾಕಲು ಬರುವುದು ಎಂದು ತಿಳಿಯಬೇಕು.

೧೦. ರಥದ ಧ್ವಜವು ಮುರಿದುಹೋದರೆ ರಾಜನಿಗೆ ಹಾನಿಯೆಂದು ತಿಳಿಯಬೇಕು. ರಥಕ್ಕೆ ಅವಯವವಾದ ಬೊಂಬೆಗಳು ಮುರಿದರೆ ರಾಜನಿಗೆ ಸೋಲುಂಟಾಗುವುದು.

೧೧. ಎಲೈ ರುದ್ರನೇ ! ಛತ್ರಿಯು ಮುರಿದರೆ ಯುವರಾಜನಿಗೆ ಹಾನಿ (ಭಯ) ಇದೆಯೆಂದು ತಿಳಿಯಬೇಕು. ಇವೇ ಮುಂತಾದುವು ಅಮಂಗಳವಾದ ಉತ್ಪಾತಗಳಾಗಿವೆ.

೧೨. ಈ ಉತ್ಪಾತದೋಷಪರಿಹಾರಕ್ಕಾಗಿ ಮತ್ತೆ ಬಲಿಪ್ರದಾನಕರ್ಮವನ್ನೂ ಶಾಂತಿಹೋಮವನ್ನೂ ಮಾಡಬೇಕು. ಅಲ್ಲದೆ ಬ್ರಾಹ್ಮಣರನ್ನು ಪೂಜಿಸಿ ಸ್ವಸ್ತಿವಾಚನ ಮಾಡಿಸಿ ದೋಷಪರಿಹಾರಕವಾದ ದಾನಗಳನ್ನು ಕೊಡಬೇಕು.

ಪೂರ್ವೋತ್ತರೇ ಚ ದಿಗ್ಭಾಗೇ ರಥಸ್ಯಾಗ್ನಿಂ ಪ್ರಕಲ್ಪಯೇತ್ ।
ಸಮಿದ್ಭಿಸ್ತು ಘೃತಾಕ್ತಾಭಿಃ ಹೋಮಯೇಜ್ಜಾತವೇದಸಂ ॥ ೧೩ ॥

ಸ್ವಾಹಾಕಾರಾನ್ ವದನ್ ಸಮ್ಯಗ್ದೈವತೇಭ್ಯಸ್ತ್ವನುಕ್ರಮಾತ್ ।
ಗ್ರಹಾರ್ ಸಾದ್ಗುಣ್ಯದೇವಾಂಶ್ಚ ನಾಮಾನ್ಯುದ್ದಿಶ್ಯ ಹೋಮಯೇತ್ ॥ ೧೪ ॥

ಪ್ರಥಮಂ ಚಾಗ್ನಯೇ ಸ್ವಾಹಾ ಸ್ವಾಹಾ ಸೋಮಾಯ ಚೈವ ಹಿ ।
ಸ್ವಾಹಾ ಪ್ರಜಾಪತಯೇ ಚ ದೇಯಾ ಆಹುತಯಃ ಕ್ರಮಾತ್ ॥ ೧೫ ॥

ಸ್ವಸ್ತ್ಯಸ್ತ್ವಿಹ ಚ ವಿಪ್ರೇಭ್ಯಃ ಸ್ವಸ್ತಿ ರಾಜ್ಞೇ ತಥೈವ ಚ ।
ಗೋಭ್ಯಃ ಸ್ವಸ್ತಿ ಪ್ರಜಾಭ್ಯಶ್ಚ ಜಗತಃ ಶಾಂತಿರಸ್ತು ವೈ ॥ ೧೬ ॥

ಶಂನೋಽಸ್ತು ದ್ವಿಪದೇ ನಿತ್ಯಂ ಶಾಂತಿರಸ್ತು ಚತುಷ್ಪದೇ ।
ಶಂ ಪ್ರಜಾಭ್ಯಸ್ತಥೈವಾಸ್ತು ಶಂ ಸದಾತ್ಮನಿ ಚಾಸ್ತು ವೈ ॥ ೧೭ ॥

ಭೂಃ ಶಾಂತಿರಸ್ತು ದೇವೇಶ ಭುವಃ ಶಾನ್ತಿಸ್ತಥೈವ ಚ ।
ಸ್ವಃಶ್ಚೈವಾಸ್ತು ತಥಾ ಶಾನ್ತಿಃ ಸರ್ವತ್ರಾಸ್ತು ತಥಾ ರವೇಃ ॥ ೧೮ ॥

---

೧೩. ರಥದ ಪೂರ್ವದಿಕ್ಕು ಉತ್ತರದಿಕ್ಕುಗಳ ಮಧ್ಯವಾದ ಈಶಾನ್ಯದಿಗ್ಭಾಗದಲ್ಲಿ ಅಗ್ನಿ ಪ್ರತಿಷ್ಠೆಮಾಡಿ ಸಮಿತ್ತನ್ನು ತುಪ್ಪದಲ್ಲಿ ಅದ್ದಿ ಸ್ವಾಹಾಕಾರವನ್ನು ಹೇಳಿಕೊಂಡು ದೇವತೆಗಳನ್ನುದ್ದೇಶಿಸಿ ಕ್ರಮವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು.

೧೪. ಗ್ರಹಗಳಿಗೂ ಮತ್ತು ಅವುಗಳ ಸಾದ್ಗುಣ್ಯ ದೇವತೆಗಳಿಗೂ ಅವರವರ ಹೆಸರನ್ನು (ಉದ್ದೇಶಿಸಿ) ಹೇಳಿ ತತ್ತನ್ಮಂತ್ರಗಳಿಂದ ಹೋಮಮಾಡಬೇಕು.

೧೫. ಮೊಟ್ಟಮೊದಲು ಅಗ್ನಯೇಸ್ವಾಹಾ, ಸೋಮಾಯಸ್ವಾಹಾ, ಪ್ರಜಾ ಪತಯೇಸ್ವಾಹಾ ಎಂಬದಾಗಿ ಆಹುತಿಗಳನ್ನು ಕ್ರಮವಾಗಿ ಕೊಡಬೇಕು.

೧೬. ಬ್ರಾಹ್ಮಣರಿಗೆ ಕ್ಷೇಮವಾಗಲಿ. ಹಾಗೆಯೇ ರಾಜನಿಗೆ ಕ್ಷೇಮವಾಗಲಿ. ಗೋವುಗಳಿಗೂ ಪ್ರಜಾವರ್ಗಕ್ಕೂ ಸ್ವಸ್ತಿಯಾಗಲಿ. ಜಗತ್ತಿಗೂ ಶಾಂತಿಯಾಗಲಿ.

೧೭. ದ್ವಿಪಾದಿಗಳಾದ ನಮಗೂ, ಚತುಷ್ಪಾದಿ ಜಂತುಗಳಿಗೂ ಸದಾ ಸುಖ ಶಾಂತಿಗಳುಂಟಾಗಲಿ. ಪ್ರಜೆಗಳಿಗೂ ಸುಖವಾಗಲಿ. ಆತ್ಮಕ್ಕೂ ಸದಾ ಶಾಂತಿ ಲಭಿಸಲಿ.

೧೮. ಅಯ್ಯಾ ದೇವೇಶನೇ! ಭೂಲೋಕಕ್ಕೂ ಭುವರ್ಲೋಕಕ್ಕೂ ಸುವ ರ್ಲೋಕಕ್ಕೂ ಶಾಂತಿಯಾಗಲಿ. ಹೀಗೆಯೇ ಸೂರ್ಯನ ಸುತ್ತ ಎಲ್ಲ ಕಡೆಯಿರುವ ವಸ್ತುಗಳಿಗೂ ಶಾಂತಿಯಾಗಲಿ.

ತ್ವಂ ದೇವ ಜಗತಃ ಸ್ರಷ್ಟಾ ಪೋಷ್ಟಾ ಚೈವ ತ್ವಮೇವ ಹಿ ।
ಪ್ರಜಾಪಾಲ ಗ್ರಹೇಶಾನ ಶಾಂತಿಂ ಕುರು ದಿವಸ್ಪತೇ ॥ ೧೯ ॥

ಇದಮುನ್ಯಚ್ಚ ವಕ್ಷ್ಯಾಮಿ ಶಾಂತ್ಯಾಃ ಪರಮಕಾರಣಂ ।
ಯಾತ್ರಾಕಾರಣಭೂತಸ್ಯ ಪುರುಷಸ್ಯ ಸ್ವಜನ್ಮನಃ ॥ ೨೦ ॥

ದುಃಸ್ಥಾನ್ ಗ್ರಹಾಂಶ್ಚ ವಿಜ್ಞಾಯ ಗ್ರಹಶಾಂತಿಂ ಸಮಾಚರೇತ್ ।
ಪ್ರಾದೇಶಮಾತ್ರಾಃ ಕರ್ತವ್ಯಾಃ ಸಮಿಧೋಽಥ ಪ್ರಮಾಣತಃ ॥ ೨೧ ॥

ಅರ್ಕಮಯ್ಯೋ ರವೇಃ ಕಾರ್ಯಾಃ ಪಾಲಾಶ್ಯಃ ಶಶಿನಃ ಸ್ಮೃತಾಃ ।
ಖಾದಿರ್ಯಶ್ಚೈವ ಭೌಮಾಯ ಅಪಾಮಾರ್ಗ್ಯೋಽಬ್ಜಸೂನವೇ ॥ ೨೨ ॥

ಅಶ್ವತ್ಥಶ್ಚಾಥ ಜೀವಾಯ ಔದುಂಬರ್ಯಃ ಸಿತಾಯ ಚ ।
ಅಸಿತಾಯ ಶಮೀಮಯ್ಯಃ ದೂರ್ವಾ ಕುರ್ಯಾತ್ತು ರಾಹವೇ ॥ ೨೩ ॥

---

೧೯. ಓ ಸ್ವಾಮಿಯೇ! ಜಗತ್ತನ್ನು ಸೃಷ್ಟಿಸಿದವನೂ ನೀನೇ, ಪೋಷಿಸುವವನೂ ನೀನೆ. ನೀನೇ ಪ್ರಜಾಪಾಲಕನು. ದಿವಸ್ಪತಿಯೂ, ಗ್ರಹಗಳಿಗೆಲ್ಲಾ ಅಧಿಪತಿಯೂ ಆದ ಸೂರ್ಯದೇವನೇ! ನೀನು ಸರ್ವರಿಗೂ ಶಾಂತಿಯನ್ನು ಉಂಟುಮಾಡು ಎಂದು ಹೇಳಬೇಕು.

೨೦. ಯಾತ್ರೆಗೆ ಕಾರಣನೂ, ಸ್ವಭೂರೂಪನೂ ಆದ ಪುರುಷನಿಗೆ ಶಾಂತಿ ಮಾಡುವುದಕ್ಕೆ ಮುಖ್ಯ ಕಾರಣವನ್ನು ಹೇಳುತ್ತೇನೆ. ಸ್ವಾಮಿಯನ್ನು ರಥಾರೋಹಣ ಮಾಡಿಸುವ ಲಗ್ನಕ್ಕೆ ದುಸ್ಸ್ಥಾನಗಳಲ್ಲಿ ಇರುವ ಗ್ರಹಗಳನ್ನು ನೋಡಿಕೊಂಡು ಆ ಗ್ರಹಗಳಿಗೆ ಶಾಂತಿಮಾಡಬೇಕು.

೨೧. ಹೋಮಕ್ಕೆ ಬೇಕಾದ ಸಮಿತ್ತುಗಳು ಪ್ರತಿಯೊಂದೂ ಒಂದೊಂದು ಜೋಟು ಉದ್ದ ಇರುವಂತೆ ಜೋಡಿಸಿ ಇಟ್ಟುಕೊಳ್ಳಬೇಕು. ಸೂರ್ಯಗ್ರಹ ಹೋಮಕ್ಕೆ ಎಕ್ಕದ ಸಮಿತ್ತುಗಳು ಉಕ್ತವಾಗಿವೆ.

೨೨–೨೩. ಚಂದ್ರನಿಗೆ ಮುತ್ತುಗದ ಸಮಿತ್ತೂ, ಅಂಗಾರಕನಿಗೆ ಕಗ್ಗಲಿಯ ಸಮಿತ್ತೂ, ಬುಧನಿಗೆ ಉತ್ತರಣೆಯ ಸಮಿತ್ತೂ, ಬೃಹಸ್ಪತಿಗೆ ಅರಳಿಯ ಸಮಿತ್ತೂ, ಶುಕ್ರನಿಗೆ ಅತ್ತಿಯ ಸಮಿತ್ತೂ, ಶನೈಶ್ಚರನಿಗೆ ಬನ್ನಿಯ ಸಮಿತ್ತೂ, ರಾಹುವಿಗೆ ಗರಿಕೆಯ ಹುಲ್ಲೂ, ಕೇತುವಿಗೆ ದರ್ಭೆಯೂ ಹೋಮಕ್ಕೆ ಉಕ್ತವಾದುವೆಂದು ತಿಳಿಯಬೇಕು.

**ಕೇತವೇ ತು ಕುಶಾಃ ಕಾರ್ಯಾಃ ದಕ್ಷಿಣಾಶ್ಚಾಪ್ಯತಃ ಶೃಣು ।**
**ಸೂರ್ಯಾಯ ಶೋಭನಾಂ ಧೇನುಂ ಶಂಖಂ ದದ್ಯಾದಥೇಂದವೇ ॥ ೨೪ ॥**

**ರಕ್ತಮನಡ್ವಾಹಂ ಭೌಮಾಯ ಕಾಂಚನಂ ಸೋಮಸೂನವೇ ।**
**ಜೀವಾಯ ವಾಸಸೀ ದೇಯೇ ಶುಕ್ರಾಯಾಶ್ವಂ ಸಿತಂ ಹರ ॥ ೨೫ ॥**

**ಶನೈಶ್ಚರಾಯ ಗಾಂ ನೀಲಾಂ ರಾಹವೇ ಭಾಂಡಪಾಯಸಂ ।**
**ಛಾಗಂ ತು ಕೇತವೇ ದದ್ಯಾತ್ ಶೃಣ್ವೇಷಾಂ ಭೋಜನಾನ್ಯಪಿ ॥ ೨೬ ॥**

**ಗುಡೌದನಂ ತು ಸೂರ್ಯಾಯ ಸೋಮಾಯ ಘೃತಪಾಯಸಂ ।**
**ಹವಿಷ್ಯಮನ್ನಂ ಭೌಮಾಯ ಕ್ಷೀರಾನ್ನಂ ಸೋಮಸೂನವೇ ॥ ೨೭ ॥**

**ದಧ್ಯೋದನಂ ತು ಜೀವಾಯ ಶುಕ್ರಾಯಾಥ ಘೃತೋದನಂ ।**
**ತಿಲಪಿಷ್ಟಾಂಶ್ಚ ಮಾಷಾಂಶ್ಚ ಸೂರ್ಯಪುತ್ರಾಯ ದಾಪಯೇತ್ ॥ ೨೮ ॥**

---

೨೪. ಇನ್ನು ಗ್ರಹಗಳಿಗೆ ಪ್ರಿಯವಾದ ದಾನ ದಕ್ಷಿಣಾದಿಗಳನ್ನು ಹೇಳುವೆನು. ಸೂರ್ಯನಿಗೆ ಶುಭಲಕ್ಷಣವುಳ್ಳ ಎಳೆಗರುವಿನ ಹಸು, ಚಂದ್ರನಿಗೆ ಶಂಖ.

೨೫. ಅಂಗಾರಕನಿಗೆ ಕೆಂದುಬಣ್ಣದ ಎತ್ತು, ಬುಧನಿಗೆ ಚಿನ್ನ, ಬೃಹಸ್ಪತಿಗೆ ವಸ್ತ್ರದ್ವಯ. ಶುಕ್ರನಿಗೆ ಬಿಳಿಯಕುದುರೆ.

೨೬. ಶನೈಶ್ಚರನಿಗೆ ಕಪ್ಪುಬಣ್ಣದ ಹಸು, ರಾಹುವಿಗೆ ಪಾಯಸ ತುಂಬಿದ ಪಾತ್ರೆ, ಕೇತುವಿಗೆ ಹೋತ ಇವುಗಳು ಅವರನ್ನು ಉದ್ದೇಶಿಸಿ ದಾನಮಾಡುವ ವಸ್ತುಗಳಾಗಿವೆ.

೨೭–೨೯. ಗ್ರಹಗಳ ಪ್ರೀತ್ಯರ್ಥವಾಗಿ ಭೋಜನಮಾಡಿಸಬೇಕಾದ ಅನ್ನಗಳನ್ನು ಈಗ ಹೇಳುವೆನು. ಸೂರ್ಯನಿಗೆ ಬೆಲ್ಲದ ಅನ್ನ, ಚಂದ್ರನಿಗೆ ತುಪ್ಪಬೆರಸಿದ ಪಾಯಸ, ಕುಜನಿಗೆ ಅಕ್ಕಿಯನ್ನು ಹುರಿದು ತೊಳೆಯದೆ ಬಸಿಯದೆ ಮಾಡಿದ ಹವಿಷ್ಯಾನ್ನ, ಬುಧನಿಗೆ ಹಾಲು ಅನ್ನ, ಗುರುವಿಗೆ ಮೊಸರು ಅನ್ನ, ಶುಕ್ರನಿಗೆ ತುಪ್ಪನ್ನ, ಶನೈಶ್ಚರನಿಗೆ ಎಳ್ಳುಹುಡಿಯನ್ನ, ಉದ್ದಿನಹುಡಿಯನ್ನ, ರಾಹುವಿಗೆ ಮಾಂಸಾನ್ನ,

ರಾಹವೇ ದಾಪಯೇನ್ಮಾಂಸಂ ಕೇತವೇ ಚಿತ್ರಮೋದನಂ ।
ಸೌವೀರಮಾರನಾಲಂ ಚ ಸ್ವಿನ್ನಬೀಜಂ ಚ ಕಾಂಜಿಕಂ ॥ ೨೯ ॥

ಯಥಾ ಬಾಣಪ್ರಹಾರಾಣಾಂ ವಾರಣಂ ಕವಚಂ ಸ್ಮೃತಂ ।
ತಥಾ ದೈವೋಪಘಾತಾನಾಂ ಶಾಂತಿರ್ಭವತಿ ವಾರುಣಂ ॥ ೩೦ ॥

ಅಹಿಂಸಕಸ್ಯ ದಾಂತಸ್ಯ ಧರ್ಮಾರ್ಜಿತಧನಸ್ಯ ಚ ।
ನಿತ್ಯಂ ಚ ನಿಯಮಸ್ಥಸ್ಯ ಸದಾ ಸಾನುಗ್ರಹಾ ಗ್ರಹಾಃ ॥ ೩೧ ॥

ಗ್ರಹಾಃ ಪೂಜ್ಯಾಃ ಸದಾ ರುದ್ರ ಇಚ್ಛತಾ ವಿಪುಲಂ ಯಶಃ ।
ಶ್ರೀಕಾಮಃ ಶಾಂತಿಕಾಮೋ ವಾ ಗ್ರಹಯಜ್ಞಂ ಸಮಾಚರೇತ್ ॥ ೩೨ ॥

ವೃಷ್ಟ್ಯಾಯುಃ ಪುಷ್ಟಿಕಾಮೋ ವಾ ತಥೈವಾಭಿಚರನ್ ಪುನಃ ।
ಯಾನಪತ್ಯಾ ಭವೇನ್ನಾರೀ ದುಷ್ಪ್ರಜಾಶ್ಚಾಪಿ ಯಾ ಭವೇತ್ ॥ ೩೩ ॥

---

ಕೇತುವಿಗೆ ಚಿತ್ರಾನ್ನ, ಸ್ವಿನ್ನಬೀಜ, ಕಾಂಜಿಕ ಗಂಜಿ, ಇವನ್ನು ನಿವೇದಿಸಿ ಬ್ರಾಹ್ಮಣ ಭೋಜನಮಾಡಿಸಬೇಕು.

೩೦. ಯೋಧನಿಗೆ ಬಾಣಗಳ ಏಟು ತಗಲದಂತೆ ಕವಚವು ಹೇಗೆ ನಿವಾರಿಸುವುದೋ ಹಾಗೆಯೇ ಗ್ರಹಚಾರವಶದಿಂದ (ಅದೃಷ್ಟದಿಂದ) ಪ್ರಾಪ್ತವಾಗುವ ತೊಂದರೆಗಳು ಶಾಂತಿಯಿಂದಲೇ ನಿವಾರಣೆಯಾಗಬೇಕು.

೩೧. ಪ್ರಾಣಿಗಳನ್ನು ಹಿಂಸೆಮಾಡದವನು, ಬಹಿರಿಂದ್ರಿಯ ನಿಗ್ರಹಮಾಡಿರುವಂಥವನು, ಧರ್ಮದಿಂದ ದ್ರವ್ಯಾರ್ಜನೆಯನ್ನು ಮಾಡಿದವನು, ಯಾವಾಗಲೂ ನಿಯಮವ್ರತವನ್ನು ಮಾಡಿದವನು, ಇವರ ವಿಷಯದಲ್ಲಿ ಗ್ರಹಗಳು ಯಾವಾಗಲೂ ಅನುಗ್ರಹಮುಖರಾಗಿರುತ್ತಾರೆ.

೩೨. ಅಯ್ಯಾ ರುದ್ರನೇ! ತುಂಬ ಯಶಸ್ಸು ಬರಬೇಕೆಂದು ಇಚ್ಛಿಪಡುವವನೂ; ಸಂಪತ್ತು, ಶಾಂತಿ ಇವನ್ನು ಅಪೇಕ್ಷಿಸುವವನೂ, ಆಗಾಗ್ಯೆ ಗ್ರಹಗಳ ಆರಾಧನೆಯನ್ನು ಮಾಡುತ್ತಲೇ ಇರಬೇಕು.

೩೩. ಮಳೆಯಾಗಬೇಕೆಂಬ ಉದ್ದೇಶ, ಆಯುಸ್ಸು ವೃದ್ಧಿಯಾಗುವ ಇಚ್ಛೆ, ಶರೀರ ಪುಷ್ಟಿಯುಂಟಾಗಬೇಕೆಂಬ ಇಚ್ಛೆ, ಈ ನಿಮಿತ್ತಗಳಿದ್ದಾಗಲೂ, ಶತ್ರುನಾಶಕ್ಕಾಗಿ ಮಾಟಮಾಡಬೇಕಾಗಿದ್ದಾಗಲೂ, ಗ್ರಹಾರಾಧನ ಮಾಡಬೇಕು. ಯಾವ ಹೆಂಗಸಿಗೆ

ಬಾಲಾ ಯಸ್ಯಾಃ ಪ್ರಮ್ರಿಯಂತೇ ಯಾ ಚ ಕನ್ಯಾಪ್ರಜಾ ಭವೇತ್ ।
ರಾಜ್ಯಭ್ರಷ್ಟೋ ನೃಪೋ ಯಸ್ತು ದೀರ್ಘರೋಗೀ ಚ ಯೋ ಭವೇತ್ ॥ ೩೪ ॥

ಗ್ರಹಯಜ್ಞಃ ಸ್ಮೃತಸ್ತೇಷಾಂ ಮಾನವಾನಾಂ ಮನೀಷಿಭಿಃ ।
ತಸ್ಮಾದಸೌ ಸದಾ ಕಾರ್ಯಃ ಶ್ರೇಯೋऽರ್ಥಂ ಜಾನತಾ ಹರ ॥ ೩೫ ॥

ರಕ್ತಪುಷ್ಪಃ ಕ್ರೂರದೃಕ್ಚ ಪುಷ್ಪಜೋ ಧಿಷಣೋ ಬುಧಃ ।
ಸಿತಾಸಿತೌ ತಥಾ ರುದ್ರ ಉಪರಾಗಃ ಶಿಖೀ ತಥಾ ॥ ೩೬ ॥

ಏತೇ ಗ್ರಹಾ ಮಹಾಬಾಹೋ ವಿದ್ವದ್ಭಿಃ ಪೂಜಿತಾಃ ಸದಾ ।
ತಾಮ್ರಕಾತ್ ಸ್ಫಟಿಕಾದ್ರಕ್ತಚಂದನಾತ್ ಸ್ವರ್ಣಕಾಂಚನಾತ್ ॥ ೩೭ ॥

---

ಮಕ್ಕಳೇ ಇಲ್ಲವೋ, ಯಾವಳಿಗೆ ಕೆಟ್ಟ ಸಂತತಿಯುಂಟಾಗಿರುವುದೋ ಅಂಥವರು ಗ್ರಹಾರಾಧನ ಮಾಡಬೇಕು.

೩೪. ಯಾವಳಿಗೆ ಹುಟ್ಟಿದ ಮಕ್ಕಳೆಲ್ಲಾ ಸಾಯುವುವೋ, ಅವಳೂ ಯಾವಳು ಬರಿಯ ಹೆಣ್ಣುಮಕ್ಕಳನ್ನೇ ಹೆರುವಳೋ ಅವಳೂ ಗ್ರಹರಾಧನ ಮಾಡಬೇಕು. ಯಾವ ರಾಜನು ರಾಜ್ಯವನ್ನು ಕಳೆದುಕೊಂಡಿದ್ದಾನೆಯೋ, ಯಾವನು ದೀರ್ಘಕಾಲದಿಂದ ವ್ಯಾಧಿಪೀಡಿತನಾಗಿದ್ದಾನೋ,

೩೫. ಅಂಥ ಮನುಷ್ಯರಿಗೆ ಗ್ರಹಯಜ್ಞವು ಆವಶ್ಯಕವೆಂದು ವಿದ್ವಾಂಸರು ತಿಳಿದಿದ್ದಾರೆ. ಅಯ್ಯಾ ರುದ್ರನೇ ! ಕೇಳು ; ತಿಳಿದವರು ತಮಗೆ ಶ್ರೇಯಸ್ಸುಂಟಾಗುವುದಕ್ಕಾಗಿ ಈ ಗ್ರಹಯಜ್ಞವನ್ನು ಆಗಾಗ್ಗೆ ಮಾಡುತ್ತಿರಬೇಕು ಎನ್ನುವರು.

೩೬. ಅಯ್ಯಾ ರುದ್ರನೇ! ಕೆಂಪು ಹೂಗಳನ್ನು ಪ್ರೀತಿಸುವ ಸೂರ್ಯ, ಅಪಾಂಪುಷ್ಪನಾದ ಚಂದ್ರ, ಕ್ರೂರದೃಷ್ಟಿಯ ಅಂಗಾರಕ, ಬುಧ, ಧಿಷಣ ಎಂದರೆ ಗುರು. ಸಿತನೆಂದರೆ ಶುಕ್ರ. ಅಸಿತನೆಂದರೆ ಶನಿ. ಉಪರಾಗಕರಣನಾದ ರಾಹು. ಶಿಖಿ ಎಂದರೆ ಕೇತು.

೩೭. ಈ ನವಗ್ರಹಗಳನ್ನೂ ವಿದ್ವಾಂಸರು ಸರ್ವದಾ ಪೂಜಿಸುವರು. ಅಯ್ಯಾ ಮಹಾಬಾಹುವೇ! ತಾಮ್ರದಿಂದ ಸೂರ್ಯಮಂಡಲ, ಸ್ಫಟಿಕದಿಂದ ಚಂದ್ರ, ರಕ್ತಚಂದನದಿಂದ ಕುಜ, ಸ್ವರ್ಣದಿಂದ ಬುಧ, ಕಾಂಚನದಿಂದ ಗುರು, ಬೆಳ್ಳಿಯಿಂದ ಶುಕ್ರ, ಕಬ್ಬಿಣದಿಂದ ಶನಿ, ಮಿಶ್ರಲೋಹಗಳಿಂದ ರಾಹು, ಕೇತು. ಈರೀತಿ ಗ್ರಹಗಳ ಪ್ರತಿಮೆಗಳನ್ನು ಆಯಾ ಲೋಹಗಳಿಂದ ಪ್ರಯತ್ನಪಟ್ಟು ಮಾಡಿಸಬೇಕು.

ರಾಜತಾದಾಯಸಾನ್ಯಿಶ್ರಾ ದ್ಗ್ರಹಾಃ ಕಾರ್ಯಾಃ ಪ್ರಯತ್ನತಃ ।
ಸ್ವರ್ಣೇರ್ವಾಥ ಪಟೇ ಲೇಖ್ಯಾಃ ಯಥಾಶಾಸ್ತ್ರಂ ಮಹೇಶ್ವರ ॥ ೩೮ ॥

ಯಥಾವರ್ಣಂ ಪ್ರದೇಯಾನಿ ವಾಸಾಂಸಿ ಕುಸುಮಾನಿ ಚ ।
ಗಂಧಾಶ್ಚ ಬಲಯಶ್ಚೈವ ಧೂಪೋ ದೇಯಶ್ಚ ಗುಗ್ಗುಲಃ ॥ ೩೯ ॥

ಕರ್ತವ್ಯಾ ಮಂತ್ರವಂತಶ್ಚ ಚರವಃ ಪ್ರತಿದೈವತಂ ।
ಆಕೃಷ್ಣೇನ ಇಮಂ ದೇವಾ ಅಗ್ನಿರ್ಮೂರ್ಧಾ ದಿವಃ ಕಕುತ್ ॥ ೪೦ ॥

ಉದ್ಬುಧ್ಯಸ್ವ ಯಥಾಸಂಖ್ಯಂ ಋಚ ಏತಾಃ ಪ್ರಕೀರ್ತಿತಾಃ ।
ಬೃಹಸ್ಪತೇ ಅತಿಯದರ್ಯಃ ತಥೈವಾನ್ನಾತ್ಪರಿಸ್ರುತಃ ॥ ೪೧ ॥

---

೩೮. ಅಯ್ಯಾ ರುದ್ರನೇ! ಚಿನ್ನದ ತಗಡಿನಲ್ಲಿಯೋ ಅಥವಾ ಬಟ್ಟೆಯ ಮೇಲೋ ಈ ಗ್ರಹಗಳಿಗೆ ನಿಯತವಾದ ಕೋಣಯುಕ್ತವಾದ ಆಕೃತಿಯನ್ನು ಶಾಸ್ತ್ರಾನುಸಾರವಾಗಿ ಬರೆಯಬೇಕು. ಆಯಾ ಗ್ರಹಗಳಿಗನುಗುಣವಾಗಿ ಉಕ್ತವಾಗಿರುವ,

೩೯. ಬಟ್ಟೆಗಳು, ಪುಷ್ಪಗಳು, ಗಂಧ, ಬಲಿಯ ಅನ್ನ ಇವನ್ನು ಸಮರ್ಪಿಸಬೇಕು. ಎಲ್ಲ ಗ್ರಹಗಳಿಗೂ ಗುಗ್ಗುಲ ಧೂಪವನ್ನು ಹಾಕಬೇಕು.

೪೦. ಎಲ್ಲಾ ಗ್ರಹಗಳ ದೇವತೆಗಳಿಗೂ ಮುಂದಿನ ಮಂತ್ರಪೂರ್ವಕವಾಗಿ ಚರು, ಹೋಮ ಮಾಡಬೇಕು. ಆ ಕೃಷ್ಣೇನ, ಅಗ್ನಿದೂಂತಂ, ಕದ್ರುದ್ರಾಯ, ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾ ಸಹಿತನಾದ ಸೂರ್ಯನನ್ನೂ ; ಆಪ್ಯಾಯಸ್ವ, ಅಪ್ಸುಮೇ, ಗೌರೀಮಿಮಾಯ ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾಸಹಿತನಾದ ಚಂದ್ರನನ್ನೂ ; ಅಗ್ನಿರ್ಮೂರ್ಧಾ, ಸ್ಯೋನಾಪೃಥಿವೀ, ಕುಮಾರಂ ಮಾತಾ, ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾ ಸಹಿತನಾದ ಅಂಗಾರಕನನ್ನೂ.

೪೧–೪೨ ಉದ್ಬುಧ್ಯಧ್ವಂ, ಇದಂವಿಷ್ಣುಃ, ಸಹಸ್ರಶೀರ್ಷಾ ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾ ಸಹಿತನಾದ ಬುಧನನ್ನೂ ; ಬೃಹಸ್ಪತೇ, ಇಂದ್ರ ಶ್ರೇಷ್ಠಾನಿ, ಬ್ರಹ್ಮಜಾತೇ, ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾಸಹಿತನಾದ ಗುರುವನ್ನೂ ; ಶುಕ್ರಂತೇ, ಇಂದ್ರಾಣಿ, ಇಂದ್ರವಃ, ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾಸಹಿತನಾದ ಶುಕ್ರನನ್ನೂ ; ಶಮಗ್ನಿಃ, ಪ್ರಜಾಪತೇ, ಯಮಾ

**ಶಂ ನೋ ದೇವೀ ತಥಾ ಕಾಂಡಾತ್ ಕೇತುಂ ಕೃಣ್ವನ್ನಿಮಾಃ ಕ್ರಮಾತ್ ।**
**ಪೂರ್ವೋಕ್ತಾ ಸ್ಸಮಿಧಸ್ತ್ವತ್ರ ಯಾಥಾಶಾಸ್ತ್ರಂ ಪ್ರಹೋಮಯೇತ್ ॥೪೨॥**

**ಏಕೈಕಸ್ಯಾಷ್ಟಶತಕಂ ಅಷ್ಟಾವಿಂಶತಿರೇವ ವಾ ।**
**ಹೋತವ್ಯಾ ಮಧು ಸರ್ಪಿರ್ಭ್ಯಾಂ ದಧ್ನಾ ಚೈವ ಸಮನ್ವಿತಾಃ ॥ ೪೩ ॥**

**ಪೂರ್ವೋಕ್ತಭೋಜನಂ ಯದ್ಧಿ ಬ್ರಾಹ್ಮಣೇಭ್ಯೋ ನಿವೇದಯೇತ್ ।**
**ಶಕ್ತಿತೋ ವಾ ಯಥಾಲಾಭಂ ದಕ್ಷಿಣಾ ತು ವಿಧಾನತಃ ॥ ೪೪ ॥**

**ಯಶ್ಚ ಯಸ್ಯ ಯದಾ ದುಃಸ್ಥಃ ಸ ತಂ ಯತ್ನೇನ ಪೂಜಯೇತ್ ।**
**ಮಯೈಷಾಂ ಹಿ ವರೋ ದತ್ತಃ ಪೂಜಿತಾಃ ಪೂಜಯಿಷ್ಯಥ ॥ ೪೫ ॥**

---

ಯಸೋಮಂ ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾ ಸಹಿತನಾದ ಶನಿಯನ್ನೂ; ಕಯಾನಃ, ಆಯಂಗೌಃ, ಪರಂಮೃತ್ಯುಃ, ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾ ಸಹಿತನಾದ ರಾಹುವನ್ನೂ; ಕೇತುಂಕೃಣ್ವ, ಬ್ರಹ್ಮಜಿಜ್ಞಾನಂ, ಸಚಿತ್ರಚಿತ್ರಂ, ಈ ಮಂತ್ರಗಳಿಂದ ಅಧಿದೇವತಾ ಪ್ರತ್ಯಧಿದೇವತಾ ಸಹಿತನಾದ ಕೇತುವನ್ನೂ ಉದ್ದೇಶಿಸಿ ಹೋಮಮಾಡಬೇಕು.

೪೩. ಹಿಂದೆ ಹೇಳಿದ ಸಮಿತ್ತು ಬೇರುಗಳನ್ನು ದಧಿ, ಮಧು, ಘೃತ ಇವುಗಳ ಸಮೇತ ಒಂದೊಂದು ಗ್ರಹಕ್ಕೂ ನೂರಎಂಟುಸಲವೋ ಅಥವಾ ಇಪ್ಪತ್ತೆಂಟುಸಲವೋ ಶಾಸ್ತ್ರೋಕ್ತವಾಗಿ ಹೋಮಮಾಡಬೇಕು.

೪೪. ಯಾವ ಯಾವ ಗ್ರಹಗಳಿಗೆ ಶಾಸ್ತ್ರದಲ್ಲಿ ನಿರ್ದೇಶಿಸಿರುವ ಅನ್ನವು ಯಾವ್ಯಾವುದೋ ಆಯಾ ಅನ್ನಗಳನ್ನು ಬ್ರಾಹ್ಮಣರಿಗೆ ಸಮರ್ಪಣೆಮಾಡಬೇಕು. ಅಲ್ಲದೆ ಶಕ್ತಿಗನುಸಾರವಾಗಿಯೋ ಅಥವಾ ತತ್ಕಾಲಕ್ಕೆ ದೊರೆತಷ್ಟನ್ನೋ ದಕ್ಷಿಣೆಯನ್ನು ವಿಧಾನದಂತೆ ಬ್ರಾಹ್ಮಣರಿಗೆ ಕೊಡಬೇಕು.

೪೫ ಜನನಕಾಲ ಲಗ್ನದೃಷ್ಟಿಯಿಂದ ಯಾವನಿಗೆ ಯಾವ ಗ್ರಹವು ದುಃಸ್ಥಾನವನ್ನು ಹೊಂದಿರುವುದೋ ಅವನು ಅಂಥ ಗ್ರಹವನ್ನು ಪ್ರಯತ್ನದಿಂದಲಾದರೂ ಪೂಜಿಸಬೇಕು. "ಎಲೈ ಗ್ರಹಗಳಿರಾ! ನೀವು ಪೂಜಕರಿಂದ ಪೂಜೆಯನ್ನು ಹೊಂದಿ ಪೂಜಿಸಿದವರನ್ನು ಅನುಗ್ರಹಿಸಿರಿ" ಎಂದು ನಾನೇ ಇವರಿಗೆ ವರವನ್ನು ಕೊಟ್ಟಿದ್ದೇನೆ.

ಗ್ರಹಾಧೀನಾ ನರೇಂದ್ರಾಣಾಮುಚ್ಛ್ರಯಾಃ ಪತನಾನಿ ಚ ।
ಭಾವಾಭಾವೌ ಚ ಜಗತಃ ತಸ್ಮಾತ್ಪೂಜ್ಯತಮಾ ಗ್ರಹಾಃ ॥ ೪೬ ॥

ಗ್ರಹಾ ಗಾವೋ ನರೇಂದ್ರಾಶ್ಚ ಗುರವೋ ಬ್ರಾಹ್ಮಣಾಸ್ತಥಾ ।
ಪೂಜಿತಾಃ ಪೂಜಯಂತ್ಯೇತೇ ನಿರ್ದಹಂತ್ಯಪಮಾನಿತಾಃ ॥ ೪೭ ॥

ಯಥಾ ಸಮುತ್ಥಿತಂ ಯಂತ್ರಂ ಯಂತ್ರೇಣೈವ ಪ್ರಹನ್ಯತೇ ।
ತಥಾ ಸಮುತ್ಥಿತಾಂ ಪೀಡಾಂ ಗ್ರಹಶಾಂತ್ಯಾ ಪ್ರಶಾಮಯೇತ್ ॥ ೪೮ ॥

ಯಜ್ವನಾಂ ಸತ್ಯವಾಕ್ಯಾನಾಂ ತಥಾ ನಿತ್ಯೋಪವಾಸಿನಾಂ ।
ಜಪಹೋಮಪರಾಣಾಂ ಚ ಸರ್ವಂ ದುಷ್ಟಂ ಪ್ರಶಾಮ್ಯತಿ ॥ ೪೯ ॥

ಏವಂ ಕೃತ್ವಾ ಪ್ರಜಾಶಾಂತಿಂ ಕೃತ್ವಾ ಚ ಸ್ವಸ್ತಿವಾಚನಂ ।
ಪುನಸ್ಸಜ್ಜರಥಂ ಕೃತ್ವಾ ಕುರ್ಯಾತ್ಪ್ರಕ್ರಮಣಂ ಹರ ॥ ೫೦ ॥

---

೪೬. ರಾಜರ ಅಭಿವೃದ್ಧಿ, ಹೀನಸ್ಥಿತಿ ಇವು ಗ್ರಹಗಳ ಅಧೀನವಾಗಿವೆ. ಹೀಗೆಯೇ ಜಗತ್ತಿನ ಭಾವ ಅಭಾವಗಳೂ (ಮೇಲುಕೀಳುಗಳು) ಗ್ರಹಗಳ ಅಧೀನಗಳಾಗಿವೆ. ಆದುದರಿಂದ ಗ್ರಹದೇವತೆಗಳು ಅತ್ಯಂತ ಪೂಜ್ಯರು.

೪೭. ಗೋವುಗಳು, ಗ್ರಹಗಳು, ರಾಜರು, ಗುರುಗಳು, ಬ್ರಾಹ್ಮಣರು ಇವರೆಲ್ಲಾ ಪೂಜೆಯನ್ನು ಹೊಂದಿದರೆ ಪೂಜಿಸಿದವರನ್ನು ಅನುಗ್ರಹಿಸುತ್ತಾರೆ. ಅಪಮಾನಿತರಾದರೆ ಸುಟ್ಟುಬಿಡುತ್ತಾರೆ.

೪೮. ಬಾಂಧಕವಾದ ರೀತಿ ಹಾಯ್ದು ಕೆಲಸಮಾಡುವ ಯಂತ್ರವು ಯಂತ್ರದಿಂದಲೇ ಹೇಗೆ ನಿಗ್ರಹಿಸಲ್ಪಡುವುದೋ ಹಾಗೆ ಗ್ರಹದಿಂದ ಉತ್ಪನ್ನವಾದ ಬಾಧೆಯನ್ನು ಗ್ರಹಶಾಂತಿಯಿಂದಲೇ ನಿವಾರಣೆಮಾಡಿಕೊಳ್ಳಬೇಕು.

೪೯. ಯಜ್ಞಮಾಡತಕ್ಕವರು, ಸತ್ಯವಾದಿಗಳು, ನಿತ್ಯವಾದ ಬ್ರಹ್ಮದಲ್ಲಿ ಸಕ್ತರು, ಜಪಹೋಮಗಳಲ್ಲಿ ಆಸಕ್ತರು ಇಂಥವರಿಗೆ ಪ್ರಾಪ್ತವಾಗುವ ಸಮಸ್ತ ದೋಷಗಳೂ ಶಾಂತಿಯನ್ನು ಹೊಂದುತ್ತವೆ.

೫೦–೫೧. ಅಯ್ಯಾ ರುದ್ರನೇ! ಹೀಗೆ ಪ್ರಜೋದ್ದೇಶದಿಂದ ಮಾಡಬೇಕಾದ ಶಾಂತಿಕರ್ಮವನ್ನು ಮಾಡಿ ಸ್ವಸ್ತಿವಾಚನವನ್ನು ಮಾಡಿಸಿ ಪುನಃ ರಥವನ್ನು ಸರಿಪಡಿಸಿ

**ಮಾರ್ಗಂ ಶೇಷಂ ನಯಿತ್ವಾ ತು ನಯೇದ್ದೇವಾಲಯಂ ರವಿಂ ।**
**ಪೂಜಯಿತ್ವಾ ತತಃ ಸರ್ವಾ ಯಾಃ ಪ್ರೋಕ್ತಾ ರಥದೇವತಾಃ ॥ ೫೧ ॥**

**ಯಥಾ ಪೂಜ್ಯಾಗ್ರಹಾ ಸ್ಸರ್ವೇ ಉತ್ಪಾತೇಷು ತ್ರಿಲೋಚನ ।**
**ರಥದೇವಾಸ್ತಥಾ ಪೂಜ್ಯಾ ಯಾಃ ಸ್ಥಿತಾ ರಥಮಾಶ್ರಿತಾಃ ॥ ೫೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ ಕಲ್ಪೇ ಆದಿತ್ಯಮಹಿಮಾವರ್ಣನಂ ನಾಮ ಷಟ್ಪಂಚಾಶತ್ತಮೋಽಧ್ಯಾಯಃ.**



---

ಸಿದ್ಧಮಾಡಿ ಮುಂದೆ ಉಳಿದಿರುವಷ್ಟು ದೂರ ಎಳೆದು ದೇವರನ್ನು ದೇವಾಲಯಕ್ಕೆ ತಲಪಿಸಬೇಕು. ಹಿಂದೆ ರಥದೇವತೆಗಳ ವಿಚಾರವನ್ನು ನಿರೂಪಿಸಿದೆಯಷ್ಟೆ.

೫೨. ಇಂತಹ ಉತ್ಪಾತಗಳಲ್ಲಿ ಯಾವ ಗ್ರಹವನ್ನು ಹೇಗೆ ಪೂಜಿಸಬೇಕೆಂದು ಹೇಳಿದೆವೋ ಅದೇ ಪ್ರಕಾರ ರಥವನ್ನು ಆಶ್ರಯಿಸಿಕೊಂಡಿರುವ ದೇವತೆಗಳನ್ನೂ ಕೂಡ ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ಆದಿತ್ಯನ ಮಹಾತ್ಮೆಯ ವರ್ಣನೆಯೆಂಬ ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತಪಂಚಾಶತ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಕ್ಷೀರಂ ಯವಾಗೂರ್ಬ್ರಹ್ಮಣೇಸ್ಯಾತ್ಪರಮಾನ್ನಂ ತ್ರಿಲೋಚನ ।
ಫಲಾನಿ ಕಾರ್ತಿಕೇಯಸ್ಯ ದದ್ಯಾದ್ಭೂತೇಶ ಪ್ರೀತಯೇ
ವಿವಸ್ವತೇ ಮಧುಮಾಂಸಂ ತಥಾ ಮದ್ಯಂ ಚ ಸುವ್ರತ ॥ ೧ ॥

ಪುರುಹೂತಾಯ ಭಕ್ಷ್ಯಾಣಿ ಸಾನುಗಾಯ ನಿವೇದಯೇತ್ ।
ಹವಿರನ್ನಮಗ್ನಯೇ ಸ್ಯಾ ದಗ್ರಾನ್ನಂ ವಿಷ್ಣವೇ ತಥಾ ॥ ೨ ॥

---

## ಐವತ್ತೇಳನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ತ್ರಿಲೋಚನನಾದ ಭೂತೇಶನೇ! ಬ್ರಹ್ಮನ ಪ್ರೀತ್ಯರ್ಥವಾಗಿ ಹಾಲು, ಗಂಜಿ, ಪರಮಾನ್ನ ಇವುಗಳನ್ನು ನಿವೇದಿಸಬೇಕು. ರಥಸ್ಥನಾದ ಷಣ್ಮುಖನ ಪ್ರೀತ್ಯರ್ಥವಾಗಿ ಹಣ್ಣುಗಳನ್ನು ನಿವೇದಿಸಬೇಕು.

೨. ಅಯ್ಯಾ ಸುವ್ರತನೇ! ಸೂರ್ಯನಿಗೆ ಮಿಷ್ಟವಾದ ಮಾಂಸವನ್ನೂ ಮದ್ಯವನ್ನೂ ನಿವೇದಿಸಬೇಕು. ಎಂಬುದು ಕೆಲವರ ಮತ. ಅನುಚರಸಹಿತನಾದ ಇಂದ್ರನಿಗೆ ಭಕ್ಷ್ಯಗಳನ್ನು ಸಮರ್ಪಿಸಬೇಕು. ಹೀಗೆಯೇ ಅಗ್ನಿಗೆ "ನ ಪ್ರಕ್ಷಾಳಯತಿ, ನ ಪ್ರಸ್ರಾವಯತಿ" ಎಂಬ ಹವಿರ್ಲಕ್ಷಣಯುಕ್ತವಾದ ಅನ್ನವನ್ನೂ, ಇತರ ದೇವತೆಗಳಿಗೆ ನಿವೇದಿತವಾಗದೇ ಮೀಸಲಾಗಿರುವ ಅನ್ನವನ್ನೂ ವಿಷ್ಣುವಿಗೂ ಅದೇರೀತಿ ಮಹಾನೈವೇದ್ಯವನ್ನೂ ಅರ್ಪಿಸಬೇಕು.

ರಾಕ್ಷಸೇಭ್ಯಃ ಸಮ್ಯೈರೇಯಂ ದದ್ಯಾನ್ಮಾಂ ಸೌದನಂ ಹರ ।
ಸಂಸ್ಕೃತಂ ಪಿಶಿತಾನ್ನಂ ಚ ದೇವತಾಯ ನಿವೇದಯೇತ್ ॥ ೩ ॥

ತಿಲಾನ್ನಂ ಪಿತೃರಾಜಾಯ ದದ್ಯಾತ್ತ್ರಿಪುರಸೂದನ ।
ಅಶ್ವಿನಾಭ್ಯಾ ಮಪೂಂಪಾಂಸ್ತು ವಸುಭ್ಯೋ ಮಾಷಭೋಜನಂ ॥ ೪ ॥

ಪಿತೃಭ್ಯಃ ಪಾಯಸಂ ದದ್ಯಾತ್ ಘೃತಾಕ್ತಂ ಮಧುನಾ ಸಹ ।
ಕಾತ್ಯಾಯನ್ಯೈ ಯವಾಗೂಂ ಚ ಶ್ರಿಯೈ ದದ್ಯಾತ್ತಥಾ ದಧಿ ॥ ೫ ॥

ಸರಸ್ವತ್ಯೈ ತ್ರಿಮಧುರಂ ವರುಣಾಯೇಕ್ಷು ರಸೌದನಂ ।
ಖಾಂಡಮನ್ನಂ ಧನಪತಾವೇವಂ ಮಿತ್ರೇ ತ್ರಿಲೋಚನ ॥ ೬ ॥

ಸ ಸ್ನೇಹೇನ ತು ತಕ್ರೇಣ ಮರುದ್ಭ್ಯಃ ತರ್ಪಣಂ ಸ್ಮೃತಂ ।
ಮಾಂಸಾನ್ನ ಭಕ್ತೈಸೂಪಾಂಶ್ಚ ಮಾತೃಭ್ಯೋ ವೈ ನಿವೇದಯೇತ್ ॥ ೭ ॥

---

೩. ಅಯ್ಯಾ ಹರನೇ! ಮದ್ಯಸಮೇತವಾದ ಮಾಂಸರೂಪವಾದ ಅನ್ನವನ್ನು ರಾಕ್ಷಸರಿಗೆ ಸಮರ್ಪಿಸಬೇಕು. ಮಾಂಸಾನ್ನಕ್ಕೆ ಸಂಸ್ಕಾರಮಾಡಿ ರೇವತನಿಗೆ ಸಲ್ಲಿಸಬೇಕು.

೪. ಅಯ್ಯಾ ತ್ರಿಪುರಾರಿಯೇ! ಯಮನಿಗೆ ಎಳ್ಳುಹುಡಿ ಅನ್ನವನ್ನೂ, ಅಶ್ವಿನೀ ದೇವತೆಗಳಿಗೆ ಅಪೂಪಗಳನ್ನೂ, ಅಷ್ಟವಸುಗಳಿಗೆ ಉದ್ದಿನಹುಡಿ ಅನ್ನವನ್ನೂ ನಿವೇದನ ಮಾಡಬೇಕು.

೫. ಪಿತೃದೇವತೆಗಳಿಗೆ ತುಪ್ಪ, ಜೇನುತುಪ್ಪ ಇವು ಮಿಶ್ರವಾದ ಪಾಯಸವನ್ನು ಸಮರ್ಪಿಸಬೇಕು. ಗೌರೀದೇವಿಗೆ ಯವಾಗು (ಗಂಜಿ) ವನ್ನೂ, ಲಕ್ಷ್ಮಿಗೆ ಮೊಸರನ್ನೂ ಸಮರ್ಪಿಸಬೇಕು.

೬. ಸರಸ್ವತಿಗೆ ತುಪ್ಪ, ಸಕ್ಕರೆ, ಜೇನು ಇವುಗಳನ್ನೂ, ವರುಣನಿಗೆ ಕಬ್ಬಿನ ಹಾಲು ಮಿಶ್ರವಾದ ಅನ್ನವನ್ನೂ ನಿವೇದಿಸಬೇಕು. ಅಯ್ಯಾ ಮುಕ್ಕಣ್ಣನೇ! ಕುಬೇರನಿಗೂ ಅವನ ಮಿತ್ರನಿಗೂ ಖಾಂಡ ಮಿಶ್ರವಾದ ಅನ್ನವನ್ನು ನಿವೇದಿಸಬೇಕು.

೭. ಬೆಣ್ಣೆ ತೆಗೆಯದೆ ಜಿಡ್ಡಿನಿಂದ ಕೂಡಿದ ಮಜ್ಜಿಗೆಯಿಂದ ಮರುತ್ತುಗಳನ್ನೂ ತೃಪ್ತಿಪಡಿಸಬೇಕು. ಮಾಂಸಾನ್ನವನ್ನೂ, ಅಪೂಪವನ್ನೂ ಸಪ್ತಮಾತೃಗಳಿಗೆ ನಿವೇದಿಸಬೇಕು.

ಉಲ್ಲೇಪಿಕಾಶ್ಚ ಭೂತೇಭ್ಯೋ ಜಲಂ ಸೂರ್ಯಾಯ ವೈ ಹರ ।
ದದ್ಯಾದ್ಗಣಾಧಿಪತಯೇ ಮೋದಕಾ‌ ತ್ರಿಪುರಾಂತಕ ॥ ೮ ॥

ಶಷ್ಕುಲ್ಯಸ್ತು ನೈರ್‌ಋತಾಯ ದೇಯಾಃ ಸ್ಯುರ್ಗಣನಾಯಕ ।
ಸರ್ವಭಕ್ಷ್ಯಾಣಿ ವಿಶ್ವೇಭ್ಯೋ ದಾತವ್ಯಾನಿ ಸಮಂತತಃ ॥ ೯ ॥

ಕ್ಷೀರೌದನಮೃಷಿಭ್ಯಸ್ತು ಕ್ಷೀರಂ ನಾಗೇಭ್ಯ ಏವ ಚ ।
ಸೂರ್ಯರಥಾಯ ಬಲಿಂ ದದ್ಯಾತ್ಕುರ್ಯಾದ್ವೈ ಸಾರ್ವಭೌತಿಕಂ ॥ ೧೦ ॥

ಉದ್ವರ್ತನಂ ಸುರಾಮಾಂಸಂ ತದ್ವಾಹೇಭ್ಯಶ್ಚ ಭಾರತ ।
ಆಜ್ಯಂ ಚ ಬ್ರಹ್ಮಣೇ ದದ್ಯಾತ್ ತ್ರ್ಯಂಬಕಾಯ ತಿಲಾಂಸ್ತಥಾ ॥ ೧೧ ॥

ಸ್ವಾಹಾತನಯೇ ವೈ ಲಾಜಾ ದಾತವ್ಯಾಸ್ತ್ರಿಪುರಾಂತಕ ।
ಭಾಸ್ಕರಾಯ ಸದಾ ದದ್ಯಾತ್ ಕೋವಿದಾರಂ ತ್ರಿಲೋಚನ ॥ ೧೨ ॥

---

೮. ಅಯ್ಯಾ ಹರನೇ! ಭೂತಗಳಿಗೆ ಅಡಿಗೆಯ ಪಾತ್ರೆಯಲ್ಲಿ ಅಂಟಿಕೊಂಡಿರುವ ಅನ್ನವನ್ನೂ, ಸೂರ್ಯನಿಗೆ ಜಲವನ್ನೂ, ಗಣಪತಿಗೆ ಕಡುಬುಗಳನ್ನೂ ಸಮರ್ಪಿಸಬೇಕು.

೯. ಪ್ರಮಥಗಣಾಧಿಪತಿಯಾದ ತ್ರಿಪುರಾರಿಯೇ! ನಿರ್‌ಋತಿಗೆ ಚಕ್ಕುಲಿಗಳನ್ನೂ, ವಿಶ್ವೇದೇವತೆಗಳಿಗೆ ಎಲ್ಲ ಬಗೆಯ ಭಕ್ಷ್ಯಗಳನ್ನೂ ಸಮರ್ಪಿಸಬೇಕು.

೧೦. ಋಷಿಗಳಿಗೆ ಹಾಲು ಅನ್ನವನ್ನೂ, ನಾಗರಿಗೆ ಹಾಲನ್ನೂ ಸಮರ್ಪಿಸಿ, ಸೂರ್ಯರಥದ ಮುಂದೆ ಸರ್ವಭೂತಗಳಿಗೂ ಪ್ರೀತ್ಯರ್ಥಗಳಾಗಿ ಬಲಿಗಳನ್ನು ಸಮರ್ಪಿಸಬೇಕು.

೧೧. ಪಾತ್ರೆಗಳಿಗೆ ಅಂಟಿಕೊಂಡಿರುವ ಅಗಳೂ, ಹೆಂಡ, ಮಾಂಸಗಳನ್ನು ಅವುಗಳಿಗೆ ಭಾಗಿಗಳಾದವರಿಗೆ ಕೊಡಬೇಕು. ಅಯ್ಯಾ ತ್ರಿಪುರಾರಿಯೇ! ಬ್ರಹ್ಮನಿಗೆ ತುಪ್ಪವನ್ನೂ, ತ್ರ್ಯಂಬಕನಿಗೆ ಎಳ್ಳನ್ನೂ ಅರ್ಪಿಸಬೇಕು.

೧೨. ಅಯ್ಯಾ ತ್ರಿಲೋಚನನೇ! ಅಗ್ನಿಯಲ್ಲಿ ಉತ್ಪನ್ನನಾದ ಷಣ್ಮುಖನಿಗೆ ಅರಳನ್ನು ಅರ್ಪಿಸಬೇಕು. ಸೂರ್ಯನಿಗೆ ಕಂಚವಾಳಪುಷ್ಪವನ್ನು ಧರಿಸಬೇಕು.

**ರಾಜವೃಕ್ಷಂ ತಥೇಂದ್ರಾಯ ಹವಿಷ್ಯಂ ಪಾವಕಾಯ ಚ ।**
**ಚಕ್ರಿಣೇ ಸಪ್ತಧಾನ್ಯಂ ಚ ಗರುಡೇ ಮತ್ಸ್ಯಮೋದನಂ ॥ ೧೩ ॥**

**ಯಕ್ಷೇಭ್ಯೋ ವಿವಿಧಾನ್ನಾನಿ ನಿರ್ಯಾಸಂ ರೇವತೇ ತ್ಯಜೇತ್ ।**
**ವೈಕಂಕತಸ್ರಜೋ ರುದ್ರ ಯಮಾಯ ಪರಿಕೀರ್ತಿತಾಃ ॥ ೧೪ ॥**

**ದೇಯಂ ಸ್ಯಾತ್ಕರ್ಣಿಕಾರಂ ತು ಅಶ್ವಿಭ್ಯಾಂ ವೃಷಭಧ್ವಜ ।**
**ಶ್ರಿಯೈ ಪದ್ಮಾನಿ ದೇಯಾನಿ ಚಂಡಿಕಾಯೈ ಸು ಚಂದನಂ ॥ ೧೫ ॥**

**ನವನೀತಂ ಸರಸ್ವತ್ಯೈ ವಿನತಾಯೈ ತಥಾಮಿಷಂ ।**
**ಪುಷ್ಪಾಣ್ಯಪ್ಸರಸಾಂ ರುದ್ರ ಮಾಲತ್ಯಾಃ ಪರಿಕೀರ್ತಿತಂ ॥ ೧೬ ॥**

**ವರುಣಾಯಾಗ್ನಿಮಂಥಂ ತು ಫಲಂ ಮೂಲಂ ನಿರ್ಋತಯೇ ।**
**ಬಿಲ್ವಂ ದದ್ಯಾತ್ಕುಬೇರಾಯ ಕಪಿತ್ಥಂ ಮರುತಾಂ ತಥಾ ॥ ೧೭ ॥**

---

೧೩. ಇಂದ್ರನಿಗೆ ಕಕ್ಕೆಯಪುಷ್ಪವನ್ನು ಸಮರ್ಪಿಸಬೇಕು. ಅಗ್ನಿಗೆ ಹವಿಸ್ಸನ್ನೂ, ವಿಷ್ಣುವಿಗೆ ಸಪ್ತಧಾನ್ಯದ ಅನ್ನವನ್ನೂ, ಗರುಡನಿಗೆ ಮಾಂಸರೂಪವಾದ ಅನ್ನವನ್ನೂ ನಿವೇದಿಸಬೇಕು.

೧೪. ಯಕ್ಷರಿಗೆ ಬಗೆಬಗೆಯ ಅನ್ನಗಳನ್ನೂ, ರೇವತನಿಗೆ (ಬಂಕೆಯನ್ನು) ಗೋಂದನ್ನು ನಿವೇದಿಸಬೇಕು. ಅಯ್ಯಾ ರುದ್ರನೇ! ಯಮನಿಗೆ ವೈಕಂಕತ ಪುಷ್ಪ ಮಾಲೆಯನ್ನೂ ಧರಿಸಬೇಕು.

೧೫. ಅಶ್ವಿನೀದೇವತೆಗಳಿಗೆ ಬೆಟ್ಟದಾವರೆ ಪುಷ್ಪಮಾಲೆಯನ್ನು ಅರ್ಪಣ ಮಾಡಬೇಕು. ಅಯ್ಯಾ ವೃಷಭಧ್ವಜನೇ! ಲಕ್ಷ್ಮಿಗೆ ಕಮಲವನ್ನೂ, ಚಾಮುಂಡೇಶ್ವರಿಗೆ ಒಳ್ಳೆಯ ಶ್ರೀಗಂಧವನ್ನೂ ಸಮರ್ಪಿಸಬೇಕು.

೧೬. ಅಯ್ಯಾ ರುದ್ರನೇ! ಸರಸ್ವತಿಗೆ ಬೆಣ್ಣೆ, ವಿನತಾದೇವಿಗೆ ಮಾಂಸ, ಅಪ್ಸರಸೆಯರಿಗೆ ಜಾಜಿ ಹೂ ಇವುಗಳನ್ನು ಅರ್ಪಿಸಬೇಕು ಎಂಬದಾಗಿ ಉಕ್ತವಾಗಿದೆ.

೧೭. ವರುಣನಿಗೆ ಶಮೀಪುಷ್ಪ, ನಿರ್ಋತಿಗೆ ಹಣ್ಣುಗಳು, ಗೆಣಸುಗಳು, ಕುಬೇರನಿಗೆ ಬಿಲ್ವಪತ್ರೆಯ ಫಲ, ಮರುತ್ತುಗಳಿಗೆ ಬೇಲದಹಣ್ಣು ಇವನ್ನು ಅರ್ಪಿಸಬೇಕು.

ಗಂಧರ್ವೇಭ್ಯಸ್ತ್ವರಗ್ವಧಂ ದದ್ಯಾತ್ತ್ರಿಪುರಸೂದನ ।
ವಾಸವೇಭ್ಯಸ್ತು ಕರ್ಪೂರಂ ದದ್ಯಾದ್ದಾರು ಗಣಾಧಿಪೇ ॥ ೧೮ ॥

ಪಿತೃಭ್ಯಃ ಪಿಂಡಮೂಲಾನಿ ಭೂತೇಭ್ಯಶ್ಚ ವಿಭೀತಕಂ ।
ಗೋಭ್ಯೋ ಯವಾನ್ ಪ್ರದದ್ಯಾದ್ವೈ ಮಾತೃಭ್ಯಶ್ಚಾಕ್ಷತಾನ್ ಹರ ॥ ೧೯ ॥

ಗುಗ್ಗುಳಂ ವಿಘ್ನಪತಯೇ ವಿಶ್ವೇಭ್ಯೋದೇಯಮೋದನಂ ।
ಋಷಿಭ್ಯೋ ಬ್ರಹ್ಮವೃಕ್ಷಂ ತು ನಾಗೇಭ್ಯೋ ವಿಷಮುತ್ತಮಂ ॥ ೨೦ ॥

ಭಾಸ್ಕರಸ್ಯೇಹ ದೇಯಾನಿ ಸಕಲಾನಿ ಗಣಾಧಿಪ ।
ಮಧು ಸರ್ಪಿಸ್ತಥೋಕ್ತಾನಿ ಗೈರಿಕಸ್ಯ ತ್ರಿಲೋಚನ ॥ ೨೧ ॥

ನ್ಯಗ್ರೋಧಂ ತಸ್ಯ ವಾಹೇಭ್ಯೋ ಭಕ್ತ್ಯಾ ರುದ್ರ ನಿವೇದಯೇತ್ ।
ಸಾಯಂ ಪ್ರಾತಸ್ತು ಮಧ್ಯಾಹ್ನೇ ಸದೈಕಾಗ್ರಮನಾ ಹರ ॥ ೨೨ ॥

---

೧೮. ಗಂಧರ್ವರಿಗೆ ಕಕ್ಕೆಯ ಫಲವನ್ನೂ, ವಸುಗಳಿಗೆ ಕರ್ಪೂರವೃಕ್ಷಗಳ ಫಲವನ್ನೂ, ಗಣಾಧಿಪನಿಗೆ ದೇವದಾರು ಫಲವನ್ನೂ ನಿವೇದಿಸಬೇಕು.

೧೯. ಪಿತೃದೇವತೆಗಳಿಗೆ ಪಿಂಡಮೂಲಗಳನ್ನೂ, ಭೂತಗಳಿಗೆ ವಿಭೀತಕ (ಕಟುರೋಹಿಣಿ) ವನ್ನೂ, ಗೋವುಗಳಿಗೆ ಯವ (ಜವೆಗೋಧಿ) ವನ್ನೂ, ಮಾತೃ ದೇವತೆಗಳಿಗೆ ಅಕ್ಷತೆಗಳನ್ನೂ ಸಮರ್ಪಿಸಬೇಕು.

೨೦. ಅಯ್ಯಾ ಹರನೇ! ವಿಘ್ನಪತಿಗೆ ಗುಗ್ಗುಳವನ್ನೂ, ವಿಶ್ವೇದೇವತೆಗಳಿಗೆ ಅನ್ನವನ್ನೂ ನಿವೇದಿಸುವುದು. ಋಷಿಗಳಿಗೆ ಬ್ರಹ್ಮವೃಕ್ಷ ಫಲಗಳನ್ನೂ, ನಾಗಗಳಿಗೆ ಉತ್ತಮವಾದ ವಿಷವನ್ನೂ ನಿವೇದಿಸಬೇಕು.

೨೧. ಅಯ್ಯಾ ಪ್ರಮಥಗಣಾಧಿಪನಾದ ಶಿವನೇ! ಇಲ್ಲಿ ಭಾಸ್ಕರನಿಗೆ ಪೂರ್ವೋಕ್ತವಾದ ಸಮಸ್ತಗಳನ್ನೂ ಅಂದರೆ ಜೇನು, ತುಪ್ಪ, ಗೈರಿಕ ವಸ್ತುಗಳಲ್ಲಿ ಉಕ್ತವಾದುವು. ಇವನ್ನೆಲ್ಲಾ ಸಮರ್ಪಿಸಬೇಕು.

೨೨. ತ್ರಿಲೋಚನನಾದ ರುದ್ರನೇ! ಆ ಸೂರ್ಯನ ಕುದುರೆಗಳಿಗೆ ಸಾಯಂ ಕಾಲ, ಪ್ರಾತಃಕಾಲ, ಮಧ್ಯಾಹ್ನಗಳಲ್ಲಿ ಭಕ್ತಿಯಿಂದ ಆಲದ ಹಣ್ಣುಗಳನ್ನು ನಿವೇದಿಸ ಬೇಕು.

**ಸರ್ವೇಷಾಂ ಶಕ್ತಿತೋ ಭಕ್ತ್ಯಾ ದಹೇದ್ಧೂಪಂ ವಿಚಕ್ಷಣಃ ।**
**ಮಂತ್ರತೋ ದೇವಶಾರ್ದೂಲ ಯೋ ಯಸ್ಯೇಹ ಪ್ರಕೀರ್ತಿತಃ ॥ ೨೩ ॥**

**ಶಾಂತ್ಯರ್ಥಂ ಬ್ರಾಹ್ಮಣೇಭ್ಯಸ್ತು ತಿಲಾನ್ ದದ್ಯಾದ್ವಿಚಕ್ಷಣಃ ।**
**ವೈಶ್ವಾನರೇ ವಾ ಜುಹುಯಾತ್ ಘೃತೇನ ಸಹಿತಾನ್ ಹರ ॥ ೨೪ ॥**

**ದೇವಾನಾಮಮೃತಂ ಹ್ಯೇತೇ ಪಿತೄಣಾಂ ಹಿ ಸ್ವಧಾಮೃತಂ ।**
**ಶರಣಂ ಬ್ರಾಹ್ಮಣಾನಾಂ ಚ ಸದಾ ಹ್ಯೇತಾನ್ ವಿದುರ್ಬುಧಾಃ ॥ ೨೫ ॥**

**ಕಶ್ಯಪಸ್ಯಾಂಗಜಾಹ್ಯೇತೇ ಪವಿತ್ರಾಶ್ಚ ತಥಾ ಹರ ।**
**ಸ್ನಾನೇ ದಾನೇ ತಥಾ ಹೋಮೇ ತರ್ಪಣೇ ಹ್ಯಶನೇ ಪರಾಃ ॥ ೨೬ ॥**

---

೨೩. ಎಲೈ ಹರನೇ! ಬುದ್ಧಿವಂತನು ಯಾವಾಗಲೂ ಏಕಾಗ್ರಮನಸ್ಸುಳ್ಳವನಾಗಿ ಸಮಸ್ತ ದೇವತೆಗಳಲ್ಲೂ ಭಕ್ತಿಯಿಟ್ಟು ಯಾವ ಧೂಪವು ಯಾವ ದೇವತೆಗೆ ಇಷ್ಟವೆಂದು ಹೇಳಲ್ಪಟ್ಟಿದೆಯೋ ಅಂಥದನ್ನು ಆ ದೇವತೆಗೆ ಮಂತ್ರಪೂರ್ವಕವಾಗಿ ಭಕ್ತಿಯಿಂದ ಸಮರ್ಪಣೆಮಾಡಬೇಕು.

೨೪. ದೇವಶ್ರೇಷ್ಠನಾದ ಹರನೇ! ತಿಳಿದವನು ತನ್ನ ಗ್ರಹಚಾರದ ಶಾಂತಿ ಗೋಸ್ಕರ ಬ್ರಾಹ್ಮಣರಿಗೆ ತಿಲದಾನ ಮಾಡಬೇಕೆಂಬುದು ಒಂದು ಕಲ್ಪ. ತುಪ್ಪ ಸಹಿತವಾಗಿ ತಿಲವನ್ನು ಅಗ್ನಿಯಲ್ಲಿ ಹೋಮಮಾಡಬೇಕೆಂದು ಮತ್ತೆ ಕೆಲವರ ಮತವಾಗಿದೆ.

೨೫. ಈ ಎಳ್ಳೂ, ಘೃತವೂ ದೇವತೆಗಳಿಗೆ ಸಾಕ್ಷಾತ್ ಅಮೃತವೂ, ಪಿತೃಗಳಿಗೆ ಸ್ವಧಾರೂಪವಾದ ಅಮೃತವೂ, ಬ್ರಾಹ್ಮಣರಿಗೆ ಇದು ಸದಾ ಅಮೃತಸ್ವರೂಪವೂ ಆಗಿದೆಯೆಂದು ವಿದ್ವಾಂಸರು ಹೇಳುತ್ತಾರೆ.

೨೬. ಅಯ್ಯಾ ಹರನೇ! ಈ ತಿಲವೆಂಬುದು ಕಶ್ಯಪನ ಅಂಗದಿಂದ ಪುಟ್ಟಿದುದು. ಮತ್ತು ಪವಿತ್ರವಾದುದು. ಸ್ನಾನ, ದಾನ, ಹೋಮ, ತರ್ಪಣ ಇವುಗಳಲ್ಲೆಲ್ಲಾ ಉಪಯೋಗಕ್ಕೆ ಬರುವ ಶ್ರೇಷ್ಠವಸ್ತುವಾಗಿದೆ.

ಇತ್ಥಂ ದೇವಾನ್ ಗ್ರಹಾಂಶ್ಚೈವ ಪೂಜಯಿತ್ವಾ ಪ್ರಯತ್ನತಃ ।
ಅವತಾರ್ಯ ರಥಾಚ್ಚೈನಂ ಮಂಡಲೇ ಸ್ಥಾಪಯೇತ್ಪುನಃ ॥ ೨೭ ॥

ಕೃತ್ವಾತ್ವಾರಾರ್ತಿಕಂ ಯತ್ನಾದ್ದೀಪತೋಯ ಯವಾಕ್ಷತೈಃ ।
ಕಾರ್ಪಾಸಬೀಜಲವಣತುಷ್ಪೈರ್ದುರ್ದೃಷ್ಟಿಶಾಂತಯೇ ॥ ೨೮ ॥

ವೇದೀಮಾರೋಪಯೇತ್ ಪಶ್ಚಾತ್ ಪತ್ನೀಭ್ಯಾಂ ಸಹ ಸುವ್ರತ ।
ರಥಸ್ಥಂ ಪೂಜಯೇದ್ದೇವಂ ದಿನಾನಿ ದಶ ಸುವ್ರತ ॥ ೨೯ ॥

ದಶಾಹಿಕೇತಿ ವಿಖ್ಯಾತಾ ಯಾ ಪೂಜಾ ಭೂತಲೇ ಹರ ।
ತಯಾ ಸಂಪೂಜಯೇದ್ದೇವಂ ಚತುರ್ಥೇಽಹ್ನಿ ತಥಾ ಹರ ॥ ೩೦ ॥

ಚತುರ್ಥೇಽಹನಿ ಕರ್ತವ್ಯಂ ಯತ್ನಾದ್ಧಿಸ್ನಪನಂ ರವೇಃ ।
ಅಭ್ಯಂಗಭೋಜನಾದ್ಯೈಸ್ತು ಪೂಜಾಸತ್ಕಾರ ಮಂಡಲೈಃ ॥ ೩೧ ॥

---

೨೭. ಈರೀತಿ ಗ್ರಹಗಳನ್ನೂ ದೇವತೆಗಳನ್ನೂ ಪ್ರಯತ್ನದಿಂದ ಪೂಜಿಸಿ ಬಳಿಕ ಉತ್ಸವಮೂರ್ತಿಯನ್ನು ರಥದಿಂದ ಇಳಿಸಿ ಪುನಃ ಅದನ್ನು ಎಂದಿನಂತೆ ಮಂಡಲದಲ್ಲಿ ತಂದು ಇರಿಸಬೇಕು.

೨೮. ಆರತಿಯ ತಟ್ಟೆಯಲ್ಲಿ ಕುಂಕುಮ, ನೀರು, ಮಂತ್ರಾಕ್ಷತೆ, ದೀಪ ಉರಿಯುವ ಸೊಡಲುಗಳು, ಹತ್ತಿಯಬೀಜ, ಉಪ್ಪು, ಭತ್ತದಹೊಟ್ಟು ಇವನ್ನು ಹಾಕಿ ದೇವರಿಗೆ ದುಷ್ಟದೃಷ್ಟಿಪರಿಹಾರಕ್ಕಾಗಿ ನೀವಳಿಸಿ ಆರತಿ ಬೆಳಗಬೇಕು.

೨೯. ಅನಂತರ ಸೂರ್ಯದೇವ ಪ್ರತಿಮೆಯನ್ನು ರಾಜ್ಞೀ, ನಿಕ್ಷುಭಾ ಎಂಬ ಇಬ್ಬರು ಪತ್ನೀ ಪ್ರತಿಮೆಗಳ ಸಮೇತ ಮತ್ತೆ ವೇದಿಕೆಯ ಮೇಲಕ್ಕೆ ತಂದು ಇರಿಸಬೇಕು. ಈ ರಥೋತ್ಸವಾಂಗವಾಗಿ ಒಟ್ಟು ಹತ್ತುದಿನಗಳು ಆ ವೇದಿಕೆಯಲ್ಲಿ ಪೂಜೆ ಮಾಡಬೇಕು.

೩೦. ಅಯ್ಯಾ ಸುವ್ರತನಾದ ಹರನೇ! ಲೋಕದಲ್ಲಿ ಈ ರಥೋತ್ಸವಾಂಗವಾಗಿ ವೇದಿಕೆಯಲ್ಲಿ ನಡೆಯಿಸುವ ಪೂಜೆಯು 'ದಶಾಹಿಕಪೂಜೆ' ಎಂದು ಪ್ರಸಿದ್ಧವಾಗಿದೆ ಆದರಿಂದ ನಾಲ್ಕನೇ ದಿನದ ಪೂಜೆಯನ್ನೂ ಅಲ್ಲೇ ಮಾಡಬೇಕು.

೩೧. ಈರೀತಿ ಪೂಜೆಮಾಡುವಲ್ಲಿ ನಾಲ್ಕನೆಯ ದಿನ ಸೂರ್ಯದೇವನಿಗೆ ಯತ್ನದಿಂದ ಅಭ್ಯಂಗಸ್ನಪನ ಮಾಡಿಸಿ ಮಾಲ್ಯ, ವಸ್ತ್ರ, ನಿವೇದನಾದಿಗಳಿಂದಲೂ, ವಿವಿಧವಾದ ಪೂಜಾಸತ್ಕಾರಸಮೃದ್ಧಿಯಿಂದ ಆರಾಧಿಸಬೇಕು.

**ಅನೇನ ವಿಧಿನಾ ಪೂಜ್ಯ ದಶಾಹಾನಿ ದಿವಾಕರಂ ।**
**ತತೋ ನಯೇತ್ಪರಂ ಸ್ಥಾನಂ ಯತ್ತತ್ಪೂರ್ವಮಥಾಲಯಂ ॥ ೩೨ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ**
**ಸಪ್ತಪಂಚಾಶತ್ತಮೋಽಧ್ಯಾಯಃ.**



---

೩೨. ಈ ವಿಧಿಯಿಂದ ಸೂರ್ಯನಿಗೆ ಹತ್ತು ದಿನಗಳವರೆಗೆ ಪೂಜೆಮಾಡಿ ಅನಂತರ ಬೇರೆಕಡೆಗೆ ಎಂದರೆ ಪೂರ್ವದ ಸ್ಥಾನವಾದ ಆಲಯವು ಯಾವುದೋ ಅಲ್ಲಿಗೆ ತಂದಿಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಐವತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಪಂಚಾಶತ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಅನೇನ ವಿಧಿನಾ ಯಸ್ತು ಕುರ್ಯಾದ್ವಾ ಕಾರಯೇತ ವಾ ।
ಯಾತ್ರಾಂ ಭಗವತೋ ಭಕ್ತ್ಯಾ ಭಾಸ್ಕರಸ್ಯಾಮಿತೌಜಸಃ ॥ ೧ ॥

ಸ ಪರಾರ್ಧಂ ತು ವರ್ಷಾಣಾಂ ಸೂರ್ಯಲೋಕೇ ಮಹೀಯತೇ ।
ಕುಲೇನ ಜಾಯತೇ ತಸ್ಯ ದರಿದ್ರೋ ವ್ಯಾಧಿತೋಽಪಿವಾ ॥ ೨ ॥

ಅಭ್ಯಂಗಾಯ ಘೃತಂ ಯಸ್ತು ಭಾಸ್ಕರಾಯ ಪ್ರಯಚ್ಛತಿ ।
ಕೃತೇ ತು ವರ್ಣತಿಲಕೇ ಸಗಚ್ಛೇತ್ಸವಿತುಃ ಪುರಮ್ ॥ ೩ ॥

---

## ಐವತ್ತೆಂಟನೆಯ ಅಧ್ಯಾಯವು

೧. ಬ್ರಹ್ಮನು ಹೇಳುತ್ತಾನೆ—ಅಮಿತತೇಜಸ್ವಿಯೂ, ಭಗವಂತನೂ ಆದ ಸೂರ್ಯನ ಯಾತ್ರೋತ್ಸವವನ್ನು ಭಕ್ತಿಪೂರ್ವಕವಾಗಿ ಈ ವಿಧಿಯಿಂದ ಯಾರು ಮಾಡುವರೋ ಅಥವಾ ಯಾರು ಮಾಡಿಸುವರೋ,

೨. ಅವರು ಪರಾರ್ಧ ಸಂಖ್ಯಾವರ್ಷಗಳವರೆಗೆ ಸೂರ್ಯಲೋಕದಲ್ಲಿ ಹೊಗಳಿಸಿಕೊಳ್ಳುತ್ತಾ ಪೂಜಾರ್ಹರಾಗಿ ಇರುವರು. ಅವರ ವಂಶದಲ್ಲಿ ಜನಿಸಿದವರು ಎಂದೂ ದರಿದ್ರರೂ, ರೋಗಿಗಳೂ ಆಗುವುದಿಲ್ಲ.

೩. ಯಾವನು ಸೂರ್ಯದೇವನಿಗೆ ತುಪ್ಪದಲ್ಲಿ ಅಭ್ಯಂಗಮಾಡಿಸುವನೋ, ಮತ್ತು ಒಳ್ಳೆಯ ವರ್ಣದಿಂದ ಶೋಭಿಸುವ ತಿಲಕವನ್ನು ರಚಿಸುತ್ತಾನೆಯೋ, ಅವನು ಸೂರ್ಯಲೋಕವನ್ನು ಹೊಂದುತ್ತಾನೆ.

ತೀರ್ಥೋದಕಂ ತು ಯೋ ಭಕ್ತ್ಯಾ ಗಂಗಾಯಾಶ್ಚ ತಥೋದಕಂ ।
ಸ್ನಾನಾರ್ಥಮಾನ ಯೇದ್ಯಸ್ತು ಭಾಸ್ಕರಸ್ಯ ತ್ರಿಲೋಚನ ॥ ೪ ॥

ಭಕ್ತ್ಯಾ ವರ್ಣತ್ರಯಂ ದದ್ಯಾತ್ ಭಾಸ್ಕರಸ್ಯ ತ್ರಿಲೋಚನ ।
ಸಮಾಪ್ನೇಹಾಖಿಲಾನ್ ಕಾಮಾನ್ ಪ್ರಾಪ್ನುಯಾದ್ವರುಣಾಲಯಂ ॥ ೫ ॥

ರಕ್ತವರ್ಣಂ ತು ಯೋ ದದ್ಯಾತ್ ಹವಿಷಾನ್ನಂ ಗುಡೌದನಂ ।
ಸ ಗಚ್ಛೇದ್ದೀಪ್ತಿಮಾನ್ ರುದ್ರ ಸೂರ್ಯಲೋಕಂ ಪುರಂ ವರಂ ॥ ೬ ॥

ಗಚ್ಛೇತ್ಪುರವರೇ ರುದ್ರ ಯತ್ರ ದೇವಃ ಪ್ರಜಾಪತಿಃ ।
ಸ್ನಾಪಯೇದ್ಯಸ್ತು ವಾ ಭಕ್ತ್ಯಾ ಭಾಸ್ಕರಂ ಪೂಜಯೇಸ್ತಥಾ ॥ ೭ ॥

ಸ ಗಚ್ಛೇದ್ದೀಪ್ತಿಮಾನ್ ರುದ್ರ ಸೂರ್ಯಲೋಕಂ ನ ಸಂಶಯಃ ।
ರಥಮಾರೋಪಯೇದ್ಯಸ್ತು ರಥಮಾರ್ಗಂ ಪ್ರಮಾರ್ಜತಿ ॥ ೮ ॥

---

೪. ಎಲೈ ತ್ರಿಲೋಚನನೇ! ಸೂರ್ಯನ ಅಭಿಷೇಕಕ್ಕಾಗಿ ಗಂಗಾನದಿಯ ಪುಣ್ಯತೀರ್ಥವನ್ನು ಭಕ್ತಿಯಿಂದ ಯಾವನು ತರುವನೋ,

೫. ಮತ್ತು ತಿಲಕರಚನೆಗಾಗಿ ಭಕ್ತಿಯಿಂದ ಯಾವನು ಮೂರು ಗೈರಿಕ ವರ್ಣಗಳನ್ನು ಅರ್ಪಿಸುವನೋ ಅವನು ಇಹದಲ್ಲಿ ತನ್ನ ಇಷ್ಟಗಳನ್ನೆಲ್ಲಾ ಹೊಂದಿ ವರುಣಲೋಕಕ್ಕೆ ಹೋಗುತ್ತಾನೆ.

೬. ಅಯ್ಯಾ ರುದ್ರನೇ! ಸೂರ್ಯದೇವನನ್ನು ಶೃಂಗರಿಸಲು ಮೂರು ಬಣ್ಣದ ಗೈರಿಕವಸ್ತುಗಳನ್ನು ಯಾವನು ಕೊಡುತ್ತಾನೋ ಅವನು ತೇಜೋಯುಕ್ತನಾಗಿ ಸೂರ್ಯಲೋಕದಲ್ಲಿ ಶ್ರೇಷ್ಠವಾದ ಸೂರ್ಯನ ಪಟ್ಟಣಕ್ಕೆ ಹೋಗುತ್ತಾನೆ.

೭. ಅಯ್ಯಾ ರುದ್ರನೇ! ಆ ಪಟ್ಟಣಕ್ಕೆ ಹೋಗುವುದು ಮಾತ್ರವಲ್ಲ. ಅಲ್ಲಿ ಬ್ರಹ್ಮದೇವನು ಇರುವ ಸ್ಥಾನದಲ್ಲಿ ವಾಸಿಸುವ ಪುಣ್ಯವನ್ನೂ ಹೊಂದುವನು. ಯಾವನು ಭಕ್ತಿಯಿಂದ ಸೂರ್ಯನಿಗೆ ಅಭಿಷೇಕಮಾಡಿ ಪೂಜಿಸುವನೋ ಅವನೂ ಕೂಡ ಶ್ರೇಷ್ಠವಾದ ಬ್ರಹ್ಮನಿವಾಸವನ್ನು ಸೇರುತ್ತಾನೆ.

೮-೯. ಅಯ್ಯಾ ರುದ್ರನೇ! ಯಾವನು ಸೂರ್ಯನಿಗೆ ರಥಾರೋಹಣವನ್ನು ಮಾಡಿಸುತ್ತಾನೋ ಅವನು ಪ್ರಕಾಶಸಂಪನ್ನನಾಗಿ ಸೂರ್ಯಲೋಕಕ್ಕೆ ಹೋಗು

ಸ ಯಾತಿ ವಾತಸಾಲೋಕ್ಯಂ ವಾತತುಲ್ಯ ಪರಾಕ್ರಮಃ ।
ರಥಸ್ಯ ಗಚ್ಛತೋ ಯಸ್ತು ಮಾರ್ಗೇಕುರ್ಯಾ ಸುಮಂಡಲಂ ॥ ೯ ॥

ಸ ಲೋಕಂ ಪ್ರಾಪ್ನುಯಾತ್ ಪುಣ್ಯಂ ಮಾರುತಂ ನಾತ್ರ ಸಂಶಯಃ ।
ಸೂರಸ್ಯ ಗಚ್ಛತೋ ಯಸ್ತು ಮಾರ್ಗಂ ಕುರ್ಯಾತ್ ಸುಮಂಡಲಂ ॥೧೦॥

ಸ ಲೋಕಂ ಪ್ರಾಪ್ನುಯಾತ್ಪುಣ್ಯಂ ಯಃ ಕುರ್ಯಾನ್ಮಾರ್ಗ ಮಾದರಾತ್ ।
ಪುಷ್ಪಪ್ರಕರ ಶೋಭಾಢ್ಯಂ ಶುಭತೋರಣ ಮಂಡಿತಂ ॥ ೧೧ ॥

ಶಂಖತೂರ್ಯನಿನಾದಾಢ್ಯಂ ತಥಾ ಪ್ರೇಕ್ಷಣಕಾನ್ವಿತಂ ।
ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ವಿಭಾವಸುಃ ॥ ೧೨ ॥

---

ತ್ತಾನೆ. ಯಾವನು ರಥವನ್ನು ಎಳೆಯುವ ಮಾರ್ಗವನ್ನು ಗುಡಿಸುವನೋ ಅವನು ವಾಯುವಿಗೆ ಸಮಾನನಾಗಿ ಪರಾಕ್ರಮಿಯೆನಿಸಿ ವಾಯುಲೋಕವನ್ನು ಸೇರುತ್ತಾನೆ.

೧೦. ಪ್ರಯಾಣಮಾಡುತ್ತಿರುವ ಸೂರ್ಯನ ರಥದ ಮಾರ್ಗವನ್ನನುಸರಿಸಿ ರಂಗವಲ್ಲಿಗಳಿಂದ ಮಂಡಲಗಳನ್ನು ಯಾರು ರಚಿಸುವರೋ ಅವರು ವಾಯುಲೋಕವನ್ನು ಸೇರುವ ಪುಣ್ಯಹೊಂದುವುದರಲ್ಲಿ ಸಂಶಯವಿಲ್ಲ.

೧೧. ಸೂರ್ಯನ ಉತ್ಸವವು ಹೋಗುವ ಮಾರ್ಗದಲ್ಲಿ ಸಾರಿಸಿ ಯಾರು ಒಳ್ಳೆಯ ಹಸೆಗಳನ್ನು ಬರೆಯುವರೋ ಮತ್ತು ಯಾರು ಮಾರ್ಗವನ್ನು ಆದರದಿಂದ ಸರಿಪಡಿಸುವರೋ ಅವರು ಪುಣ್ಯಲೋಕವನ್ನು ಹೊಂದುತ್ತಾರೆ. ರಥ ಹರಿಯುವ ಬೀದಿಯಲ್ಲಿ ಹೂವಿನ ಮಾಲೆಗಳಿಂದಲೂ ಶುಭಕರವಾದ ತೋರಣಗಳಿಂದಲೂ ಅಲಂಕಾರಮಾಡುವವರೂ,

೧೨. ಶಂಖಧ್ವನಿ, ವಾದ್ಯಧ್ವನಿ ಇವುಗಳಿಂದ ಕೂಡಿರುವಂತೆಯೂ, ಇತರ ಸೊಗಸಾದ ದೃಶ್ಯಗಳಿಂದ ರಮಣೀಯಗಳಾಗಿರುವಂತೆಯೂ, ಮಾಡುವವರೂ ಸಹ ಸೂರ್ಯದೇವನು ಇರುವ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾರೆ.

ದೇವೇನ ಸಹಿತೋ ಯಸ್ತು ನೃತ್ಯನ್ ಗಾಯನ್ ತಥಾರ್ಚಯನ್ ।
ಕುರ್ಯಾನ್ಮಹೋತ್ಸವಂ ಭಕ್ತ್ಯಾ ಸ ಯಾತಿ ಪರಮಂ ಪದಂ ॥ ೧೩ ॥

ಪ್ರಜಾಗರಂ ಯಸ್ತು ಕುರ್ಯಾದ್ದೇವೇ ರಥಗತೇ ರವೌ ।
ಸ ಸುಖೀ ಪುಣ್ಯವಾನ್ನಿತ್ಯಂ ಮೋದತೇ ಶಾಶ್ವತೀಃ ಸಮಾಃ ॥ ೧೪ ॥

ಭಕ್ತ್ಯಾ ದಾಶಾಹಿಕಾಭಿಜ್ಞಂ ಯೋ ದದಾತಿ ರವೇರ್ನರಃ ।
ಸಂಪ್ರಾಪ್ಯೇಹಾಖಿಲಾನ್ ಕಾಮಾನ್ ಸೂರ್ಯಲೋಕಮವಾಪ್ನುಯಾತ್ ॥

ರಥಾರೂಢಸ್ಯ ಸೂರ್ಯಸ್ಯ ಭ್ರಮತೋ ದರ್ಶನಂ ಹರ ।
ದುರ್ಲಭಂ ದೇವಶಾರ್ದೂಲ ವಿಶೇಷಾತ್ಪುರತೋ ವ್ರಜನ್ ॥ ೧೬ ॥

ಉತ್ತರಾಭಿಮುಖಂ ಯಾಂತಂ ತಥಾ ವೈ ದಕ್ಷಿಣಾಮುಖಂ ।
ಧನ್ಯಃ ಪಶ್ಯತಿ ದೇವೇಶಂ ಭಾಸ್ಕರಂ ಭಕ್ತವತ್ಸಲಂ ॥ ೧೭ ॥

---

೧೩. ಯಾರು ಉತ್ಸವದ ಜೊತೆಯಲ್ಲಿ ನರ್ತನ, ಗಾನ, ಭಜನೆ ಇವುಗಳ ಮೂಲಕ ಸೇವೆಮಾಡುತ್ತಾ ಭಕ್ತಿಯಿಂದ ಮಹೋತ್ಸವವನ್ನು ನಡೆಸುತ್ತಾನೋ ಅವನು ಶ್ರೇಷ್ಠವಾದ ಪರಮಪದವನ್ನು ಪಡೆಯುತ್ತಾನೆ.

೧೪. ಸೂರ್ಯನು ರಥದ ಮೇಲಿರುವಾಗ ಯಾವನು ಜಾಗರಣೆಮಾಡುವನೋ ಅವನು ಪುಣ್ಯವಂತನಾಗಿ ಯಾವಾಗಲೂ ಸುಖಹೊಂದಿ ಅನೇಕ ವರ್ಷಗಳ ವರೆಗೆ ಸಂತೋಷಪಡುತ್ತಾನೆ.

೧೫. ಪೂರ್ವೋಕ್ತವಾದ್ದೆಲ್ಲವನ್ನೂ ಸೂರ್ಯನಿಗೆ ಯಾವನು ಏರ್ಪಡಿಸುತ್ತಾನೆಯೋ ಅವನು ಈ ಲೋಕದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ಹೊಂದುವುದಲ್ಲದೆ ಸೂರ್ಯಲೋಕವನ್ನೂ ಹೊಂದುತ್ತಾನೆ.

೧೬. ಅಯ್ಯಾ ಹರನೇ! ಸೂರ್ಯದೇವನಿಗೆ ರಥಾರೋಹಣಮಾಡಿ ರಥವನ್ನು ಎಳೆಯುತ್ತಿರುವಾಗ ಅವನ ದರ್ಶನಮಾಡುವುದೇ ಕಷ್ಟ. ಅದರಲ್ಲೂ ಮುಂಭಾಗದಲ್ಲಿ ನಿಂತು ದರ್ಶನಹೊಂದುವುದು ಇನ್ನೂ ದುರ್ಲಭ.

೧೭. ಉತ್ತರಾಭಿಮುಖವಾಗಿಯೋ ಅಥವಾ ದಕ್ಷಿಣಾಭಿಮುಖವಾಗಿಯೋ ಇರುವಾಗ ಭಕ್ತವತ್ಸಲನೂ ದೇವೇಶನೂ ಆದ ಸೂರ್ಯನನ್ನು ನೋಡುವವನು ಧನ್ಯನು.

ಅಥ ಸಂವತ್ಸರೇ ಪ್ರಾಪ್ತೇ ಭಾನೋರ್ಯಾತ್ರಾದಿನೇ ಯದಿ ।
ರಥ ಪ್ರಕ್ರಮಣಂ ತತ್ರ ನ ಕಥಂಚಿತ್ಕೃತಂ ಭವೇತ್ ॥ ೧೮ ॥

ತತೋ ವೈ ದ್ವಾದಶೇ ವರ್ಷೇ ಕರ್ತವ್ಯಂ ಭೂತಿಮಿಚ್ಛತಾ ।
ಇಂದ್ರಧ್ವಜಸ್ಯ ಚಾಪ್ಯೇವಂ ಯದಿ ನೋತ್ಥಾಪನಂ ಕೃತಂ ॥ ೧೯ ॥

ತತೋ ವೈ ದ್ವಾದಶೇ ವರ್ಷೇ ಕರ್ತವ್ಯಂ ನಾಂತರಾ ಪುನಃ ।
ಯಾತ್ರಾಯಾಶ್ಚಾಪಿ ಯೇ ಭಂಗಂ ಕುರ್ವಂತಿ ವೃಷಭಧ್ವಜ ॥ ೨೦ ॥

ಮಂದೇಹಾ ನಾಮ ತೇ ಜ್ಞೇಯಾ ರಾಕ್ಷಸಾ ನಾತ್ರ ಸಂಶಯಃ ।
ಯೇ ಕುರ್ವಂತಿ ತಥಾ ಯಾತ್ರಾಂ ನರಾ ಧರ್ಮಧ್ವಜಸ್ಯ ತು ॥ ೨೧ ॥

ಇಂದ್ರಾದಿ ದೇವಾಸ್ತೇ ಜ್ಞೇಯಾ ಗತಾಶ್ಚ ಪರಮಂ ಪದಂ ।
ಪುನರ್ಯಾತ್ರಾ ವಿಧಿಂಚೇಮಂ ಸಮಾಸಾತ್ಕಥಯಾಮಿ ತೇ ॥ ೨೨ ॥

---

೧೮. ಅಲ್ಲಿಂದ ಒಂದುವರ್ಷದ ಮೇಲೆ ಹೋದವರ್ಷ ಯಾವ ಮಾಸ, ಯಾವ ತಿಥಿಯಲ್ಲಿ ರಥೋತ್ಸವ ನಡೆದಿತ್ತೋ ಈ ವರ್ಷವೂ ಬರುವ ಅದೇ ತಿಥಿಯಲ್ಲಿ ಹೇಗಾದರೂ ಪುನಃ ರಥೋತ್ಸವ ಮಾಡಬೇಕು.

೧೯. ಹಾಗೆ ಮಾಡದೇ ಸಂಪತ್ತನ್ನಾಶಿಸುವನಾಗಿ ದ್ವಿತೀಯವಿಘ್ನಮಾಡಿದರೆ ಆಮೇಲೆ ಹನ್ನೆರಡು ವರ್ಷಗಳವರೆಗೆ ಮಧ್ಯದಲ್ಲಿ ಮಾಡದೆ ಬಿಟ್ಟಿದ್ದು ಆ ಮೇಲೆ ಮಾಡಬಹುದು. ಇಂದ್ರ ಧ್ವಜಾರೋಹಣವನ್ನು ಹೋದವರುಷ ಯಾವದಿನ ಮಾಡಲಾಗಿತ್ತೋ ಈ ವರ್ಷವೂ ಅದೇ ದಿನ ಧ್ವಜಾರೋಹಣವಾಗದಿದ್ದರೆ,

೨೦. ಅಲ್ಲಿಂದ ಹನ್ನೆರಡು ವರ್ಷಗಳವರೆಗೆ ಮಧ್ಯದಲ್ಲಿ ಯಾವಾಗಲೂ ಮಾಡಕೂಡದು. ಅಯ್ಯಾ ವೃಷಭಧ್ವಜನಾದ ಶಿವನೇ! ರಥಯಾತ್ರೆಗೆ ಭಂಗ ವನ್ನುಂಟುಮಾಡುವರೂ ಇರಬಹುದು.

೨೧. ಹೀಗೆ ವಿಘ್ನಮಾಡುವವರನ್ನು ಮಂದೇಹ ರಾಕ್ಷಸರೆಂದೇ ಹೇಳಬೇಕು. ಈ ವಿಷಯದಲ್ಲಿ ಸಂಶಯವಿಲ್ಲ.

೨೨-೨೩. ಧರ್ಮಧ್ವಜನೆನಿಸಿದ ಸೂರ್ಯನ ರಥೋತ್ಸವಯಾತ್ರೆಯನ್ನು ಯಾರು ಮಾಡುವರೋ ಅವರು ಶ್ರೇಷ್ಠವಾದ ಸ್ಥಾನವನ್ನು ಹೊಂದಿದ ಇಂದ್ರಾದಿ

ಯಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ವರ್ತಮಾನೇ ತು ವೈ ಮಾಘೇ ರಥೇ ದೇವಗಣಾಶ್ರಿತೇ ॥ ೨೩ ॥

ಸ ತಸ್ಮಿನ್ನೇವ ಮನಸಾ ಸ್ಥಾಪನೀಯೋ ರಥೋಪರಿ ।
ದ್ಯಾವಾಮಹೀ ಚ ದ್ವಿಮೂರ್ತಿಸ್ಥೋ ಯದಾ ಪೂರ್ವಂ ಪ್ರತಿಷ್ಠಿತೇ ॥ ೨೪ ॥

ತಥೈವ ರಾಜ್ಞೀ ದ್ಯೌರ್ಜ್ಞೇಯಾ ನಿಕ್ಷುಭಾ ಪೃಥಿವೀ ಸ್ಮೃತಾ ।
ಏತಾಭ್ಯಾಮಪಿ ದೇವೀಭ್ಯಾಂ ಯಥೈವ ಸವಿತುಸ್ತಥಾ ॥ ೨೫ ॥

ದಿಂಡಿನಃ ಪಿಂಗಳಾದೀನಾಂ ಪೃಥುಃ ಕಾರ್ಯೋ ರಥಕ್ರಮಃ ।
ಮನಸಾ ಚಿಂತಯೇದಸ್ಯಾಂ ಯಥಾಸ್ಥಾನೇಷು ದೇವತಾನ್ ॥ ೨೬ ॥

ದಿಕ್ಪಾಲಾನ್ ಲೋಕಪಾಲಾಂಶ್ಚ ಕಲ್ಪಯೇನ್ಮನಸೈವ ತು ।
ದೇವೋ ವೇದಮಯಶ್ಚಾಯಂ ಸರ್ವದೇವಮಯಸ್ತಥಾ ॥ ೨೭ ॥

---

ಗಳೆಂದು ತಿಳಿಯಬೇಕು. ಈ ಯಾತ್ರಾವಿಧಿಯನ್ನು ನಿನಗೆ ಪುನಃ ಸಂಕ್ಷೇಪವಾಗಿ ಹೇಳುತ್ತೇನೆ. ಅದನ್ನು ಕೇಳಿದವನು ಸರ್ವಪಾಪಗಳಿಂದ ಬಿಡುಗಡೆಯಾಗುವನೆಂಬುದರಲ್ಲಿ ಸಂದೇಹವಿಲ್ಲ. ಮಾಘಮಾಸವು ನಡೆಯುತ್ತಿರುವಾಗ್ಗೆ ದೇವಗಣಯುಕ್ತವಾದ

೨೪-೨೬. ರಥದಲ್ಲಿ ದೇವರನ್ನು ಏಕಚಿತ್ತದಿಂದ ಇಡಬೇಕು. ಭೂಮ್ಯಾಕಾಶ ದೇವತೆಗಳಾದ ರಾಜ್ಞೀ, ನಿಕ್ಷುಭಾ, ಎಂಬ ಎರಡು ಮೂರ್ತಿಗಳನ್ನೂ ರಥದ ಮೇಲೆ ಆರೋಹಣಮಾಡಿಸಲು ಹೇಳಿತ್ತಷ್ಟೆ. ಈ ಎರಡು ದೇವೀಮೂರ್ತಿಗಳಲ್ಲಿ ರಾಜ್ಞೀ ಎಂಬವಳೇ ದ್ಯೌ ಎಂಬದಾಗಿಯೂ, ನಿಕ್ಷುಭಾ ಎಂಬುವಳೇ ಪೃಥಿವೀ ಎಂಬದಾಗಿಯೂ ತಿಳಿಯಬೇಕು. ಈ ಇಬ್ಬರು ದೇವಿಯರೊಡಗೂಡಿದ ಸೂರ್ಯನಿಗೆ ಹೇಗೆ ರಥವನ್ನು ಏರ್ಪಡಿಸಿರುವುದೋ ಹಾಗೆಯೇ ದಿಂಡಿ, ಪಿಂಗಳ ಮುಂತಾದ ಸೂರ್ಯಪರಿಜನ ಮುಖ್ಯರಿಗೂ ವಿಸ್ತಾರವಾದ ರಥವನ್ನು ಏರ್ಪಡಿಸಬೇಕು.

೨೭. ದಿಕ್ಪಾಲರು ಲೋಕಪಾಲಕರು ಮುಂತಾದ ಬೇರೆಬೇರೆ ದೇವತೆಗಳನ್ನು ಅವರಿಗೆ ಉಕ್ತವಾದ ಸ್ಥಾನಗಳಲ್ಲಿ ರಥಸ್ಥರಾಗಿರುವಂತೆ ನಾವು ಮನಸ್ಸಿನಿಂದಲೇ ಕಲ್ಪಿಸಬೇಕು. ಏಕೆಂದರೆ ಈ ಸೂರ್ಯನು ವೇದಮಯನೂ ಸರ್ವ ದೇವಮಯನೂ ಎನಿಸಿದ್ದಾನೆ.

ಮಂಡಲಂ ಋಙ್ಮಯಂ ಚೈವ ಛಂದಾಂಸ್ಯಾಸ್ಯಂ ಪ್ರಕೀರ್ತಿತಂ ।
ಗಾಯತ್ರೀ ಚೈವ ತ್ರಿಷ್ಟುಪ್ಚ ಜಗತ್ಯನುಷ್ಟುಭೇವ ಚ ॥ ೨೮ ॥

ಪಂಕ್ತಿಶ್ಚ ಬೃಹತೀಚೈವ ಉಷ್ಣಿಗೇವ ಚ ಸಪ್ತಮೀ ।
ತತೋ ದೇವಮಯತ್ವಾಚ್ಚ ಛಂದಸಾಂ ಚೈವ ಕಲ್ಪನಾತ್ ॥ ೨೯ ॥

ತತೋ ವೇದಮಯತ್ವಾಚ್ಚ ತರಣಿರ್ಲೋಕಪೂಜಿತಃ ।
ರಥಪ್ರಕ್ರಮಣಾತ್ ಸೂರ್ಯೋ ವೋಢವ್ಯೋ ಬ್ರಹ್ಮವಾದಿಭಿಃ ॥ ೩೦ ॥

ಉಪವಾಸಪರೈರ್ಯುಕ್ತೈಃ ವೇದವೇದಾಂಗಪಾರಗೈಃ ।
ರಥಂ ತು ನಾರುಹೇಚ್ಛೂದ್ರೋ ಭಾಸ್ಕರಸ್ಯ ತ್ರಿಲೋಚನ ॥ ೩೧ ॥

ಆರುಹ್ಯ ತರಣೇರ್ಯಾನಂ ವ್ರಜೇಚ್ಛೂದ್ರೋಹ್ಯಧೋಗತಿಂ ।
ಯಥೋಕ್ತ ಕರಣಾದ್ರುದ್ರ ಸದಾ ಶಾಂತಿರ್ಭವೇನ್ನೃಣಾಂ ॥ ೩೨ ॥

---

೨೮-೨೯. ಋಕ್ಕುಗಳ ಸಮುದಾಯವು ಸೂರ್ಯಮಂಡಲವೆಂದು ಹೇಳಿದೆ. ಗಾಯತ್ರೀ, ತ್ರಿಷ್ಟುಪ್, ಜಗತಿ, ಅನುಷ್ಟುಪ್, ಪಂಕ್ತಿ, ಬೃಹತೀ, ಉಷ್ಣಿಕ್ ಎಂಬ ಈ ಏಳು ಛಂದಸ್ಸುಗಳೇ ಸೂರ್ಯನ ಮುಖವೆಂದು ಕಲ್ಪಿಸಿರುವುದರಿಂದಲೂ; ಅವನು ಸರ್ವದೇವಮಯನಾಗಿರುವುದರಿಂದಲೂ; ಅದರ ಮೇಲೆ ಅವನು ವೇದಮಯನಾಗಿಯೂ ಇರುವುದರಿಂದಲೂ; ಸೂರ್ಯನು ಸರ್ವಲೋಕಗಳಿಂದಲೂ ಪೂಜಿತನಾಗಿರುವನು.

೩೦-೩೧. ಸೂರ್ಯನಿಗೆ ರಥೋತ್ಸವ ಮಾಡುವಾಗ ಬ್ರಹ್ಮವಾದಿಗಳಾದವರೇ ರಥವನ್ನು ಎಳೆಯಬೇಕು. ವೇದವೇದಾಂಗಪಾರಂಗತರಾದ ಬ್ರಾಹ್ಮಣರು ಸೇರಿ ಉಪವಾಸಪರರಾಗಿ ರಥವನ್ನು ಎಳೆಯಬೇಕು. ಅಯ್ಯಾ ತ್ರಿಲೋಚನನೇ ! ಶೂದ್ರನು ಸೂರ್ಯರಥವನ್ನು ಎಳೆಯಬಾರದು.

೩೨. ಸೂರ್ಯರಥವನ್ನು ಶೂದ್ರನು ಹತ್ತಿ ಕುಳಿತರೆ ಅಧೋಗತಿಯನ್ನು ಹೊಂದುತ್ತಾನೆ. ಅಯ್ಯಾ ರುದ್ರನೇ! ಅಂಥ ಸಂದರ್ಭದಲ್ಲಿ ಶಾಸ್ತ್ರೋಕ್ತಪ್ರಕಾರವಾದ ಪ್ರಾಯಶ್ಚಿತ್ತ ಕರ್ಮಮಾಡಿದರೆ ಈ ಪಾಪಪರಿಹಾರವಾಗಿ ಸದಾ ಮನುಷ್ಯರಿಗೆ ಶಾಂತಿಯುಂಟಾಗುವುದು.

ನಾಯಕಶ್ಚಾಪಿ ಸರ್ವೇಷಾಂ ದೇವಾನಾಂ ತು ದಿವಾಕರಃ ।
ವಿನ್ಯಸೇತ್ತು ರಥಾನಾಂ ತು ದೇವತಾಯತನೇಷು ಚ ॥ ೩೩ ॥

ತತೋ ಧೂಪೋಪಹಾರೈಸ್ತು ಪೂಜಯೇತ್ಪ್ರಥಮಂ ರವಿಂ ।
ದಿಗ್ದೇವಾನುಚರಾಂಶ್ಚೈವ ಪೂಜಯೇತ್ಪೂಜ್ಯತೇ ಶ್ರಿಯಾ ॥ ೩೪ ॥

ಅಪೂಜ್ಯ ಪ್ರಥಮಂ ಸೂರ್ಯಂ ಅಪರಾನ್ಯಸ್ತು ಪೂಜಯೇತ್ ।
ತೇ ತತ್ಕೃತ ಸಪರ್ಯಾಂ ತು ನ ಪ್ರಗೃಹ್ಣಂತಿ ದೇವತಾಃ ॥ ೩೫ ॥

ಯಾತ್ರಾಕಾಲೇ ತು ಸಂಪ್ರಾಪ್ತೇ ಸವಿತುರ್ದೀಕ್ಷಿತಾಂ ತನುಂ ।
ಯೇ ದ್ರಕ್ಷ್ಯಂತಿ ನರಾ ಭಕ್ತ್ಯಾ ತೇ ಭವಿಷ್ಯಂತ್ಯಕಲ್ಮಷಾಃ ॥ ೩೬ ॥

ಪೌರ್ಣಮಾಸ್ಯಾಮಮಾಯಾಂ ಚ ದರ್ಶನಂ ಪುಣ್ಯದಂ ಸ್ಮೃತಂ ।
ಸಪ್ತಮ್ಯಾಂ ಚ ತಥಾ ಷಷ್ಠ್ಯಾಂ ದಿನೇ ತಸ್ಯ ರವೇಸ್ತಥಾ ॥ ೩೭ ॥

---

೩೩. ಸೂರ್ಯನು ಎಲ್ಲಾ ದೇವತೆಗಳಿಗೂ ನಾಯಕನಾದುದರಿಂದ ಸೂರ್ಯ ರಥವನ್ನು ಎಲ್ಲ ದೇವತೆಗಳ ರಥಗಳಲ್ಲಿ ಮುಖ್ಯವನ್ನಾಗಿಯೂ ಸೂರ್ಯದೇವಾಲಯವನ್ನು ಎಲ್ಲಾ ದೇವಾಲಯಗಳಲ್ಲಿ ಮುಖ್ಯವನ್ನಾಗಿಯೂ ಏರ್ಪಡಿಸಬೇಕು.

೩೪. ಅನಂತರ ಮೊಟ್ಟಮೊದಲು ಸೂರ್ಯನಿಗೆ ಧೂಪದಿಂದಲೂ ಉಪಾಹಾರ ನಿವೇದನದಿಂದಲೂ ಪೂಜೆಯನ್ನು ನಡೆಯಿಸಬೇಕು. ಆಮೇಲೆ ದಿಕ್ಪಾಲಕರನ್ನೂ ಅನುಯಾಯಿಗಳನ್ನೂ ಪೂಜಿಸಬೇಕು. ಹೀಗೆ ಮಾಡಿದವನು ಸಂಪದ್ಯುಕ್ತಸಾಧನಗಳುಳ್ಳವನಾಗುವನು.

೩೫. ಸೂರ್ಯನನ್ನು ಮೊದಲು ಪೂಜಿಸದೆ ಬೇರೆ ದೇವತೆಗಳನ್ನು ಯಾವನು ಪೂಜಿಸುವನೋ ಅಂಥವನ ಪೂಜೆಯನ್ನು ಆ ದೇವತೆಗಳು ಪರಿಗ್ರಹಿಸುವುದಿಲ್ಲ.

೩೬. ಸೂರ್ಯನ ರಥಯಾತ್ರಾಕಾಲ ಪ್ರಾಪ್ತವಾಗಲು ರಥೋತ್ಸವಾಂಗವಾಗಿ ದೀಕ್ಷೆವಹಿಸಿರುವ ಅರ್ಚಕನ ದೇಹವನ್ನು ಯಾರು ಭಕ್ತಿಯಿಂದ ನೋಡುವರೋ ಅವರು ಪಾಪರಹಿತರಾಗುವರು.

೩೭. ಪೌರ್ಣಮೆ, ಅಮಾವಾಸ್ಯೆ, ಸಪ್ತಮಿ, ಷಷ್ಠೀ, ಭಾನುವಾರ ಈ ದಿನಗಳಲ್ಲಿ ಅಂಥ ದೀಕ್ಷಿತರ ಶರೀರವನ್ನು ನೋಡುವುದೂ ಸೂರ್ಯಪ್ರತಿಮಾದರ್ಶನವೂ ಸಹ ಪುಣ್ಯಕರ.

ಆಷಾಢೀ ಕಾರ್ತಿಕೀ ಮಾಘೀ ತಿಥ್ಯಃ ಪುಣ್ಯತಮಾಃ ಸ್ಮೃತಾಃ ।
ಮಹಾಭಾಗ್ಯಂ ತಿಥೇಃ ಪುಣ್ಯಂ ತಥಾ ಶಾಸ್ತ್ರೇಷು ಗೀಯತೇ ॥ ೩೮ ॥

ಕಾರ್ತಿಕ್ಯಾಂ ತು ವಿಶೇಷೇಣ ಮಹಾಕಾರ್ತಿಕ್ಯುದಾಹೃತಾ ।
ಏವಂ ಕಾಲಸಮಾಯೋಗಾತ್ ಯಾತ್ರಾಕಾಲೋ ವಿಶಿಷ್ಯತೇ ॥ ೩೯ ॥

ದರ್ಶನಂ ಚ ಮಹಾಪುಣ್ಯಂ ಸರ್ವಪಾಪಹರಂ ಭವೇತ್ ।
ಉಪವಾಸಪರೋ ಯಸ್ತು ತಸ್ಮಿನ್ ಕಾಲೇ ಯತವ್ರತಃ ॥ ೪೦ ॥

ಪೂಜಯೇತ್ತು ರವಿಂ ಭಕ್ತ್ಯಾ ಸ ಗಚ್ಛೇತ್ ಪರಮಾಂ ಗತಿಂ ।
ದೇವೋಽಯಂ ಯಜ್ಞಪುರುಷೋ ಲೋಕಾನುಗ್ರಹಕಾಂಕ್ಷಯಾ ॥ ೪೧ ॥

ಪ್ರತಿಮಾವಸ್ಥಿತೋ ಭೂತ್ವಾ ಪೂಜಾಂ ಗೃಹ್ಣಾತ್ಯನುಗ್ರಹಾತ್ ।
ಸ್ನಾನಾದ್ದಾನಾಜ್ಜಪಾದ್ಧೋಮಾತ್ ಸಂಯೋಗಾದ್ದೇವ ಕರ್ಮಣಃ ॥ ೪೨ ॥

---

೩೮. ಆಷಾಢ, ಕಾರ್ತೀಕ, ಮಾಘ ಈ ತಿಂಗಳುಗಳ ಪೌರ್ಣಿಮೆಗಳು ಅತ್ಯಂತ ಪುಣ್ಯಕರವಾದವುಗಳು. ಪುಣ್ಯವು ತಿಥಿಯ ಮಹಿಮೆಯಿಂದಾಗುವ ಮಹಾಭಾಗ್ಯವು ಎಂದು ಶಾಸ್ತ್ರದಲ್ಲಿ ಹೇಳಿದೆ.

೩೯. ಕಾರ್ತಿಕ ಶುದ್ಧ ಪೌರ್ಣಿಮೆಯ ದಿನವನ್ನು ಮಹಾಕಾರ್ತಿಕೆ ಎಂದು ಹೇಳುತ್ತಾರೆ. ಹೀಗೆ ಕಾಲಯೋಗ ಕೂಡುವ ದಿನದಲ್ಲಿ ರಥೋತ್ಸವವನ್ನೇರ್ಪಡಿಸುವುದರಿಂದ ಜಾತ್ರೆಯು ನಡೆಯುವ ಕಾಲವು ಒಂದು ಅತಿಶಯತೆಯುಳ್ಳದ್ದಾಗುವುದು.

೪೦. ಆ ಯಾತ್ರಾಕಾಲದಲ್ಲಿ ಸ್ವಾಮಿಯ ದರ್ಶನಮಾಡುವುದು ಮಹತ್ತಾದ ಪುಣ್ಯವನ್ನುಂಟುಮಾಡುವುದು. ಅಲ್ಲದೆ ಪಾಪಪರಿಹಾರವೂ ಆಗಿರುವುದು. ಮತ್ತು ಆ ಕಾಲದಲ್ಲಿ ವ್ರತನಿಯಮದಿಂದ ಕೂಡಿ ಉಪವಾಸಮಾಡತಕ್ಕದ್ದು.

೪೧. ಹೀಗೆ ನಿಯಮದಿಂದ ಇದ್ದು ಭಕ್ತಿಯಿಂದ ಸೂರ್ಯನನ್ನು ಪೂಜಿಸುವವನು ಶ್ರೇಷ್ಠವಾದ ಗತಿಯನ್ನು ಹೊಂದುವನು. ಯಜ್ಞಪುರುಷನಾದ ಈ ಸೂರ್ಯದೇವನು ಲೋಕಕ್ಕೆ ಅನುಗ್ರಹಮಾಡುವ ಅಪೇಕ್ಷೆಯಿಂದ ಪ್ರತಿಮೆಯಲ್ಲಿ ಸನ್ನಿಹಿತನಾಗಿ ಕೃಪೆಯಿಂದ ನಮ್ಮ ಪೂಜೆಯನ್ನು ಸ್ವೀಕರಿಸುತ್ತಾನೆ.

೪೨-೪೩. ಮನುಷ್ಯನು ದೀಕ್ಷಿತನೆನಿಸಿಕೊಳ್ಳಬೇಕಾದರೆ ಸ್ನಾನ, ದಾನ, ಜಪ, ಹೋಮ ಇವುಗಳನ್ನೂ ದೇವಪೂಜಾದಿಗಳನ್ನೂ ಚೆನ್ನಾಗಿ ಮಾಡಬೇಕು. ಗಡ್ಡ,

**ಕೂರ್ಚಾನಾಂ ವಪನಾಚ್ಚೈವ ದೀಕ್ಷಿತಃ ಪುರುಷೋ ಭವೇತ್ ।**
**ಕಚಾನಾಂ ವಾಪನಂ ಕಾರ್ಯಂ ಸೂರ್ಯಭಕ್ತೈಃ ಸದಾ ನರೈಃ ॥ ೪೩ ॥**

**ಸೂರ್ಯಕ್ರತೌ ಶುಚಿಭಿಸ್ತ್ವೇವಂ ದೀಕ್ಷಿತಃ ಪುರುಷೋ ಭವೇತ್ ।**
**ಚತುರ್ಣಾಮಪಿ ವರ್ಣಾನಾಂ ಭಕ್ತ್ಯಾ ಸೂರ್ಯಸ್ಯ ನಿತ್ಯದಾ ॥ ೪೪ ॥**

**ಏವಂ ಯೇಽತ್ರ ಕರಿಷ್ಯಂತಿ ತೇ ನರಾ ನಿತ್ಯದೀಕ್ಷಿತಾಃ ।**
**ಚೀರ್ಣವ್ರತಾ ಮಹಾತ್ಮಾನಃ ತೇ ಯಾಸ್ಯಂತಿ ಪರಾಂ ಗತಿಂ ॥ ೪೫ ॥**

**ಇತ್ಯೇಷಾ ಕಥಿತಾ ರುದ್ರ ರಥಯಾತ್ರಾ ದಿವಸ್ಪತೇಃ ।**
**ಯಾಂ ಶ್ರುತ್ವಾ ವಾಚಯಿತ್ವಾ ಚ ಸರ್ವರೋಗೈರ್ವಿಮುಚ್ಯತೇ ॥ ೪೬ ॥**

**ಕೃತ್ವಾ ಚ ವಿಧಿವದ್ಭಕ್ತ್ಯಾ ಯಾತಿ ಸೂರ್ಯಸದೋ ನರಃ ।**
**ರಥಾಹ್ವಾ ಕಥಿತಾ ರುದ್ರ ಸಮಾಸಾತ್ಸಪ್ತಮೀ ಶುಭಾ ॥ ೪೭ ॥**

---

ಮೀಸೆ, ಮುಂತಾದುವುಗಳನ್ನು ತೆಗೆಯಿಸಬೇಕು. ಸೂರ್ಯಭಕ್ತರಾದ ಮನುಷ್ಯರೆಲ್ಲರೂ ಯಾವಾಗಲೂ ತಲೆಗೂ ಕೂದಲು ವಪನಮಾಡಿಸಬೇಕು.

೪೫. ಸೂರ್ಯರಥೋತ್ಸವದಲ್ಲಿ ಈ ಪ್ರಕಾರ ಪರಿಶುದ್ಧನಾದವನು ದೀಕ್ಷಿತನಾದ ಪುರುಷನು ಎನಿಸುವನು. ಸೂರ್ಯಭಕ್ತಿಯಿಂದ ಚಾತುರ್ವರ್ಣ್ಯದವರೂ ಸಹ ನಿತ್ಯವೂ ಅವನಿಗೆ ಇಷ್ಟವಾದುದನ್ನು ಸಮರ್ಪಿಸುತ್ತಾ ಬರಬೇಕು.

೪೬. ಈ ಪ್ರಕಾರವಾಗಿ ನಿಯಮದಿಂದ ವ್ರತವನ್ನು ಆಚರಿಸಿದ ಮಹಾತ್ಮರು ನಿತ್ಯದೀಕ್ಷಿತರೆಂದು ಪ್ರಸಿದ್ಧಿಪಡೆದು ಶ್ರೇಷ್ಠವಾದ ಗತಿಯನ್ನು ಹೊಂದುವರು.

೪೬. ಅಯ್ಯಾ ರುದ್ರನೇ ! ಈ ಪ್ರಕಾರ ಸೂರ್ಯರಥೋತ್ಸವ ಕ್ರಮವನ್ನು ನಿರೂಪಣಮಾಡಿದುದಾಯಿತು. ಅದನ್ನು ಕೇಳಿದ ಮತ್ತು ಓದಿದ ಮನುಷ್ಯನು ಸಮಸ್ತ ರೋಗಗಳಿಂದ ಬಿಡುಗಡೆಹೊಂದಿ ಆರೋಗದೃಢಕಾಯನಾಗುವನು.

೪೭. ಮನುಷ್ಯನು ಭಕ್ತಿಯಿಂದ ವಿಧಿಪ್ರಕಾರವಾಗಿ ಇದನ್ನು ನಡೆಯಿಸಿದರೆ ಸೂರ್ಯಲೋಕಕ್ಕೆ ಹೋಗುತ್ತಾನೆ. ಅಯ್ಯಾ ರುದ್ರನೇ ! ಶುಭಕರವಾದ ರಥಸಪ್ತಮೀ ಎಂಬ ಹೆಂಬ ಹೆಸರುಳ್ಳ ಈ ವ್ರತವನ್ನು ಸಂಕ್ಷೇಪವಾಗಿ ಹೇಳಿದುದಾಯಿತು.

ಭೂಯೋऽಪಿ ಶ್ರೂಯತಾಂ ರುದ್ರ ಸಪ್ತಮೀಂ ಗದತೋ ಮಮ ॥ ೪೮ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀಕಲ್ಪೇ ರಥಯಾತ್ರಾವರ್ಣನಂ ನಾಮ ಅಷ್ಟಪಂಚಾಶತ್ತಮೋಽಧ್ಯಾಯಃ**



---

೪೮. ಅಯ್ಯಾ ರುದ್ರನೇ! ಇದೇ ಸಪ್ತಮೀ ವಿಚಾರವನ್ನು ಮುಂದೆಯೂ ಹೇಳುವೆನು ಕೇಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ರಥ ಯಾತ್ರಾವರ್ಣನೆ ಎಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕೋನಷಷ್ಟಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಮಾಘೇಮಾಸಿ ತಥಾ ದೇವ ಸಿತೇ ಪಕ್ಷೇ ಜಿತೇಂದ್ರಿಯಃ ।
ಷಷ್ಠ್ಯಾಮುಪೋಷಿತೋ ಭೂತ್ವಾ ಗಂಧಪುಷ್ಪೋಪಹಾರತಃ ॥ ೧ ॥

ಪೂಜಯಿತ್ವಾ ದಿನಕರಂ ರಾತ್ರೌ ತಸ್ಯಾಗ್ರತಃ ಸ್ವಪೇತ್ ।
ವಿಬುದ್ಧಸ್ತ್ವಥ ಸಪ್ತಮ್ಯಾಂ ಭಕ್ತ್ಯಾ ಭಾನುಂ ಸಮರ್ಚಯೇತ್ ॥ ೨ ॥

ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ವಿತ್ತಶಾಠ್ಯಂ ವಿವರ್ಜಯೇತ್ ।
ಖಂಡವೇಷ್ಟೈರ್ಮೋದಕೈಶ್ಚ ತಥೇಕ್ಷುಗುಡಪೂಪಕೈಃ ॥ ೩ ॥

---

## ಐವತ್ತೊಂಭತ್ತನೆಯ ಅಧ್ಯಾಯ

೧-೩. ಬ್ರಹ್ಮನು ಹೇಳುತ್ತಾನೆ—ಎಲೈ ರುದ್ರನೇ! ಮಾಘಮಾಸದ ಶುಕ್ಲ ಪಕ್ಷದ ಷಷ್ಠಿಯಲ್ಲಿ ಜಿತೇಂದ್ರಿಯನಾಗಿ ಉಪವಾಸಮಾಡಿ (ಮನಸ್ಸನ್ನು ಬ್ರಹ್ಮದಲ್ಲಿರಿಸಿ) ಗಂಧ, ಪುಷ್ಪ ಉಪಹಾರ ಸಮರ್ಪಣದಿಂದ ಸೂರ್ಯನನ್ನು ಪೂಜಿಸಿ ರಾತ್ರಿಯಲ್ಲಿ ಆ ದೇವನ ಸಮೀಪದಲ್ಲಿಯೇ ಮಲಗಬೇಕು. ಮಾರನೇ ಬೆಳಗ್ಗೆ ಎಂದರೆ ಸಪ್ತಮಿಯ ದಿನ ಎದ್ದು ಭಕ್ತಿಯಿಂದ ಸೂರ್ಯನನ್ನು ಪೂಜಿಸಬೇಕು. ಅನಂತರದಲ್ಲಿ ಕರಿಗಡುಬು, ಮತ್ತು ಇತರ ವಿಧವಾದ ಕಡುಬುಗಳಿಂದಲೂ, ಕಬ್ಬು, ಬೆಲ್ಲ ಹಾಕಿ ಮಾಡಿದ ಹಿಟ್ಟಿನ ಅಪೂಪಗಳಿಂದಲೂ, ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಈ ಕಾರ್ಯ ಮಾಡುವಾಗ ದ್ರವ್ಯಾನುಕೂಲವಿದ್ದರೂ ಜಿಪುಣತನಮಾಡಬಾರದು.

**ಅಥ ಸಂವತ್ಸರೇ ಪೂರ್ಣೇ ಸಪ್ತಮ್ಯಾಂ ಕಾರಯೇದ್ಬುಧಃ ।**
**ದೇವದೇವಸ್ಯ ವೈ ಯಾತ್ರಾಂ ಪೂರ್ವೋಕ್ತವಿಧಿನಾ ಹರ ॥ ೪ ॥**

**ಕೃಷ್ಣಪಕ್ಷೇ ತು ಯಃ ಕೃತ್ವಾ ರಥಮಾರೋಹಿತಂ ರವಿಂ ।**
**ಪಶ್ಯೇದ್ಭಕ್ತ್ಯಾ ಜಗನ್ನಾಥಂ ಸ ಯಾತಿ ಪರಮಾಂ ಗತಿಂ ॥ ೫ ॥**

**ತೃತೀಯಾಯಾಮೇಕಭುಕ್ತಂ ಚತುರ್ಥ್ಯಾಂ ನಕ್ತಮುಚ್ಯತೇ ।**
**ಪಂಚಮ್ಯಾಮಯಾಚಿತಂ ಸ್ಯಾತ್ ಷಷ್ಠ್ಯಾಂ ಚೈವಮುಪೋಷಣಂ ॥ ೬ ॥**

**ಸಪ್ತಮ್ಯಾಂ ಪಾರಣಂ ಕುರ್ಯಾತ್ ದೃಷ್ಟ್ವಾ ದೇವಂ ರಥೇ ಸ್ಥಿತಂ ।**
**ಪೂಜಯಿತ್ವಾ ಚ ವಿಧಿನಾ ಶಕ್ತ್ಯಾ ಭಕ್ತ್ಯಾ ತ್ರಿಲೋಚನ ॥ ೭ ॥**

**ಸೌವರ್ಣಂ ತು ರಥಂ ಕೃತ್ವಾ ತಾಮ್ರಪಾತ್ರೋಪರಿಸ್ಥಿತಂ ।**
**ರಥಮಧ್ಯೇ ನ್ಯಸೇದ್ವ್ಯೋಮ ಪೂಜಿತಂ ಮಣಿಭಿರ್ಹರ ॥ ೮ ॥**

**ಪದ್ಮರಾಗಂ ನ್ಯಸೇನ್ಮಧ್ಯೇ ಮೌಕ್ತಿಕಂ ಪೂರ್ವತೋ ನ್ಯಸೇತ್ ।**
**ಇಂದ್ರನೀಲಮಥೋ ಯಾಮ್ಯಾಂ ಪಶ್ಚಾನ್ಮರಕತಂ ಹರ ॥ ೯ ॥**

---

೪-೬. ಈ ವ್ರತಮಾಡುವವನು ತೃತೀಯೆಯ ದಿನ ಒಪ್ಪೊತ್ತು ಊಟಮಾಡಬೇಕು ಚತುರ್ಥಿಯ ದಿನ ಹಗಲು ನಿರಾಹಾರದಿಂದಿದ್ದು ರಾತ್ರಿ ಮಾತ್ರ ಭೋಜನ ಮಾಡಿ ಪಂಚಮಿಯ ದಿನ ತಾನು ಯಾಚಿಸದೇ ಯಾರಾದರೂ ತಂದುಕೊಟ್ಟದ್ದನ್ನು ಭೋಜನಮಾಡಬೇಕು. ಷಷ್ಠಿಯ ದಿನ ನಿರಾಹಾರನಾಗಿರಬೇಕು.

೭. ಅಯ್ಯಾ ತ್ರಿಲೋಚನನೇ! ಸಪ್ತಮಿಯಲ್ಲಿ ರಥಾರೋಹಣಮಾಡಿರುವ ದೇವನ ದರ್ಶನಮಾಡಿ ಭಕ್ತಿಯಿಂದ ಶಕ್ತ್ಯನುಸಾರವಾಗಿ ವಿಧಿಪ್ರಕಾರವಾಗಿ ಪೂಜಿಸಿ ನಮಸ್ಕಾರಮಾಡಬೇಕು.

೮. ಅಯ್ಯಾ ಹರನೇ! ಚಿನ್ನದಿಂದ ರಥವನ್ನು ಮಾಡಿ ತಾಮ್ರದ ತಟ್ಟೆಯಲ್ಲಿಟ್ಟು ನಾಲ್ಕು ದಿಕ್ಕುಗಳಲ್ಲಿಯೂ ರತ್ನಗಳನ್ನು ಮೆಟ್ಟಿ ಮಂಡಲವನ್ನು ವ್ಯೋಮದಲ್ಲಿ ಪೂಜಿಸಿ ರಥದ ಮಧ್ಯದಲ್ಲಿಡಬೇಕು.

೯. ರತ್ನವನ್ನು ಮೆಟ್ಟುವಾಗ ಮಧ್ಯದಲ್ಲಿ ಪದ್ಮರಾಗವನ್ನೂ, ಪೂರ್ವಭಾಗದಲ್ಲಿ ಮುತ್ತನ್ನೂ, ದಕ್ಷಿಣದಲ್ಲಿ ಇಂದ್ರನೀಲಮಣಿಯನ್ನೂ, ಪಶ್ಚಿಮದಲ್ಲಿ ಪಚ್ಚೆಯ ರತ್ನವನ್ನೂ, ಉತ್ತರದಲ್ಲಿ ವಜ್ರ, ಹವಳ ಇವನ್ನೂ ಇಡಬೇಕು.

ಪ್ರವಾಲಮುತ್ತರೇ ರುದ್ರೈ ಸವಜ್ರಂ ವಿನ್ಯಸೇದ್ಬುಧಃ ।
ಶ್ವೇತಂ ಪೀತಾಸಿತಂ ಚಾಪಿ ರಕ್ತಂಚಾಂಧಕಸೂದನ ॥ ೧೦ ॥

ಏತಾನಿ ತಾತ ವಸ್ತ್ರಾಣಿ ದಿಕ್ಷು ಸರ್ವಾಸು ವಿನ್ಯಸೇತ್ ।
ಪತಾಕಾದಂಡಸಂಸ್ಥಾನಂ ಘಂಟಾಭರಣಭೂಷಿತಂ ॥ ೧೧ ॥

ಪುಷ್ಪದಾಮ್ಯೈರಲಂಕೃತ್ಯ ರಥಂ ರುದ್ರ ಸಮಂತತಃ ।
ಯಥಾನ್ಯಾಯಂ ಪೂಜಯಿತ್ವಾ ಭಾಸ್ಕರಾಯ ನಿವೇದಯೇತ್ ॥ ೧೨ ॥

ಭೋಜಯಿತ್ವಾಥ ವಾ ವಿಪ್ರಾನ್ ಆಚಾರ್ಯಾಯ ನಿವೇದಯೇತ್ ।
ಯೋಧೀತೇ ಸಪ್ತಮೀ ಕಲ್ಪಂ ಸೋಪಾಖ್ಯಾನಂ ಚ ಭಾರತ ॥ ೧೩ ॥

ಆಚಾರ್ಯಃ ಸ ದ್ವಿಜೋ ಜ್ಞೇಯೋ ವರ್ಣಾನಾಮನುಪೂರ್ವಶಃ ।
ಸೌರಾಣಾಂ ವೈಷ್ಣವಾನಾಂ ತು ಶೈವಾನಾಂ ಪಾರ್ವತೀಪ್ರಿಯ ॥ ೧೪ ॥

---

೧೦–೧೧. ಅಯ್ಯಾ ಅಂಧಕಾಸುರಧ್ವಂಸಕನಾದ ಶಿವನೇ! ಬಿಳುಪು, ಕಪ್ಪು, ಹಳದಿ, ಕೆಂಪು ಮುಂತಾದ ಬಣ್ಣದ ವಸ್ತ್ರಗಳನ್ನು ರಥ ಎಲ್ಲಾ ದಿಕ್ಕುಗಳಲ್ಲಿಯೂ ಕಟ್ಟಬೇಕು. ಮತ್ತು ಧ್ವಜದಂಡವನ್ನು ಘಂಟೆಗಳಿಂದಲೂ ಆಭರಣಗಳಿಂದಲೂ ಭೂಷಿತವಾಗಿ ಮಾಡಿ ನಿಲ್ಲಿಸಿ ರಥವನ್ನು ಸುತ್ತಲೂ ಹೂಮಾಲೆಗಳಿಂದ ಅಲಂಕರಿಸಬೇಕು.

೧೨. ನ್ಯಾಯಾನುಸಾರವಾಗಿ ಭಾಸ್ಕರನನ್ನು ಪೂರ್ವೋಕ್ತವಿಧಿಯಿಂದ ಪೂಜಿಸಿ ಪೂಜೆಯನ್ನು ಭಾಸ್ಕರನಿಗೆ ಸಮರ್ಪಣೆಮಾಡಬೇಕು.

೧೩. ಅನಂತರ ಬ್ರಾಹ್ಮಣರಿಗೆ ಸಂತರ್ಪಣೆಮಾಡಿಸಿ ಆಚಾರ್ಯರನ್ನು ಉಪಚರಿಸಿ ಸಂಭಾವನೆಯನ್ನು ಸಮರ್ಪಿಸಬೇಕು. ಅಯ್ಯಾ ರುದ್ರನೇ! ಯಾವನು ಉಪಾಖ್ಯಾನಸಹಿತವಾದ ಈ ಸಪ್ತಮೀ ಕಲ್ಪವನ್ನು ಓದುವನೋ,

೧೪. ಆ ಬ್ರಾಹ್ಮಣನು, ಸೌರರು, ವೈಷ್ಣವರು, ಶೈವರು ಇವರುಗಳೆಲ್ಲಿ ಎಲ್ಲಾ ಜಾತಿಗಳಿಗೂ ಕ್ರಮವಾಗಿ ಆಚಾರ್ಯನೆಂದು ತಿಳಿಯಬೇಕು ಎಂಬದಾಗಿ ಬ್ರಹ್ಮನು ಶಿವನಿಗೆ ಹೇಳಿದ್ದನ್ನು ಸುಮಂತುವು ಭರತಕುಲೋತ್ಪನ್ನನಾದ ಶತಾನೀಕನಿಗೆ ಹೇಳಿದನು.

**ಅಲಾಭೇ ತು ಸುವರ್ಣಸ್ಯ ರಥಂ ರಾಜತಮಾದಿಶೇತ್ ।**
**ತದಲಾಭೇ ತಾಮ್ರಮಯಂ ರಥಂ ವ್ಯೋಮ ಚ ಕಾರಯೇತ್ ॥ ೧೫ ॥**

**ಅಭಾವೇಚಾಪಿ ತಾಮ್ರಸ್ಯ ರಥಃ ಪಿಷ್ಟಮಯಃ ಸ್ಮೃತಃ ।**
**ಸಹಿರಣ್ಯಂ ಮಹಾದೇವ ತಾಮ್ರಭಾಜನಮಾಶ್ರಿತಂ ॥ ೧೬ ॥**

**ಕೌಶೇಯಯುಗ್ಮ ಸಹಿತಂ ಬ್ರಾಹ್ಮಣಾಯ ನಿವೇದಯೇತ್ ।**
**ಪೂರ್ವೋಕ್ತಾಯ ಮಹಾದೇವ ವಾಚಕಾಯ ಮಹಾತ್ಮನೇ ॥ ೧೭ ॥**

**ಪಂಚರತ್ನಸಮಾಯುಕ್ತಂ ಶುಭಗಂಧಾಧಿವಾಸಿತಂ ।**
**ಸ್ವಶಕ್ತ್ಯಾ ತು ವಿರೂಪಾಕ್ಷ ವಿತ್ತಶಾಠ್ಯಂ ವಿವರ್ಜಯೇತ್ ॥ ೧೮ ॥**

**ಏಷಾ ಪುಣ್ಯಾ ಪಾಪಹರಾ ರಥಾಹ್ವಾ ಸಪ್ತಮೀ ಹರ ।**
**ಕಥಿತಾ ತೇ ಮಯಾ ರುದ್ರ ಮಹತೀಯಂ ಪ್ರಕೀರ್ತಿತಾ ॥ ೧೯ ॥**

---

೧೫. ರಥ ಮಾಡಿಸುವುದಕ್ಕೆ ಸುವರ್ಣ ಸಿಕ್ಕದಿದ್ದರೆ ಬೆಳ್ಳಿಯ ರಥವನ್ನಾಗಲಿ ಅದೂ ಸಿಕ್ಕದಿದ್ದರೆ ತಾಮ್ರದ ರಥವನ್ನು ಮಾಡಬೇಕು. ರಥಸ್ಥವಾಗಿ ಮಧ್ಯೇ ವ್ಯೋಮ ಸಹಿತವಾಗಿ ಇರುವ ಮಂಟಪವನ್ನು ರಚಿಸಬೇಕು.

೧೬-೧೭. ತಾಮ್ರವೂ ಸಿಕ್ಕದಿದ್ದರೆ ಹಿಟ್ಟಿನಿಂದ ರಥಮಾಡಬೇಕೆಂದು ಹೇಳಿದೆ. ಅಯ್ಯಾ ಮಹಾದೇವನೇ! ಹೀಗೆ ಮಾಡಿಸಿದ ರಥವನ್ನು ಪಂಚರತ್ನಯುಕ್ತವಾಗಿ ಸುಗಂಧದ್ರವ್ಯದಲ್ಲಿ ಅಧಿವಾಸಮಾಡಿಸಬೇಕು.

೧೮. ಬಳಿಕ ಅದನ್ನು ತನ್ನ ಶಕ್ತ್ಯನುಸಾರವಾದ ಹಿರಣ್ಯದಕ್ಷಿಣಾಸಮೇತ ವಾಗಿ ತಾಮ್ರ ಪಾತ್ರೆಯಲ್ಲಿರಿಸಿ ಎರಡು ರೇಷ್ಮೆ ವಸ್ತ್ರವನ್ನು ಹೊದ್ದಿಸಿ ಅದು ಸಹಿತವಾಗಿ ಹಿಂದೆ ಹೇಳಿದಂತೆ ಪುರಾಣ ಹೇಳತಕ್ಕ ಮಹಾತ್ಮನಿಗೆ ದಾನಕೊಡಬೇಕು. ಅಯ್ಯಾ ವಿರೂಪಾಕ್ಷನೇ! ಇದರಲ್ಲಿ ತನಗೆ ಅನುಕೂಲವಿದ್ದಷ್ಟನ್ನೂ ಮಾಡಬೇಕು. ದ್ರವ್ಯಾನು ಕೂಲವಿದ್ದೂ ವೆಚ್ಚಮಾಡುವುದಕ್ಕೆ ಹಿಂಜರಿಯಬಾರದು.

೧೯. ಅಯ್ಯಾ ಹರನೇ! ಈ ರಥಸಪ್ತಮೀವ್ರತಾಚರಣವು ಪಾಪನಾಶಕವೂ, ಪುಣ್ಯಕರವೂ ಆದುದು. ಪೂಜ್ಯವಾದ ಸಪ್ತಮಿಯ ವಿಚಾರವನ್ನು ನಾನು ನಿನಗೆ ಹೇಳಿ ಆಯಿತು.

ಸ್ನಾನಂ ದಾನಮಥೋ ಹೋಮಃ ಪೂಜಾ ಗ್ರಹಪತೇರ್ಹರ ।
ಶತಸಾಹಸ್ರಂ ಭವೇದಸ್ಯಾಂ ಕೃತಂ ಭೂಧರಪೂಜಿತ ॥ ೨೦ ॥

ಏವಮೇಷಾ ಪುಣ್ಯತಮಾ ಮಾಘೇ ಪ್ರೋಕ್ತಾ ತು ಸಪ್ತಮೀ ।
ಯಾಮುಪೋಷ್ಯ ನರೋ ಭಕ್ತ್ಯಾ ಸೂರ್ಯಸ್ಯಾನುಚರೋ ಭವೇತ್ ॥ ೨೧ ॥

ಬ್ರಾಹ್ಮಣೋ ಯಾತಿ ದೇವತ್ವಂ ಕ್ಷತ್ರಿಯೋ ವಿಪ್ರತಾಂ ವ್ರಜೇತ್ ।
ವೈಶ್ಯಃ ಕ್ಷತ್ರಿಯತಾಂ ಯಾತಿ ಶೂದ್ರೋ ವೈಶ್ಯತ್ವಮೇತಿ ಚ ॥ ೨೨ ॥

ವಿದ್ಯಾವಿನಯಸಂಪನ್ನಂ ಭರ್ತಾರಂ ಕನ್ಯಕಾ ಲಭೇತ್ ।
ಅಪುತ್ರಾ ಸ್ತ್ರೀ ಸುತಂ ವಿಂದೇತ್ ಸೌಭಾಗ್ಯಂ ಚ ಗಣಾಧಿಪ ॥ ೨೩ ॥

---

೨೦. ಅಯ್ಯಾ ವರಾಹರೂಪಿಯಾದ ವಿಷ್ಣುವಿನಿಂದ ಪೂಜಿತನಾದ ರುದ್ರನೇ! ಈ ಸಪ್ತಮಿಯಲ್ಲಿ ಸೂರ್ಯಪ್ರೀತ್ಯರ್ಥವಾಗಿ ಮಾಡುವ ಸ್ನಾನ, ದಾನ, ಪೂಜೆ, ಹೋಮ ಇವೆಲ್ಲವೂ ಸಹಸ್ರಗುಣವಾಗಿ ಫಲದಾಯಕವಾಗುವುದು.

೨೧. ಹೀಗೆ ಮಾಘಶುದ್ಧ ಸಪ್ತಮಿಯು ಅತ್ಯಂತ ಪುಣ್ಯಕರವೆಂದು ಹೇಳಿದೆ. ಈ ಸಪ್ತಮಿಯಲ್ಲಿ ಭಕ್ತಿಯಿಂದ ಉಪವಾಸಮಾಡಿದವನು ಸೂರ್ಯಸಾನ್ನಿಧ್ಯವನ್ನು ಪಡೆಯುತ್ತಾನೆ.

೨೨. ಈ ರಥಸಪ್ತಮಿಯ ದಿನದಲ್ಲಿ ಭಕ್ತಿಯಿಂದ ಉಪವಾಸಮಾಡುವುದರಿಂದ ಶೂದ್ರನು ಅದಕ್ಕಿಂತ ಉತ್ತಮವರ್ಣನೆನಿಸಿ ವೈಶ್ಯನಾಗಿಯೂ, ವೈಶ್ಯನು ಕ್ಷತ್ರಿಯನಾಗಿಯೂ, ಕ್ಷತ್ರಿಯನು ಬ್ರಾಹ್ಮಣನಾಗಿಯೂ, ಬ್ರಾಹ್ಮಣನು ದೇವತ್ವವನ್ನು ಪಡೆದವನಾಗಿಯೂ ಆಗುವರು.

೨೩. ಕನ್ಯೆಯಾದವಳು ರಥಸಪ್ತಮ್ಯಂಗವಾದ ಈ ಉಪವಾಸಮಾಡಿದರೇ ವಿದ್ಯಾವಂತನೂ ವಿನಯಸಂಪನ್ನನೂ ಆದ ಗಂಡನನ್ನು ಪಡೆಯುವಳು. ಅಯ್ಯಾ ಪ್ರಮಥಗಣಾಧಿಪನೇ! ಮಕ್ಕಳಿಲ್ಲದ ಸುಮಂಗಲಿಯು ಮಗನನ್ನು ಪಡೆಯುವುದಲ್ಲದೆ ಚಿರಸೌಭಾಗ್ಯವನ್ನೂ ಪಡೆಯುವಳು.

**ವಿಧವಾ ಚಾಪ್ಯುಪೋಷ್ಯೇಮಾಂ ಸಪ್ತಮೀಂ ತ್ರಿಪುರಾಂತಕ ।**
**ನಾನ್ಯಜನ್ಮಸು ವೈಧವ್ಯಂ ಪ್ರಾಪ್ನುಯಾತ್ಪಾರ್ವತೀಪ್ರಿಯ ॥ ೨೪ ॥**

**ಬಹುಪುತ್ರಾ ಬಹುಧನಾ ಪತ್ಯುರ್ವಲ್ಲಭತಾಂ ವ್ರಜೇತ್ ।**
**ಯಾವದ್ವೈ ಸಪ್ತಜನ್ಮಾನಿ ಸ್ತ್ರಿಯಸ್ತು ಪುರುಷಾಸ್ತಥಾ ॥ ೨೫ ॥**

**ಏವಂ ವಿಧಾ ಸಪ್ತಮೀ ತೇ ಕಥಿತಂ ವೃಷಭಧ್ವಜ ।**
**ಯಾಂ ಶ್ರುತ್ವಾ ಮಾನವೋ ಭಕ್ತ್ಯಾ ಮುಚ್ಯತೇ ಬ್ರಹ್ಮಹತ್ಯಯಾ ॥ ೨೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀಕಲ್ಪೇ ರಥಸಪ್ತಮೀ ಮಾಹಾತ್ಮ್ಯವರ್ಣನಂ ನಾಮ ಏಕೋನ ಷಷ್ಟಿತಮೋಽಧ್ಯಾಯಃ.**

---

೨೪. ಪಾರ್ವತೀಪ್ರಿಯನಾದ ತ್ರಿಪುರಾರಿಯೇ! ಗಂಡನಿಲ್ಲದವಳು ಈ ರಥ ಸಪ್ತಮಿಯಲ್ಲಿ ಉಪವಾಸಮಾಡಿದರೆ ಮುಂದಿನ ಜನ್ಮಗಳಲ್ಲಿ ಪತಿವಿಹೀನೆಯಾಗುವುದಿಲ್ಲ.

೨೫. ಸುಮಂಗಲಿಯು ಈ ರಥಸಪ್ತಮಿಯಲ್ಲಿ ಉಪವಾಸಮಾಡುವುದರಿಂದ ಮುಂದೆ ಏಳು ಜನ್ಮಗಳಲ್ಲಿ ಬಹುಪುತ್ರವತಿಯೂ ಬಹು ಧನವಂತೆಯೂ ಆಗಿ ಗಂಡನಿಗೆ ಪ್ರಿಯತಮೆಯಾಗುವಳು ಪುರುಷರಿಗೂ ಹೀಗೆಯೇ ಅವರಿಗೆ ಅನುರೂಪವಾದ ಫಲವಾಗುವುದು.

೨೬. ಅಯ್ಯಾ ವೃಷಭಧ್ವಜನೇ! ಈರೀತಿಯಾದ ಸಪ್ತಮೀವ್ರತವನ್ನು ನಿನಗೆ ಹೇಳಿದುದಾಯಿತು. ಇದನ್ನು ಕೇಳಿದ ಮನುಷ್ಯನು ಬ್ರಹ್ಮಹತ್ಯಾದೋಷದಿಂದ ಮುಕ್ತನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ -ರಥ ಸಪ್ತಮೀ ಮಹಾತ್ಮೆಯ ವರ್ಣನೆಯೆಂಬ ಐವಂತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಷ್ಟಿತಮೋಽಧ್ಯಾಯಃ

---

॥ ಸುಮಂತುರುವಾಚ ॥

ಇತ್ಯುಕ್ತ್ವಾ ಸ ಜಗಾಮಾಶು ಸುರಜ್ಯೇಷ್ಠಸ್ತ್ರಿಲೋಚನಂ ।
ರಥಯಾತ್ರಾಂ ಮಹಾಬಾಹೋ ಸೂರ್ಯಸ್ಯೇತ್ಯಮಿತೌಜಸಃ ॥ ೧ ॥

॥ ಶತಾನೀಕ ಉವಾಚ ॥

ಯಮಾರಾಧ್ಯಂ ಜಗನ್ನಾಥಂ ಮಮ ಪೂರ್ವಪಿತಾಮಹಾಃ ।
ತುಷ್ಟ್ಯರ್ಥಂ ಬ್ರಾಹ್ಮಣಾನಾಂ ತು ದದುರನ್ನಂ ಚತುರ್ವಿಧಂ ॥ ೨ ॥

---

## ಅರವತ್ತನೆಯ ಅಧ್ಯಾಯ

೧. ಅಮಿತ ಪರಾಕ್ರಮಿಯಾದ ಸೂರ್ಯನ ರಥಯಾತ್ರಾ ವಿಧಾನವನ್ನು ಸುರಜ್ಯೇಷ್ಠನಾದ ಬ್ರಹ್ಮನು ಶಿವನಿಗೆ ಈ ರೀತಿಯಾಗಿ ಹೇಳಿ ಜಾಗ್ರತೆಯಾಗಿ ಹೊರಟು ಹೋದನು ಎಂಬದಾಗಿ ಸುಮಂತುಮುನಿವರ್ಯರು ಹೇಳಿದರು.

೨. ಇದನ್ನು ಕೇಳಿ ಶತಾನೀಕನು ಹೇಳುತ್ತಾನೆ—ನನ್ನ ಪೂರ್ವ ಪಿತಾಮಹರು ಲೋಕೇಶ್ವರನಾದ ಸೂರ್ಯನನ್ನು ಆರಾಧನಮಾಡಿ ಬ್ರಾಹ್ಮಣರಿಗೆ ಸಂತೋಷವುಂಟು ಮಾಡುವಂತೆ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯಗಳೆಂಬ ನಾಲ್ಕುವಿಧವಾದ ಅನ್ನ ವನ್ನು ದಾನಮಾಡಿದರು.

**ತಸ್ಯ ದೇವಸ್ಯ ಮಹಾತ್ಮ್ಯಂ ಶ್ರುತಂ ಚ ಬಹುಶೋ ಮಯಾ ।**
**ದೇವರ್ಷಿಸಿದ್ಧಮನುಜೈಃ ಸ್ತುತಸ್ಯ ಹಿ ದಿನೇ ದಿನೇ ॥ ೩ ॥**

**ಕಃ ಸ್ತೋತುಮೀಶಸ್ತಮಜಂ ಯಸ್ಯೈತತ್ಸಚರಾಚರಂ ।**
**ಅವ್ಯಯಸ್ಯಾಪ್ರಮೇಯಸ್ಯ ವಿಬುದ್ಧ್ಯೇತೋದಯಾಜ್ಜಗತ್ ॥ ೪ ॥**

**ಕರಾಭ್ಯಾಂ ಯಸ್ಯ ದೇವೇಶೌ ಕವಿಷ್ಣೂ ಲೋಕಪೂಜಿತೌ ।**
**ಉತ್ಪನ್ನೌ ದ್ವಿಜಶಾರ್ದೂಲ ಲಲಾಟಾತ್ ತ್ರಿಪುರಾಂತಕಃ ॥ ೫ ॥**

**ತಸ್ಯ ದೇವಸ್ಯ ಕೈಃ ಶಕ್ತ್ಯಾ ವಕ್ತುಂಸರ್ವಾ ವಿಭೂತಯಃ ।**
**ಸೋಽಹಮಿಚ್ಛಾಮಿ ದೇವಸ್ಯ ತಸ್ಯ ಸರ್ವಾತ್ಮನಾ ದ್ವಿಜ ॥ ೬ ॥**

**ಶ್ರೋತುಮಾರಾಧನಂ ಯೇನ ನಿಸ್ತರೇಯಂ ಭವಾರ್ಣವಂ ।**
**ಕೇನೋಪಾಯೇನ ಮಂತ್ರೈರ್ವಾ ರಹಸ್ಯೈಃ ಪರಿಚರ್ಯಯಾ ॥ ೭ ॥**

---

೩. ದೇವತೆಗಳು, ಋಷಿಗಳು, ಸಿದ್ಧರು, ಮಾನವರು ಇವರಿಂದ ನಿತ್ಯವೂ ಸ್ತುತಿಸಲ್ಪಡುತ್ತಿರುವ ಆ ಸೂರ್ಯನ ಮಹಾತ್ಮೆಯನ್ನು ನಾನು ಬಹುಪ್ರಕಾರವಾಗಿ ಕೇಳಿದ್ದೇನೆ.

೪. ನಾಶರಹಿತನೂ ತಿಳಿಯಲಶಕ್ಯನೂ ಆದ ಸೂರ್ಯನ ಉದಯದಿಂದ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲಾ ಎಚ್ಚರ ಹೊಂದುವುದು. ಅಂತಹ ಉತ್ಪತ್ತಿ ರಹಿತನಾದ ಸೂರ್ಯನನ್ನು ಸ್ತುತಿಸಲು ಯಾವನು ತಾನೇ ಶಕ್ತನಾದಾನು.

೫. ಅಯ್ಯಾ ದ್ವಿಜಶ್ರೇಷ್ಠನೇ ! ತ್ರಿಪುರಾಸುರ ನಾಶಕನಾದ ಶಿವನು ಯಾವನ ಹಣೆಯಿಂದ ಹುಟ್ಟಿದನೋ, ಲೋಕಪೂಜಿತರೂ ದೇವಶ್ರೇಷ್ಠರೂ ಆದ ಬ್ರಹ್ಮವಿಷ್ಣುಗಳು ಯಾವನ ಎರಡು ಕೈಗಳಿಂದ ಹುಟ್ಟಿದರೋ, ಅಂತಹ ಸ್ವಾಮಿಯ ಎಲ್ಲಾ ಅವತಾರ ಸಂಪತ್ತಿಗಳನ್ನೂ ಹೇಳುವುದು ಯಾರಿಗೆ ತಾನೇ ಸಾಧ್ಯವು ?

೬. ಈಗ ನಾನು ಅಂತಹ ಆ ಸ್ವಾಮಿಯ ಆರಾಧನಕ್ರಮವನ್ನು ಸರ್ವಪ್ರಯತ್ನದಿಂದಲೂ ಕೇಳಲು ಅಪೇಕ್ಷಿಸುತ್ತೇನೆ. ಅದರಿಂದ ನಾನು ಸಂಸಾರ ಸಮುದ್ರದಿಂದ ಪಾರಾಗಬಹುದು.

೭. ಯಾವ ಉಪಾಯದಿಂದ ಇದು ಸಾಧ್ಯ ? ಯಾವ ಮಂತ್ರಗಳಿಂದ ಅಥವಾ ಯಾವ ಬಗೆಯ ಸೇವೆಯಿಂದ ಇದು ನೆರವೇರೀತು ? ಮತ್ತು ಯಾವ ರಹಸ್ಯಗಳಿಂದ ಇದು ಸಿದ್ಧಿಸುವುದು ?

ದಾನೈರ್ವ್ರತೋಪವಾಸೈರ್ವಾ ಹೋಮೈರ್ಜಾಪ್ಯೈರಥಾಪಿ ವಾ ।
ಆರಾಧಿತಃ ಸಮಸ್ತಾನಾಂ ಕ್ಲೇಶಾನಾಂ ಹಾನಿದೋ ಭವೇತ್ ॥ ೮ ॥

ಸೈಕಾ ವಿದ್ಯಾ ಹಿ ವಿದ್ಯಾನಾಂ ಯಯಾ ತುಷ್ಯತಿ ಸರ್ವಕೃತ್ ।
ಶ್ರುತಾನಾಮಪಿ ತತ್ಪುಣ್ಯಂ ಯತ್ರ ಭಾನೋಃ ಪ್ರಕೀರ್ತನಂ ॥ ೯ ॥

ರಹಸ್ಯಾನಾಂ ರಹಸ್ಯಂ ತತ್ ಯೇನಃ ಹಂಸಃ ಪ್ರಸೀದತಿ ।
ಏಕಃ ಶ್ರೇಷ್ಠತಮೋ ಮಂತ್ರಃ ತದೇಕಂ ಪರಮಂ ವ್ರತಂ ॥ ೧೦ ॥

ಉಪೋಷಿತಂ ಚ ತಚ್ಛ್ರೇಷ್ಠಂ ಯೇನ ಭಾನುಃ ಪ್ರಸೀದತಿ ।
ಸಾ ಚೈಕಾ ರಸನಾ ಧನ್ಯಾ ಮಾರ್ತಂಡಂ ಸ್ತೌತಿ ಯಾ ಸದಾ ॥ ೧೧ ॥

ತದೇಕಂ ನಿರ್ಮಲಂ ಚಿತ್ತಂ ಯದ್ಗತಂ ಸತತಂ ರವೌ ।
ಶ್ಲಾಘ್ಯಾನಾಮಪಿ ತೌ ಶ್ಲಾಘ್ಯಾವಿಹಲೋಕೇ ಪರತ್ರ ಚ ॥ ೧೨ ॥

---

೮. ಯಾವ ದಾನಗಳು, ಯಾವ ವ್ರತೋಪವಾಸಗಳು, ಯಾವ ಹೋಮಗಳು ಅಥವಾ ಜಪಗಳು ಇವುಗಳಿಂದ ಆರಾಧಿತನಾದರೆ ಆ ಸ್ವಾಮಿಯು ನಮ್ಮೆಲ್ಲರ ಸರ್ವಕ್ಲೇಶಗಳನ್ನೂ ನಾಶಮಾಡಿಯಾನು ?

೯. ಸರ್ವವನ್ನೂ ಸೃಜಿಸಿದ ಭಗವಂತನು ಯಾವುದರಿಂದ ತುಷ್ಟನಾಗುವನೋ ಅದೊಂದೇ ವಿದ್ಯೆಗಳೊಳಗೆ ನಿಜವಾದ ವಿದ್ಯೆಯೆನಿಸುವುದು. ಸೂರ್ಯಕೀರ್ತನ ನಡೆಯುವ ಸ್ಥಳಕ್ಕೆ ಹೋಗಿ ಅದನ್ನು ಕೇಳಿದವರಿಗೆ ಆ ಪುಣ್ಯವು ಲಭಿಸುವುದು.

೧೦. ಸೂರ್ಯನು ಯಾವ ಮಂತ್ರಜಪದಿಂದ ಪ್ರಸನ್ನನಾಗುವನೋ ಅದೇ ರಹಸ್ಯಗಳಲ್ಲಿ ಪರಮರಹಸ್ಯವಾದ ಮಂತ್ರ. ಯಾವುದರಿಂದ ಸೂರ್ಯನು ಪ್ರಸನ್ನನಾಗುವನೋ ಅಂಥಾದೊಂದೇ ಶ್ರೇಷ್ಠತಮವಾದ ವ್ರತವು.

೧೧. ಸೂರ್ಯಪ್ರಸನ್ನತೆಗಾಗಿ ಮಾಡುವ ಉಪವಾಸವೇ ಶ್ರೇಷ್ಠವು. ಯಾರ ನಾಲಗೆಯು ಸದಾ ಸೂರ್ಯನನ್ನು ಸ್ತುತಿಸುವುದೋ ಅದೇ ಧನ್ಯವಾದುದು.

೧೨. ಯಾವ ಚಿತ್ತವು ಸದಾ ಸೂರ್ಯನಲ್ಲಿ ಆಸಕ್ತಿಹೊಂದಿರುವುದೋ ಅಂತಹದೊಂದೇ ನಿರ್ಮಲಚಿತ್ತವು. ಸೂರ್ಯನನ್ನು ಪೂಜಿಸುವ ಹಸ್ತಗಳೇ ಇಹಲೋಕದಲ್ಲೂ ಪರಲೋಕಲ್ಲೂ ಸಹ ಶ್ಲಾಘ್ಯವಸ್ತುಗಳು.

ಯೌ ಸದಾ ದ್ವಿಜಶಾರ್ದೂಲ ಭಾನೋಃ ಪೂಜಾಕರೌ ಕರೌ ।
ತದೇಕಂ ಕೇವಲಂ ಧನ್ಯಂ ಶರೀರಂ ಸರ್ವಜಂತುಷು ॥ ೧೩ ॥

ಯದೇವ ಪುಲಕೋದ್ಭಾಸಿ ಭಾನೋರ್ನಾಮಾನುಕೀರ್ತನೇ ।
ಸಾ ಜಿಹ್ವಾ ಕಂಠತಾಲೂಕಮಥವಾ ಪ್ರತಿಜಿಹ್ವಿಕಾ ॥ ೧೪ ॥

ಅಥವಾ ಸಾಪರೋ ರೋಗೋ ಯಾ ನ ವಕ್ತಿ ರವೇರ್ಗುಣಂ ।
ನವದ್ವಾರಾಣಿ ಸಂತ್ಯಸ್ಮಿನ್'ಪುರೇ ಪುರುಷಸತ್ತಮ ॥ ೧೫ ॥

ಪ್ರಾಕಾರೈಸ್ತ್ರ್ವೃತೇ ವಿಷ್ವಗ್ವೃಥಾ ತಾನಿ ವಿದುರ್ಬುಧಾಃ ।
ದತ್ವಾವಧಾನಂ ಯಚ್ಛಬ್ದೇ ವಿನೈವ ರವಿಸಂಸ್ತುತಿಂ ॥ ೧೬ ॥

ಶ್ರೇಯಸಾಂ ನ ಹಿ ಸಂಪ್ರಾಪ್ತೌ ಪುರುಷಾಣಾಂ ವಿಚೇಷ್ಟಿತಂ ।
ಜನ್ಮನ್ಯ ವಿಫಲಾ ಸೇವಾ ಕೃತಾ ಯಾಶ್ರಿತ್ಯ ಭಾಸ್ಕರಮ್ ॥ ೧೭ ॥

---

೧೩. ಸೂರ್ಯನಾಮವನ್ನು ಉಚ್ಚರಿಸುವುದರಿಂದ ರೋಮಾಂಚಿತವಾಗಿ ಶೋಭಿಸುವ ಶರೀರವೇ ಶ್ರೇಷ್ಠಶರೀರವು. ಉಚ್ಚರಿಸುವುದೇ ಶ್ರೇಷ್ಠವಾದ ನಾಲಗೆ.

೧೪ ಅದೇ ಶ್ರೇಷ್ಠವಾದ ದವಡೆ. ಯಾವುದು ಹಾಗೆ ನುಡಿಯುವುದಿಲ್ಲವೋ ಅದು ದುಷ್ಟವಾದ ನಾಲಗೆ.

೧೫. ಯಾವ ನಾಲಗೆಯು ಸೂರ್ಯದೇವನ ಗುಣವನ್ನು ಹೇಳುವುದಿಲ್ಲವೋ ಆ ನಾಲಗೆಗೆ ಅದೇ-ರೋಗವಲ್ಲದೇ ಬೇರೆ ರೋಗವಿಲ್ಲ. ಎಲೈ ಪುರುಷಶ್ರೇಷ್ಠನೇ! ಈ ಶರೀರದಲ್ಲಿ ಕಣ್ಣು ಎರಡು, ಕಿವಿ ಎರಡು, ಮೂಗು ಹೊಳ್ಳೆ ಎರಡು, ಬಾಯಿ, ಮಲದ್ವಾರ. ಮೂತ್ರದ್ವಾರ ಎಂಬ ಒಂಬತ್ತು ದ್ವಾರಗಳು ಇವೆ.

೧೬. ಸುತ್ತಲೂ ಪ್ರಾಕಾರಗಳ ಆವರಣವಿದ್ದರೂ ಅವುಗಳು ವ್ಯರ್ಥವೆಂದು ವಿದ್ವಾಂಸರು ತಿಳಿದಿದ್ದಾರೆ. ಮನದಲ್ಲಿ ಸೂರ್ಯನನ್ನು ಸ್ತುತಿಸದೇ ಕೇವಲ ಶಬ್ದ ಮಾತ್ರದಲ್ಲಿ ಅವಧಾನವಿಡುವುದು ವ್ಯರ್ಥವು.

೧೭. ಪುರುಷರ ಈ ಬಗೆಯ ವ್ಯಾಪಾರವು ಶ್ರೇಯಃಪ್ರಾಪ್ತಿಗೆ ಸಾಧನವಾಗುವುದಿಲ್ಲ. ಸೂರ್ಯಾಶ್ರಿತವಾಗಿ ನಡೆಸುವ ಸೇವೆಯೇ ಜನ್ಮಸಾರ್ಥಕವಾದುದು.

**ದುರ್ಗಸಂಸಾರಕಾಂತಾರಮಪಾರಮಭಿಧಾವತಾಂ ।**
**ಏಕೋ ಭಾನುನಮಸ್ಕಾರಃ ಸಂಸಾರಾರ್ಣವತಾರಕಃ ॥ ೧೮ ॥**

**ರತ್ನಾನಾಮಾಕರೋ ಮೇರುಃ ಸರ್ವಾಶ್ಚರ್ಯಮಯಂ ನಭಃ ।**
**ತೀರ್ಥಾನಾಮಾಶ್ರಯೋ ಗಂಗಾ ದೇವಾನಾಮಾಶ್ರಯೋ ರವಿಃ ॥ ೧೯ ॥**

**ಏವಮಾದಿಗುಣೋ ಭೋಗೋ ಭಾನೋರಮಿತ ತೇಜಸಃ ।**
**ಶ್ರುತೋ ಮೇ ಬಹುಶಃ ಸಿದ್ಧೈ ರ್ಗೀಯಮಾನೈಸ್ತಥಾಮರೈಃ ॥ ೨೦ ॥**

**ಸೋಽಹಮಿಚ್ಛಾಮಿ ತಂ ದೇವಂ ಸಪ್ತಲೋಕಪರಾಯಣಂ ।**
**ದಿವಾಕರಮಶೇಷಸ್ಯ ಜಗತೋ ಹೃದ್ಯವಸ್ಥಿತಂ ॥ ೨೧ ॥**

**ಆರಾಧಯಿತುಮೀಶೇ ತಂ ಭಾಸ್ಕರಂ ಚಾಮಿತೌಜಸಂ ।**
**ಮಾರ್ತಂಡಂ ಭುವನಾಧಾರಂ ಸ್ಮೃತಮಾತ್ರಾಘದಾರಿಣಂ ॥ ೨೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀಕಲ್ಪೇ ಸೂರ್ಯಪರಿಚರ್ಯಾವರ್ಣನಂ ನಾಮ ಷಷ್ಟಿತಮೋಽಧ್ಯಾಯಃ.**

---

೧೮. ದುರ್ಗಮವೂ, ಅಪಾರವೂ ಆದ ಸಂಸಾರವೆಂಬ ಕಾಡಿನಲ್ಲಿ ತೊಳಲುವವರಿಗೆ ಸೂರ್ಯನಮಸ್ಕಾರವೊಂದೇ ಸಂಸಾರದಿಂದ ಉದ್ಧರಿಸುವ ತಾರಕವಾಗಿದೆ.

೧೯. ಮೇರುಪರ್ವತವು ರತ್ನಗಳಿಗೆ ಆಶ್ರಯಸ್ಥಾನವಾಗಿರುವಂತೆ ಆಕಾಶವು ಎಲ್ಲಾ ಬಗೆಯ ಆಶ್ಚರ್ಯಗಳಿಗೂ ಆಶ್ರಯವು. ಗಂಗೆಯು ಸರ್ವತೀರ್ಥಗಳಿಗೂ ಆಶ್ರಯಳು. ಸೂರ್ಯನು ಸರ್ವದೇವತೆಗಳಿಗೂ ಆಶ್ರಯನು.

೨೦. ಇವೇ ಮೊದಲಾದ ಮಹಾ ತೇಜಸ್ವಿಯಾದ ಸೂರ್ಯನ ಗುಣಗಳ ಸಮೂಹವನ್ನು ಸಿದ್ಧರೂ ದೇವತೆಗಳೂ ಸ್ತುತಿಸುತ್ತಿರುವರೆಂದು ಕೇಳಿರುವೆನು.

೨೧. ಏಳುಲೋಕಗಳಿಗೂ ಆಶ್ರಯನಾದ ಸೂರ್ಯದೇವನು ಸಮಸ್ತ ಪ್ರಪಂಚದ ಜನರ ಹೃದಯದಲ್ಲೂ ಇರಬೇಕೆಂದು ನಾನು ಆಶಿಸುವೆನು.

೨೨. ಅಮಿತವಾದ ಪರಾಕ್ರಮವುಳ್ಳ ಆ ಸೂರ್ಯನನ್ನು ಆರಾಧಿಸಬೇಕೆಂದು ನಾನು ಕೋರುವೆನು. ಆ ಮಾರ್ತಂಡನು ಲೋಕಾಧಾರನೂ ಸ್ಮರಣಮಾತ್ರದಿಂದ ಪಾಪನಾಶಕನೂ ಆಗಿರುವನು. ಅಂತಹ ಸೂರ್ಯನನ್ನು ಪೂಜಿಸಲು ಆಶಿಸುತ್ತೇನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೂರ್ಯಪರಿಚರ್ಯಾ ವರ್ಣನೆಯೆಂಬ ಅರವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಷಷ್ಠಿತಮೋಽಧ್ಯಾಯಃ

॥ ಸುಮಂತುರುವಾಚ ॥

ತದೇಕಮಕ್ಷರಂ ಧಾಮ ಪರಂ ಸದಸತೋರ್ಮಹತ್ ।
ಭೇದಾಭೇದಸ್ವರೂಪಸ್ಥಂ ಪ್ರಣಿಪತ್ಯ ರವಿಂ ನೃಪ ॥ ೧ ॥

ಪ್ರವಕ್ಷ್ಯಾಮಿ ಯಥಾಪೂರ್ವಂ ವಿರಿಂಚೇನ ಮಹಾತ್ಮನಾ ।
ಋಷೀಣಾಂ ಕಥಿತಂ ಪೂರ್ವಂ ತಂ ನಿಬೋಧ ನರಾಧಿಪ ॥ ೨ ॥

---

## ಅರವತ್ತೊಂದನೆಯ ಅಧ್ಯಾಯ

೧. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ, ರಾಜನೇ! ಕೇಳು, ತಚ್ಛಬ್ದವಾಚ್ಯವೂ ಅದ್ವಿತೀಯವೂ, ನಾಶರಹಿತವೂ, ಮುಮುಕ್ಷುಗಳಿಗೆ ಪ್ರಾಪ್ಯ ಸ್ವರೂಪವೂ, ಕಾರ್ಯರೂಪವಾದ ಸ್ಥೂಲವೂ (ಎಂದರೆ ವ್ಯಕ್ತವೂ) ಕಾರಣರೂಪವಾದ ಸೂಕ್ಷ್ಮವೂ (ಎಂದರೆ ಅವ್ಯಕ್ತವೂ) ಆದ; ಆಕಾರ ಇತ್ಯಾದಿಗಳಿಂದ ವ್ಯವಹರಿಸಲ್ಪಡುವುದು, ಮಾಯಾಸ್ವರೂಪ, ಇವೆರಡಕ್ಕೂ ಅತಿರಿಕ್ತವಾದುದೂ; ಕಾರ್ಯ ಕಾರಣಕ್ಕೆ ವ್ಯತಿರಿಕ್ತವಾದುದು. ಮಹತ್ ಎಂದರೆ ವ್ಯಾಪಕವಾಗಿರುವುದು. ಕಾರ್ಯದಲ್ಲಿಯೂ ಕಾರಣದಲ್ಲಿಯೂ ಅನುಷ್ಠಾನತ್ವೇನ ಅನುಗತವಾದುದೂ, ಆದ ಪರಬ್ರಹ್ಮ ಸ್ವರೂಪನಾದ ಸೂರ್ಯನನ್ನು ನಮಸ್ಕರಿಸಿ.

೨. ಪೂರ್ವದಲ್ಲಿ ಮಹಾತ್ಮನಾದ ಬ್ರಹ್ಮನು ಋಷಿಗಳಿಗೆ ಯಾವುದನ್ನು ತಿಳಿಸಿದನೋ ಅದನ್ನೇ ಈಗ ನಾನು ತಿಳಿಸುವೆನು ಕೇಳು.

ಆರಾಧಾನಾಯ ಸವಿತುಃ ಮಹಾತ್ಮಾ ಪದ್ಮಸಂಭವಃ ।
ಯೋಗಂ ಬ್ರಹ್ಮಪರಂ ಪ್ರಾಹ ಮಹರ್ಷೀಣಾಂ ಯಥಾ ಪ್ರಭುಃ　॥ ೩ ॥

ಸಮಸ್ತವೃತ್ತಿಸಂರೋಧಾತ್ ಕೈವಲ್ಯಪ್ರತಿಪಾದಕಂ ।
ತಥಾ ಜಗತ್ಪತಿರ್ಬ್ರಹ್ಮಾ ಪ್ರಣಿಪತ್ಯ ಮಹರ್ಷಿಭಿಃ　॥ ೪ ॥

ಸರ್ವೈಃ ಕಿಲೋಕ್ತೋ ಭಗವಾನ್ ಆತ್ಮಯೋನಿಃ ಪ್ರಜಾಹಿತಂ ।
ಯೋಯಂ ಯೋಗೋ ಭಗವತಾ ಪ್ರೋಕ್ತೋ ವೃತ್ತಿನಿರೋಧಜಃ　॥ ೫ ॥

ಪ್ರಾಪ್ತುಂ ಶಕ್ಯಃ ಸ ತ್ವನೇಕೈಃ ಜನ್ಮಭಿರ್ಜಗತಃ ಪತೇ ।
ವಿಷಯಾ ದುರ್ಜಯಾ ನೄಣಾಮಿಂದ್ರಿಯಾಕರ್ಷಿಣಃ ಪ್ರಭೋ　॥ ೬ ॥

ವೃತ್ತಯಶ್ಚೇತಸಶ್ಚಾಪಿ ಚಂಚಲಸ್ಯಾತಿದುರ್ಧರಾಃ ।
ರಾಗಾದಯಃ ಕಥಂ ಜೇತುಂ ಶಕ್ಯಾ ವರ್ಷಶತೈರಪಿ　॥ ೭ ॥

---

೩. ಮಹಾಬುದ್ಧಿಶಾಲಿಯಾದ ಬ್ರಹ್ಮನು ಸೂರ್ಯನನ್ನು ಆರಾಧಿಸುವುದಕ್ಕೋಸ್ಕರ ಸಮಸ್ತ ಅಂತಃಕರಣ ವೃತ್ತಿಗಳನ್ನೆಲ್ಲಾ ನಿರೋಧಮಾಡುವುದರಿಂದ ಹೊಂದಬೇಕಾದ ಪರಬ್ರಹ್ಮ ಯೋಗವನ್ನು ಋಷಿಗಳಿಗೆ ಹೇಳಿದನು.

೪. ಆಗ ಮಹರ್ಷಿಗಳೆಲ್ಲರೂ ಪೂಜ್ಯನಾದ ಬ್ರಹ್ಮನಿಗೆ ನಮಸ್ಕರಿಸಿ ಪ್ರಜೆಗಳಿಗೆ ಹಿತಕರವಾದ ಈ ವಿಷಯವನ್ನು ಬಿನ್ನವಿಸಿದರು.

೫. ಜಗತ್ಪತಿಯಾದ ಬ್ರಹ್ಮನೇ! ನೀನು ಹೇಳಿದಂತೆ ಅಂತಃಕರಣವೃತ್ತಿಗಳ ನಿರೋಧದಿಂದ ಹೊಂದಬೇಕಾದ ಯೋಗವು. ಅನೇಕ ಜನ್ಮಗಳಲ್ಲಿ ಸಾಧನೆಮಾಡುವುದರಿಂದ ಹೊಂದುವುದಕ್ಕೆ ಸಾಧ್ಯವು.

೬. ಎಲೈ ಪ್ರಭುವೇ! ಇಂದ್ರಿಯಗಳನ್ನು ಸೆಳೆಯುವ ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿ ವಿಷಯಗಳು ಮನುಷ್ಯನಿಗೆ ಜಯಿಸಲು ಆಸಾಧ್ಯವಾದುವು.

೭. ಚಂಚಲವಾದ ಮನಸ್ಸಿನ ವೃತ್ತಿಗಳು ತಡೆಯಲು ಅಶಕ್ಯಗಳಾದುವು. ಆ ಅಂತಃಕರಣದಿಂದ ಹುಟ್ಟುವ ರಾಗ, ದ್ವೇಷ ಮುಂತಾದ ವೃತ್ತಿಗಳನ್ನು ನೂರಾರು ವರ್ಷ ಪ್ರಯತ್ನಪಟ್ಟರೂ ಜಯಿಸುವುದಕ್ಕೆ ಹೇಗೆತಾನೇ ಸಾಧ್ಯವಾದೀತು?

ನ ಯೋಗಯೋಗ್ಯಂ ಭವತಿ ಮನ ಏಭಿರನಿರ್ಜಿತೈಃ ।
ಅಲ್ಪಾಯುಷಶ್ಚ ಪುರುಷಾ ಬ್ರಹ್ಮನ್ ಕೃತಯುಗೇऽಪ್ಯಮೀ ॥ ೮ ॥

ತ್ರೇತಾಯಾಂ ದ್ವಾಪರೇ ಚೈವ ಕಿಮು ಪ್ರಾಪ್ತೇ ಕಲೌಯುಗೇ ।
ಭಗವಂಸ್ತ್ವಾಮುಪಾಸೀನಾನ್ ಪ್ರಸನ್ನೋಽವಕ್ತುಮರ್ಹಸಿ ॥ ೯ ॥

ಅನಾಯಾಸೇನ ಯೇನೈವ ಉತ್ತರೇಮ ಭವಾರ್ಣವಂ ।
ದುಃಖಾಂಬು ಮಗ್ನಾಃ ಪುರುಷಾಃ ಪ್ರಾಪ್ಯ ಬ್ರಹ್ಮನ್ ಮಹಾಪ್ಲವಂ ॥ ೧೦ ॥

ಉತ್ತರೇಮ ಭವಾಂಭೋಧಿಂ ತಥಾ ತ್ವಮನುಚಿಂತಯ ।
ಏವ ಮುಕ್ತಸ್ತದಾ ಬ್ರಹ್ಮಾ ಕ್ರಿಯಾಯೋಗಂ ಮಹಾತ್ಮನಾಂ ॥ ೧೧ ॥

ತೇಷಾಂ ಋಷೀಣಾಮಾಚಷ್ಟ ನರಾಣಾಂ ಹಿತಕಾಮ್ಯಯಾ ।
ಆರಾಧಯತ ವಿಶ್ವೇಶಂ ದಿವಾಕರಮತಂದ್ರಿತಾಃ ॥ ೧೨ ॥

---

೮. ಮನುಷ್ಯರು ಈ ರಾಗಾದಿಗಳನ್ನು ಜಯಿಸದೇ ಹೋದರೆ ಅವರ ಮನಸ್ಸು ಯೋಗಕ್ಕೆ ಅರ್ಹವೆನಿಸುವುದಿಲ್ಲ. (ಎಂದರೆ ಚಿತ್ತವೃತ್ತಿನಿರೋಧಪೂರ್ವಕ ಏಕತ್ರ ಸ್ಥಿರ ವಾಗಿಡಲು ಸಾಧ್ಯವಾಗುವುದಿಲ್ಲವೆಂದು ತಾತ್ಪರ್ಯ.)

೯–೧೧. ಎಲೈ ಬ್ರಹ್ಮನೇ ! ಕೃತಯುಗದಲ್ಲೂ ಕೂಡ ಮನುಷ್ಯರು ಅಲ್ಪಾಯುಷ್ಯುಳ್ಳವರು. ತ್ರೇತಾಯುಗದಲ್ಲಿಯೂ, ದ್ವಾಪರಯುಗದಲ್ಲಿಯೂ ಸಹ ಮಾನವರು ಅಲ್ಪಾಯುಗಳೇ. ಇನ್ನು ಕಲಿಯುಗ ಪ್ರಾಪ್ತವಾದ ಮೇಲೆ ಹೇಳತಕ್ಕದ್ದೇನು ? ಹೀಗಿರುವಲ್ಲಿ ದೋಣಿಯ ಸದೃಶವಾದ ಯಾವ ಆಧಾರದಿಂದ ಅನಾಯಾಸವಾಗಿ ಈ ಸಂಸಾರಸಮುದ್ರವನ್ನು ಸಂಸಾರಿಗಳು ದಾಟಬಹುದೋ ಅಂತಹ ಉಪಾಯುವನ್ನು ಹೇಳು. ಅಯ್ಯಾ ಭಗವಂತನೇ ! ನಿನ್ನನ್ನೇ ಉಪಾಸನೆಮಾಡುತ್ತಾ ಇರುವ ನಮಗೆ ಸಂಸಾರರೂಪವಾದ ಅನರ್ಥನಿವೃತ್ತಿಯ ಉಪಾಯುವನ್ನು ತಿಳಿಯಹೇಳುವುದಕ್ಕೆ ಪ್ರಸನ್ನನಾದ ನೀನೇ ಸಮರ್ಥನು ಎಂದರು.

೧೨. ಅವರು ಹೀಗೆ ಹೇಳುತ್ತಲೆ ಬ್ರಹ್ಮನು ಈರೀತಿ ಪ್ರಶ್ನೆಗಳನ್ನು ಕೇಳಿದ ಆ ಮಹರ್ಷಿಗಳಿಗೆ, ಮುಕ್ತಿಗೋಸ್ಕರವಾಗಿ ಮಾಡುವ ಕರ್ಮಯೋಗವನ್ನು ಮನುಷ್ಯರಿಗೆ ಹಿತವಾಗಲಿ ಎಂಬ ಅಪೇಕ್ಷೆಯಿಂದ ಹೇಳಿದನು.

ಬಾಹ್ಯಾಲಂಬನ ಸಾಪೇಕ್ಷಾಸ್ತಮಜಂ ಜಗತಃ ಪತಿಂ ।
ಇಜ್ಯಾಪೂಜಾ ನಮಸ್ಕಾರಶುಶ್ರೂಷಾಭಿರಹರ್ನಿಶಂ ॥ ೧೩ ॥

ವ್ರತೋಪವಾಸೈರ್ವಿವಿಧೈ ಬ್ರಾರ್ಹ್ಮಣಾನಾಂ ಚ ತರ್ಪಣೈಃ ।
ತೈಸ್ತೈಶ್ಚಾಭಿಮತೈಃ ಕಾರ್ಯೈಃ ಯೇ ಚ ಚೇತಸಿ ತುಷ್ಟಿದಾಃ ॥ ೧೪ ॥

ಅಪರಿಚ್ಛೇದ್ಯಮಾಹಾತ್ಮ್ಯಂ ಆರಾಧಯತ ಭಾಸ್ಕರಂ ।
ತನ್ನಿಷ್ಠಾಸ್ತದ್ಗತಧಿಯಃ ತತ್ಕರ್ಮಾಣಸ್ತದಾಶ್ರಯಃ ॥ ೧೫ ॥

ತದ್ದೃಷ್ಟಯಸ್ತನ್ಮನಸಃ ಸರ್ವಸ್ಮಿನ್ಸ ಇತಿ ಸ್ಥಿತಾಃ ।
ಸಮಸ್ತಾನ್ಯಥ ಕರ್ಮಾಣಿ ತತ್ರ ಸರ್ವಾತ್ಮನಾತ್ಮನಿ ॥ ೧೬ ॥

ಸಂನ್ಯಸಧ್ವಂ ಸ ವಃ ಕರ್ತಾ ಸಮಸ್ತಾವರಣಕ್ಷಯಂ ।
ಏತತ್ತದಕ್ಷರಂ ಬ್ರಹ್ಮ ಪ್ರಧಾನಪುರುಷಾವುಭೌ ॥ ೧೭ ॥

---

೧೩–೧೪. ಉತ್ಪತ್ತಿರಹಿತನೂ, ಜಗದೀಶ್ವರನೂ, ಲೋಕಾಧಿಪತಿಯೂ ಆದ (ಸೂರ್ಯನನ್ನು) ಧ್ಯೇಯವಸ್ತುವಿನ ಪ್ರತೀಕವನ್ನು ಧ್ಯಾನಕ್ಕೆ ಅವಲಂಬನಾಗಿಟ್ಟುಕೊಂಡವರಾಗಿ ಇಂದ್ರಿಯ ಜಯವನ್ನು ಪಡೆದು ಯಾಗ, ಪೂಜೆ, ನಮಸ್ಕಾರ, ಸೇವೆ, ವಿವಿಧವ್ರತಗಳು, ಉಪವಾಸ, ಬ್ರಾಹ್ಮಣಸಂತರ್ಪಣೆ ಮುಂತಾದ ಇನ್ನೂ ಯಾವ ರೀತಿ ಆರಾಧಿಸಿದರೆ ನಿನ್ನ ಮನಸ್ಸಿಗೆ ತುಷ್ಟಿಯಾಗುವುದೋ ಆರೀತಿ ಆರಾಧಿಸಿದರೆ ಅಭಿಮತಕ್ರಮದಿಂದ ಅಪರಿಮಿತ ಮಹಾತ್ಮೆಯುಳ್ಳ ಸೂರ್ಯನನ್ನು ಆರಾಧಿಸಿ,

೧೫. ಅವನಲ್ಲೇ ಸೇವಾಕರ್ಮಗಳನ್ನು ಮಾಡುತ್ತಾ ಅವನನ್ನೇ ಆಶ್ರಯಿಸಿಕೊಂಡು ನಿರ್ಣಯಿಸಲಸಾಧ್ಯವಾದಷ್ಟು ಮಹಾತ್ಮೆಯುಳ್ಳ ಸೂರ್ಯನನ್ನು ಆರಾಧಿಸಿರಿ.

೧೬–೧೭. ಅವನಲ್ಲಿಯೇ ದೃಷ್ಟಿಯಿಟ್ಟುಕೊಂಡು ಅವನಲ್ಲೇ ಮನಸ್ಸುಳ್ಳವನಾಗಿ ಎಲ್ಲಾ ವಸ್ತುಗಳಲ್ಲಿಯೂ ಅವನಿದ್ದಾನೆ ಎಂಬ ನಿಶ್ಚಯವುಳ್ಳವರಾಗಿ ಸಮಸ್ತ ಕಾರ್ಯಗಳನ್ನೂ ಪರಮಾತ್ಮನಲ್ಲಿ ಸಮರ್ಪಿಸಿ ಬಿಡಿ. ಅವನು ಸಮಸ್ತ ಜನ್ಮಮರಣಗಳನ್ನು ನಾಶಮಾಡುತ್ತಾನೆ.

**ಯತೋ ಯಸ್ಮಿನ್ ಯಥಾಚೋಭೌ ಸರ್ವವ್ಯಾಪಿನ್ಯವಸ್ಥಿತೌ ।**
**ಪರಃ ಪರಾಣಾಂ ಪರಮಃ ಸೈಕಃ ಸುಮನಸಾಂ ಪರಃ ॥ ೧೮ ॥**

**ಯಸ್ಮಾದ್ಭಿನ್ನಮಿದಂ ಸರ್ವಂ ಯಚ್ಚೇದಂ ಯಚ್ಚ ನೇಂಗತಿ ।**
**ಮೋಕ್ಷಕಾರಣಮವ್ಯಕ್ತಂ ಅಚಿಂತ್ಯಮಪರಿಗ್ರಹಂ ।**
**ಸಮಾರಾಧ್ಯ ಜಗನ್ನಾಥಂ ಕ್ರಿಯಾ ಯೋಗೇನ ಮುಚ್ಯತೇ ॥ ೧೯ ॥**

**ಇತಿ ತೇ ಬ್ರಹ್ಮಣಃ ಶ್ರುತ್ವಾ ರಹಸ್ಯಮೃಷಿಸತ್ತಮಾಃ ।**
**ನರಾಣಾಮುಪಕಾರಾಯ ಯೋಗಶಾಸ್ತ್ರಾಣಿ ಚಕ್ರಿರೇ ।**
**ಕ್ರಿಯಾಯೋಗಪರಾಣೀಹ ಮುಕ್ತಿಕಾರೀಣ್ಯನೇಕಶಃ ॥ ೨೦ ॥**

**ಆರಾಧ್ಯತೇ ಜಗನ್ನಾಥಃ ತದನುಷ್ಠಾನತತ್ಪರೈಃ ।**
**ಪರಮಾತ್ಮಾ ಸ ಮಾರ್ತಂಡಃ ಸರ್ವೇಶಃ ಸರ್ವಭಾವನಃ ॥ ೨೧ ॥**

---

೧೮. ಪ್ರಕೃತಿ, ಪುರುಷ ಇಬ್ಬರೂ ಸರ್ವವ್ಯಾಪಿಯಾದ ಆ ಪರಮಾತ್ಮನಿಂದಲೇ ಅಭಿವ್ಯಕ್ತರಾಗಿ ಅವನಲ್ಲೇ ಸ್ಥಿತಿಹೊಂದಿದವರಾದರು. ಆ ಆಧಾರವಾದ ವಸ್ತುವೇ ನಾಶರಹಿತವಾದ ಪರಬ್ರಹ್ಮವು. ಅಂಥಾ ಪರಬ್ರಹ್ಮವೇ ಶ್ರೇಷ್ಠದಲ್ಲೆಲ್ಲಾ ಶ್ರೇಷ್ಠವಾ ಮಮ, ಉತ್ಕೃಷ್ಟವಾದುದು, ದೇವತೆಗಳಿಗಿಂತಲೂ ಶ್ರೇಷ್ಠವೆಂದು ತಿಳಿಯತಕ್ಕದ್ದು.

೧೯. ಈ ಸಮಸ್ತ ಪ್ರಪಂಚವೂ ಯಾವ ಪರಬ್ರಹ್ಮಕ್ಕಿಂತ ಭಿನ್ನವಾದುದೋ ಯಾವ ಪರಬ್ರಹ್ಮವೇ ಪ್ರಪಂಚತ್ವೇನ ವಿವರ್ತಿಸಿದೆಯೋ ಯಾವುದು ನಿಷ್ಕ್ರಿಯ ವಾಗಿದೆಯೋ. ಯಾವುದು ಮೋಕ್ಷಕ್ಕೆ ಕಾರಣವೂ, ಅವ್ಯಕ್ತವೂ, ಅಚಿಂತ್ಯವೂ ಉಪಾದೇಯವಲ್ಲದುದೂ ಆಗಿದೆಯೋ, ಅಂತಹ ಜಗನ್ನಾಥನನ್ನು ಕರ್ಮಯೋಗದಿಂದ ಆರಾಧಿಸಬೇಕು. ಹೀಗೆ ಆರಾಧಿಸಿದವನು ಕ್ರಮವಾಗಿ ಚಿತ್ತಶುದ್ಧಿಪ್ರಾಪ್ತಿದ್ವಾರಾ ಮುಕ್ತನಾಗುವನು.

೨೦. ಬ್ರಹ್ಮದೇವನು ಈ ಪ್ರಕಾರವಾಗಿ ನಿರೂಪಿಸಿದ ರಹಸ್ಯ ವಿಚಾರವನ್ನು ಋಷಿಶ್ರೇಷ್ಠರು ಕೇಳಿ ಜನರ ಉಪಯೋಗಕ್ಕಾಗಿ ಕರ್ಮಯೋಗದಲ್ಲಿಯೇ ತಾತ್ಪರ್ಯ ಉಳ್ಳದ್ದೂ ಮತ್ತು ಜ್ಞಾನದ್ವಾರಾ ಮುಕ್ತಿಗೆ ಕಾರಣವೆನಿಸಿದ್ದೂ ಆದ ಅನೇಕ ಕರ್ಮ ಪ್ರತಿಪಾದಕ ಗ್ರಂಥಗಳನ್ನು ರಚಿಸಿದರು.

೨೧. ಕರ್ಮಾನುಷ್ಠಾನತತ್ಪರರಾದ ಪುರುಷರು ಈ ಸವಿತೃಮಂಡಲಮಧ್ಯ ವರ್ತಿಯಾಗಿಯೂ, ಸರ್ವೇಶ್ವರನೂ ಸರ್ವಕ್ಕೂ ಕಾರಣವಾಗಿಯೂ ಇರುವ ಪರಮಾತ್ಮ ನನ್ನು ಆರಾಧಿಸುತ್ತಾರೆ.

ಯಾನ್ಯುಕ್ತಾನಿ ಪುರಾ ತೇನ ಬ್ರಹ್ಮಣಾ ಕುರುನಂದನ ।
ತಾನಿ ತೇ ಕುರು ಶಾರ್ದೂಲ ಸರ್ವಪಾಪಹರಾಣ್ಯಹಂ ॥ ೨೩ ॥

ವಕ್ಷ್ಯಾಮಿ ಶ್ರೂಯತಾಮದ್ಯ ರಹಸ್ಯಮಿದಮುತ್ತಮಂ ।
ಸಂಸಾರಾರ್ಣವಮಗ್ನಾನಾಂ ವಿಷಯಾಕ್ರಾಂತಚೇತಸಾಂ ॥ ೨೪ ॥

ಹಂಸಪೋತಂ ವಿನಾ ನಾನ್ಯತ್ ಕಿಂಚಿದಸ್ತಿ ಪರಾಯಣಂ ।
ಉತ್ತಿಷ್ಠಂಶ್ಚಿಂತಯ ರವಿಂ ವ್ರಜಂಶ್ಚಿಂತಯ ಗೋಪತಿಂ ॥ ೨೫ ॥

ಭುಜಂಶ್ಚಿಂತಯ ಮಾರ್ತಂಡಂ ಸ್ವಪಂಶ್ಚಿಂತಯ ಭಾಸ್ಕರಂ ।
ಏವ ಮೇಕಾಗ್ರಚಿತ್ತಸ್ತ್ವಂ ಸಂಶ್ರಿತಃ ಸಂತತಂ ರವಿಂ ॥ ೨೬ ॥

ಜನ್ಮಮೃತ್ಯು ಮಹಾಗ್ರಾಹಂ ಸಂಸಾರಾಬ್ಧಿಂ ತರಿಷ್ಯಸಿ ॥ ೨೭ ॥

ಗ್ರಹೇಶಮೀಶಂ ವರದಂ ಪುರಾಣಂ ।
ಜಗದ್ವಿಧಾತಾರಮಜಂ ಚ ನಿತ್ಯಂ ।

---

೨೩-೨೪. ಅಯ್ಯಾ ಕುರುವಂಶಸಂಭೂತನೇ! ಪೂರ್ವದಲ್ಲಿ ಬ್ರಹ್ಮನು ಸರ್ವ ಪಾಪಪರಿಹಾರಾರ್ಥಗಳೂ ಉತ್ತಮಗಳೂ ಆದ ಯಾವ ವಿಷಯಗಳನ್ನು ಹೇಳಿದನೋ ಅಂತಹ ಉತ್ತಮ ರಹಸ್ಯಗಳನ್ನೇ ಈಗಲೂ ನಾನು ನಿನಗೆ ಹೇಳುತ್ತೇನೆ ಕೇಳು. ಸಂಸಾರಸಮುದ್ರದಲ್ಲಿ ಮುಳುಗಿ ವಿಷಯಾಸಕ್ತವಾದ ಮನಸ್ಸುಳ್ಳವರಿಗೆ.

೨೫. ಸೂರ್ಯನೆಂಬ ತೆಪ್ಪ (ಹರಿಗೋಲು) ವನ್ನು ಬಿಟ್ಟರೆ ಆ ಸಮುದ್ರವನ್ನು ದಾಟಿಸಬಲ್ಲ ಬೇರೇ ಆಶ್ರಯ ಯಾವುದೂ ಸಿಕ್ಕುವುದಿಲ್ಲ.

೨೬-೨೭. ಹಾಸಿಗೆಯನ್ನು ಬಿಟ್ಟು ಏಳುವಾಗ ರವಿಸಂಜ್ಞಕನಾದ ಸೂರ್ಯ ನನ್ನು ಧ್ಯಾನಿಸು. ಭೋಜನಮಾಡುವಾಗ ಮಾರ್ತಂಡಸಂಜ್ಞಕನಾದ ಸೂರ್ಯ ನನ್ನು ಧ್ಯಾನಿಸು. ನಿದ್ರಿಸುವಾಗ ಭಾಸ್ಕರಸಂಜ್ಞಕನಾದ ಸೂರ್ಯನನ್ನು ಧ್ಯಾನಿಸು. ನೀನು ಹೀಗೆ ಏಕಾಗ್ರಚಿತ್ತನಾಗಿ ಯಾವಾಗಲೂ ಸೂರ್ಯನನ್ನು ಆಶ್ರಯಿಸುವುದಾದರೆ ಜನನ, ಮರಣವೆಂಬ ಮೊಸಳೆಗಳುಳ್ಳ, ಸಮುದ್ರವನ್ನು ಸುಲಭದಲ್ಲಿ ದಾಟುತ್ತೀಯೆ.

೨೮. ಗ್ರಹಗಳಿಗೆಲ್ಲಾ ಅಧಿಪನೂ, ಸರ್ವಕ್ಕೂ ಅಧಿಪನೂ, ವರವನ್ನು ಕೊಡ ತಕ್ಕವನೂ, ಪುರಾಣಪುರುಷನೂ, ಜಗತ್ಸೃಷ್ಟಿಕರ್ತನೂ, ಉತ್ಪತ್ತಿರಹಿತನೂ, ನಾಶ

**ಸಮಾಶ್ರಿತಾ ಯೇ ರವಿಮೀಶಿತಾರಂ ।**
**ತೇಷಾಂ ಭವೋ ನಾಸ್ತಿ ವಿಮುಕ್ತಿಭಾಜಾಂ ॥ ೨೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀಕಲ್ಪೇ ಸೂರ್ಯಯೋಗಮಹಿಮ ವರ್ಣನಂ ನಾಮೈಕ ಷಷ್ಟಿತಮೋಽಧ್ಯಾಯಃ**



---

ರಹಿತನೂ, ಈಶ್ವರನೂ ಆದ ಸೂರ್ಯನನ್ನು ಆಶ್ರಯಿಸಿದವರಾಗಿ ಯಾರು ಮುಕ್ತಿಯನ್ನು ಪಡೆಯುವರೋ ಅವರಿಗೆ ಪುನರ್ಜನ್ಮವೆಂಬುದು ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೂರ್ಯಯೋಗಮಹಿಮೆಯೆಂಬ ಅರವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿಷಷ್ಟಿತಮೋಽಧ್ಯಾಯಃ

---

॥ ಸುಮಂತುರುವಾಚ ॥

ಅಥಾನ್ಯಂ ಸ ರಹಸ್ಯಂ ತು ಸಂವಾದಂ ವಚ್ಮಿ ತೇಽಖಿಲಂ ।
ಸೂರ್ಯಸ್ಯ ದಿಂಡಿನಾ ಸಾರ್ಧಂ ಸರ್ವಪಾಪಪ್ರಣಾಶನಂ ॥ ೧ ॥

ಬ್ರಹ್ಮಹತ್ಯಾಭಿಭೂತಸ್ತು ಪುರಾ ದಿಂಡಿರ್ಮಹಾತಪಾಃ ।
ಆರಾಧನಾಯ ದೇವಸ್ಯ ಸ್ತೋತ್ರಂ ಚಕ್ರೇ ಮಹಾತ್ಮನಃ ॥ ೨ ॥

ಶ್ರುತ್ವಾ ತಸ್ಯಾರ್ಥತಃ ಸ್ತೋತ್ರಂ ತುತೋಷ ಭಗವಾನ್ ರವಿಃ ।
ಉವಾಚ ದೇವದೇವಸ್ತಂ ದಿಂಡಿನಂ ಗಣನಾಯಕಂ ॥ ೩ ॥

---

## ಅರವತ್ತೆರಡನೆಯ ಅಧ್ಯಾಯವು

೧. ಸುಮಂತುಮುನಿವರ್ಯರು ಹೇಳುತ್ತಾರೆ—ಇನ್ನು ಸರ್ವಪಾಪನಾಶಕವೂ ರಹಸ್ಯದಿಂದ ಕುಡಿದುದೂ ಆದ ಸೂರ್ಯ, ದಿಂಡಿ, ಇವರುಗಳ ಸಂವಾದವನ್ನು ಸಮಗ್ರವಾಗಿ ನಿನಗೆ ಹೇಳುತ್ತೇನೆ.

೨. ಪೂರ್ವದಲ್ಲಿ ಮಹಾತಪಸ್ವಿಯಾದ ದಿಂಡಿಯು ಬ್ರಹ್ಮಹತ್ಯೆಯಿಂದ ನೊಂದು ಮಹಾತ್ಮನಾದ ಸೂರ್ಯನನ್ನು ಆರಾಧಿಸುವುದಕ್ಕಾಗಿ ಸ್ತೋತ್ರಮಾಡಿದನು.

೩. ಭಗವಂತನಾದ ಸೂರ್ಯನು ಅವನ ಅರ್ಥವತ್ತಾದ ಸ್ತೋತ್ರವನ್ನು ಕೇಳಿ ಸಂತುಷ್ಟನಾದನು. ಈಗ ದೇವದೇವನಾದ ಸೂರ್ಯನು ಗಣನಾಯಕವಾದ ದಿಂಡಿಯನ್ನು ಕುರಿತು ಹೀಗೆಂದನು.

॥ ಆದಿತ್ಯ ಉವಾಚ ॥

ಹಂತ ದಿಂಡೇ ಪ್ರಸನ್ನೋಽಸ್ಮಿ ಭಕ್ತ್ಯಾ ಸ್ತೋತ್ರೇಣ ತೇಽನಘ ।
ವರಂ ವೃಣೀಷ್ವ ಧರ್ಮಜ್ಞ ಯತ್ತೇ ಮನಸಿ ವರ್ತತೇ ॥ ೪ ॥

॥ ದಿಂಡಿರುವಾಚ ॥

ಏಷ ಏವ ವರಃಶ್ಲಾಘ್ಯೋ ಯತ್ಪ್ರಾಪ್ತೋಽಸಿ ಮಮಾಂತಿಕಂ ।
ತ್ವದ್ದರ್ಶನಮಪುಣ್ಯಾನಾಂ ಸ್ವಪ್ನೇಷ್ವಪಿ ಚ ದುರ್ಲಭಂ ॥ ೫ ॥

ಯಥೈಷಾ ಬ್ರಹ್ಮಹತ್ಯಾ ಮೇ ಆಗತಾ ಲೋಕಗರ್ಹಿತಾ ।
ಭವಾನ್ ಜಾನಾತಿ ಸರ್ವೇಶೋ ಹೃದಿಸ್ಥಃ ಸರ್ವದೇಹಿನಾಂ ॥ ೬ ॥

ತ್ವತ್ಪ್ರಸಾದಾನ್ಮಮೇಶಾನ ನಾಶಮಾಶು ಪ್ರಯಾತು ವೈ ।
ತಥಾ ಚ ದುರಿತಂ ಸರ್ವಂ ಯಚ್ಚಾನ್ಯಲ್ಲೋಕಗರ್ಹಿತಂ ॥ ೭ ॥

---

೪. ಆದಿತ್ಯನು ಹೇಳುತ್ತಾನೆ—ಭಲಾ, ನಿರ್ದೋಷಿಯಾದ ದಿಂಡಿಯೇ! ನಿನ್ನ ಭಕ್ತಿಗೂ, ಸ್ತೋತ್ರಕ್ಕೂ ಮೆಚ್ಚಿದ್ದೇನೆ. ಎಲೈ ಧರ್ಮಜ್ಞನೇ! ನಿನಗೆ ಬೇಕಾದ ವರವನ್ನು ಕೇಳಿಕೋ ಎಂದನು.

೫. ಆಗ ದಿಂಡಿಯು ಹೇಳುತ್ತಾನೆ—ನೀನು ನನಗೆ ಪ್ರತ್ಯಕ್ಷನಾಗಿ ಬಂದಿರುವುದೇ ಒಂದು ಶ್ಲಾಘ್ಯಕರವಾದ ವರವು. ಪುಣ್ಯಹೀನರಿಗೆ ನಿನ್ನ ದರ್ಶನವು ಕನಸಿನಲ್ಲಾದರೂ ದೊರೆಯುವುದು ಕಷ್ಟ.

೬. ಲೋಕನಿಂದಿತವಾದ ಈ ಬ್ರಹ್ಮಹತ್ಯೆಯು ನನಗೆ ಹೇಗೆ ಬಂದಿತು ಎಂಬುದನ್ನು ಸರ್ವೇಶ್ವರನೂ ಸರ್ವಪ್ರಾಣಿಗಳ ಹೃದಯದಲ್ಲಿರುವವನೂ ಆದ ನೀನು ಬಲ್ಲೆ.

೭. ಸ್ವಾಮಿ! ನನಗೆ ಪ್ರಾಪ್ತವಾಗಿರುವ ಈ ಬ್ರಹ್ಮಹತ್ಯಾದೋಷವು ಬೇಗ ನಾಶವಾಗಲಿ. ಅಲ್ಲದೆ ಲೋಕನಿಂದನೆಗೆ ಗುರಿಯಾದ ಇನ್ನೂ ಯಾವ ಪಾಪಗಳಿದ್ದರೂ ಅದೆಲ್ಲವೂ ನಾಶಹೊಂದಲಿ.

**ಯದ್ಯದಿಚ್ಛಾಮ್ಯಹಂ ತತ್ತತ್ಸರ್ವಮಸ್ತು ದಿವಸ್ಪತೇ ।**
**ಏತೇನೈವಾನುಮಾನೇನ ಪ್ರಸನ್ನೋಽಭಗವನ್ನಿತಿ ॥ ೮ ॥**

**ಜ್ಞಾತಂ ಮಯಾ ಹಿ ಮಾರ್ತಂಡೇ ನಾಪ್ರಸನ್ನೇ ವಿಭೂತಯಃ ।**
**ಏವಂ ಸರ್ವಸುಖಾಹ್ಲಾದಮಧ್ಯಸ್ಥೋಽಪಿ ಹಿ ಭಾನುಮರ್ನ್ ॥ ೯ ॥**

**ತ್ವಂ ಮಾಮಗಾಧೇ ಸಂಸಾರೇ ಮಗ್ನಮುದ್ಧರ್ತುಮರ್ಹಸಿ ।**
**ಸುಖಾನಿ ತಾನಿ ಚೈವಾಂತೇ ಯೇಷಾಂ ದುಃಖಂ ನ ತತ್ಸುಖಂ ॥ ೧೦ ॥**

**ಯದಾ ತು ದುಃಖಮಾಗಾಮಿ ಕಿಂ ವಾ ತಸ್ಯೈವ ಭಕ್ಷಣಾತ್ ।**
**ತತ್ಪ್ರಸಾದಂ ಕುರು ವಿಭೋ ಜಗತಾಂ ತ್ವಂ ಜಗತ್ಪತೇ ॥ ೧೧ ॥**

**ಜ್ಞಾನದಾನೇನ ಯೇನೈವಮುತ್ತರೇಯಂ ಭವಾರ್ಣವಂ ।**
**ಇತ್ಯುಕ್ತಸ್ತೇನ ಮಾರ್ತಂಡಃ ಕಥಯಾಮಾಸ ಯೋಗವಿತ್ ॥ ೧೨ ॥**

---

೮. ಎಲೈ ದಿವಸ್ಪತಿಯಾದ ಸೂರ್ಯನೇ! ನಾನು ಬಯಸುವುದೆಲ್ಲವೂ ನನಗೆ ಲಭಿಸಲಿ. ಹಾಗೆ ಲಭಿಸುವುದು ನಿಶ್ಚಿತವಾಗಿ ಘಟಿಸಿದರೆ ಪರಮಾತ್ಮನು ಪ್ರಸನ್ನನಾದನೆಂದು ಭಾವಿಸುತ್ತೇನೆ.

೯-೧೦. ಸೂರ್ಯಪ್ರಸನ್ನತೆಯಿಲ್ಲದಿದ್ದರೆ, ಮಿಕ್ಕ ಸಂಪತ್ತುಗಳು ಯಾವುದೂ ಇಲ್ಲವೆಂದೇ ನನ್ನ ನಿಶ್ಚಯ. ಎಲೈ ಸೂರ್ಯನೇ! ಹೀಗೆ ಸರ್ವಸುಖಸಂತೋಷ ಗಳ ಮಧ್ಯದಲ್ಲಿದ್ದರೂ, ಅಗಾಧ ಸಂಸಾರದಲ್ಲಿ ಮುಳುಗಿರುವ ನನ್ನನ್ನು ಉದ್ಧರಿಸಲು ನೀನು ಸಮರ್ಥನಾಗಿದ್ದೀ! ದುಃಖದಲ್ಲಿ ಯಾವುದು ಪರ್ಯವಸಾನ ಹೊಂದುವುದೋ ಅದು ಎಂದಿಗೂ ಸುಖವಲ್ಲ.

೧೧. ಯಾವ ಒಂದು ವಸ್ತುವಿನಿಂದ ಅಥವಾ ಕೃತ್ಯದಿಂದ ಮುಂದೆ ದುಃಖ ಸಂಭವಿಸಬಹುದು ಎಂಬುದನ್ನು ತಿಳಿದೂ ಅದನ್ನೇ ಅಂಗೀಕರಿಸಿದರೆ ಏನು ಫಲ. ಆದುದರಿಂದ ಎಲೈ ಜಗದೊಡೆಯನೇ! ಜಗತ್ತುಗಳಿಗೆ ನೀನು ಅನುಗ್ರಹವನ್ನು ಮಾಡು.

೧೨. ಯಾವಪ್ರಕಾರವಾದ ಜ್ಞಾನದಾನ ಮಾಡಿದರೆ ನಾನು ಸಂಸಾರ ಸಮುದ್ರ ವನ್ನು ದಾಟುವೆನೋ ಅಂತಹ ಜ್ಞಾನವನ್ನು ಕರುಣಿಸು ಎಂಬದಾಗಿ ಆ ದಿಂಡಿಯು ಹೇಳಿಕೊಳ್ಳಲು ಯೋಗವನ್ನು ತಿಳಿದ ಮಾರ್ತಂಡನು ಈ ಪ್ರಕಾರ ಹೇಳಿದನು.

ಯೋಗಂ ನಿರ್ಬೀಜಮತ್ಯಂತಂ ದುಃಖಸಂಯೋಗಭೇಷಜಂ ।
ಶ್ರುತ್ವಾ ಯೋಗಂ ತು ತಂ ದಿಂಡಿಃ ನಿರ್ಬೀಜಂ ನಿಷ್ಕಲಂ ಬಭೌ ॥ ೧೩ ॥

ಪ್ರಣಿಪತ್ಯ ಮಹಾತೇಜಾ ಇದಂ ವಚನಮಬ್ರವೀತ್ ।
ದೇವದೇವ ತ್ವಯಾ ಯೋಗೋ ಯಃ ಪ್ರೋಕ್ತೋ ಧ್ವಾಂತನಾಶನ ।
ನೈಷಪ್ರಾಪ್ಯೋ ಮಯಾ ನಾನ್ಯೈರ್ಮಾನವೈರಜಿತೇಂದ್ರಿಯೈಃ ॥ ೧೪ ॥

ವಿಷಯಾ ದುರ್ಜಯಾಃ ಪುಂಭಿರಿಂದ್ರಿಯಾಕರ್ಷಿಣಃ ಸದಾ ।
ಇಂದ್ರಿಯಾಣಾಂ ಜಯೋ ಯುಕ್ತೈಃ ಕಃ ಶಕ್ತಾನಾಂ ಕರಿಷ್ಯತಿ ॥ ೧೫ ॥

ಅಹಂ ಮಮೇತಿ ವಿಖ್ಯಾತಿರ್ದುರ್ಜಯಾ ಚಂಚಲಂ ಮನಃ ।
ರಾಗಾದಯಸ್ತಥಾ ತ್ಯಕ್ತುಂ ಶಕ್ಯಾ ಜನ್ಮಾಂತರೇಷ್ವಪಿ ॥ ೧೬ ॥

---

೧೩. ನಿರ್ಬೀಜಯೋಗವೆಂಬುದು ದುಃಖಸಂಯೋಗಕ್ಕೆ ಪರಿಹಾರವಾದ ಚಿಕಿತ್ಸೆಯಾಗಿದೆ. ದಿಂಡಿಯು ಈ ನಿರ್ಬೀಜಯೋಗವನ್ನು ಶ್ರವಣಮಾಡಿದ್ದರಿಂದ ಅತ್ಯಂತವಾಗಿ ಪ್ರಕಾಶಿಸಿದನು.

೧೪. ಹೀಗೆ ಮಹಾತೇಜಸ್ವಿಯಾದ ದಿಂಡಿಯು ಆಗ ಸೂರ್ಯನಿಗೆ ನಮಸ್ಕರಿಸಿ ಈ ಮಾತನ್ನು ಹೇಳಿದನು. "ಅಜ್ಞಾನಾಂಧಕಾರನಾಶಕನೂ ದೇವದೇವನೂ ಆದ ಸೂರ್ಯನೇ! ನೀನು ಹೇಳಿದ ಯೋಗವು ನನ್ನಿಂದಾಗಲೀ, ಅಜಿತೇಂದ್ರಿಯರಾದ ಬೇರೆ ಮಾನವರಿಂದಲಾಗಲೀ ಹೊಂದುವುದಕ್ಕೆ ಸಾಧ್ಯವಿಲ್ಲ.

೧೫. ಇಂದ್ರಿಯಾದಿಗಳನ್ನೆಲ್ಲಾ ಆಕರ್ಷಣೆಮಾಡುವ ಶಬ್ದಾದಿ ವಿಷಯಗಳನ್ನು ಜಯಿಸುವುದು ಮಾನವರಿಗೆ ಯಾವಾಗಲೂ ಕಷ್ಟವೇ ಸರಿ. ಯುಕ್ತವಾಗಿ ಆಚರಿಸಬೇಕಾಗಿರುವ ಈ ಇಂದ್ರಿಯ ಜಯವನ್ನು ಶಕ್ತನಾಗಿರುವವನು ಯಾವನಾದರೂ ಮಾಡಬಹುದು.

೧೬–೧೭. "ನಾನು, ನನ್ನದು" ಎಂಬ ಅಭಿಮಾನವು ದಮನಮಾಡಲು ಅಸಾಧ್ಯವಾದುದು. ಮನಸ್ಸು ಚಚಂಲವಾದುದು. ರಾಗದ್ವೇಷಾದಿಗಳನ್ನು ಬಿಡುವುದಕ್ಕೆ ಜನ್ಮಜನ್ಮಾಂತರಗಳಲ್ಲಾದರೂ ಶಕ್ಯವಾದೀತೇ? ಮನುಷ್ಯನು ಇಂದ್ರಿಯಗಳನ್ನು ಜಯಿಸಿ, ಪಾಪವನ್ನು ಹೋಗಲಾಡಿಸಿಕೊಂಡು, ದೇವತ್ವವನ್ನು ಹೊಂದಿದನು

**ಸೋಽಹಮಿಚ್ಛಾಮಿ ದೇವೇಶ ತ್ವತ್ಪ್ರಸಾದಾದನಿರ್ಜಿತೈಃ ।**
**ರಾಗಾದಿಭಿರಮರ್ತ್ಯತ್ವಂ ಪ್ರಾಪುಃ ಪ್ರಕ್ಷೀಣಕಲ್ಮಷಾಃ　　॥ ೧೭ ॥**

**॥ ಆದಿತ್ಯ ಉವಾಚ ॥**

**ಯದ್ಯೇವಂ ಮುಕ್ತಿಕಾಮಸ್ತ್ವಂ ಗಣನಾಥ ಶೃಣುಷ್ವತಂ ।**
**ಕ್ರಿಯಾಯೋಗಂ ಸಮಸ್ತಾನಾಂ ಕ್ಲೇಶಾನಾಂ ಹಾನಿಕಾರಕಂ　　॥ ೧೮ ॥**

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ　　॥ ೧೯ ॥**

**ಮದ್ಭಾವನಾ ಮದ್ಯಜನಾ ಮದ್ಭಕ್ತಾ ಮತ್ಪರಾಯಣಾಃ ।**
**ಮಮಪೂಜಾಕರಾಶ್ಚೈವ ಮಯಿ ಯಾಂತಿ ಲಯಂ ನರಾಃ　　॥ ೨೦ ॥**

**ಸರ್ವಭೂತೇಷು ಮಾಂ ಪಶ್ಯನ್ ಸದುಪಸ್ಥಿತಮೀಶ್ವರಂ ।**
**ಕರ್ತಾಸಿ ತೇನ ಚೈವ ತ್ವಮೇವಂ ದೋಷಾ ಪ್ರಹಾಸ್ಯಸಿ　　॥ ೨೧ ॥**

---

ಎಂದೆನ್ನುವರು. ಎಲೈ ದೇದದೇವನೇ ! ಇದು ಶಕ್ಯವೇ ಎಂಬುದನ್ನು ನಾನು ನಿನ್ನ ಅನುಗ್ರಹದಿಂದ ತಿಳಿಯಲು ಆಶಿಸುತ್ತೇನೆ ಎಂದನು.

೧೮. ಆದಿತ್ಯನು ಹೇಳುತ್ತಾನೆ—ಗಣಾಧಿಪನಾದ ದಿಂಡಿಯೇ ! ಈರೀತಿ ಮುಕ್ತಿಯನ್ನಪೇಕ್ಷಿಸುವನಾಗಿದ್ದರೆ ಸಮಸ್ತ ಕ್ಲೇಶಗಳನ್ನೂ ನಾಶಮಾಡುವ ಆ ಕ್ರಿಯಾ ಯೋಗವನ್ನು ಕೇಳು.

೧೯. ನನ್ನಲ್ಲಿ ಮನಸ್ಸುಳ್ಳವನೂ, ನನ್ನಲ್ಲಿ ಭಕ್ತಿಯುಳ್ಳವನೂ, ನನ್ನನ್ನು ಪೂಜಿಸುವವನೂ ಆಗಿ ನನಗೆ ನಮಸ್ಕಾರಮಾಡು. ಹೀಗೆ ನನ್ನಲ್ಲಿ ಸೇರಿ ನನ್ನಲ್ಲಿಯೇ ಆಸಕ್ತನಾಗಿ ನೀನು ಆತ್ಮಸ್ವರೂಪನಾದ ನನ್ನನ್ನೇ ಹೊಂದುತ್ತೀಯೆ.

೨೦. ನನ್ನನ್ನು ಭಾವಿಸುವವರೂ, ನನ್ನನ್ನು ಉದ್ದೇಶಿಸಿ ಯಜ್ಞಮಾಡತಕ್ಕವರೂ, ನನ್ನಲ್ಲಿ ಭಕ್ತಿಯುಳ್ಳವರೂ, ನನ್ನಲ್ಲೇ ಆಸಕ್ತರೂ, ನನ್ನನ್ನು ಪೂಜಿಸತಕ್ಕವರೂ, ಇವರೆಲ್ಲಾ ನನ್ನಲ್ಲೇ ಲಯಹೊಂದುತ್ತಾರೆ.

೨೧. ಸರ್ವಭೂತಗಳಲ್ಲಿಯೂ ಅಧಿಷ್ಠಾನರೂಪವಾಗಿರುವ ಈಶ್ವರನಾದ ನನ್ನನ್ನು ಕಾಣುತ್ತಾ ನಾನು ಯಾವಕಾರಣದಿಂದ ಹೀಗೆ ಕರ್ತೃವಾಗಿದ್ದೇನೆ ಎಂದು ಭಾವಿಸುತ್ತಾ ಇದ್ದರೆ ದೋಷಗಳನ್ನೆಲ್ಲಾ ಕಳೆದುಕೊಳ್ಳುತ್ತೀಯೆ !

ಜಂಗಮಾ ಜಂಗಮೇ ಜ್ಞಾತೇ ಮಯ್ಯಾಸಕ್ತೇ ಸಮಂತತಃ ।
ರಾಗಲೋಭಾದಿನಾಶೇನ ಭವಿತ್ರೀ ಕೃತಕೃತ್ಯತಾ ॥ ೨೨ ॥

ಭಕ್ತ್ಯಾ ಚ ಪ್ರಣಯೇನಾಪಿ ಚಂಚಲಂ ಚ ಮನೋ ಯದಿ ।
ಮಯ್ಯಾವೇಶಂ ದಧದ್ಭೂಯಃ ಕುರು ಮದ್ರೂಪಿಣೀಂ ತನುಂ ॥ ೨೩ ॥

ಸುವರ್ಣರಜತಾದ್ಯೈಸ್ತ್ವಂ ಶೈಲಮೃದ್ದಾರು ಲೇಖನಂ ।
ಪೂಜೋಪಹಾರೈರ್ವಿವಿಧೈಃ ಸಂಪೂಜಯ ವಿರೋಚನಂ ॥ ೨೪ ॥

ತಸ್ಯಾಶ್ರಿತಂ ಸಮಾವಿಶ್ಯ ಸರ್ವಭಾವೇನ ಸರ್ವದಾ ।
ಪೂಜಿತಾ ಸೈವ ತೇ ಭಕ್ತ್ಯಾ ಧ್ಯಾತಾಚೈವೋಪಕಾರಿಣೀ ॥ ೨೫ ॥

ಗಚ್ಛನ್ ತಿಷ್ಠನ್ ಸ್ವಪನ್ ಭುಂಜನ್ ತಾಮೇವಾಗ್ರೇ ಚ ಪೃಷ್ಠತಃ ।
ಉಪರ್ಯಧಸ್ತಥಾ ಪಾರ್ಶ್ವೇ ಚಿಂತಯಂಸ್ತನ್ಮಯಶ್ಚ ವೈ ॥ ೨೬ ॥

---

೨೨. ಸರ್ವತ್ರ ಸುತ್ತಲೂ ಇರುವ ಚರಾಚರಗಳು ನನ್ನಲ್ಲೇ ಆಸಕ್ತವಾಗಿದೆಯೆಂದು ತಿಳಿವುಂಟಾದಾಗ ರಾಗ, ದ್ವೇಷ, ಲೋಭ ಮುಂತಾದುವು ನಾಶಹೊಂದಿ ಮಾನವನಿಗೆ ಕೃತಕೃತ್ಯತೆಯುಂಟಾಗುವುದು.

೨೩. ಮನಸ್ಸು ಚಂಚಲವಾಗಿದ್ದರೆ ಭಕ್ತಿಯಿಂದಲೂ, ಪ್ರೀತಿಯಿಂದಲೂ ನನ್ನಲ್ಲಿ ಆಸಕ್ತಿ ಹೊಂದಿ ಪುನಃ ಶರೀರವನ್ನು ನನ್ನ ರೂಪವುಳ್ಳದ್ದನ್ನಾಗಿ ಮಾಡು.

೨೪. ಚಿನ್ನ, ಬೆಳ್ಳಿ ಮುಂತಾದ ಲೋಹಗಳಿಂದಲೋ, ಕಲ್ಲು, ಮಣ್ಣು, ಮರ ಇವುಗಳಿಂದಲೋ ಸೂರ್ಯಮಂಡಲ ಪ್ರತಿಕೃತಿಯನ್ನು ಮಾಡಿ ನಾನಾವಿಧವಾದ ಪೂಜಾದ್ರವ್ಯಗಳಿಂದ ಆ ಪ್ರತಿಕೃತಿಯನ್ನು ಪೂಜಿಸು.

೨೫. ಆ ಪ್ರತಿಕೃತಿಯನ್ನು ಸದಾ ಸರ್ವಭಾವದಿಂದಲೂ, ಸರ್ವಪ್ರಕಾರದಿಂದಲೂ ಭಾವನೆಮಾಡು. ಆ ಪ್ರತಿಕೃತಿಯನ್ನು ಹೀಗೆ ಭಕ್ತಿಯಿಂದ ಪೂಜೆ, ಧ್ಯಾನ ಇವನ್ನು ಮಾಡಿದರೆ ಅದು ಉಪಕಾರಮಾಡುತ್ತದೆ.

೨೬-೨೭. ನೀನು ನಡೆಯುವಾಗ, ನಿಂತಾಗ, ನಿದ್ರಿಸುವಾಗ, ಭೋಜನಮಾಡುವಾಗ ಆ ಪ್ರತಿಕೃತಿಯು ನಿನ್ನ ಹಿಂದೆ, ಮುಂದೆ, ಮೇಲೆ, ಕೆಳಗೆ, ಪಾರ್ಶ್ವಗಳ ಇರುವಂತೆ ಭಾವಿಸಿ ತನ್ಮಯನಾಗಿ ತೀರ್ಥೋದಕದಿಂದ ಅಭಿಷೇಕಮಾಡಿ ಗಂಧಪುಷ್ಪಾದಿ

ಸ್ನಾನೈಸ್ತೀರ್ಥೋದಕೈರ್ಹೃದ್ಯೈಃ ಪುಷ್ಪೈರ್ಗಂಧಾನುಲೇಪನೈಃ ।
ವಾಸೋಭಿರ್ಭೂಷಣೈರ್ಭಕ್ತ್ಯೈಃ ಗೀತವಾದ್ಯೈರ್ಮನೋರಮೈ ॥ ೨೭ ॥

ಯಚ್ಚ ಯಚ್ಚ ತವೇಷ್ಟಂ ವೈ ಕಿಂಚಿದ್ಭೋಜ್ಯಾದಿಕಂ ಶುಭಂ ।
ಭಕ್ತಿನಮ್ರೋ ಗಣಶ್ರೇಷ್ಠ ಪ್ರೀಣಯಸ್ವ ಕೃತಿಂ ಮಮ ॥ ೨೮ ॥

ರಾಗೇಣಾಕೃಷ್ಯತೇ ತಾತ ಗಂಧರ್ವಾಭಿಮುಖಂ ಯದಿ ।
ಮಯಿ ಬುದ್ಧಿಂ ಸಮಾವೇಶ್ಯ ಗಾಯೇಥಾ ಯಾಃ ಕಥಾ ಮಮ ॥ ೨೯ ॥

ಕಥಯಾ ರಮತೇ ಚೇತೋ ಯದಿ ತದ್ಭವತೋ ಮಮ ।
ಶ್ರೋತವ್ಯಾಃ ಪ್ರೀತಿಯೋಗೇನ ಮತ್ಸ್ವರೂಪೋದಯಾಃ ಕಥಾಃ ॥ ೩೦ ॥

ಏವಂ ಸಮರ್ಪಿತ ಮನಾಶ್ಚೇತಸೋ ಯೇಽನ್ಯಆಶ್ರಯಾಃ ।
ಹೇಯಾಂಸ್ತಾನ್ನಿಖಿಲಾನ್ ದಿಂಡೇ ಪರಿತ್ಯಜ್ಯ ಸುಖೀಭವ ॥ ೩೧ ॥

---

ಗಳಿಂದಲೂ, ವಸ್ತ್ರಾಭರಣಗಳಿಂದಲೂ, ಅರ್ಚಿಸಿ ಭಕ್ಷ್ಯಗಳನ್ನು ನಿವೇದಿಸಿ ಮನೋಹರವಾದ ಗೀತೆಗಳು, ವೀಣಾದಿ ವಾದ್ಯಗಳು, ಇವುಗಳಿಂದಲೂ ಸೇವೆಮಾಡಿ ನಿನಗೆ ಇಷ್ಟವಾದ ಶುಭಕರವಾದ ಭಕ್ಷ್ಯಭೋಜ್ಯ ವಸ್ತುಗಳನ್ನು ಅರ್ಪಣೆಮಾಡಿ ನನ್ನ ಪ್ರತಿಕೃತಿಗೆ ತೃಪ್ತಿಯನ್ನುಂಟುಮಾಡು.

೨೮-೩೦. ಎಲೈ ದಿಂಡಿಯೇ! ಗಾನವನ್ನು ಕೇಳಬೇಕು ಎಂಬ ನಿಮಿತ್ತದಿಂದ ಗಂಧರ್ವರ ಕಡೆ ಪ್ರಸರಿಸಿದ್ದ ದೃಷ್ಟಿಯನ್ನು ಪ್ರತಿಕೃತಿನಿವಿಷ್ಟವಾದ ಸೂರ್ಯನಲ್ಲಿ ತಿರುಗಿಸಿದರೆ, ನನ್ನಲ್ಲಿ ಬುದ್ಧಿಯುಂಟುಮಾಡುವುದು. ನನ್ನ ಕಥೆಗಳನ್ನು ಗಾನಮಾಡು. ಕಥೆಗಳನ್ನು ಕೇಳುವುದರಿಂದ ನಿನ್ನ ಮನಸ್ಸಿಗೆ ಸಂತೋಷವುಂಟಾಗುವುದೆಂದು ತೋರಿದರೆ ನನ್ನ ಸ್ವರೂಪ, ಉದಯ ಮುಂತಾದುವನ್ನು ಆಶ್ರಯಿಸಿದ ಕಥೆಗಳನ್ನೇ ಪ್ರೀತಿಯಿಂದ ಕೇಳು.

೩೧. ಎಲೈ ದಿಂಡಿಯೇ! ಹೀಗೆ ಸೂರ್ಯ ಕಥೆಯಲ್ಲೇ ಮನಸ್ಸಿಟ್ಟು ಹೇಯವಾದ ಅನ್ಯಾಶ್ರಯಗಳನ್ನು ಬಿಟ್ಟು ಸುಖಿಯಾಗು.

ಅಕ್ಷೀಣ ರಾಗದ್ವೇಷೋಽಪಿ ಮತ್ಪ್ರಿಯಃ ಪರಮಃ ಪರಮ್ ।
ಪದಮಾಪ್ಸ್ಯೋಷಿ ಮಾಭೈಷೀಃ ಮಯ್ಯರ್ಪಿತಮನಾ ಭವ ॥ ೩೨ ॥

ಮಯಿ ಸಂನ್ಯಸ್ಯ ಸರ್ವಂ ತ್ವಮಾತ್ಮಾನಂ ಯತ್ನವಾನ್ ಭವ ।
ಮದರ್ಥಂ ಕುರು ಕರ್ಮಾಣಿ ಮಾ ಚ ಧರ್ಮವ್ಯತಿಕ್ರಮಂ ॥ ೩೩ ॥

ಏವಂ ವ್ಯಪೋಹ್ಯ ಹತ್ಯಾಸ್ತ್ವಂ ಬ್ರಹ್ಮಣೋ ಮೋಕ್ಷ್ಯಸೇ ಭವಾತ್ ।
ಏತೇನೈವೋಪದೇಶೇನ ವ್ಯಾಖ್ಯಾತಮಖಿಲಂ ತವ ॥ ೩೪ ॥

ಕ್ರಿಯಾಯೋಗಂ ಸಮಾಸ್ಥಾಯ ಮದರ್ಪಿತ ಮನಾಭವ ॥ ೩೫ ॥

॥ ದಿಂಡಿರುವಾಚಃ ॥

ಮದ್ಧಿತಾಯ ಜಗನ್ನಾಥ ಕ್ರಿಯಾ ಯೋಗಾಮೃತಂ ಮಮ ।
ವಿಸ್ತರೇಣ ಸಮಾಖ್ಯಾಹಿ ಪ್ರಸನ್ನಸ್ತ್ವಂ ಹಿ ದುಃಖಹಾ ॥ ೩೬ ॥

---

೩೨. ನಿನ್ನ ಮನಸ್ಸಿನ ರಾಗ ದ್ವೇಷವೆಂಬ ದೋಷಗಳು ಕಮ್ಮಿಯಾಗದಿದ್ದರೂ ನೀನು ನನಗೆ ಪ್ರಿಯನೆನಿಸಿ ಶ್ರೇಷ್ಠನಾಗಿ ಪರಮಪದವನ್ನು (ಶ್ರೇಷ್ಠವಾದ ಸ್ಥಾನವನ್ನು) ಹೊಂದುತ್ತೀ, ಹೆದರಬೇಡ ನನ್ನಲ್ಲೇ ಮನಸ್ಸಿಡುವವನಾಗು.

೩೩. ನೀನು ನಿನ್ನ ಮನಸ್ಸನ್ನೆಲ್ಲಾ ನನ್ನಲ್ಲಿ ಇಟ್ಟು ನನ್ನ ಧ್ಯಾನದಲ್ಲಿ ಪ್ರಯತ್ನವುಳ್ಳವನಾಗು. ಕರ್ಮಗಳನ್ನು ನನಗಾಗಿ ಮಾಡು. ಧರ್ಮ ವಿರುದ್ಧವಾದ ಕೆಲಸ ಮಾಡಬೇಡ.

೩೪. ಹೀಗೆ ನೀನು ಮಾಡುವುದರಿಂದ ಬ್ರಹ್ಮಹತ್ಯವನ್ನು ಕಳೆದುಕೊಂಡು ಸಂಸಾರದಿಂದ ಮುಕ್ತನಾಗುವೆ.

೩೫. ಈ ಉಪದೇಶದಿಂದಲೇ ನಿನಗೆ ಎಲ್ಲವನ್ನೂ ತಿಳಿಸಿದಂತೆ ಆಯಿತು. ಕರ್ಮಯೋಗವನ್ನು ಆಶ್ರಯಿಸುವುದರಲ್ಲಿ ಮನಸ್ಸಿಟ್ಟವನಾಗು ಎಂದನು.

೩೬. ದಿಂಡಿ ಹೇಳುತ್ತಾನೆ—ಎಲೈ ಜಗತ್ಪತಿಯೇ! ನನ್ನ ಹಿತಕ್ಕಾಗಿ ಅಮೃತ ಸದೃಶವಾದ ಕರ್ಮಯೋಗವನ್ನು ನನಗೆ ವಿಸ್ತಾರವಾಗಿ ಹೇಳು. ನೀನು ಪ್ರಸನ್ನನಾದರೆ ಸಮಸ್ತ ದುಃಖಗಳನ್ನು ಹೋಗಲಾಡಿಸುವವನಲ್ಲವೇ ?

ತ್ವಾಮೃತೇ ನ ಹಿ ತದ್ವಕ್ತುಂ ಸಮರ್ಥೋಽನ್ಯೋ ಜಗದ್ಗುರೋ ।
ಗುಹ್ಯಮೇತತ್ಪವಿತ್ರಂ ಚ ತಥಾಚಕ್ಷ್ವ ಪ್ರಸೀದ ಮೇ ॥ ೩೭ ॥

॥ ಆದಿತ್ಯ ಉವಾಚಃ ॥

ಆಖ್ಯಾಸ್ಯತೇ ತದಖಿಲಂ ನಿರ್ವಿಕಲ್ಪಂ ಗಣಾಧಿಪ ।
ಇತ್ಯುಕ್ತ್ವಾಂತರ್ದಧೇ ದೇವಃ ಸರ್ವಲೋಕಪ್ರದೀಪಕಃ ॥ ೩೮ ॥

ಸ ಚ ದಿಂಡಿರ್ಮಹಾತೇಜಾ ಜಗಾಮಾಶು ನಭೋಗತಿಂ ॥ ೩೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ದಿಂಡ್ಯಾದಿತ್ಯ ಸಂವಾದ ವರ್ಣನಂ ನಾಮ ದ್ವಿಷಷ್ಟಿತಮೋಽಧ್ಯಾಯಃ.



---

೩೭. ಓ ಜಗದ್ಗುರುವೇ ! ನಿನ್ನನ್ನು ಬಿಟ್ಟರೆ ಮತ್ತೆಯಾರೊಬ್ಬನೂ ಅದನ್ನು ಹೇಳಲು ಸಮರ್ಥನಲ್ಲ. ರಹಸ್ಯವಾಗಿಯೂ, ಪರಿಶುದ್ಧವಾಗಿಯೂ ಇರುವ ಕರ್ಮ ಯೋಗವನ್ನು ನನಗೆ ಹೇಳು. ನನ್ನ ವಿಷಯದಲ್ಲಿ ಪ್ರಸನ್ನನಾಗು ಎಂದನು.

೩೮. ಆದಿತ್ಯನು ಹೇಳುತ್ತಾನೆ—ಗಣಾಧಿಪನಾದ ದಿಂಡಿಯೇ ನಿಸ್ಸಂದೇಹವಾಗಿ ಅದೆಲ್ಲವನ್ನೂ ಕ್ರಮೇಣ ಹೇಳಲಾಗುವುದು ಎಂದು ಹೇಳಿ ಲೋಕಪ್ರಕಾಶಕನಾದ ಸೂರ್ಯನು ಅಂತರ್ಧಾನ ಹೊಂದಿದನು.

೩೯. ಮಹಾತೇಜಸ್ವಿಯಾದ ದಿಂಡಿಯೂ ಜಾಗ್ರತೆಯಾಗಿ ಆಕಾಶಮಾರ್ಗ ದಲ್ಲಿ ಹೋದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮ ಪರ್ವದಲ್ಲಿ ದಂಡಿ ಮತ್ತು ಆದಿತ್ಯರ ಸಂವಾದ ವರ್ಣನೆಯೆಂಬ ಅರವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಷಷ್ಟಿತಮೋಽಧ್ಯಾಯಃ

॥ ಸುಮಂತುರುವಾಚ ॥

ಪ್ರಣಮ್ಯ ಶಿರಸಾ ದೇವಂ ಸುರಜ್ಯೇಷ್ಠಂ ಚತುರ್ಮುಖಂ ।
ಉವಾಚ ಸ ಮಹಾತೇಜಾ ದಿಂಡಿರ್ಲೋಕೇಶಮಾದರಾತ್ ॥ ೧ ॥

ದೇವದೇವೇನ ಭವತಾದಿಷ್ಟೋಽಸ್ಮಿ ಚ ಮಹಾತ್ಮನಾ ।
ಕ್ರಿಯಾಯೋಗಾಮೃತಂ ಸರ್ವಮಾಖ್ಯಾಸ್ಯತಿ ಭವಾನ್ಕಿಲ ॥ ೨ ॥

ಸ ತ್ವಾಂ ಪೃಚ್ಛಾಮ್ಯಹಂ ಬ್ರಹ್ಮನ್ ಕ್ರಿಯಾಯೋಗಂ ನಿರಂತರಂ ।
ಸಂತೋಷಯಿತುಮೀಶೇ ಹಂ ಯಥಾವದ್ವಕ್ತುಮರ್ಹಸಿ ॥ ೩ ॥

---

## ಅರವತ್ತಮೂರನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಆ ಮಹಾತೇಜಸ್ವಿಯಾದ ದಿಂಡಿಯು ಸುರಜ್ಯೇಷ್ಠನೂ ಚತುರ್ಮುಖನೂ ಆದ ಬ್ರಹ್ಮನಿಗೆ ತಲೆವಾಗಿ ನಮಸ್ಕರಿಸಿ ಆ ಲೋಕೇಶನನ್ನು ಕುರಿತು ಹೀಗೆ ಹೇಳಿದನು.

೨. ದೇವದೇವನೂ ಮಹಾತ್ಮನೂ ಆದ ನೀನು ನನಗೆ ಅಮೃತಸದೃಶವಾದ ಯೋಗವನ್ನು ಹೇಳುತ್ತೇನೆ ಎಂದು ಅಪ್ಪಣೆ ಕೊಡಿಸಿದ್ದೆಯಷ್ಟೆ.

೩. ಎಲೈ ಬ್ರಹ್ಮನೇ ! ಸಮಗ್ರವಾದ ಆ ಕ್ರಿಯಾಯೋಗವನ್ನು ನಿರೂಪಿಸ ಬೇಕೆಂದು ನಾನು ನಿನ್ನನ್ನು ಕೇಳಿಕೊಳ್ಳುತ್ತೇನೆ. ನೀನು ಅದನ್ನು ಹೇಳುವುದಕ್ಕೆ ಅರ್ಹನಾಗಿದ್ದೀಯೆ, ನಾನು ನಿನ್ನನ್ನು ಸಂತೋಷಪಡಿಸುವುದಕ್ಕೆ ಶಕ್ತನಾಗಿದ್ದೇನೆ, ದಯವಿಟ್ಟು ಹೇಳಬೇಕು ಎಂದನು.

॥ ಬ್ರಹ್ಮೋವಾಚ ॥

ಏಹ್ಯೇಹಿ ಮತ್ಸಕಾಶಂ ಚ ಮತ್ಸಮೀಪೇ ಗಣಾಧಿಪ ।
ಬ್ರಹ್ಮಹತ್ಯಾ ನಿವಿಷ್ಟಾ ತೇ ದರ್ಶನಾದೇವ ನಶ್ಯತಿ ॥ ೪ ॥

ಅನುಗ್ರಾಹ್ಯೋಽಸಿ ಭೂತೇಶ ಭಾಸ್ಕರಸ್ಯಾಮಿತೌಜಸಃ ।
ಆರಾಧನಾಯ ಭೂತೇಶ ಯದೀಶೇ ಪ್ರವಣಂ ಮನಃ ॥ ೫ ॥

ಯದಿ ದೇವಪತಿಂ ಭಾನುಮಾರಾಧಯಿತುಮಿಚ್ಛಸಿ ।
ಭಗವಂತಮನಾದ್ಯಂತಂ ಭವದೀಕ್ಷಾಗುಣಾನ್ವಿತಃ ॥ ೬ ॥

ನಹ್ಯದೀಕ್ಷಾನ್ವಿತೈರ್ಭಾನುಃ ಜ್ಞಾತುಂ ಸ್ತೋತುಂ ಚ ತತ್ತ್ವತಃ ।
ದ್ರಷ್ಟುಂ ವಾ ಶಕ್ಯತೇ ಮೂಢೈಃ ಪ್ರವೇಷ್ಟುಂ ಕುತ ಏವ ಹಿ ॥ ೭ ॥

ಜನ್ಮಭಿರ್ಬಹುಭಿಃ ಪೂತಾಃ ನರಾಸ್ತದ್ಗತಚೇತಸಃ ।
ಭವಂತಿ ಭಗವನ್ ಸೌರಾಸ್ತದಾ ದೀಕ್ಷಾಗುಣಾನ್ವಿತಾಃ ॥ ೮ ॥

---

೪. ಬ್ರಹ್ಮನು ಹೇಳಿದನು—ಅಯ್ಯಾ ಗಣಾಧಿಪನಾದ ದಿಂಡಿಯೇ, ನನ್ನ ಸಮೀಪಕ್ಕೆ ಬಾ, ನಿನಗೆ ಪ್ರಾಪ್ತವಾಗಿರುವ ಬ್ರಹ್ಮಹತ್ಯೆಯು ನನ್ನ ದರ್ಶನದಿಂದಲೇ ನಾಶವಾಯಿತು.

೫. ಎಲೈ ಭೂತೇಶನೇ! ಅಮಿತಪರಾಕ್ರಮಿಯಾದ ಸೂರ್ಯನ ಅನುಗ್ರಹಕ್ಕೆ ನೀನು ಅರ್ಹನಾಗಿದ್ದೀಯೆ, ಏಕೆಂದರೆ ಈಶ್ವರನಾದ ನಿನ್ನ ಮನಸ್ಸು ಆರಾಧನೆಗೆ ಅಧೀನವಾಗಿರುತ್ತದೆ.

೬. ದೇವಾಧಿಪತಿಯೂ, ಭಗವಂತನೂ, ಆದ್ಯಂತರಹಿತನೂ, ಆದ ಸೂರ್ಯನನ್ನು ಆರಾಧಿಸಲು ನೀನು ಅಪೇಕ್ಷಿಸಿದ್ದೇ ಆದರೆ ದೀಕ್ಷಾಯುಕ್ತನಾಗಿಯೂ, ಗುಣಯುತನಾಗಿಯೂ ಇರಬೇಕು.

೭. ದೀಕ್ಷಾಯುಕ್ತರಲ್ಲದವರು ಸೂರ್ಯದೇವನನ್ನು ಸ್ತೋತ್ರಮಾಡುವುದಕ್ಕೂ ಸಹ ನಿಜವಾಗಿ ಶಕ್ತರಲ್ಲ. ಹೀಗಿರುವಲ್ಲಿ ಮೂಢರಾದವರು ಸೂರ್ಯನಲ್ಲಿ ಪ್ರವೇಶಮಾಡುವುದಕ್ಕಾಗಲಿ, ನೋಡುವುದಕ್ಕಾಗಲಿ ಹೇಗೆ ಶಕ್ತರಾದಾರು ?

೮. ಎಲೈ ಭಗವಂತನೇ! ಅನೇಕ ಜನ್ಮಗಳು ಸೇವೆಮಾಡಿದುದರಿಂದ ಪರಿಶುದ್ಧರೂ ಸೂರ್ಯನಲ್ಲೇ ಆಸಕ್ತವಾದ ಮನಸ್ಸುಳ್ಳವರೂ ಆದ ಮನುಷ್ಯರು

**ಅನೇಕ ಜನ್ಮಸಂಸಾರಚಿತೇ ಪಾಪ ಸಮುಚ್ಚಯೇ ।**
**ನಾಕ್ಷೀಣೇ ಜಾಯತೇ ಪುಂಸಾಂ ಮಾರ್ತಂಡಾಭಿಮುಖೀ ಮತಿಃ ॥ ೯ ॥**

**ಪ್ರದ್ವೇಷಂ ಯಾತಿ ಮಾರ್ತಂಡೇ ದ್ವಿಜಾ‌ನ್ ವೇದಾಂಶ್ಚ ನಿಂದತಿ ।**
**ಯೋ ನರಸ್ತಂ ವಿಜಾನೀಯಾತ್ಪಾಪ ಬೀಜಸಮುದ್ಭವಂ ॥ ೧೦ ॥**

**ಪಾಖಂಡೇಷು ರತಿಃ ಪುಂಸಾಂ ಹೇತುವಾದಾನುಕೂಲತಾ ।**
**ಜಾಯತೇ ವಿಷ್ಣುಮಾಯಾಂಭಃಪತಿತಾನಾಂ ದುರಾತ್ಮನಾಂ ॥ ೧೧ ॥**

**ಯದಾ ಪಾಪಕ್ಷಯಃ ಪುಂಸಾಂ ತದಾ ವೇದದ್ವಿಜಾತಿಷು ।**
**ರವೌ ಚ ದೇವದೇವೇಶೇ ಶ್ರದ್ಧಾ ಭವತಿ ನಿಶ್ಚಲಾ ॥ ೧೨ ॥**

---

ಸೂರ್ಯಸೇವಾದೀಕ್ಷೆಯಿಂದ ಆ ದೀಕ್ಷಾಂಗವಾಗಿ ದಾರ (ತಂತು) ಗಳನ್ನು ಧರಿಸಿದ್ದರೆ ಸೌರರು ಎನಿಸುತ್ತಾರೆ.

೯. ಅನೇಕ ಜನ್ಮದಲ್ಲಿ ಸಂಸಾರದಿಂದ ಸಂಚಿತವಾದ ಪಾಪಸಮೂಹವು ಕ್ಷೀಣವಾಗದೇ ಇದ್ದರೆ ಬುದ್ಧಿಯು ಸೂರ್ಯಾಭಿಮುಖವಾಗುವುದಿಲ್ಲ.

೧೦. ಯಾವನು ಸೂರ್ಯನ ವಿಷಯದಲ್ಲಿ ಮಹಾದ್ವೇಷಮಾಡುವನೋ, ಮತ್ತು ಬ್ರಾಹ್ಮಣರನ್ನೂ ವೇದಗಳನ್ನೂ ನಿಂದಿಸುವನೋ ಅಂಥವನನ್ನು ಪಾಪಬೀಜೋತ್ಪನ್ನನೆಂದು ತಿಳಿಯಬೇಕು.

೧೧. ವಿಷ್ಣುಮಾಯೆಯೆಂಬ ಜಲಮಧ್ಯದಲ್ಲಿ ಬಿದ್ದ, ದುರಾತ್ಮರಾದ ಮನುಷ್ಯರಿಗೆ ಸ್ಪಷ್ಟಪ್ರತೀತಿಯಿಲ್ಲದ ನಾಸ್ತಿಕರಲ್ಲಿ ಪ್ರೀತಿಯೂ ಹೇಯವಾದಗಳಿಗೆ ಆನುಕೂಲ್ಯಬುದ್ಧಿಯೂ ಉಂಟಾಗುತ್ತದೆ.

೧೨. ಮನುಷ್ಯರಿಗೆ ಯಾವಾಗ ಪಾಪಕ್ಷಯವಾಗುವುದೋ ಆಗ ವೇದಗಳಲ್ಲಿಯೂ, ಬ್ರಾಹ್ಮಣಾದಿಗಳಲ್ಲಿಯೂ, ದೇವದೇವೇಶನಾದ ಸೂರ್ಯನಲ್ಲಿಯೂ ಸಹ ನಿಶ್ಚಲವಾದ ಭಕ್ತಿಯುಂಟಾಗುತ್ತದೆ.

ಯದಾ ಸ್ವಲ್ಪಾವಶೇಷಸ್ತು ನರಾಣಾಂ ಪಾಪಸಂಚಯಃ ।
ತದಾ ದೀಕ್ಷಾಗುಣಾನ್ಸರ್ವೇ ಭಜಂತೇ ನಾತ್ರ ಸಂಶಯಃ ॥ ೧೩ ॥

ಭ್ರಮತಾ ಮತ್ರ ಸಂಸಾರೇ ನರಾಣಾಂ ಪಾಪದುರ್ಗಮೇ ।
ಹಸ್ತಾವಲಂಬದೋಽಪ್ಯೇಕೋ ಭಕ್ತಿಪ್ರೀತೋ ದಿವಾಕರಃ ॥ ೧೪ ॥

ಸರ್ವಭಾಗವತೋ ಭೂತ್ವಾ ಸರ್ವಪಾಪಹರಂ ರವಿಂ ।
ಆರಾಧಯೇಹ ತಂ ಭಕ್ತ್ಯಾ ಪ್ರೀತಿಮೇಷ್ಯತಿ ಭಾಸ್ಕರಃ ॥ ೧೫ ॥

॥ ದಿಂಡಿರುವಾಚ ॥

ಕಿಂ ಲಕ್ಷಣಾ ನರಾ ದೀಕ್ಷಾಮರ್ಹಂತಿ ಪದ್ಮಸಂಭವ ।
ಯಚ್ಚ ದೀಕ್ಷಾನ್ವಿತೈಃ ಕಾರ್ಯಂ ತನ್ಮೇ ಕಥಯ ಪದ್ಮಜ ॥ ೧೬ ॥

॥ ಬ್ರಹ್ಮೋವಾಚ ॥

ಕರ್ಮಣಾ ಮನಸಾ ವಾಚಾ ಪ್ರಾಣಿನಾಂ ಯೋ ನ ಹಿಂಸಕಃ ।
ಭಾವಭಕ್ತಶ್ಚ ಮಾರ್ತಂಡೇ ತಸ್ಯ ದೀಕ್ಷಾಗುಣಾನ್ವಿತಾಃ ॥ ೧೭ ॥

---

೧೩. ಮನುಷ್ಯರಿಗೆ ಪಾಪಸಮೂಹವು ನಾಶವಾಗಿ ಸ್ವಲ್ಪಮಾತ್ರ ಉಳಿದಿದ್ದಾಗ ದೀಕ್ಷಾಗುಣಗಳೆಲ್ಲಾ ಆ ಅಲ್ಪಪಾಪದ ನಾಶಕ್ಕೆ ಸಹಾಯವಾಗಿ ಒದಗಿಬರುತ್ತವೆ.

೧೪. ತನ್ನಲ್ಲಿ ಜನರು ಮಾಡುವ ಭಕ್ತಿಯಿಂದ ಪ್ರೀತನಾಗಿ, ಪಾಪದಿಂದ ದುರ್ಗಮವಾದ ಸಂಸಾರದಲ್ಲಿ ಬಿದ್ದು ತೊಳಲುತ್ತಿರುವ ಮನುಷ್ಯರಿಗೆ, ಹಸ್ತಾವಲಂಬನನಾಗುವಂಥವನು ಸೂರ್ಯನೊಬ್ಬನೇ ಸರಿ.

೧೫. ಸರ್ವಪ್ರಕಾರದಿಂದಲೂ ಭಗವದ್ಭಕ್ತನಾಗಿ, ಸರ್ವಪಾಪಗಳನ್ನೂ ನಾಶಮಾಡತಕ್ಕವನಾದ ಸೂರ್ಯನನ್ನು ಆರಾಧನೆಮಾಡು. ಸೂರ್ಯನು ಸುಪ್ರೀತನಾಗುತ್ತಾನೆ" ಎಂದನು.

೧೬. ದಿಂಡಿ ಹೇಳುತ್ತಾನೆ—"ಎಲೈ ಪದ್ಮಸಂಭವನೇ ! ಯಾವ ಲಕ್ಷಣವುಳ್ಳ ಮನುಷ್ಯರು ಸೂರ್ಯದೀಕ್ಷೆ ವಹಿಸಲು ಅರ್ಹರೆನಿಸುವರು ? ದೀಕ್ಷೆ ವಹಿಸಿದವರು ಮಾಡಬೇಕಾದ ಕಾರ್ಯವೇನು ? ಎಂಬುದನ್ನು ನನಗೆ ಹೇಳು" ಎಂದನು.

೧೭. ಬ್ರಹ್ಮನು ಹೇಳಿದನು—ಯಾವನು ಮನೋವಾಕ್ಕಾಯಗಳಿಂದ ಪ್ರಾಣಿಹಿಂಸೆ ಮಾಡತಕ್ಕವನಲ್ಲವೋ, ಮತ್ತು ಸೂರ್ಯನಲ್ಲಿ ಮನಃಪೂರ್ವಕವಾದ ಭಕ್ತಿಯುಳ್ಳವನೋ, ಅವನ ದೀಕ್ಷೆಯು ಗುಣಕಾರಿಯಾದುದು.

ಬ್ರಾಹ್ಮಣಾಂಶ್ಚೈವ ದೇವಾಂಶ್ಚ ನಿತ್ಯಮೇವ ನಮಸ್ಯತಿ ।
ನ ಚ ದ್ರೋಗ್ಧಾ ಪರಂ ವಾದೇ ಸ ಮಾರ್ತಂಡಂ ಸಮರ್ಚತಿ ॥ ೧೮ ॥

ಸರ್ವಾನ್ ದೇವಾನ್ ರವಿಂ ವೇತ್ತಿ ಸರ್ವಲೋಕಾಂಶ್ಚ ಭಾಸ್ಕರಂ ।
ತಸ್ಮಾಚ್ಚ ನಾನ್ಯಮಾತ್ಮಾನಂ ಸ ನರಃ ಸೌರತಾಂ ವ್ರಜೇತ್ ॥ ೧೯ ॥

ದೇವಂ ಮನುಷ್ಯಮನ್ಯಂ ವಾ ಪಶುಪಕ್ಷಿಪಿಪೀಲಿಕಾಂ ।
ತರುಪಾಷಾಣಕಾಷ್ಠಾನಿ ಭೂಮ್ಯಂಭೋ ಗಗನಂ ದಿಶಃ ॥ ೨೦ ॥

ಆತ್ಮಾನಂ ಚಾಪಿ ದೇವೇಶಾದ್ವ್ಯತಿರಿಕ್ತಂ ದಿವಾಕರಾತ್ ।
ಯೋ ನ ಜಾನಾತಿ ಯತಿಷು ಸ ವೈ ದೀಕ್ಷಾಗುಣಾನ್ ಭಜೇತ್ ॥ ೨೧ ॥

ಭಾವಂ ನ ಕುರುತೇ ಯಸ್ತು ಸರ್ವಭೂತೇಷು ಪಾಪಕಂ ।
ಕರ್ಮಣಾ ಮನಸಾ ವಾಚಾ ಸ ತು ದೀಕ್ಷಾಂ ಸಮರ್ಹತಿ ॥ ೨೨ ॥

---

೧೮. ಯಾವನು ದೇವತೆಗಳಿಗೂ ಬ್ರಾಹ್ಮಣರಿಗೂ ನಿತ್ಯವೂ ನಮಸ್ಕರಿಸುವನೋ, ವಿಶೇಷತಃ ವಾದ ಮಾಡುವುದರಲ್ಲಿ ಯಾವನು ದ್ರೋಹಮಾಡುವುದಿಲ್ಲವೋ ಅಂಥವನು ಸೂರ್ಯನನ್ನು ಪೂಜಿಸಲು ಯೋಗ್ಯನು.

೧೯. ಎಲ್ಲ ದೇವತೆಗಳನ್ನೂ ಸೂರ್ಯನೆಂದೂ, ಸರ್ವಲೋಕಗಳನ್ನೂ ಸೂರ್ಯಸ್ವರೂಪವೆಂದೂ, ಯಾವನು ತಿಳಿಯುವನೋ ; ಯಾರು ತನ್ನನ್ನು ಸೂರ್ಯನಿಂದ ಬೇರೆಯಲ್ಲವೆಂದು ಭಾವಿಸುವವನೋ ; ಅವನು ಸೂರ್ಯಭಕ್ತನೆನಿಸುವನು.

೨೦–೨೧. ದೇವತೆಗಳು, ಮನುಷ್ಯರು, ಅಥವಾ ಇತರರು, ಮತ್ತು ಪಶು ಪಕ್ಷಿಗಳು, ಇರುವೆಗಳು, ಗಿಡಗಳು, ಕಲ್ಲುಗಳು, ಕಡ್ಡಿಗಳು, ಭೂಮಿ, ಜಲ, ಆಕಾಶ, ದಿಕ್ಕುಗಳು, ಮತ್ತು ಯತಿಗಳು, ತಾನು ಈ ಎಲ್ಲವೂ ದೇವೇಶ್ವರನಾದ ಸೂರ್ಯನಿಗಿಂತ ಬೇರೆಯೆಂದು ಯಾವನು ತಿಳಿಯುವುದಿಲ್ಲವೋ ; ಮತ್ತು ಸರ್ವವೂ ಸೂರ್ಯಸ್ವರೂಪವೆಂದು ಯಾವನು ತಿಳಿಯುವನೋ ; ಅವನು ದೀಕ್ಷಾಗುಣಗಳನ್ನು ಹೊಂದುವನು.

೨೨. ಯಾವನು ಮನೋವಾಕ್ ಕರ್ಮಗಳಿಂದ ಎಲ್ಲ ಪ್ರಾಣಿಗಳಲ್ಲೂ ದುರಭಿಪ್ರಾಯವನ್ನು ಹೊಂದುವುದಿಲ್ಲವೋ ಅವನೇ ದೀಕ್ಷೆಗೆ ಅರ್ಹನಾಗುತ್ತಾನೆ.

**ಸು ತಪ್ತೇನೇಹ ತಪಸಾ ಯಜ್ಞೈರ್ವಾ ಬಹುದಕ್ಷಿಣೈಃ ।**
**ತಾಂ ಗತಿಂ ನ ನರಾ ಯಾಂತಿ ಯಾಂ ಗತಾಃ ಸೂರ್ಯಮಾಶ್ರಿತಾಃ　　॥ ೨೩ ॥**

**ಯೇನ ಸರ್ವಾತ್ಮನಾ ಭಾನೌ ಭಕ್ತ್ಯಾ ಭಾವೋ ನಿವೇಶಿತಃ ।**
**ಗಣೇಶ್ವರ ಯಥಾರ್ಥತ್ವಾತ್ ಶ್ಲಾಘ್ಯಃ ಸೌರಸ್ಸ ಮಾನವಃ　　॥ ೨೪ ॥**

**ಅಪಿ ನಃ ಸ ಕುಲೇ ಧನ್ಯಃ ಜಾಯತೇ ಕುಲಪಾವನಃ ।**
**ಭಗವಾನ್ ಭಕ್ತಿಭಾವೇನ ಯೇನ ಭಾನುರುಪಾಸ್ಯತೇ　　॥ ೨೫ ॥**

**ಯಃ ಕಾರಯತಿ ದೇವಾರ್ಚಾಂ ಹೃದಯಾಲಂಬನಂ ರವೇಃ ।**
**ಸ ನರೋ ಭಾನುಸಾಲೋಕ್ಯಮಾಪ್ನೋತಿ ಧೂತಕಲ್ಮಷಃ　　॥ ೨೬ ॥**

**ಯಸ್ತು ದೇವಾಲಯಂ ಭಾನೋಃ ಭಕ್ತ್ಯಾ ಕಾರಯತಿ ಧ್ರುವಂ ।**
**ಸ ಸಪ್ತಪುರುಷಾನ್ ಲೋಕಂ ಭಾನೋರ್ನಯತಿ ಮಾನವಃ　　॥ ೨೭ ॥**

---

೨೩. ಸೂರ್ಯನನ್ನು ಆಶ್ರಯಿಸಿದವರು ಯಾವ ಗತಿಯನ್ನು ಹೊಂದುವರೋ ಅಂಥ ಗತಿಯನ್ನು; ಚೆನ್ನಾಗಿ ಮಾಡಿದ ತಪಸ್ಸು, ಮತ್ತು ಹೆಚ್ಚು ದಕ್ಷಿಣೆಗಳನ್ನು ಕೊಟ್ಟು ಮಾಡಿದ ಯಜ್ಞಗಳು, ಇವುಗಳಿಂದ ಸಹ ಹೊಂದಲಾರರು.

೨೪. ಯಾವನು ಸರ್ವಪ್ರಯತ್ನದಿಂದಲೂ ಭಕ್ತಿಮಾಡಿ ತನ್ನ ಮನಸ್ಸನ್ನು ಸೂರ್ಯನಲ್ಲೇ ಇಡುವನೋ ಅವನು ಕೃತಾರ್ಥನಾದುದರಿಂದ ಶ್ಲಾಘ್ಯನಾದ ಸೌರನಾಗುವನು.

೨೫. ಯಾವನು ಭಗವಂತನಾದ ಸೂರ್ಯನಲ್ಲಿ ಭಕ್ತಿಭಾವದಿಂದ ಉಪಾಸನ ಮಾಡುವನೋ, ಅಂಥವನು ನಮ್ಮ ವಂಶದಲ್ಲಿ ಹುಟ್ಟಿದ್ದಾದರೆ ನಮ್ಮ ಕುಲವನ್ನೇ ಪವಿತ್ರಮಾಡುವನು.

೨೬. ಸೂರ್ಯನ ಮನಸ್ಸಿಗೆ ಮೆಚ್ಚುವಂತೆ ಪೂಜೆಯನ್ನು ಯಾವನು ಮಾಡಿಸುತ್ತಾನೋ ಅಂತಹ ಮಾನವನು ತನ್ನ ಪಾಪವನ್ನು ಕಳೆದುಕೊಂಡು ಸೂರ್ಯಲೋಕಕ್ಕೆ ಹೋಗುವನು.

೨೭. ಯಾವನು ಭಕ್ತಿಯಿಂದ ಸೂರ್ಯನಿಗೆ ದೃಢವಾದ ದೇವಾಲಯವನ್ನು ಕಟ್ಟಿಸುವನೋ, ಅಂಥವನು ತನ್ನ ವಂಶದ ಏಳುತಲೆಯವರನ್ನೂ ಸೂರ್ಯಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ.

ಯಾವಂತ್ಯಬ್ದಾನಿ ದೇವಾರ್ಚಾ ರವೇಸ್ತಿಷ್ಠತಿ ಮಂದಿರೇ ।
ತಾವದ್ವರ್ಷಸಹಸ್ರಾಣಿ ಸೂರ್ಯಲೋಕೇ ಮಹೀಯತೇ ॥ ೨೮ ॥

ದೇವಾರ್ಚಾಲಕ್ಷಣೋಪೇತಾ ಯದ್ಗೃಹೇ ಸಂತತೋ ವಿಧಿಃ ।
ನಿಷ್ಕಾಮಂ ಚ ಮನೋ ಯಸ್ಯ ಸ ಯಾತ್ಯಕ್ಷರತುಲ್ಯತಾಂ ॥ ೨೯ ॥

ಪುಷ್ಪಾಣಿ ಚ ಸುಗಂಧೀನಿ ಮನೋಜ್ಞಾನಿ ಚ ಯಃ ಪುಮಾನ್ ।
ಪ್ರಯಚ್ಛತಿ ಸಹಸ್ರಾಂಶೋಃ ಸದಾ ಪ್ರಯತಮಾನಸಃ ॥ ೩೦ ॥

ಧೂಪಾಂಶ್ಚ ತಾಂಸ್ತಾನ್ ವಿವಿಧಾನ್ ಗಂಧಾಢ್ಯಂ ಚಾನುಲೇಪನಂ ।
ನರಃ ಸೋಽನುದಿನಂ ಯಜ್ಞಂ ಕರೋತ್ಯಾರಾಧನಂ ರವೇಃ ॥ ೩೧ ॥

ಯಜ್ಞೇಶೋ ಭಗವಾನ್ ಪೂಷಾ ಸದಾ ಕ್ರತುಭಿರಿಜ್ಯತೇ ।
ಬಹೂಪಕರಣಾ ಯಜ್ಞಾ ನಾನಾಸಂಭಾರವಿಸ್ತರಾಃ ॥ ೩೨ ॥

---

೨೮ ಆ ಸೂರ್ಯದೇವಾಲಯದಲ್ಲಿ ಎಷ್ಟು ವರ್ಷಗಳು ದೇವತಾಪೂಜೆಯು ನಡೆಯುತ್ತಿರುವುದೋ, ಅಷ್ಟು ಸಹಸ್ರ ವರ್ಷಕಾಲ ಅವನು ಸೂರ್ಯಲೋಕದಲ್ಲಿ ಪೂಜಿತನಾಗುವನು.

೨೯. ಯಾವನ ಮನೆಯಲ್ಲಿ ದೇವಾರ್ಚನಲಕ್ಷಣಯುಕ್ತವಾದ ವಿಧಿಯು ಸಂತತವಾಗಿ ಆಚರಣೆಯಲ್ಲಿರುವುದೋ; ಯಾವನ ಮನಸ್ಸು ನಿಷ್ಕಾಮವಾಗಿರುವುದೋ; ಅವನು ನಾಶರಹಿತವಾದ ಪರಬ್ರಹ್ಮದ ಸಾಮ್ಯವನ್ನು ಹೊಂದುವನು.

೩೦. ಸದಾ ಪರಿಶುದ್ಧವಾದ ಮನಸ್ಸುಳ್ಳವನಾಗಿ ಸುವಾಸನಾಯುಕ್ತವಾದ ಪುಷ್ಪಗಳನ್ನೂ ಫಲಗಳನ್ನೂ ಯಾವನು ಸೂರ್ಯನಿಗೆ ಕೊಡುವನೋ ಅಂಥವನೂ,

೩೧. ಮತ್ತು ಸುಗಂಧ ಯುಕ್ತಗಳಾದ ಬಗೆಬಗೆಯ ಧೂಪಗಳನ್ನೂ ಸುಗಂಧ ಯುಕ್ತವಾದ ಚಂದನಾದ್ಯನುಲೇಪನಗಳನ್ನೂ ಸೂರ್ಯನಿಗೆ ಸಮರ್ಪಿಸುವ ಮನುಷ್ಯನೂ ಪ್ರತಿದಿನವೂ ಸೂರ್ಯಾರಾಧನ ರೂಪವಾದ ಯಜ್ಞವನ್ನು ಮಾಡಿದಂತೆಯೇ ಸರಿ.

೩೨. ಯಜ್ಞಪತಿಯೂ ಭಗವಂತನೂ ಆದ ಸೂರ್ಯನನ್ನು ಯಾವಾಗಲೂ ಯಜ್ಞಗಳಿಂದ ತುಷ್ಟಿಪಡಿಸಬೇಕು. ಯಜ್ಞಗಳಿಗೆ ಅನೇಕ ಸಂಭಾರ

**ನ ತೇ ದಂಡಿನ್ನವಾಪ್ಯಂತೇ ಮನುಷ್ಯೈ ರಲ್ಪಸಂಚಯ್ಯೈಃ ।**
**ಭಕ್ತ್ಯಾ ತು ಪುರುಷೈಃ ಪೂಜಾ ಕೃತಾ ದೂರ್ವಾಂಕುರೈರಪಿ ।**
**ಭಾನೋರ್ದದಾತಿ ಹಿ ಫಲಂ ಸರ್ವಯಜ್ಞೈಃ ಸುದುರ್ಲಭಂ　　॥ ೩೩ ॥**

**ಯಾನಿ ಪುಷ್ಪಾಣಿ ಹೃದ್ಯಾನಿ ಧೂಪಗಂಧಾನುಲೇಪನಂ ।**
**ದಯಿತಂ ಭೂಷಣಂ ಯಚ್ಚ ಪ್ರೀತಯೇ ಚೈವ ವಾಸಸೀ　　॥ ೩೪ ॥**

**ಯಾನಿ ಚಾಭ್ಯವಹಾರಾಣಿ ಭಕ್ಷ್ಯಾಣಿ ಚ ಫಲಾನಿ ಚ ।**
**ಪ್ರಯಚ್ಛ ತಾನಿ ಮಾರ್ತಂಡೇ ಭವೇಥಾಶ್ಚೈವ ತನ್ಮನಾಃ　　॥ ೩೫ ॥**

**ಆದ್ಯಂ ತು ಭುವನಾಧಾರಂ ಯಥಾಶಕ್ತ್ಯಾ ಪ್ರಸಾದಯ ।**
**ಆರಾಧ್ಯ ಯಾತಿ ತಂ ದೇವಂ ತಸ್ಮಿನ್ನೇವ ನರೋ ಲಯಂ　　॥ ೩೬ ॥**

---

ಗಳೂ, ಅನೇಕ ಉಪಕರಣಗಳೂ ಬೇಕು. ಸ್ವಲ್ಪವಸ್ತುಗಳನ್ನು ಕೂಡ ಹಾಕಿಕೊಂಡಿರುವವನು ಯಜ್ಞಗಳನ್ನು ಮಾಡಲು ಸಾಧ್ಯವಿಲ್ಲ.

೩೩. ದೂರ್ವಾಂಕುರಗಳೆಂಬ ಸಾಮಗ್ರಿಗಳಿಂದ ಭಕ್ತಿಪೂರ್ವಕವಾಗಿ ಮನುಷ್ಯರು ಸೂರ್ಯನಿಗೆ ಪೂಜೆಮಾಡಿದರೆ ಸರ್ವಯಜ್ಞವನ್ನು ಮಾಡಿದರೂ ಲಭಿಸದಂಥ ಫಲವು ಲಭಿಸುತ್ತದೆ.

೩೪. ಯಾವ ಪುಷ್ಪಗಳು ಮನೋಹರಗಳಾಗಿರುತ್ತವೆಯೋ, ಯಾವ ಧೂಪ ಗಂಧ ಅನುಲೇಪನಗಳು (ಮೈಗೆ ತೊಡೆದುಕೊಳ್ಳುವ ವಸ್ತು) ಸೂರ್ಯನಿಗೆ ಇಷ್ಟಗಳೋ, ಯಾವ ಆಭರಣಗಳೂ ವಸ್ತ್ರಗಳೂ ಸೂರ್ಯನಿಗೆ ಇಷ್ಟಗಳೋ,

೩೫. ಯಾವ ಭಕ್ಷ್ಯಗಳೂ ಫಲಗಳೂ ಸೂರ್ಯನಿಗೆ ಪ್ರಿಯಗಳೋ, ಅವುಗಳನ್ನು ಸೂರ್ಯನಲ್ಲಿ ಸಮರ್ಪಿಸು. ಅವನಲ್ಲೇ ಮನಸುಳ್ಳವನಾಗು.

೩೬. ಸಮಸ್ತಕ್ಕೂ ಆದಿಯೂ, ಲೋಕಾಧಾರನೂ, ಆದ ಸೂರ್ಯನನ್ನು ಶಕ್ತ್ಯನುಸಾರ ಸಂತೋಷಪಡಿಸು. ಆ ಸ್ವಾಮಿಯನ್ನು ಸೇವಿಸಿದ ಮನುಷ್ಯನು ಆ ಸ್ವಾಮಿಯಲ್ಲೇ ಲೀನನಾಗುವನು.

ಪುಷ್ಪೈಸ್ತೀರ್ಥೋದಕೈರ್ಗಂಧೈಃ ಮಧುನಾ ಸರ್ಪಿಷಾ ತಥಾ ।
ಕ್ಷೀರೇಣ ಸ್ನಾಪಯೇದ್ಭಾನುಂ ಗ್ರಹೇಶಂ ಗೋಪತಿಂ ಖಗಂ ॥ ೩೭ ॥

ದಧಿಕ್ಷೀರಹ್ರದಾನ್ ಪುಣ್ಯಾನ್ ತತೋ ಲೋಕಾನ್ಮಧುಶ್ಚ್ಯುತಃ ।
ಪ್ರದಾಸ್ಯತಿ ಗಣಶ್ರೇಷ್ಠ ನಿರ್ವೃತಿಂ ಚ ವಿಲಕ್ಷಣಾಂ ॥ ೩೮ ॥

ಸ್ತೋತ್ರೈರ್ಗೀತೈಸ್ತಥಾ ವಾದ್ಯೈಃ ಬ್ರಾಹ್ಮಣಾನಾಂ ಚ ತರ್ಪಣೈಃ ।
ಮನಸಶ್ಚೈವ ಯೋಗೇನ ಆರಾಧಯ ದಿವಾಕರಂ ॥ ೩೯ ॥

ಆರಾಧ್ಯ ತಂ ಜಗನ್ನಾಥಂ ಮಯಾ ಸರ್ಗಃ ಪ್ರವರ್ತಿತಃ ।
ವಿಷ್ಣುಶ್ಚ ಪಾಲಯೇಲ್ಲೋಕಾಂಸ್ತಮಾರಾಧ್ಯ ದಿವಾಕರಂ ॥ ೪೦ ॥

ರುದ್ರಶ್ಚ ಪ್ರಾಪ್ತವಾನ್ ದೇವೀಂ ಭವಾನೀಂ ತತ್ಪ್ರಸಾದತಃ ।
ದೀಪ್ಯಂತೇ ಋಷಯಶ್ಚಾಪಿ ತಮಾರಾಧ್ಯ ದಿವಾಕರಂ ॥ ೪೧ ॥

---

೩೭. ಪುಷ್ಪೋದಕಗಳಿಂದಲೂ ತೀರ್ಥೋದಕಗಳಿಂದಲೂ ಗಂಧ ದ್ರವ್ಯಗಳಿಂದಲೂ, ಜೇನುತುಪ್ಪ, ತುಪ್ಪ, ಹಾಲು ಇವುಗಳಿಂದಲೂ, ಗ್ರಹಾಧೀಶ್ವರನೂ ಕಿರಣಗಳ ಸ್ವಾಮಿಯೂ, ಆಕಾಶಸಂಚಾರಿಯೂ, ಆದ ಸೂರ್ಯನಿಗೆ ಅಭಿಷೇಕಮಾಡಿಸಬೇಕು

೩೮. ಹೀಗೆ ಮಾಡಿದರೆ ಅವನು ತುಪ್ಪ ಹಾಲುಗಳನ್ನು ಕೊಡುವ ಮಧುರಸಸ್ರಾವಿಗಳಾದ ಪುಣ್ಯಲೋಕಗಳನ್ನು ಸೇರಿ ವಿಶೇಷ ಲಕ್ಷಣಯುಕ್ತವಾದ ಮುಕ್ತಿಯನ್ನು ಪಡೆಯುವನು.

೩೯. ಸ್ತೋತ್ರಗಳು, ಗಾನಗಳು, ವಾದ್ಯಗಳು, ಬ್ರಾಹ್ಮಣ ಸಂತರ್ಪಣಗಳು, ಇವುಗಳನ್ನು ಮಾಡುವುದರ ಮೂಲಕ ಮನಸ್ಸನ್ನು ದೇವರಲ್ಲಿಡು. ತನ್ಮೂಲಕ ಸೂರ್ಯನನ್ನು ಆರಾಧಿಸು.

೪೦. ಜಗನ್ನಾಥನಾದ ಆ ಸೂರ್ಯನನ್ನು ಸೇವಿಸಿ, ನಾನು ಸೃಷ್ಟಿಕಾರ್ಯವನ್ನು ನಡೆಯಿಸಿದೆನು. ವಿಷ್ಣುವೂ ಆ ಸೂರ್ಯನನ್ನಾರಾಧಿಸಿ ಲೋಕಗಳನ್ನು ಪಾಲಿಸಿದನು. ರುದ್ರನೂ ಆ ಸೂರ್ಯನ ಅನುಗ್ರಹದಿಂದ ಪಾರ್ವತೀದೇವಿಯನ್ನು ಪಡೆದನು.

೪೧. ಋಷಿಗಳೂ ಆ ಸೂರ್ಯನನ್ನು ಆರಾಧಿಸಿ ತೇಜೋವಂತರಾಗಿರುವರು. ನೀನೂ ಈ ವಿಧಾನಗಳಿಂದಲೂ ಉಪವಾಸಗಳಿಂದಲೂ ಸೂರ್ಯನನ್ನು ಸೇವಿಸು.

**ಸ ತ್ವಮೇಭಿಃ ಪ್ರಕಾರೈಸ್ತ್ವಮುಪವಾಸೈಶ್ಚ ಭಾಸ್ಕರಂ ।**
**ತೋಷಯಾಬ್ದಂ ಹಿ ತುಷ್ಟೋಽಸೌ ಭಾನುರ್ದ್ವಂದ್ವಪ್ರಶಾಂತಿದಃ ॥ ೪೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮಿಾ ಕಲ್ಪೇ ಬ್ರಹ್ಮದಿಂಡಿ ಸಂವಾದೇ ಆದಿತ್ಯಕ್ರಿಯಾಯೋಗೋನಾಮ ತ್ರಿಷಷ್ಟಿತಮೋಽಧ್ಯಾಯಃ.**



---

೪೨. ಈರೀತಿ ಒಂದುವರ್ಷದವರೆಗೆ ಆಚರಿಸಿ ಸಂತೋಷಪಡಿಸು, ಸಂತುಷ್ಟನಾದ ಈ ಸೂರ್ಯನು ಕ್ಷುತ್ಪಿಪಾಸಾದಿ ದ್ವಂದ್ವದುಃಖಗಳ ಶಾಂತಿಯನ್ನು ಕೊಡುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮ ಪರ್ವದಲ್ಲಿ ಬ್ರಹ್ಮ, ದಿಂಡಿ ಇವರ ಸಂವಾದದಲ್ಲಿ ಆದಿತ್ಯಕ್ರಿಯಾ ಯೋಗವರ್ಣನವೆಂಬ ಅರವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುಷ್ಷಷ್ಟಿತಮೋಽಧ್ಯಾಯಃ

---

॥ ದಿಂಡಿರುವಾಚ ॥

ಉಪವಾಸೈಃ ಸುರಶ್ರೇಷ್ಠ ಕಥಂ ತುಷ್ಯತಿ ಭಾಸ್ಕರಃ ।
ಪರಿಹಾರಾಂಸ್ತಥಾಚಕ್ಷ್ವ ಯೇ ತ್ಯಾಜ್ಯಾಶ್ಚೋಪವಾಸಿಭಿಃ ॥ ೧ ॥

ಯದ್ಯತ್ಕಾರ್ಯಂ ಯಥಾ ಚೈವ ಭಾಸ್ಕರಾರಾಧನೇ ನರೈಃ ।
ತತ್ಸರ್ವಂ ವಿಸ್ತರಾದ್ಬ್ರಹ್ಮನ್ ಯಥಾವದ್ವಕ್ತುಮರ್ಹಸಿ ॥ ೨ ॥

---

## ಅರವತ್ತನಾಲ್ಕನೆಯ ಅಧ್ಯಾಯ

೧. ದಿಂಡಿಯು ಹೇಳುತ್ತಾನೆ—ಎಲೈ ದೇವತಾಶ್ರೇಷ್ಠನೇ ! ಉಪವಾಸ ಮಾಡುವುದರಿಂದ ಸೂರ್ಯನು ಹೇಗೆ ಸಂತುಷ್ಟನಾಗುವನು ? ಮತ್ತು ಉಪವಾಸ ವ್ರತದಲ್ಲಿ ಪರಿಹರಿಸಬೇಕಾದುದನ್ನು (ಎಂದರೆ ಯಾವ ವಸ್ತುಗಳನ್ನು ಸ್ವೀಕರಿಸದೆ ಬಿಡಬೇಕು ಎಂಬುದನ್ನು) ಹೇಳು.

೨. ಸೂರ್ಯಾರಾಧನೆಯಲ್ಲಿ ಮನುಷ್ಯರು ಏನು ಮಾಡಬೇಕು ? ಮತ್ತು ಹೇಗೆ ಮಾಡಬೇಕು ? ಅವೆಲ್ಲವನ್ನೂ ವಿಸ್ತಾರವಾಗಿ ಹೇಳುವುದಕ್ಕೆ ನೀನೇ ಸಮರ್ಥನಾಗಿದ್ದೀಯೆ ಎಂದನು.

॥ ಬ್ರಹ್ಮೋವಾಚ ॥

**ಸ್ಮೃತಃ ಸಂಪೂಜಿತೋ ಧೂಪಪುಷ್ಪಾನ್ನೈರ್ಭಾನುರಾದರಾತ್ ।**
**ಭೋಗಿನಾಮುಪಕಾರಾಯ ಕಿಂ ಪುನಶ್ಚೋಪವಾಸಿನಾಂ ॥ ೩ ॥**

**ಉಪಾವೃತ್ತಸ್ಯ ಪಾಪೇಭ್ಯೋ ಯಸ್ತು ವಾಸೋ ಗುಣೈಸ್ಸಹ ।**
**ಉಪವಾಸಸ್ಸ ವಿಜ್ಞೇಯಸ್ಸರ್ವಭೋಗವಿವರ್ಜಿತಃ ॥ ೪ ॥**

**ಏಕರಾತ್ರಂ ದ್ವಿರಾತ್ರಂ ವಾ ತ್ರಿರಾತ್ರಂ ನಕ್ತಮೇವ ಚ ।**
**ಉಪವಾಸೀ ರವಿಂ ಯಸ್ತು ಭಕ್ತ್ಯಾ ಧ್ಯಾಯತಿ ಮಾನವಃ ॥ ೫ ॥**

**ತನ್ನಾಮಜಾಪೀ ತತ್ಕರ್ಮನಿರತಸ್ತದ್ಗತಮಾನಸಃ ।**
**ನಿಷ್ಕಾಮಃ ಪುರುಷೋ ದಿಂಡೇ ಸ ಬ್ರಹ್ಮಪರಮಾಪ್ನುಯಾತ್ ॥ ೬ ॥**

---

೩. ಬ್ರಹ್ಮನು ಹೇಳುತ್ತಾನೆ—ದೇಹವನ್ನು ದಂಡಿಸದೆ ಚೆನ್ನಾಗಿ ತಿಂದು ಭೋಗಿಸುತ್ತಿರುವವರು, ಆದರದಿಂದ ಧ್ಯಾನಿಸಿ ಪುಷ್ಪ ಧೂಪ ನೈವೇದ್ಯಾದಿಗಳಿಂದ ಪೂಜಿಸಿದರೂ ಸೂರ್ಯನು ಸುಪ್ರೀತನಾಗಿ ಅವರಿಗೆ ಬೇಕಾದ ಉಪಕಾರಮಾಡುವನು ಎಂದೆನೋಲಿ ಸೂರ್ಯೋದ್ದೇಶದಿಂದ ಉಪವಾಸಮಾಡಿ ನಿಯಮದಿಂದ ಪೂಜಿಸಿದವರಿಗೆ ಎಂಥ ಫಲಪ್ರಾಪ್ತಿಯಾಗುವುದೆಂಬುದನ್ನು ಹೇಳತಕ್ಕದ್ದೇನು ?

೪. ಪಾಪಗಳಿಂದ ನಿವೃತ್ತನಾಗಿ ಗುಣಗಳ ಜತೆಯಲ್ಲಿ ಸರ್ವ ಭೋಗವರ್ಜಿತವಾಗಿ ವಾಸಿಸುವುದೇ ಉಪವಾಸವೆಂದು ತಿಳಿಯಬೇಕು.

೫. ಅಯ್ಯಾ ದಿಂಡಿಯೇ ! ಒಂದು ರಾತ್ರಿ ಉಪವಾಸ, ಎರಡು ರಾತ್ರಿ ಉಪವಾಸ, ಮೂರು ರಾತ್ರಿ ಉಪವಾಸ ಇವನ್ನಾಗಲಿ, ಒಂದೇ ದಿನ ನಕ್ತಭೋಜನವನ್ನಾಗಲಿ ಅಥವಾ ಒಂದು ದಿವಸ ಪೂರ್ತಿ ಉಪವಾಸವನ್ನಾಗಲಿ ಮಾಡಿ ಆಗ ಸೂರ್ಯನನ್ನು ಭಕ್ತಿಯಿಂದ ಯಾರು ಧ್ಯಾನಮಾಡುವರೋ,

೬. ಯಾವನು ಸೂರ್ಯನಾಮಾವಳಿಯನ್ನು ಜಪಿಸುವನೋ, ಯಾವನು ಸೂರ್ಯನಿಗೆ ಮಾಡಬೇಕಾದ ಉಪಚಾರ ಪೂಜೆಯಲ್ಲಿ ಸದಾ ಆಸಕ್ತನೋ, ಅಥವಾ ಸೂರ್ಯನಲ್ಲೇ ಸಂಬಂಧಿಸಿದ ಮನಸ್ಸುಳ್ಳವನೋ, ಯಾವನು ನಿಷ್ಕಾಮನಾಗಿರುವನೋ, ಅಂಥವನು ಪರಬ್ರಹ್ಮವನ್ನು ಹೊಂದುವನು.

ಯಂ ಚ ಕಾಮಮಭಿಧ್ಯಾಯ ಭಾಸ್ಕರಾರ್ಪಿತ ಮಾನಸಃ ।
ಉಪೋಷತಿ ತಮಾಪ್ನೋತಿ ಪ್ರಸನ್ನೇ ಖಗ ಮೇಽಖಿಲಂ ॥ ೭ ॥

॥ ದಿಂಡಿರುವಾಚ ॥

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಃ ಸ್ತ್ರೀಭಿಶ್ಚ ಕಂಜಜ ।
ಸಂಸಾರಗರ್ತಪಂಕಸ್ಥೈಃ ಸುಗತಿಃ ಪ್ರಾಪ್ಯತೇ ಕಥಂ ॥ ೮ ॥

॥ ಬ್ರಹ್ಮೋವಾಚ ॥

ಅನಾರಾಧ್ಯ ಜಗನ್ನಾಥಂ ಗೋಪತಿಂ ಧ್ವಾಂತನಾಶನಂ ।
ನಿರ್ವ್ಯಲೀಕೇನ ಚಿತ್ತೇನ ಕಃ ಪ್ರಯಾಸ್ಯತಿ ಸದ್ಗತಿಂ । ॥ ೯ ॥

ವಿಷಯಗ್ರಾಹಿ ವೈ ಯಸ್ಯ ನ ಚಿತ್ತಂ ಭಾಸ್ಕರಾರ್ಪಿತಂ ।
ಸ ಕಥಂ ಪಾಪಪಂಕಾಕ್ತೋ ನರೋ ಯಾಸ್ಯತಿ ಸದ್ಗತಿಂ ॥ ೧೦ ॥

---

೭. ಯಾವ ಇಷ್ಟಪ್ರಾಪ್ತಿಗಾಗಿ ಸೂರ್ಯನಲ್ಲಿ ಮನಸ್ಸಿಟ್ಟು, ಯಾವನು ಉಪವಾಸ ಮಾಡುವನೋ ಅವನು ತಾನು ಉದ್ದೇಶಿಸಿದ ಆ ಇಷ್ಟಾರ್ಥವನ್ನು ಹೊಂದುತ್ತಾನೆ. ಆಕಾಶಗಾಮಿಯೂ ಗ್ರಹಾಧಿಪನೂ ಆದ ಸೂರ್ಯನು ಯಾವನಿಗೆ ಪ್ರಸನ್ನನಾಗುವನೋ ಆತನು ಸಮಸ್ತವನ್ನೂ ಪಡೆಯುತ್ತಾನೆ.

೮. ದಿಂಡಿಯು ಹೇಳುತ್ತಾನೆ—ಓ ಬ್ರಹ್ಮನೇ ! ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸ್ತ್ರೀಯರು ಇವರೆಲ್ಲರೂ ಸಂಸಾರವೆಂಬ ಕೆಸರಿನ ಗುಂಡಿಯಲ್ಲಿ ಸಿಕ್ಕಿರುವಾಗ ಸದ್ಗತಿಯನ್ನು ಹೇಗೆ ಹೊಂದಿಯಾರು ?

೯. ಜಗನ್ನಾಥನೂ, ಅಂಧಕಾರನಿವಾರಕನೂ, ಕಿರಣಾಧಿಪತಿಯೂ ಆದ ಸೂರ್ಯದೇವನನ್ನು ಆರಾಧಿಸದೆ; ಮನಸ್ಸಿನಲ್ಲಿ ಅನೃತವಿಲ್ಲದ ನಡವಳಿಕೆಯಲ್ಲಿ ನಡೆದ ಮಾತ್ರದಿಂದ ಯಾವನು ತಾನೇ ಸದ್ಗತಿಯನ್ನು ಹೊಂದಿಯಾನು ?

೧೦. ಸೂರ್ಯನು ನಮಗೆ ಅನುಗ್ರಹಿಸಿರುವ ಮನಸ್ಸು ಯಾವಾಗ ಸದ್ವಿಷಯವನ್ನು ಗ್ರಹಿಸುವುದಿಲ್ಲವೋ, ಆಗ ಅಂತಹ ಮನಸ್ಸಿಗೆ ಪಾಪವೆಂಬ ಕೆಸರು ಮೆತ್ತಿಕೊಂಡು ಸದ್ಗತಿಯನ್ನು ಹೊಂದುವುದಿಲ್ಲ.

**ಯದಿ ಸಂಸಾರದುಃಖಾರ್ತಃ ಸುಗತಿಂ ಗಂತುಮಿಚ್ಛತಿ ।**
**ತದಾರಾಧಯ ಸರ್ವೇಶಂ ಭಾಸ್ಕರಂ ಜ್ಯೋತಿಷಾಂ ಪತಿಂ ॥ ೧೧ ॥**

**ಪುಷ್ಪೈ ಸ್ಸುಗಂಧೈರ್ಹ್ಯರ್ದ್ಯೈಶ್ಚ ಧೂಪೈ ಸ್ಸಾಗರುಚಂದನೈಃ ।**
**ವಾಸೋಭಿರ್ಭೂಷಣೈರ್ಭಕ್ಷೈಃ ಉಪವಾಸಪರಾಯಣಃ ॥ ೧೨ ॥**

**ಯದಿ ಸಂಸಾರನಿರ್ವೇದಾದಭಿವಾಂಛಸಿ ಸದ್ಗತಿಂ ।**
**ತದಾರಾಧಯ ಮಾರ್ತಂಡಂ ಭಕ್ತಿಪ್ರವಣಚೇತಸಾ ॥ ೧೩ ॥**

**ಪುಷ್ಪಾಣಿ ಯದಿ ತೇ ನ ಸ್ಯುಃ ಶಸ್ತ್ರಪಾದಪಪಲ್ಲವೈಃ ।**
**ದೂರ್ವಾಂಕುರೈರಪಿ ದಿಂಡೇ ತದಭಾವೇऽರ್ಚಯಾರ್ಯಮಂ ॥ ೧೪ ॥**

**ಪುಷ್ಪಪತ್ರಾಂಬುಭಿರ್ಧೂಪೈಃ ಯಥಾ ವಿಭವ ಆತ್ಮನಃ ।**
**ಪೂಜಿತಸ್ತುಷ್ಟಿಮತುಲಾಂ ಭಕ್ತ್ಯಾ ಯಾತ್ಯೇಕ ಚೇತಸಾಂ ॥ ೧೫ ॥**

---

೧೧.. ನೀನು ಸಂಸಾರ ದುಃಖದಿಂದ ಪೀಡಿತನಾಗಿದ್ದರೂ, ಸುಗತಿಯನ್ನು ಪಡೆಯಲು ಅಪೇಕ್ಷೆಪಡುವವನಾದರೆ ಸರ್ವೇಶನೂ ಪ್ರಕಾಶಕ್ಕೊಡೆಯನೂ ಆದ ಸೂರ್ಯನನ್ನು ಆರಾಧಿಸು.

೧೨. ಮನೋಹರಗಳಾದ ಪುಷ್ಪಗಳು, ಸುಗಂಧಗಳು, ಅಗರುಚಂದನ ಸಹಿತವಾದ ಧೂಪಗಳು, ವಸ್ತ್ರಾಭರಣಗಳು, ಭಕ್ಷ್ಯಗಳು, ಇವುಗಳನ್ನು ಸಿದ್ಧಪಡಿಸಿಕೊಂಡು ಉಪವಾಸಾಸಕ್ತನಾಗಿ ಸೂರ್ಯನನ್ನು ಆರಾಧಿಸು.

೧೩. ಸಂಸಾರದಲ್ಲಿ ಬೇಸರವಾಗಿ ವೈರಾಗ್ಯಹೊಂದಿ ನೀನು ಸದ್ಗತಿಯನ್ನು ಅಪೇಕ್ಷಿಸಿದರೆ, ಆಗ ಭಕ್ತಿನಮ್ರವಾದ ಮನಸ್ಸಿನಿಂದ ಸೂರ್ಯನನ್ನು ಆರಾಧಿಸು.

೧೪. ಓ ದಿಂಡಿಯೇ ! ಹೂಗಳು ಇಲ್ಲದಿದ್ದರೆ ಪ್ರಶಸ್ತವಾಗಿರುವ ಚಿಗುರುಗಳಿಂದಲೋ, ಅದೂ ಸಿಕ್ಕದಿದ್ದರೆ ಎಳೆಯ ಗರಿಕೆಗಳಿಂದಲೋ, ಸೂರ್ಯನನ್ನು ಆರಾಧಿಸು.

೧೫. ತನಗೆ ದ್ರವ್ಯಾನುಕೂಲವು ಎಷ್ಟುಮಟ್ಟಿಗೆ ಇದೆಯೋ ಅಷ್ಟರಲ್ಲಿ ಹೂಗಳು, ಪತ್ರೆಗಳು, ನೀರು, ಧೂಪ ಮುಂತಾದುವುಗಳನ್ನು ಒದಗಿಸಿಕೊಂಡು ಸೂರ್ಯನನ್ನು ಆರಾಧಿಸಬೇಕು. ನಾವು ಒಂದೇ ಮನಸ್ಸಿನಿಂದಲೂ ಭಕ್ತಿಪೂರ್ವಕವಾಗಿಯೂ ಆರಾಧಿಸಿದರೆ ಸೂರ್ಯನು ಸಂತೋಷಹೊಂದುತ್ತಾನೆ.

ಯಸ್ಸದಾऽऽಯತನೇ ಭಾನೋಃ ಕುರುತೇ ಮಾರ್ಜನ ಕ್ರಿಯಾಂ ।
ಸ ಯಾತ್ಯುತ್ತಮಕೇ ಸ್ಥಾನೇ ಸರ್ವಪಾಪಂ ವ್ಯಪೋಹತಿ ॥ ೧೬ ॥

ಯಾವತ್ಯಃ ಪಾಂಸುಕಣಿಕಾ ಮಾರ್ಜ್ಯಂತೇ ಭಾಸ್ಕರಾಲಯೇ ।
ದಿನಾನಿ ದಿವಿ ತಾವಂತಿ ತಿಷ್ಠತ್ಯರ್ಕಸಮೋ ನರಃ ॥ ೧೭ ॥

ಅಹನ್ಯಹನಿ ಯತ್ಪಾಪಂ ಕುರುತೇ ಗಣನಾಯಕ ।
ಗೋಚರ್ಮಮಾತ್ರಂ ಸಂಮಾರ್ಜ್ಯ ಹಂತಿ ತದ್ಭಾಸ್ಕರಾಲಯೇ ॥ ೧೮ ॥

ಯಶ್ಚಾನುಲೇಪನಂ ಕುರ್ಯಾತ್ ಭಾನೋರಾಯತನೇ ನರಃ ।
ಸೋऽಪಿ ಲೋಕಂ ಸಮಾಸಾದ್ಯ ಹಂಸೇನ ಸಹ ಮೋದತೇ ॥ ೧೯ ॥

ಮೃದಾ ಧಾತುವಿಕಾರೈರ್ವಾ ವರ್ಣಕೈರ್ಗೋಮಯೇನ ವಾ ।
ಉಪಲೇಪನಕೃದ್ಯಾತಿ ಮತ್ಪುರಂ ಯಾನಮಾಸ್ಥಿತಃ ॥ ೨೦ ॥

---

೧೬. ಯಾವನು ಸೂರ್ಯದೇವಾಲಯದಲ್ಲಿ ಯಾವಾಗಲೂ . ಗುಡಿಸುವ ಕೆಲಸ ಮಾಡುವನೋ, ಅವನು ಸಮಸ್ತ ಪಾಪಗಳಿಂದ ಬಿಡುಗಡೆಹೊಂದಿ ಉತ್ತಮ ಲೋಕಕ್ಕೆ ಹೋಗುತ್ತಾನೆ.

೧೭. ಅಷ್ಟೇ ಅಲ್ಲದೆ ಸೂರ್ಯದೇವಾಲಯದಲ್ಲಿ ಗುಡಿಸಿದ ಧೂಳಿನಲ್ಲಿ ಎಷ್ಟು ಕಣಗಳು ಇರುವುವೋ, ಅಷ್ಟು ದಿನಗಳವರೆಗೆ ಆ ಮನುಷ್ಯನು ಸೂರ್ಯನಿಗೆ ಸಮಾನವಾಗಿ ಪ್ರಕಾಶಿಸುತ್ತಾನೆ.

೧೮. ಎಲೈ ಗಣನಾಯಕನಾದ ದಿಂಡಿಯೇ! ಭಾಸ್ಕರ ದೇವಾಲಯದಲ್ಲಿ ಗೋಚರ್ಮಪ್ರಮಾಣದಷ್ಟು ಅಗಲವನ್ನು ಸಮ್ಮಾರ್ಜನಮಾಡಿದವನು (ಗುಡಿಸಿದರೆ) ಪ್ರತಿ ಹಗಲಿನಲ್ಲಿಯೂ ಮಾಡಿದ ಪಾಪವನ್ನು ಹೋಗಲಾಡಿಸಿಕೊಳ್ಳುತ್ತಾನೆ.

೧೯. ಯಾವನು ಸೂರ್ಯದೇವಾಲಯದ ನೆಲವನ್ನು ಸಾರಿಸುವನೋ, ಅವನು ಸೂರ್ಯಲೋಕವನ್ನು ಹೊಂದಿ ಸೂರ್ಯನೊಡನೆ ಸಂತೋಷಿಸುತ್ತಾನೆ.

೨೦. ಮಣ್ಣಿನಿಂದಲೋ ಗೈರಿಕಾದಿ ಧಾತುವಸ್ತುನಿರ್ಮಿತವಾದ ಬಗೆಬಗೆಯ ಬಣ್ಣಗಳಿಂದಲೋ ಗೋಮಯದಿಂದಲೋ ಸೂರ್ಯದೇವಾಲಯದ ನೆಲ, ಗೋಡೆ ಇವುಗಳನ್ನು ಬಳಿದವನು, ವಿಮಾನಾರೂಢನಾಗಿ ನನ್ನ (ಬ್ರಹ್ಮನ) ಲೋಕಕ್ಕೆ ಹೋಗುತ್ತಾನೆ.

ಉದಕಾಭ್ಯುಕ್ಷಣಂ ಭಾನೋಃ ಯಃ ಕರೋತಿ ಸದಾ ಗೃಹೇ ।
ಸೋಽಪಿ ಗಚ್ಛತಿ ಯತ್ರಾಸ್ತೇ ಭಗವಾನ್ಯಾದಸಾಂ ಪತಿಃ ॥ ೨೧ ॥

ಪುಷ್ಪಪ್ರಕರಮತ್ಯಚ್ಛಂ ಸುಗಂಧಂ ಭಾಸ್ಕರಾಲಯೇ ।
ಅನುಲಿಪ್ತೇ ನರೋ ದತ್ವಾ ನ ದುರ್ಗತಿಮವಾಪ್ನುಯಾತ್ ॥ ೨೨ ॥

ವಿಮಾನಮತಿಶೋಭಾಢ್ಯಂ ಸರ್ವರ್ತುಸುಖಭೂಷಿತಂ ।
ಸಮಾಪ್ನೋತಿ ನರೋ ದತ್ವಾ ದೀಪಕಂ ಭಾಸ್ಕರಾಲಯೇ ॥ ೨೩ ॥

ಯಸ್ತು ಸಂವತ್ಸರಂ ಪೂರ್ಣಂ ತಿಲಪಾತ್ರಪ್ರದೋ ನರಃ ।
ಧ್ವಜಂ ಚ ಭಾಸ್ಕರೇ ದದ್ಯಾತ್ ಸಮಮತ್ರ ಫಲಂ ಲಭೇತ್ ॥ ೨೪ ॥

ವಿಧೂತೋ ಹಂತಿ ವಾತೇನ ಧಾತುರಜ್ಞಾನತಃ ಕೃತಂ ।
ಪಾಪಂ ಕರ್ತುರ್ಗೃಹೇ ಭಾನೋರ್ದಿವಾ ರಾತ್ರೌ ನರಾಧಿಪ ॥ ೨೫ ॥

---

೨೧. ಸೂರ್ಯನ ದೇವಾಲಯದಲ್ಲಿ ಯಾವಾಗಲೂ ನೀರು ಚಿಮುಕಿಸುವ ಕೆಲಸ ಮಾಡಿದವನು ಜಲಾಧಿಪನಾದ ವರುಣಲೋಕಕ್ಕೆ ಹೋಗುತ್ತಾನೆ.

೨೨. ಸೂರ್ಯದೇವಾಲಯದಲ್ಲಿ ಸಾರಿಸಿ ಪರಿಶುದ್ಧಮಾಡಿದ ನೆಲದಮೇಲೆ ಬಹು ಶುಭ್ರವೂ ಸುವಾಸನಾಯುಕ್ತವೂ ಆದ ಪುಷ್ಪ ಗುಚ್ಛಗಳನ್ನಿಟ್ಟು ಅಲಂಕರಿಸುವವನು ಎಂದಿಗೂ ದುರ್ಗತಿಗೆ ಈಡಾಗದೆ ಸದ್ಗತಿಪಡೆಯುವನು.

೨೩. ಸೂರ್ಯದೇವಾಲಯದಲ್ಲಿ ದೀಪವನ್ನು ಹತ್ತಿಸಿ ಸೇವಿಸಿದವನು ಎಲ್ಲ ಋತುಧರ್ಮಗಳ ಸೌಕರ್ಯದಿಂದ ಕೂಡಿ; ಸುಖವಾಗಿಯೂ, ಅಲಂಕೃತವಾಗಿಯೂ, ಅಧಿಕ ಕಾಂತಿಯುಕ್ತವಾಗಿಯೂ, ಇರುವ ವಿಮಾನವನ್ನು ಹೊಂದುತ್ತಾನೆ.

೨೪. ಒಂದು ವರ್ಷಕಾಲ ಪೂರ್ತಿ ತಿಲಪಾತ್ರದಾನ, ಮತ್ತು ಧ್ವಜದಾನ ಇವನ್ನು ಮಾಡುವವನು, ಇವೆರಡರಿಂದಲೂ ಸಮನಾಗಿಯೇ ಫಲವನ್ನು ಹೊಂದುತ್ತಾನೆ.

೨೫. ಅಯ್ಯಾ ನರಾಧಿಪನೇ ! ಸೂರ್ಯದೇವಾಲಯದಲ್ಲಿ ದಾನಿಯೊಬ್ಬನು ದೀಪವನ್ನಿಟ್ಟಾಗ ಅದು ಗಾಳಿಯಿಂದ ಕಂಪನವಾದರೆ ಆ ದಾನಶೀಲನು ಹಗಲೂ ರಾತ್ರಿಯೂ ಅಜ್ಞಾನದಿಂದ ಮಾಡಿದ ಪಾಪಗಳೆಲ್ಲವೂ ನಾಶಹೊಂದುತ್ತವೆ.

ಗೀತವಾದ್ಯಾದಿಭಿರ್ಭಾನುಂ ಯ ಉಪಾಸ್ತೇ ತಮೋಪಹಂ ।
ಗಂಧರ್ವೈರ್ನೃತ್ಯಗೀತೈಃ ಸ ವಿಮಾನಸ್ಥೋ ನಿಷೇವ್ಯತೇ ॥ ೨೬ ॥

ಜಾತಿಸ್ಮರತ್ವಂ ಮೇಧಾಂಚ ತಥೈವೋಪರಮೇ ಸ್ಮೃತಿಂ ।
ಪ್ರಾಪ್ನೋತಿ ಗಣಶಾರ್ದೂಲ ಕೃತ್ವಾ ಪುಸ್ತಕವಾಚನಂ ॥ ೨೭ ॥

ಏವಂ ಖಗೇಶ್ವರೋ ಭಕ್ತ್ಯಾ ಯೇನ ಭಾನುರುಪಾಸಿತಃ ।
ಸ ಪ್ರಾಪ್ನೋತಿ ಗತಿಂ ಶ್ಲಾಘ್ಯಾಂ ಯಾಂ ಯಾಮಿಚ್ಛತಿ ಚೇತಸಾ ॥ ೨೮ ॥

ದೇವತ್ವಂ ಮನುಜೈಃ ಕೈಶ್ಚಿತ್ ಗಂಧರ್ವತ್ವಂ ತಥಾಪರೈಃ ।
ವಿದ್ಯಾಧರತ್ವಮಪರೈಃ ಸಂರಾಧ್ಯೇಹ ದಿವಾಕರಂ ॥ ೨೯ ॥

ಶಕ್ರಃ ಕ್ರತುಶತೇನೇಶಂ ಆರಾಧ್ಯ ಜ್ಯೋತಿಷಾಂ ಪತಿಂ ।
ದೇವೇಂದ್ರತ್ವಂ ಗತಸ್ತಸ್ಮಾನ್ನಾನ್ಯಃ ಪೂಜ್ಯತಮಃ ಕ್ವಚಿತ್ ॥ ೩೦ ॥

---

೨೬. ಯಾವನು ಅಂಧಕಾರ ವಿನಾಶಕನಾದ ಸೂರ್ಯನನ್ನು ಸಂಗೀತ ವಾದ್ಯ ವಾದನಾದಿ ಉಪಚಾರಸೇವಾದಿಗಳಿಂದ ಆರಾಧಿಸುವನೋ ಅವನು ದಿವ್ಯವಿಮಾನವನ್ನು ಪಡೆದು ಅದರಲ್ಲಿ ಗಂಧರ್ವರ ನರ್ತನ ಗಾನ ಇವುಗಳಿಂದ ಸೇವಿಸಲ್ಪಡುತ್ತಾನೆ.

೨೭. ಅಯ್ಯಾ ಗಣಾಧಿಪನಾದ ದಿಂಡಿಯೇ! ಯಾವನು ಸೂರ್ಯದೇವಾಲಯ ದಲ್ಲಿ ಪುರಾಣ ಹೇಳುವನೋ, ಅವನು ತನ್ನ ಜನ್ಮಾಂತರದ ಜಾತಿಸ್ಮರಣ ಶಕ್ತಿಯನ್ನೂ, ಕುಶಲಬುದ್ಧಿಯನ್ನೂ ಹೊಂದಿ ಉತ್ಕ್ರಮಣಕಾಲದಲ್ಲಿ ಹರಿಸ್ಮರಣೆಮಾಡುತ್ತಾನೆ.

೨೮. ಗ್ರಹೇಶ್ವರನಾದ ಸೂರ್ಯನನ್ನು ಯಾವನು-ಹೀಗೆ ಉಪಾಸನೆ ಮಾಡು ವನೋ, ಅವನು ಇತರರಿಂದ ಹೊಂದಲು ಅಸಾಧ್ಯವಾದ, ಮತ್ತು ತಾನು ಮನಸ್ಸಿನಲ್ಲಿ ಕೋರುವಂಥ, ಉತ್ತಮಗತಿಗಳೆಲ್ಲವನ್ನೂ ಹೊಂದುತ್ತಾನೆ.

೨೯. ಹೀಗೆ ಸೂರ್ಯನನ್ನು ಸೇವಿಸಿದ ಮಾನವರು ಕೆಲವರು ತಾವು ಇಚ್ಛಿ ಪಟ್ಟಂತೆ ಗಂಧರ್ವತ್ವವನ್ನೂ, ಮತ್ತೆ ಕೆಲವರು ದೇವತ್ವವನ್ನೂ, ಇನ್ನು ಕೆಲವರು ವಿದ್ಯಾಧರತ್ವವನ್ನೂ ಹೊಂದಿದ್ದಾರೆ.

೩೦. ತೇಜೋಮಂಡಲಾಧಿಪತಿಯೂ, ಈಶನೂ, ಆದ ಸೂರ್ಯನನ್ನು ನೂರು ಯಜ್ಞಗಳಿಂದ ಆರಾಧಿಸಿ, ಶಕ್ರನು ದೇವೇಂದ್ರತ್ವವನ್ನು ಪಡೆದನು. ಆದ್ದರಿಂದ ಇವನಿ ಗಿಂತ ಅತ್ಯಂತ ಪೂಜ್ಯನು ಬೇರೆಯಾರೂ ಎಲ್ಲಿಯೂ ಇಲ್ಲ.

**ಬ್ರಹ್ಮಚಾರಿ ಗೃಹಸ್ಥಾನಾಂ ವನಸ್ಥಾನಾಂ ಗಣಾಧಿಪ ।**
**ನಾನ್ಯಃ ಪೂಜ್ಯಸ್ತಥಾ ಸ್ತ್ರೀಣಾಮ್ಮತೇ ದೇವಂ ದಿವಾಕರಂ ॥ ೩೧ ॥**

**ಮಧ್ಯೇ ಪರಿವ್ರಾಜಿಕಾನಾಂ ಸಹಸ್ರಾಂಶುಂ ಮಹಾತ್ಮನಾಂ ।**
**ಮೋಕ್ಷದ್ವಾರಂ ವಿಶಂತೀಹ ತಂ ರವಿಂ ವಿಜಿತಾತ್ಮನಾಂ ॥ ೩೨ ॥**

**ಏವಂ ಸರ್ವಾಶ್ರಮಾಣಾಂ ಹಿ ಸಹಸ್ರಾಂಶುಃ ಪರಾಯಣಂ ।**
**ಸರ್ವೇಷಾಂ ಚೈವ ವರ್ಣಾನಾಂ ಗ್ರಹೇಶೋ ವೈ ಗತಿಃ ಪರಾ ॥ ೩೩ ॥**

**ಶೃಣುಷ್ವಗ ದತಃ ಕಾಮಮುಪವಾಸಾಂಸ್ತಥಾಪರಾ ।**
**ಶೃಣು ದಿಂಡೇ ಮಹಾಪುಣ್ಯಫಲಕಾಂ ಸಪ್ತಮೀಂ ಪರಾಂ ॥ ೩೪ ॥**

---

೩೧. ಎಲೈ ಗಣಾಧಿಪನಾದ ದಿಂಡಿಯೇ! ಸ್ತ್ರೀಯರು ಪೂಜಿಸಬೇಕಾದರೂ; ಬ್ರಹ್ಮಚಾರಿಗಳು, ಗೃಹಸ್ಥಾಶ್ರಮಿಗಳು, ವಾನಪ್ರಸ್ಥರು, ಈ ಮೂರು ಆಶ್ರಮಗಳವರು ಪೂಜಿಸಬೇಕಾದರೂ; ಸೂರ್ಯದೇವನನ್ನು ಬಿಟ್ಟು ಇನ್ನು ಯಾರೂ ಪೂಜ್ಯರು ಇಲ್ಲ.

೩೨. ಮನೋನಿಗ್ರಹಮಾಡಿಕೊಂಡಿರುವ ಮಹಾತ್ಮರಾದ ಸನ್ಯಾಸಿಗಳಲ್ಲಿ ಕೆಲವರು; ಮೋಕ್ಷದ್ವಾರವಾಗಿರುವ ಆ ಸಹಸ್ರಕಿರಣನಾದ ಸೂರ್ಯನನ್ನು ಪ್ರವೇಶಿಸುತ್ತಾರೆ.

ವಿಶೇಷ ವಿಷಯ—ಯೋಗಯುಕ್ತನಾದ ಸನ್ಯಾಸಿಯೂ, ಯುದ್ಧನಲ್ಲಿ ಹಿಮ್ಮೆಟ್ಟದೇ ಹೋರಾಡಿದ ಯೋಧನೂ ದೇಹತ್ಯಾಗಾನಂತರ ಸೂರ್ಯಮಂಡಲವನ್ನು ಭೇದಿಸಿಕೊಂಡು ಊರ್ಧ್ವಲೋಕಕ್ಕೆ ಹೋಗತಕ್ಕವರೆಂದು ಶಾಸ್ತ್ರಾಧಾರವನ್ನು ತಿಳಿಸುವ ಶ್ಲೋಕವಿದು.

ದ್ವಾವೇತಾ ಸುಖಿನಾ ಲೋಕೇ ಸೂರ್ಯಮಂಡಲ ಭೇದಿನಾ ।
ಪರಿವ್ರಾಡ್ಯೋಗಯುಕ್ತಶ್ಚ ರಣೇ ಚಾಭಿಮುಖೀ ಹತಃ ॥

೩೩. ಹೀಗೆ ಗ್ರಹಾಧಿಪತಿಯೂ, ಸಹಸ್ರಕಿರಣನೂ ಆದ ಸೂರ್ಯನು ಎಲ್ಲಾ ಆಶ್ರಮಗಳಿಗೂ ಉತ್ತಮಸ್ಥಾನವೂ, ಎಲ್ಲವರ್ಣಗಳವರಿಗೂ ಇವನೇ ಗತಿಯೂ ಆಗಿದ್ದಾನೆ.

೩೪. ಎಲೈ ದಿಂಡಿಯೇ! ಇಚ್ಛಾನುಸಾರವಾಗಿ ಮಾಡಬಹುದಾದ ಉಪವಾಸ ಮೊದಲಾದ ಇತರ ವಿಷಯಗಳನ್ನು ಕುರಿತು ನಾನು ಹೇಳಿದ್ದನ್ನು ನೀನು ಕೇಳಿದೆಯಷ್ಟೆ. ಮಹಾಪುಣ್ಯಫಲಪ್ರದವಾದುದೂ, ಶ್ರೇಷ್ಠವಾದದ್ದೂ, ಆದ ಸಪ್ತಮಿಯ ವಿಷಯವಾಗಿ ನಾನು ಹೇಳುವುದನ್ನು ಕೇಳಯ್ಯಾ.

ಆದಿತ್ಯಾರಾಧನಾಯೈನಾಂ ಸರ್ವಪಾಪಹರಾಂ ಶಿವಾಂ ।
ಯಾಮುಪೋಷ್ಯ ನರೋ ಭಕ್ತ್ಯಾ ಮುಚ್ಯತೇ ಸರ್ವಪಾತಕೈಃ ॥ ೩೫ ॥

ತಥಾ ಲೋಕಮವಾಪ್ನೋತಿ ಸೂರ್ಯಸ್ಯಾಮಿತತೇಜಸಃ ।
ಅಥ ಭಾದ್ರಪದೇ ಮಾಸಿ ಶುಕ್ಲಪಕ್ಷೇ ಸಮಾಗತೇ ॥ ೩೬ ॥

ಸೋಪೋಷ್ಯಾ ಪ್ರಥಮಂ ತಾತ ವಿಧಾನಂ ಶೃಣು ತತ್ರ ವೈ ।
ಅಯಾಚಿತಂ ಚತುರ್ಥ್ಯಾಂ ತು ಪಂಚಮ್ಯಾಮೇಕಭೋಜನಂ ॥ ೩೭ ॥

ಉಪವಾಸಪರಃ ಷಷ್ಠ್ಯಾಂ ಜಿತಕ್ರೋಧೋ ಜಿತೇಂದ್ರಿಯಃ ।
ಅರ್ಚಯಿತ್ವಾ ದಿನಕರಂ ಗಂಧಧೂಪನಿವೇದನೈಃ ॥ ೩೮ ॥

ಪುರತಃ ಸ್ಥಂಡಿಲೇ ರಾತ್ರೌ ಸ್ವಪ್ಯಾದ್ದೇವಸ್ಯ ಪುತ್ರಕ ।
ಪ್ರಧ್ಯಾಯನ್ ಮನಸಾ ದೇವಂ ಸರ್ವಭೂತಾರ್ತಿನಾಶನಂ ॥ ೩೯ ॥

---

೩೫. ಸರ್ವಪಾಪ ನಿವರ್ತಕವೂ, ಮಂಗಳಕರವೂ, ಆದ ಸಪ್ತಮಿಯಲ್ಲಿ ಸೂರ್ಯ ಪ್ರೀತಿಗಾಗಿ ಭಕ್ತಿಯಿಂದ ಉಪವಾಸಮಾಡಿದರೆ, ಮನುಷ್ಯನು ಸಮಸ್ತ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೩೬. ಅಷ್ಟೇ ಅಲ್ಲದೆ ಅಪರಿಮಿತ ತೇಜಸ್ಸಿನಿಂದ ಕೂಡಿದ ಸೂರ್ಯಲೋಕವನ್ನು ಪಡೆಯುತ್ತಾನೆ. ಭಾದ್ರಪದಮಾಸದ ಶುಕ್ಲಪಕ್ಷದ ಸಪ್ತಮಿಯಲ್ಲಿ ಈ ಸಪ್ತಮಿಯ ಉಪವಾಸ ವ್ರತವನ್ನು ಹಿಡಿಯಬೇಕು.

೩೭. ಅಪ್ಪಾ ದಿಂಡಿ ! ಅದರ ವಿಧಾನವನ್ನು ಕೇಳು. ಮೊದಲು ಚತುರ್ಥಿಯ ದಿವಸ ಯಾರನ್ನೂ ಯಾಚಿಸದೇ ಅವರಾಗಿ ತಂದುಕೊಟ್ಟದ್ದನ್ನು ಆಹಾರವಾಗಿ ತೆಗೆದುಕೊಳ್ಳಬೇಕು. ಪಂಚಮಿಯದಿನ ಒಪ್ಪೊತ್ತು ಊಟ ಮಾಡಬೇಕು.

೩೮. ಷಷ್ಠಿಯದಿನ ಕೋಪತಾಪವನ್ನು ಸ್ವಲ್ಪವೂ ತೋರಿಸದೆ ಅಡಗಿಸಿದವನೂ, ಇಂದ್ರಿಯಗಳನ್ನು ಜಯಿಸಿದವನೂ, ಆಗಿ ಸೂರ್ಯನನ್ನು ಗಂಧ ಪುಷ್ಪ ನೈವೇದ್ಯಾದಿಗಳಿಂದ ಪೂಜಿಸಬೇಕು.

೩೯. ಆ ರಾತ್ರಿ ದೇವರ ಮುಂದೆ ನೆಲದಮೇಲೆಯೇ ಶಯನಮಾಡಬೇಕು. ಮಲಗುವ ಮುಂಚೆ ಸರ್ವಪ್ರಾಣಿಗಳ ಮನೋವ್ಯಥೆಯನ್ನು ನಾಶಮಾಡುವ ಸೂರ್ಯನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಮಲಗಬೇಕು.

**ಸರ್ವದೋಷ ಪ್ರಶಮನಂ ಸರ್ವಪಾತಕನಾಶನಂ ।**
**ವಿಬುದ್ಧಸ್ತ್ವಥ ಸಪ್ತಮ್ಯಾಂ ಕುರ್ಯಾದ್ಬ್ರಾಹ್ಮಣಭೋಜನಂ ॥ ೪೦ ॥**

**ಪೂಜಯಿತ್ವಾ ದಿನಕರಂ ಪುಷ್ಪಧೂಪವಿಲೇಪನೈಃ ।**
**ನೈವೇದ್ಯಂ ತಾತ ದೇವಸ್ಯ ಫಲಾನಿ ಕಥಯಂತಿ ಹಿ ॥ ೪೧ ॥**

**ಖರ್ಜೂರನಾರಿಕೇಲಾನಿ ತಥಾ ಚಾಮ್ರಫಲಾನಿ ತು ।**
**ಮಾತುಲುಂಗಫಲಾನ್ಯೇವ ಕಥಿತಾನಿ ಮನೀಷಿಭಿಃ ॥ ೪೨ ॥**

**ಏತೈಶ್ಚ ಭೋಜಯೇದ್ವಿಪ್ರಾನ್ ಆತ್ಮನಾ ಚ ಪ್ರಭಕ್ಷಯೇತ್ ।**
**ತಥೈಷಾಂ ಚಾಪ್ಯಭಾವೇನ ಶೃಣು ಚಾನ್ಯಾನಿ ಸುವ್ರತ ॥ ೪೩ ॥**

**ಶಾಲಿ ಗೋಧೂಮಪಿಷ್ಟಾನಿ ಕಾರಯೇದ್ಗಣನಾಯಕ ।**
**ಗುಡಗರ್ಭಕೃತಾನೀಹ ಘೃತಪಾಕೇನ ಪಾಚಯೇತ್ ॥ ೪೪ ॥**

---

೪೦. ಸಪ್ತಮಿಯಲ್ಲಿ ಬೇಗ ಎದ್ದು ಬ್ರಾಹ್ಮಣ ಸಂತರ್ಪಣೆಮಾಡಬೇಕು. ಹೀಗೆ ಮಾಡುವುದರಿಂದ ಸರ್ವದೋಷಗಳನ್ನು ಪರಿಹರಿಸುವುದು. ಮತ್ತು ಸರ್ವ ಪಾಪಗಳನ್ನೂ ನಾಶಮಾಡುವುದು.

೪೧. ಗಂಧ, ಪುಷ್ಪ, ಧೂಪ ಇವುಗಳಿಂದ ಸ್ವಾಮಿಯಾದ ಸೂರ್ಯದೇವನನ್ನು ಪೂಜಿಸಿ ನೈವೇದ್ಯಕ್ಕಾಗಿ ಹಣ್ಣುಗಳನ್ನು ಸಮರ್ಪಿಸಬೇಕು.

೪೨. ಖರ್ಜೂರ, ತೆಂಗು, ಮಾವು, ಮಾದಲ ಈ ಫಲಗಳನ್ನು ದೇವನಿಗೆ ನೈವೇದ್ಯ ಮಾಡಬೇಕೆಂದು ತಿಳಿದವರು ಹೇಳುತ್ತಾರೆ.

೪೩. ಫಲಗಳನ್ನೇ ಬ್ರಾಹ್ಮಣರಿಗೂ ಕೊಟ್ಟು ತೃಪ್ತಿಪಡಿಸಿ ಅದನ್ನೇ ತಾನೂ ಸೇವಿಸಬೇಕು. ಈ ಮೇಲೆ ಹೇಳಿದ ಹಣ್ಣುಗಳು ಸಿಕ್ಕದಿದ್ದರೆ ತರಬೇಕಾದ ಇತರ ವಸ್ತುಗಳನ್ನು ಹೇಳುತ್ತೇನೆ ಕೇಳು.

೪೪. ಅಯ್ಯಾ ಗಣಾಧಿಪನಾದ ದಿಂಡಿಯೇ ! ಅಕ್ಕಿಹಿಟ್ಟು, ಗೋಧಿಯಹಿಟ್ಟು ಇವಕ್ಕೆ ಬೆಲ್ಲವನ್ನು ಸೇರಿಸಿ ಕಲಸಿ ತುಪ್ಪದಲ್ಲಿ ಕರಿದು ಭಕ್ಷ್ಯಗಳನ್ನೂ ಮಾಡಬೇಕು.

**ಚಾತುರ್ಯಾವಕಮಿಶ್ರಾಣಿ ಆದಿತ್ಯಾಯ ನಿವೇದಯೇತ್ ।**
**ಅಗ್ನಿಕಾರ್ಯಮಥೋ ಕೃತ್ವಾ ಬ್ರಾಹ್ಮಣಾನ್ ಭೋಜಯೇತ್ತತಃ ॥ ೪೫ ॥**

ಇತ್ಥಂ ದ್ವಾದಶ ವೈ ಮಾಸಾನ್ ಕಾರ್ಯಂ ವ್ರತಮನುತ್ತಮಂ ।
ಮಾಸಿ ಮಾಸಿ ಫಲಾಹಾರಃ ಫಲದಾಯೀ ಫಲಾರ್ಚನಃ ॥ ೪೬ ॥

ವರ್ಷಾಂತೇ ತ್ವಥ ಕುರ್ವೀತ ಶಕ್ತ್ಯಾ ಬ್ರಾಹ್ಮಣಭೋಜನಂ ।
ಸ್ನಾನಪ್ರಾಶನಯೋಶ್ಚಾಪಿ ವಿಧಾನಂ ಶೃಣು ಸುವ್ರತ ॥ ೪೭ ॥

**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।**
**ತಿಲಸರ್ಷಪಯೋಃ ಕಲ್ಕಂ ಶ್ವೇತಾ ಮೃಚ್ಚಾಪಿ ಸುವ್ರತ ॥ ೪೮ ॥**

**ದೂರ್ವಾಕಲ್ಕಂ ಘೃತಂ ಚಾಪಿ ಗೋಶೃಂಗಕ್ಷಾರಿತಂ ಜಲಂ ।**
**ಜಾತಿಗುಲ್ಮನಿರ್ಯಾಸಃ ಪ್ರಶಸ್ತಃ ಸ್ನಾನಕರ್ಮಣಿ ॥ ೪೯ ॥**

---

೪೫. ಅಲ್ಲದೆ ನಾಲ್ಕು ಜಾತಿಯ ಯವಧಾನ್ಯಗಳಿಂದಲೂ ಭಕ್ಷ್ಯಗಳನ್ನು ಮಾಡಿಸಿ ಅವುಗಳಿಂದ ಬ್ರಾಹ್ಮಣ ಭೋಜನ ಮಾಡಿಸಬೇಕು.

೪೬. ಸರ್ವೋತ್ತಮವಾದ ಈ ವ್ರತವನ್ನು ಹೀಗೆ ಹನ್ನೆರಡು ತಿಂಗಳುಗಳಲ್ಲಿಯೂ ಮಾಡಬೇಕು. ಪ್ರತಿ ತಿಂಗಳಲ್ಲಿಯೂ ಫಲಗಳನ್ನೇ ನಿವೇದನಮಾಡಿ ಅರ್ಚನೆ, ಫಲಗಳನ್ನೇ ದಾನ ಕೊಡುವುದು, ಫಲಗಳನ್ನೇ ಆಹಾರವಾಗಿ ಸೇವಿಸುವುದು ಹೀಗೆ ವರ್ಷಮುಗಿಯುವವರೆಗೂ ನಡೆಯಿಸಬೇಕು.

೪೭. ಅಯ್ಯಾ ಸುವ್ರತನೇ! ವರ್ಷಾಂತ್ಯದಲ್ಲಿ ಶಕ್ತ್ಯನುಸಾರ ಬ್ರಾಹ್ಮಣಭೋಜನಮಾಡಿಸಬೇಕು. ಸ್ನಾನ ಮಾಡತಕ್ಕ ವಿಧಾನವನ್ನೂ ಪ್ರಾಶನಮಾಡುವ ವಿಧಾನವನ್ನೂ ಹೇಳುತ್ತೇನೆ ಕೇಳು.

೪೮-೪೯. ಅಯ್ಯಾ ಸುವ್ರತನಾದ ದಿಂಡಿಯೇ! ಗೋವಿನ ಗಂಜಲ, ಸಗಣಿ, ಹಾಲು. ಮೊಸರು, ತುಪ್ಪ, ಕುಶೋದಕ, ಎಳ್ಳನ್ನು ಅರೆದಕಲ್ಕ, ಸಾಸುವೆಯನ್ನರೆದ ಕಲ್ಕ, ಬಿಳಿಯ ಮಣ್ಣು, ಗರಿಕೆಯನ್ನು ಅರೆದು ತುಪ್ಪಬೆರಸಿದ ಕಲ್ಕ, ಗೋಶೃಂಗದಿಂದ ಸುರಿಸಿದ ನೀರು, ಜಾಜಿಯ ಬಳ್ಳಿಯ ರಸ, ಇವುಗಳನ್ನು ತಿಂಗಳಿಗೆ ಒಂದೊಂದರಂತೆ ಕ್ರಮವಾಗಿ ಹನ್ನೆರಡು ತಿಂಗಳಲ್ಲೂ ಸ್ನಾನಕ್ಕೆ ಉಪಯೋಗಿಸುವುದು ಶ್ಲಾಘ್ಯಕರವು.

ಪ್ರಾಶನೇ ಚಾ ಪ್ಯಥೈತಾನಿ ಸರ್ವಪಾಪಹರಾಣಿ ವೈ ।
ಆದೌ ಕೃತ್ವಾ ಭಾದ್ರಪದಂ ಯಥಾಸಂಖ್ಯಂ ವಿದುರ್ಬುಧಾಃ ॥ ೩೦ ॥

ಇತ್ಥಂ ವರ್ಷಾಂತಮಾಸಾದ್ಯ ಭೋಜಯಿತ್ವಾ ದ್ವಿಜೋತ್ತಮಾನ್ ।
ದಿವ್ಯಾನ್ ಭೋಗಾನ್ ಮಹಾದೇವ ತತಸ್ತೇಭ್ಯೋ ನಿವೇದಯೇತ್ ॥ ೩೧ ॥

ಫಲಾನಿ ತಾತ ಹೋಮಾನಿ ಯಥಾಶಕ್ತ್ಯಾ ಗಣಾಧಿಪ ।
ಸವತ್ಸಾಮಥವಾ ಧೇನುಂ ಭೂಮಿಂ ಸಸ್ಯಾನ್ವಿತಾಮಥ ॥ ೩೨ ॥

ಪ್ರಸಾದಮಥವಾ ಭೌಮಂ ಸರ್ವಧಾನ್ಯಸಮನ್ವಿತಂ ।
ಯದ್ಯಚ್ಛುಕ್ಲಾನಿ ವಸ್ತ್ರಾಣಿ ತಾಮ್ರಪಾತ್ರಂ ಸವಿದ್ರುಮಂ ॥ ೩೩ ॥

ಶಕ್ತಿಯುಕ್ತಸ್ಯ ಚೈತಾನಿ ದರಿದ್ರಸ್ಯ ತು ಮೇ ಶೃಣು ।
ಫಲಾನಿ ಪಿಷ್ಟಕಾನ್ಯೇಷಾಂ ತಿಲಚೂರ್ಣಾನ್ವಿತಾನಿ ತು ॥ ೩೪ ॥

---

೩೦. ಇವುಗಳನ್ನು ಸ್ವಲ್ಪ ಹೊಟ್ಟೆಗೆ ತೆಗೆದುಕೊಳ್ಳಬೇಕು. ಹೀಗೆ ಮಾಡಿದರೆ ಸಮಸ್ತ ಪಾಪಗಳೂ ನಾಶವಾಗುವುವು. ಭಾದ್ರಪದ ಮಾಸದಲ್ಲಿ ಈ ವ್ರತಾರಂಭ ಮಾಡಿ ಪುನಃ ಭಾದ್ರಪದಮಾಸ ಬರುವವರೆಗೆ ಒಂದುವರ್ಷ ಪರ್ಯಂತ ಈ ವ್ರತವನ್ನು ನಡೆಯಿಸಬೇಕೆಂದು ವಿದ್ವಾಂಸರು ಹೇಳುತ್ತಾರೆ.

೩೧. ಅಯ್ಯಾ ಮಹಾದೇವನೇ ! ಹೀಗೆ ವರ್ಷದ ಕೊನೆಯವರೆಗೆ ನಡೆಯಿಸಿ ಬ್ರಾಹ್ಮಣ ಸಂತರ್ಪಣೆಮಾಡಿಸಿ ಶ್ರೇಷ್ಠವಾದ ಭೋಗ್ಯವಸ್ತುಗಳನ್ನು ಆ ಬ್ರಾಹ್ಮಣರಿಗೆ ಸಮರ್ಪಿಸಬೇಕು.

೩೨-೩೩. ಅಯ್ಯಾ ಗಣಾಧಿಪತಿಯಾದ ದಿಂಡಿಯೇ ! ತನಗೆ ದ್ರವ್ಯಾನುಕೂಲವಿದ್ದಷ್ಟರಲ್ಲಿ ಚಿನ್ನದ ಹಣ್ಣು, ಕರು ಸಹಿತವಾದ (ಕರೆಯುವ) ಹಸು, ಬೆಳೆಸಹಿತವಾದ ಜಮೀನು, ಸರ್ವಧಾನ್ಯಗಳಿಂದ ತುಂಬಿದ ಮಹಡಿಮನೆ, ಅಥವಾ ಮಹಡಿಯಿಲ್ಲದ ಸಾಮಾನ್ಯ ಮನೆ ಇವನ್ನೂ, ಒಂದುಜೊತೆ ಪಂಚೆಯನ್ನೂ, ಹವಳ ಸಹಿತವಾದ ತಾಮ್ರ ಪಾತ್ರೆಯನ್ನೂ; ಯಥಾಶಕ್ತಿ ದಾನ ಕೊಡತಕ್ಕದ್ದು.

೩೪. ಅಷ್ಟು ಮಾಡುವುದಕ್ಕೆ ಅನುಕೂಲವಿಲ್ಲದ ಬಡವನು ಮಾಡಬಹುದಾದ್ದನ್ನು ಹೇಳುತ್ತೇನೆ ಕೇಳು ಬೆಳ್ಳಿಯ ಹಣ್ಣು, ಅಥವಾ ಹಿಟ್ಟಿನಿಂದ ಮಾಡಿದ ಹಣ್ಣುಗಳು, ಎಳ್ಳುಹುಡಿ ಸಮೇತವಾದ ಧಾನ್ಯದ ಹಿಟ್ಟು, ಇವುಗಳನ್ನು ದಾನಮಾಡಬೇಕು.

ಭೋಜಯಿತ್ವಾ ದ್ವಿಜಾನ್ ದದ್ಯಾದ್ರಾಜತಾನಿ ಫಲಾನಿ ತು ।
ಧಾತುರಕ್ತಂ ವಸ್ತ್ರಯುಗ್ಮಂ ಆಚಾರ್ಯಾಯ ನಿವೇದಯೇತ್ ॥ ೫೫ ॥

ಸಹಿರಣ್ಯಂ ಮಹಾದೇವ ಪಂಚರತ್ನಸಮನ್ವಿತಂ ।
ಇತ್ಥಂ ಸಮಾಪ್ಯತೇ ತಾತ ಪಾರಣಂ ವಾರ್ಷಿಕಾಂತಿಕಂ ॥ ೫೬ ॥

ಇತ್ಯೇಷಾ ವೈ ಪುಣ್ಯತಮಾ ಸಪ್ತಮೀ ದುರಿತಾಪಹಾ ।
ಯಾಮುಪೋಷ್ಯ ನರಾಸ್ಸರ್ವೇ ಯಾಂತಿ ಸೂರ್ಯಸಲೋಕತಾಂ ॥ ೫೭ ॥

ಪೂಜ್ಯಮಾನಸ್ಸದಾ ದೇವೈಃ ಗಂಧರ್ವಾಪ್ಸರಸಾಂ ಗಣೈಃ ।
ಅನಯಾ ಮಾನವೋ ನಿತ್ಯಂ ಪೂಜಯೇದ್ಭಾಸ್ಕರಂ ಸದಾ ॥ ೫೮ ॥

ದಾರಿದ್ರ್ಯದುಃಖದುರಿತೈರ್ಮುಕ್ತೋ ಯಾತಿ ದಿವಾಕರಂ ।
ಬ್ರಾಹ್ಮಣೋ ಮೋಕ್ಷಮಾಯಾತಿ ಕ್ಷತ್ರಿಯಶ್ಚೇಂದ್ರತಾಂ ವ್ರಜೇತ್ ॥ ೫೯ ॥

---

೫೫. ಬ್ರಾಹ್ಮಣರಿಗೆ ಭೋಜನ ಮಾಡಿಸಿ ಬೆಳ್ಳಿಯಿಂದ ಮಾಡಿದ ಫಲವನ್ನು ದಾನಕೊಡಬೇಕು. ಗೈರಿಕಾದಿ ಧಾತುವಸ್ತುಗಳಿಂದ ಬಣ್ಣಹಾಕಿದ ವಸ್ತ್ರಯುಗ್ಮವನ್ನು ಆಚಾರ್ಯರಿಗೆ ಸಮರ್ಪಣಮಾಡಬೇಕು.

೫೬. ಅದರ ಜತೆಯಲ್ಲಿ ಪಂಚರತ್ನಸಮೇತವಾದ ಸುವರ್ಣವನ್ನೂ ಆಚಾರ್ಯರಿಗೆ ಕೊಡಬೇಕು. ಅಯ್ಯಾ ದಿಂಡಿಯೇ! ವರ್ಷದ ಕೊನೆಯಲ್ಲಿ ಮಾಡುವ ಪಾರಣೆಯು ಈ ಕ್ರಮದಲ್ಲಿ ಮುಗಿಯುವುದು.

೫೭. ಈ ಪ್ರಕಾರವಾಗಿ ಸಪ್ತಮೀವ್ರತವು ಪಾಪನಾಶಕವೂ, ಅತ್ಯಂತ ಪುಣ್ಯಕರವೂ ಆದುದು. ಇಂಥ ಸಪ್ತಮಿಯಲ್ಲಿ ಉಪವಾಸಮಾಡಿದ ಮನುಷ್ಯನು ಸೂರ್ಯಲೋಕಕ್ಕೆ ಹೋಗುವನು.

೫೮. ಅಲ್ಲಿ ಅವನು ದೇವತೆಗಳು, ಗಂಧರ್ವರು, ಅಪ್ಸರರು, ಇವರ ಗುಂಪುಗಳಿಂದ ಪೂಜಿತನಾಗುತ್ತಾನೆ. ಈ ಕಾರಣದಿಂದ ಮನುಷ್ಯನು ಸದಾ ಸೂರ್ಯನನ್ನು ಆರಾಧಿಸಬೇಕು.

೫೯. ಹೀಗೆ ಪೂಜಿಸಿದವರು ದಾರಿದ್ರ್ಯದುಃಖ, ಪಾಪ ಇವುಗಳಿಂದ ಬಿಡಲ್ಪಟ್ಟವರಾಗಿ ಸೂರ್ಯನಲ್ಲಿ ಐಕ್ಯರಾಗುತ್ತಾರೆ. ಚಾತುರ್ವರ್ಣ್ಯದಲ್ಲಿ ಬ್ರಾಹ್ಮಣನು ಈ ವ್ರತ ಮಾಡಿದರೆ ಮೋಕ್ಷವನ್ನು ಪಡೆಯುವನು. ಕ್ಷತ್ರಿಯನು ಮಾಡಿದರೆ ಇಂದ್ರಪದವಿಯನ್ನು ಪಡೆಯುತ್ತಾನೆ.

**ವೈಶ್ಯೋ ಧನದಸಾಲೋಕ್ಯಂ ಶೂದ್ರೋ ವಿಪ್ರತ್ವಮಾಪ್ನುಯಾತ್ ।**
**ಅಪುತ್ರೋ ಲಭತೇ ಪುತ್ರಂ ದುರ್ಭಗಾ ಸುಭಗಾ ಭವೇತ್ ॥ ೬೦ ॥**

**ಯಾಮುಪೋಷ್ಯ ಚ ನಾರೀಮಾಂ ಸಪ್ತಮೀಂ ಲೋಕಪೂಜಿತಾಂ ।**
**ವಿಧವಾ ವಾ ಸತೀ ಭಕ್ತ್ಯಾ ಅನಯಾ ಪೂಜಯೇದ್ರವಿಂ ॥ ೬೧ ॥**

**ನಾನ್ಯಜನ್ಮನಿ ವೈಧವ್ಯಂ ನಾರೀ ಪ್ರಾಪ್ನೋತಿ ಮಾನದ ।**
**ಚಿಂತಾಮಣಿಸಮಾ ಹ್ಯೇಷಾ ವಿಜ್ಞೇಯಾ ಫಲ ಸಪ್ತಮೀ ॥ ೬೨ ॥**

**ಪಠತಾಂ ಶೃಣ್ವತಾಂ ದಿಂಡೇ ಸರ್ವಕಾಮ ಪ್ರದಾ ಸ್ಮೃತಾ ॥ ೬೩ ॥**

**ಇತಿ ಶ್ರೀಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಬ್ರಹ್ಮ ದಿಂಡಿ ಸಂವಾದೇ ಸಪ್ತಮೀ ಕಲ್ಪೇ ಫಲಸಪ್ತಮೀವರ್ಣನಂ ನಾಮ ಚತುಷ್ಷಷ್ಟಿತಮೋಽಧ್ಯಾಯಃ.**

---

೬೦. ಈ ವ್ರತ ಮಾಡಿದ ವೈಶ್ಯನು ಕುಬೇರಲೋಕವನ್ನು ಪಡೆಯುವನು. ಶೂದ್ರನು ಬ್ರಾಹ್ಮಣತ್ವವನ್ನು ಪಡೆಯುತ್ತಾನೆ. ಗಂಡುಮಕ್ಕಳಿಲ್ಲದವನು ಮಗನನ್ನು ಪಡೆಯುತ್ತಾನೆ. ಕುರೂಪಿಯಾದ ಹೆಂಗಸು ಸುಂದರಿಯಾಗುವಳು.

೬೧. ವಿಧವೆಯಾಗಿದ್ದಾಗಲೂ, ಪೂರ್ವಪತಿಧ್ಯಾನತತ್ಪರೆಯಾದ ಪತಿವ್ರತೆಯಾಗಿ ಈ ವ್ರತಮಾಡಿ ಸೂರ್ಯನನ್ನು ಆರಾಧಿಸಬೇಕು.

೬೨. ಮಾನಧನನಾದ ದಿಂಡಿಯೇ! ಹೀಗೆ ಮಾಡಿದರೆ ಮುಂದಿನ ಜನ್ಮದಲ್ಲಿ ವೈಧವ್ಯಹೊಂದುವುದಿಲ್ಲ. ಈ ಫಲಸಪ್ತಮಿಯು ಚಿಂತಾಮಣಿರತ್ನಕ್ಕೆ ಸಮಾನವಾದುದು ಎಂದು ತಿಳಿಯಬೇಕು.

೬೩. ಅಯ್ಯಾ ದಿಂಡಿಯೇ! ಇದನ್ನು ಓದುವವರಿಗೂ, ಕೇಳುವವರಿಗೂ ಸರ್ವ ಇಷ್ಟಾರ್ಥಗಳೂ ಲಭಿಸುತ್ತವೆ.

ಇಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಫಲಸಪ್ತಮೀ ವರ್ಣನೆಯೆಂಬ ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಷಷ್ಟಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಅತಃಪರಂ ಪ್ರವಕ್ಷ್ಯಾಮಿ ರಹಸ್ಯಾಂ ನಾಮ ಸಪ್ತಮೀಂ ।
ಸಪ್ತಮೀ ಕೃತ ಮಾತ್ರೇಯಂ ನರಾಂಸ್ತಾರಯತೇ ಭವಾತ್ ॥ ೧ ॥

ಸಪ್ತಾಪರಾನ್ ಸಪ್ತಪೂರ್ವಾನ್ ಪಿತೄಂಶ್ಚಾಪಿ ನ ಸಂಶಯಃ ।
ರೋಗಾಂಶ್ಛಿನತ್ತಿ ದುಶ್ಛೇದ್ಯಾನ್ ದುರ್ಜಯಾನ್ ಜಯತೇ ಹ್ಯರೀನ್ ॥ ೨ ॥

ದುರ್ಲಭಾನ್ ಪ್ರಾಪಯತ್ಯರ್ಥಾನ್ ಯಃ ಕುರ್ಯಾನ್ನಾಮ ಸಪ್ತಮೀಂ ।
ಕನ್ಯಾರ್ಥೀ ಲಭತೇ ಕನ್ಯಾಂ ಧನಾರ್ಥೀ ಲಭತೇ ಧನಂ ॥ ೩ ॥

---

## ಅರವತ್ತೈದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಇನ್ನು ಮುಂದೆ ರಹಸ್ಯಸಪ್ತಮೀ ಎಂಬುದನ್ನು ಹೇಳುತ್ತೇನೆ. ಈ ಸಪ್ತಮೀವ್ರತವನ್ನು ಆಚರಿಸಿದ ಮಾತ್ರದಿಂದಲೇ ಅದು ಮನುಷ್ಯನನ್ನು ಸಂಸಾರಸಾಗರದಿಂದ ಪಾರುಗಾಣಿಸುತ್ತದೆ.

೨. ಅಷ್ಟುಮಾತ್ರವಲ್ಲದೆ ತನ್ನ ಹಿಂದಿನ ಏಳು ತಲೆಯವರೂ, ಮುಂದಿನ ಏಳು ತಲೆಯವರೂ, ಆದ ಪಿತೃಗಳನ್ನೂ ದಾಟಿಸುತ್ತಾನೆ. ಈ ವ್ರತಾಚರಣದಿಂದ ನಾಶಿಮಾಡಲು ಅಸಾಧ್ಯವಾದ ರೋಗಗಳೂ ಗುಣವಾಗುವುವಲ್ಲದೆ ಜಯಿಸಲು ಅಸಾಧ್ಯರಾದ ಶತ್ರುಗಳನ್ನು ಗೆಲುವಂತೆ ಮಾಡಬೇಕು.

೩. ಯಾವನು ಈ ಸಪ್ತಮೀವ್ರತವನ್ನು ಆಚರಿಸುವನೋ ಅವನಿಗೆ ದೊರೆಯಲು ಕಷ್ಟವಾದ ವಸ್ತುಗಳೆಲ್ಲಾ ಒದಗುತ್ತದೆ.

ಪುತ್ರಾರ್ಥೀ ಲಭತೇ ಪುತ್ರಾನ್ ಧರ್ಮಾರ್ಥೀ ಧರ್ಮಮಾಪ್ನುಯಾತ್ ।
ಸಮಯಾನ್ ಪಾಲಯನ್ ಸರ್ವಾನ್ ಕುರ್ಯಾಚ್ಛ್ರೇಮಾಂ ವಿಚಕ್ಷಣಃ ॥೪॥

ಸಮಯಾನ್ ಶೃಣು ಭೂತೇಶ ಶ್ರೇಯಸೇ ಗದತೋ ಮಮ ।
ಆದಿತ್ಯಭಕ್ತಃ ಪುರುಷಃ ಸಪ್ತಮ್ಯಾಂ ಗಣನಾಯಕ ॥ ೫ ॥

ಮೈತ್ರೀಂ ಸರ್ವತ್ರ ವೈ ಕುರ್ಯಾತ್ ಭಾಸ್ಕರಂ ವಾಪಿ ಚಿಂತಯೇತ್ ।
ಸಪ್ತಮ್ಯಾಂ ನ ಸ್ಪೃಶೇತ್ತೈಲಂ ನೀಲಂವಸ್ತ್ರಂ ನ ಧಾರಯೇತ್ ॥ ೬ ॥

ನ ಚಾಪ್ಯಾಮಲಕೈಃ ಸ್ನಾನಂ ನ ಕುರ್ಯಾತ್ ಕಲಹಂ ಕ್ವಚಿತ್ ।

॥ ದಿಂಡಿರುವಾಚ ॥

ಕಿಮರ್ಥಂ ನ ಸ್ಪೃಶೇತ್ತೈಲಂ ಸಪ್ತಮ್ಯಾಂ ಪದ್ಮಸಂಭವ ॥ ೭ ॥

---

೪. ಅಲ್ಲದೆ ಕನ್ಯೆ ಬೇಕಾದವನು ಕನ್ಯೆಯನ್ನೂ, ಧನ ಬೇಕಾದವನು ಧನವನ್ನೂ, ಮಕ್ಕಳು ಬೇಕಾದವನು ಮಕ್ಕಳನ್ನೂ, ಧರ್ಮ ಬೇಕಾದವನು ಧರ್ಮವನ್ನೂ ಹೊಂದುತ್ತಾನೆ.

೫. ಆದುದರಿಂದ ಅಯ್ಯಾ ಭೂತೇಶನಾದ ದಿಂಡಿಯೇ ! ಎಲ್ಲಾ ಅವಕಾಶಗಳನ್ನು ನಿರೀಕ್ಷಿಸಿ ಕಾದುಕೊಂಡಿದ್ದು ಜಾಣನಾದವನು ಸಕಾಲದಲ್ಲಿ ಈ ಸಪ್ತಮೀ ವ್ರತವನ್ನು ಮಾಡಿ ಫಲಭಾಗಿಯಾಗಬೇಕು. ಜಗತ್ತಿನ ಶ್ರೇಯಸ್ಸಿಗಾಗಿ ನಾನು ಹೇಳುವ ರಹಸ್ಯಸಪ್ತಮೀ ವ್ರತಸಮಯವನ್ನು ಕೇಳು.

೬. ಅಯ್ಯಾ ಗಣನಾಯಕನಾದ ದಿಂಡಿಯೇ! ಸೂರ್ಯನಲ್ಲಿ ಭಕ್ತಿಯುಳ್ಳ ಮನುಷ್ಯನು ಸಪ್ತಮಿಯಲ್ಲಿ ಸರ್ವ ಪ್ರಾಣಿಗಳಲ್ಲಿಯೂ ಮೈತ್ರಿಯನ್ನು ತೋರಬೇಕು. ಮತ್ತು ಸೂರ್ಯನನ್ನೇ ಧ್ಯಾನಿಸಬೇಕು. ಅಲ್ಲದೆ ಆ ದಿನ ಎಣ್ಣೆಯನ್ನು ಮುಟ್ಟಬಾರದು. ನೀಲಿಬಣ್ಣದ ಬಟ್ಟೆಯನ್ನು ಧರಿಸಬಾರದು.

೭. ನೆಲ್ಲಿಯ ಹಿಂಡಿಯನ್ನುಜ್ಜಿಕೊಂಡು ಸ್ನಾನಮಾಡಬಾರದು. ಯಾರೊಡನೆಯೂ ಜಗಳವಾಡಬಾರದು.

ಕಶ್ಚ ದೋಷೋ ಭವೇದ್ದೇವ ನೀಲವಸ್ತ್ರಸ್ಯ ಧಾರಣಾತ್ ।

॥ ಬ್ರಹ್ಮೋವಾಚ ॥

ಶೃಣು ದಿಂಡೇ ಮಹಾಬಾಹೋ ನೀಲವಸ್ತ್ರಸ್ಯ ಧಾರಣೇ ॥ ೮ ॥

ದೂಷಣಂ ಗಣಶಾರ್ದೂಲ ಗದತೋ ಮಮ ಕೃತ್ಸ್ನಶಃ ।
ಪಾಲನಂ ವಿಕ್ರಯಶ್ಚೈವ ಸದ್ವೃತ್ತಿರುಪಜೀವನಂ ॥ ೯ ॥

ಪತಿತಸ್ತು ಭವೇದ್ವಿಪ್ರ ತ್ರಿಭಿಃ ಕೃಚ್ಛ್ರೈರ್ವಿಶುದ್ಧ್ಯತಿ ।
ನೀಲೀರಕ್ತೇನ ವಸ್ತ್ರೇಣ ಯತ್ಕರ್ಮ ಕುರುತೇ ದ್ವಿಜಃ ॥ ೧೦ ॥

ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ವೃಥಾ ತಸ್ಯ ಮಹಾಯಜ್ಞಾ ನೀಲಸೂತ್ರಸ್ಯ ಧಾರಣಾತ್ ॥ ೧೧ ॥

---

೮. ದಿಂಡಿಯು ಕೇಳುತ್ತಾನೆ—"ಎಲೈ ಕಮಲಸಂಭವನಾದ ಬ್ರಹ್ಮನೇ ! ಸಪ್ತಮಿಯ ದಿನ ಕರಿಯ ಬಟ್ಟೆಯನ್ನು ಏಕೆ ಧರಿಸಬಾರದು ? ಎಣ್ಣೆಯನ್ನು ಏಕೆ ಮುಟ್ಟಬಾರದು ? ನೀಲಿಯ ಬಟ್ಟೆಯನ್ನು ಧರಿಸಿದರೆ ಏನು ದೋಷವುಂಟಾಗುವುದು ಎಂಬುದನ್ನು ಹೇಳು" ಎಂದನು.

೯. ಬ್ರಹ್ಮನು ಹೇಳುತ್ತಾನೆ—ಮಹಾಬಾಹುವೂ ಗಣಶ್ರೇಷ್ಠನೂ ಆದ ದಿಂಡಿಯೇ ! ಕೇಳು. ನೀಲಿಯ ಬಟ್ಟೆಯನ್ನು ಧರಿಸಿದರೆ ಏನು ದೋಷವುಂಟಾಗುವುದೆಂಬುದನ್ನು ಸಮಗ್ರವಾಗಿ ಹೇಳುವೆನು ಕೇಳು. ಸಪ್ತಮಿಯ ದಿನ ನೀಲವಸ್ತ್ರವನ್ನು ಕಾಪಾಡುವುದು, ಮಾರುವುದು ಆದಿನ ನೀಲವಸ್ತ್ರವ್ಯಾಪಾರದಿಂದ ಸದ್ವೃತಿಯಿಂದ ಜೀವಿಸುವುದು.

೧೦–೧೧. ಈ ಮೂರು ಬಗೆಯ ವೃತ್ತಿಗಳಿಂದ ಜೀವಿಸುವ ಮಾನವನು ಪತಿತನಾಗುವನು. ಅನಂತರ ಕೃಚ್ಛ್ರತ್ರಯದಿಂದ ಶುದ್ಧನಾಗುತ್ತಾನೆ. ಬ್ರಾಹ್ಮಣನು ನೀಲಿ ಬಣ್ಣದ ಬಟ್ಟೆಯನ್ನು ಧರಿಸಿ ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ಪಿತೃ ತರ್ಪಣಾದಿ ಯಾವ ಕರ್ಮವನ್ನು ಮಾಡಿದರೂ ಆ ಕರ್ಮವೂ, ಪಂಚಮಹಾಯಜ್ಞಗಳೂ, ಎಲ್ಲಾ ವ್ಯರ್ಥಗಳಾಗುವುವು.

ನೀಲೀರಕ್ತಂ ಯದಾ ವಸ್ತ್ರಂ ವಿಪ್ರಸ್ತ್ವಂಗೇಷು ಧಾರಯೇತ್ ।
ಅಹೋರಾತ್ರೋಷಿತೋ ಭೂತ್ವಾ ಪಂಚಗವ್ಯೇನ ಶುದ್ಧ್ಯತಿ ॥ ೧೨ ॥

ರೋಮಕೂಪೇ ಯದಾ ಗಚ್ಛೇದ್ರಕ್ತಂ ನೀಲಸ್ಯ ಕಸ್ಯಚಿತ್ ।
ಪತಿತಸ್ತು ಭವೇದ್ವಿಪ್ರಃ ತ್ರಿಭಿಃ ಕೃಚ್ಛ್ರೈರ್ವಿಶುದ್ಧ್ಯತಿ ॥ ೧೩ ॥

ನೀಲೀಮಧ್ಯಂ ಯದಾ ಗಚ್ಛೇತ್ ಪ್ರಮಾದಾದ್ಬ್ರಾಹ್ಮಣ ಕ್ವಚಿತ್ ।
ಅಹೋರಾತ್ರೋಷಿತೋಷಿತೋ ಭೂತ್ವಾ ಪಂಚಗವ್ಯೇನ ಶುದ್ಧ್ಯತಿ ॥ ೧೪ ॥

ನೀಲೀದಾರು ಯದಾ ಭಿಂದ್ಯಾದ್ಬ್ರಾಹ್ಮಣಾನಾಂ ಶರೀರಕೇ ।
ಶೋಣಿತಂ ದೃಶ್ಯತೇ ಯತ್ರ ದ್ವಿಜಶ್ಚಾಂದ್ರಾಯಣಂ ಚರೇತ್ ॥ ೧೫ ॥

ಕುರ್ಯಾದಜ್ಞಾನತೋ ಯಸ್ತು ನೀಲೇ ವಾ ದಂತಧಾವನಂ ।
ಕೃತ್ವಾ ಕೃಚ್ಛ್ರದ್ವಯಂ ದಿಂಡೇ ವಿಶುದ್ಧಸ್ಸ್ಯಾನ್ನ ಸಂಶಯಃ ॥ ೧೬ ॥

---

೧೨. ಬ್ರಾಹ್ಮಣನು ನೀಲಿ ಬಣ್ಣ ಹಾಕಿದ ವಸ್ತ್ರವನ್ನು ಧರಿಸಿದ ಪಕ್ಷದಲ್ಲಿ ಅವರಿಂದ ಉಂಟಾದ ಪಾಪಪರಿಹಾರವಾಗಿ ಶುದ್ಧನಾಗಬೇಕಾದರೆ ಹಗಲು ರಾತ್ರೆ ಎರಡು ಹೊತ್ತೂ ಉಪವಾಸಮಾಡಿ ಮಾರನೇ ದಿನ ಪಂಚಗವ್ಯಪ್ರಾಶನಮಾಡಬೇಕು.

೧೩. (ನೀಲಿ) ಕಪ್ಪು ಬಣ್ಣದ ಮನುಷ್ಯನ ರಕ್ತವು ವಿಪ್ರನ ರೋಮಕೂಪದಲ್ಲಿ ಸೇರಿದರೆ ಅಂಥ ಬ್ರಾಹ್ಮಣನು ಪತಿತನಾಗುತ್ತಾನೆ. ಆಗ ಮೂರು ಕೃಚ್ಛ್ರಾಚರಣೆ ಮಾಡಿದರೆ ಆತನು ಶುದ್ಧನಾಗುತ್ತಾನೆ.

೧೪. ಒಬ್ಬ ಬ್ರಾಹ್ಮಣನು ನೀಲಿ ಭಾಂಡಗಳೆಡರ ಮಧ್ಯದಲ್ಲಿ ಕಾಣದೆ ಹಾಯ್ದು ಹೋದರೆ ಪತಿತನಾಗುತ್ತಾನೆ ಆಗ ಒಂದು ಹಗಲು, ರಾತ್ರಿ, ಉಪವಾಸ ಮಾಡಿದ ಬಳಿಕ ಪಂಚಗವ್ಯವನ್ನು ಸೇವಿಸಿದರೆ ಶುದ್ಧನಾಗುತ್ತಾನೆ.

೧೫. ಒಬ್ಬ ಬ್ರಾಹ್ಮಣನನ್ನು ನೀಲಿಯ ಕೊಂಬೆಯಿಂದ ಹೊಡೆದಾಗ ಅವರಿಂದ ರಕ್ತ ಬಂದ ಸಂದರ್ಭದಲ್ಲಿ ಆ ಬ್ರಾಹ್ಮಣನು ಪ್ರಾಯಶ್ಚಿತ್ತಕ್ಕಾಗಿ ಚಾಂದ್ರಾಯಣ ವ್ರತವನ್ನು ಆಚರಣೆ ಮಾಡಬೇಕು.

೧೬. ಅಯ್ಯಾ ದಿಂಡಿಯೇ! ಯಾವನಾದರೂ ವಿಪ್ರನು ತಿಳಿವಳಿಕೆಯಿಲ್ಲದೆ ನೀಲಿಯ ಗಿಡದ ಕಡ್ಡಿಯಿಂದ ಹಲ್ಲನ್ನು ಉಜ್ಜಿದರೆ ಅವನು ಎರಡು ಕೃಚ್ಛ್ರಾಚರಣೆ ಮಾಡಿ ಪರಿಶುದ್ಧನಾಗಬೇಕು. ಈ ವಿಚಾರದಲ್ಲಿ ಸಂದೇಹವಿಲ್ಲ.

ವಾಪಯೇದ್ಯತ್ರ ನೀಲೀಂ ತು ಭವೇತ್ತತ್ರಾಶುಚಿರ್ಮಹೀ ।
ಪ್ರಮಾಣದ್ವಾದಶಾಬ್ದಾನಿ ತತ ಊರ್ಧ್ವಂ ಶುಚಿರ್ಭವೇತ್ ॥ ೧೭ ॥

ಸಪ್ತಮ್ಯಾಂ ಸ್ಪೃಶತಸ್ತೈಲಂ ಇಷ್ಟಾಭಾರ್ಯಾ ವಿನಶ್ಯತಿ ।
ಇತ್ಯೇಷ ನೀಲೀ ತೈಲಸ್ಯ ದೋಷಸ್ತೇ ಕಥಿತೋ ಮಯಾ ॥ ೧೮ ॥

ನ ಚೈವ ಖಾದೇನ್ಮಾಂಸಾನಿ ಮದ್ಯಾನಿ ಚ ಪಿಬೇದ್ಬುಧಃ ।
ನ ದ್ರೋಹಂ ಕಸ್ಯಚಿತ್ಕುರ್ಯಾನ್ನ ಪಾರುಷ್ಯಂ ಸಮಾಚರೇತ್ ॥ ೧೯ ॥

ನಾವಭಾಷೇತ ಚಂಡಾಲಂ ಸ್ತ್ರಿಯಂ ನೈವ ರಜಸ್ವಲಾಂ ।
ನವಾಪಿ ಸಂಸ್ಪೃಶೇದ್ಧೀನಂ ಮೃತಕಂ ನಾವಲೋಕಯೇತ್ ॥ ೨೦ ॥

ನಾಸ್ಫೋಟಯೇನ್ನಾತಿಹಸೇತ್ ಗಾಯೇಚ್ಚಾಪಿನ ಗೀತಕಂ ।
ನ ನೃತ್ಯೇದತಿರಾಗೇಣ ನ ಚ ವಾದ್ಯಾನಿ ವಾದಯೇತ್ ॥ ೨೧ ॥

---

೧೭. ನೀಲಯ ಬೀಜವನ್ನು ಬಿತ್ತಿ ಬೆಳೆಮಾಡಿದ ಭೂಮಿಯು ಅಶುಚಿಯಾಗುವುದು. ಅದು ಹನ್ನೆರಡು ವರ್ಷದ ಮೇಲೆ ಪುನಃ ಪರಿಶುದ್ಧವಾಗುವುದು.

೧೮. ಸಪ್ತಮಿಯ ದಿನ ಈ ನೀಲೀಬೀಜದ ಎಣ್ಣೆಯನ್ನು ಮುಟ್ಟಿದವನಿಗೆ ಪ್ರಿಯಪತ್ನಿಯು ಮೃತಳಾಗುವಳು. ಹೀಗೆ ನೀಲಿಬೀಜದ ತೈಲದ ದೋಷಗಳನ್ನು ನಾನು ನಿನಗೆ ಹೇಳಿಯಾಯಿತು.

೧೯. ತಿಳಿದವನು ಆ ದಿನ (ಸಪ್ತಮಿಯ ದಿನ) ಮಾಂಸವನ್ನು ತಿನ್ನಬಾರದು. ಮದ್ಯವನ್ನು ಸೇವಿಸಬಾರದು. ಯಾರಿಗೂ ದ್ರೋಹಮಾಡಬಾರದು. ಯಾರನ್ನೂ ಕಠಿಣವಾಕ್ಯಗಳನ್ನು ಆಡಬಾರದು.

೨೦. ಆದಿನ ಚಂಡಾಲರೊಡನೆಯೂ, ಹೊರಗಾದ ಸ್ತ್ರೀಯರೊಡನೆಯೂ, ಮಾತಾಡಬಾರದು. ಹೀನಜಾತಿಯವರನ್ನು ಮುಟ್ಟಬಾರದು. ಮೃತನ ಕಳೇಬರವನ್ನು ನೋಡಲೂ ಬಾರದು.

೨೧. ಸಪ್ತಮೀ ದಿನ ಕೈಚಪ್ಪಾಳೆ ಹಾಕಬಾರದು. ಹೆಚ್ಚಾಗಿ ನಗಬಾರದು. ಸಂಗೀತ ಹಾಡಲೂ ಬಾರದು. ತುಂಬ ಸಂತೋಷದಿಂದ ಕುಣಿಯಬಾರದು. ವಾದ್ಯಗಳನ್ನು ಬಾರಿಸಬಾರದು.

ನ ಶಯೀತ ಸ್ತ್ರಿಯಾ ಸಾರ್ಧಂ ನ ಸೇವೇತ ದುರೋದರಂ ।
ನ ರುದ್ಯಾದಶ್ರುಪಾತೇನ ನ ಚ ವಾಚ್ಯಂ ಚ ಶೌಕಿಕಂ ॥ ೨೨ ॥

ಆಕೃಷೇನ್ನ ಶಿರೋಯೂಕಾ ನ ವೃಥಾವಾದಮಾಚರೇತ್ ।
ಪರಸ್ಯಾನಿಷ್ಟ ಕಥನಂ ಅತಿಶೋಕಂ ಚ ವರ್ಜಯೇತ್ ॥ ೨೩ ॥

ನ ಕಂಚಿತ್ತಾಡಯೇಜ್ಜಂತುಂ ನ ಕುರ್ಯಾದತಿಭೋಜನಂ ।
ನ ಚೈವ ಹಿ ದಿವಾಸ್ವಪ್ನಂ ದಂಭಂ ಶಾಠ್ಯಂ ಚ ವರ್ಜಯೇತ್ ॥ ೨೪ ॥

ರಥ್ಯಾಯಾಮಟನಂ ಚಾಪಿ ಯತ್ನತಃ ಪರಿವರ್ಜಯೇತ್ ।
ಅಥಾಪರೋ ವಿಧಿಶ್ಚಾತ್ರ ಶ್ರೂಯತಾಂ ತ್ರಿಪುರಾಂತಕ ॥ ೨೫ ॥

ಚೈತ್ರಾತ್ಪ್ರಭೃತಿ ಕರ್ತವ್ಯಾ ಸರ್ವದಾನಾಮ ಸಪ್ತಮೀ ।
ಧಾತೇತಿ ಚೈತ್ರಮಾಸೇ ತು ಪೂಜನೀಯೋ ದಿವಾಕರಃ ॥ ೨೬ ॥

---

೨೨. ಸಪ್ತಮಿಯ ದಿನ ಸ್ತ್ರೀಸಂಗಮಾಡಬಾರದು. ಮತ್ತು ಜೂಜಾಡಲೂ ಬಾರದು. ಕಣ್ಣೀರು ಸುರಿಸುತ್ತಾ ಅಳಬಾರದು. ದುಃಖಿಸುವ ಸಂದರ್ಭದ ಮಾತನ್ನಾಡಬಾರದು.

೨೩. ಸಪ್ತಮಿಯ ದಿನ ಹೇನು ಶೀರುಗಳನ್ನು ತೆಗೆಯಬಾರದು. ವ್ಯರ್ಥವಾದ ಮಾತಾಡಬಾರದು. ಇತರರಿಗೆ ಅನಿಷ್ಟವನ್ನು ಹೇಳಬಾರದು. ಅತಿ ದುಃಖ ಪಡಬಾರದು.

೨೪. ಸಪ್ತಮಿಯಲ್ಲಿ ಯಾವ ಪ್ರಾಣಿಯನ್ನೂ ಹೊಡೆಯಬಾರದು. ಮಿತಿ ಮೀರಿ ಭೋಜನಮಾಡಬಾರದು. ಹಗಲು ನಿದ್ದೆಮಾಡಬಾರದು. ಜಂಭ, ವಂಚನೆ ಇವುಗಳನ್ನು ಮಾಡಬಾರದು.

೨೫. ಆದಿನ ದೊಡ್ಡ ರಸ್ತೆಗಳಲ್ಲಿ ಸಂಚರಿಸುವುದನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು. ಅಯ್ಯಾ ತ್ರಿಪುರಾಂತಕನಾದ ದಿಂಡಿಯೇ ! ಈಗ ಇನ್ನೊಂದು ಬಗೆಯ ಪೂಜಾಕಲ್ಪವನ್ನು ಹೇಳುತ್ತೇನೆ ಕೇಳು.

೨೬. ಅದಕ್ಕೆ ಸರ್ವದಾ ಸಪ್ತಮೀ ಎಂದು ಹೆಸರು. ಇದಕ್ಕೆ ಚೈತ್ರಶುದ್ಧ ಸಪ್ತಮಿಯಲ್ಲಿ ಪ್ರಾರಂಭಿಸಿ ಪ್ರತಿಮಾಸದ ಸಪ್ತಮಿಯಲ್ಲೂ, ಸೂರ್ಯನನ್ನು ಪೂಜಿಸಬೇಕು. ಚೈತ್ರಮಾಸದಲ್ಲಿ ಧಾತಾ ಎಂಬ ಹೆಸರಿನಿಂದ ಪೂಜಿಸಬೇಕು.

ಅರ್ಯಮೇತಿ ಚ ವೈಶಾಖೇ ಜ್ಯೇಷ್ಠೇ ಮಿತ್ರಃ ಪ್ರಕೀರ್ತಿತಃ ।
ಆಷಾಢೇ ವರುಣೋ ಜ್ಞೇಯ ಇಂದ್ರೋ ನಭಸಿ ಕಥ್ಯತೇ ॥ ೨೭ ॥

ವಿವಸ್ವಾಂಶ್ಚ ನಭಸ್ಯೇಽಥ ಪರ್ಜನ್ಯೋಽಶ್ವಯುಜಿ ಸ್ಮೃತಃ ।
ಪೂಷಾ ಕಾರ್ತಿಕಮಾಸೇ ತು ಮಾರ್ಗಶೀರ್ಷೇಽಂಶುರುಚ್ಯತೇ ॥ ೨೮ ॥

ಭಗಃ ಪೌಷೇ ಭವೇತ್ಪೂಜ್ಯಃ ತ್ವಷ್ಟಾ ಮಾಘೇ ತು ಶಸ್ಯತೇ ।
ವಿಷ್ಣುಶ್ಚ ಫಾಲ್ಗುನೇ ಮಾಸಿ ಪೂಜ್ಯೋ ವಂದ್ಯಶ್ಚ ಭಾಸ್ಕರಃ ॥ ೨೯ ॥

ಸಪ್ತಮ್ಯಾಂ ಚೈವ ಸಪ್ತಮ್ಯಾಂ ಭೋಜಯೇದ್ಭೋಜಕಾನ್ ಬುಧಃ ।
ಸಘೃತಂ ಭೋಜನಂ ದೇಯಂ ಭೋಜಯಿತ್ವಾ ವಿಧಾನತಃ ॥ ೩೦ ॥

ಭೋಜಕಾಯೈವ ವಿಪ್ರಾಯ ದಕ್ಷಿಣಾಂ ಸ್ವರ್ಣಮಾಷಕಂ ।
ಸಘೃತಂ ಭೋಜನಂ ದೇಯಂ ರಕ್ತವಸ್ತ್ರಾಣಿ ಚೈವ ಹಿ ॥ ೩೧ ॥

ಅಭಾವೇ ಭೋಜಕಾನಾಂ ತು ದಕ್ಷಿಣೀಯಾ ದ್ವಿಜೋತ್ತಮಾಃ ।
ತಥೈವ ಭೋಜನೀಯಾಶ್ಚ ಶ್ರದ್ಧಯಾ ಪರಯಾ ವಿಭೋಃ ॥ ೩೨ ॥

---

೨೭. ವೈಶಾಖದಲ್ಲಿ ಅರ್ಯಮಾ ಎಂದೂ, ಜ್ಯೇಷ್ಠದಲ್ಲಿ ಮಿತ್ರನೆಂದೂ, ಆಷಾಢದಲ್ಲಿ ವರುಣನೆಂದೂ, ಶ್ರಾವಣದಲ್ಲಿ ಇಂದ್ರನೆಂದೂ,

೨೮. ಭಾದ್ರಪದದಲ್ಲಿ ವಿವಸ್ವಾನ್ ಎಂದೂ, ಆಶ್ವಯುಜದಲ್ಲಿ ಪರ್ಜನ್ಯ ಎಂದೂ, ಕಾರ್ತಿಕದಲ್ಲಿ ಪೂಷಾ ಎಂದೂ, ಮಾರ್ಗಶೀರ್ಷದಲ್ಲಿ ಅಂಶು ಎಂದೂ,

೨೯. ಪುಷ್ಯಮಾಸದಲ್ಲಿ ಭಗ ಎಂದೂ, ಮಾಘದಲ್ಲಿ ತ್ವಷ್ಟಾ ಎಂಬದಾಗಿಯೂ ಫಾಲ್ಗುನದಲ್ಲಿ ವಿಷ್ಣು ಎಂಬದಾಗಿಯೂ ಸೂರ್ಯನನ್ನು ಪೂಜಿಸಿ ವಂದಿಸಬೇಕು.

೩೦. ವಿದ್ವಾಂಸನು ಪ್ರತಿ ಸಪ್ತಮಿಯಲ್ಲೂ ಭೋಜಕರೆಂಬ ಬ್ರಾಹ್ಮಣರನ್ನು ಕರೆಸಿ ವಿಧಿ ವಿಧಾನದಂತೆ ಸಘೃತವಾಗಿ ಭೋಜನಮಾಡಿಸಬೇಕು.

೩೧. ಆ ಭೋಜಕರಿಗೆ ಉದ್ದಿನಕಾಳಿನತೂಕ ಚಿನ್ನವನ್ನೂ, ದಕ್ಷಿಣೆಯನ್ನೂ, ಕೆಂಪು ಬಟ್ಟೆಗಳನ್ನೂ, ಕೊಡಬೇಕು.

೩೨. ಭೋಜಕರೆಂಬ ಬ್ರಾಹ್ಮಣರು ದೊರೆಯದಿದ್ದರೆ ದಕ್ಷಿಣೆಯನ್ನು ತೆಗೆದುಕೊಳ್ಳುವವರನ್ನಾದರೂ ಕರೆಯಬೇಕು. ಹೀಗೆ ವಿಭುವಾದ ಸೂರ್ಯನಲ್ಲಿ ಉತ್ತಮವಾದ ಶ್ರದ್ಧೆಯಿಂದ ಕೂಡಿ ಭೋಜನಮಾಡಿಸಬೇಕು.

ವಿಶೇಷತೋ ವಾಚಕಶ್ಚ ಬ್ರಾಹ್ಮಣಃ ಕಲ್ಪವಿತ್ಸದಾ ।
ಇತ್ಯೇಷಾ ಕಥಿತಾ ತುಭ್ಯಂ ಸಪ್ತಮೀ ಗಣನಾಯಕ ॥ ೩೩ ॥

ಶ್ರುತಾಸತೀ ಪಾಪಹರಾ ಸೂರ್ಯಲೋಕಪ್ರದಾಯಿನೀ ॥ ೩೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ
ಪಂಚಷಷ್ಟಿತಮೋಽಧ್ಯಾಯಃ.



---

೩೩. ಪೂಜಾಕಲ್ಪವನ್ನು ತಿಳಿದವನೂ ಬ್ರಾಹ್ಮಣನೂ ಆದ ಪೌರಾಣಿಕನನ್ನು ವಿಶೇಷ ಪ್ರಕಾರದಿಂದ ಆರಾಧಿಸಬೇಕು. ಅಯ್ಯಾ ಗಣನಾಯಕನೇ ನಿನಗೆ ಈಪ್ರಕಾರ ಈ ಸಪ್ತಮೀ ಕಲ್ಪವನ್ನು ಹೇಳಿಯಾಯಿತು.

೩೪. ಇದನ್ನು ಕೇಳಿದ ಸ್ತ್ರೀಯರು ಪಾಪಮುಕ್ತರಾಗಿ ಸೂರ್ಯಲೋಕವನ್ನು ಹೊಂದುತ್ತಾರೆ-

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀ ಕಲ್ಪದಲ್ಲಿ ಸಪ್ತಮೀ ವರ್ಣನೆಯೆಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು.





॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಟ್‌ಷಷ್ಟಿತಮೋಽಧ್ಯಾಯಃ

---

॥ ಸುಮಂತುರುವಾಚ ॥

ಇತ್ಯುಕ್ತ್ವಾ ಭಗವಾನ್ ಬ್ರಹ್ಮಾ ಜಗಾಮಾದರ್ಶನಂ ವಿಭೋಃ ।
ಸೂರ್ಯಮಾರಾಧಯದ್ದಿಂಡೀ ಸೂರ್ಯಸ್ಯಾನುಚರೋಽಭವತ್ ॥ ೧ ॥

॥ ಶತಾನೀಕ ಉವಾಚ ॥

ಭೂಯಃ ಕಥಯ ವಿಪ್ರೇಂದ್ರ ಮಾಹಾತ್ಮ್ಯಂ ಭಾಸ್ಕರಸ್ಯ ಮೇ ।
ಶೃಣ್ವತೋ ನಾಸ್ತಿ ಮೇ ತೃಪ್ತಿರಮೃತಸ್ಯೇವ ಸುವ್ರತ ॥ ೨ ॥

---

## ಅರವತ್ತಾರನೆಯ ಅಧ್ಯಾಯ

೧. ಸುಮಂತು ಮುನಿವರ್ಯರು ಹೇಳುತ್ತಾರೆ.—ಬ್ರಹ್ಮನು ಹೀಗೆ ಹೇಳಿ ಅವನ ಕಣ್ಣಿಗೆ ಕಾಣಿಸದಂತೆ ಅಂತರ್ಧಾನನಾದನು. ಇತ್ತ ದಿಂಡಿಯು ಸೂರ್ಯನನ್ನು ಚೆನ್ನಾಗಿ ಆರಾಧಿಸಿದನು. ಮತ್ತು ಸೂರ್ಯನ ಅನುಚರನಾದನು.

೨. ಶತಾನೀಕನು ಹೇಳುತ್ತಾನೆ—ಅಯ್ಯಾ ಮಹಾತ್ಮನೇ ! ಸೂರ್ಯನ ಮಹಾತ್ಮೆಯನ್ನು ನನಗೆ ಪುನಃ ಹೇಳು. ಅಮೃತವನ್ನು ಕುಡಿದರೆ ಇನ್ನೂ ಬೇಕೆಂದು ಆಶೆಯಾಗುವಂತೆ ನನಗೆ ತೃಪ್ತಿಯೇ ಆಗದೆ ಇದೆ. ಅಯ್ಯಾ ಸುವ್ರತನೇ ! ನನಗೆ ಈ ಕಥೆಯನ್ನು ಕೇಳಿ ಇನ್ನೂ ತೃಪ್ತಿಯೇ ಆಗಿಲ್ಲ.

॥ ಸುಮಂತುರುವಾಚ ॥

ಶೃಣುಷ್ವಾವಹಿತೋ ರಾಜನ್ ಸಂವಾದಂ ದ್ವಿಜಶಂಖಯೋಃ ।
ಯಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ನೃಪ ॥ ೩ ॥

ಆಸೀನಮಾಶ್ರಮೇ ಶಂಖಂ ದ್ವಿಜೋ ಪ್ರಷ್ಟುಂ ಜಗಾಮ ಹ ।
ಫಲಭಾರಾನತಚ್ಛಾಯೇ ವೃಕ್ಷ ವೃಂದಸಮಾಕುಲೇ ॥ ೪ ॥

ಪರಸ್ಪರಮೃಗಶೃಂಗ ಕಂಡೂಯಿತಮೃಗಾವೃತೇ ।
ಬರ್ಹಿರ್ವನಾಂತರಾನೀತ ತೀರ್ಥಕಂದೋಪಶೋಭಿತೇ (ಭೋಗಿನಿ) ॥ ೫ ॥

ಪ್ರಭಾತಕುಸುಮಾಮೋದಷಟ್ಪದೋಗ್ಗೀತಶಾಲಿನಿ ।
ಸಿದ್ಧ ದೇವರ್ಷಿಗಂಧರ್ವ ತೀರ್ಥಸೇವಿತವಾರಿಣಿ ॥ ೬ ॥

ಮುಂಡೈಶ್ಚ ಜಟಿಲೈಶ್ಚೈವ ತಾಪಸೈರುಪಶೋಭಿತೇ ।
ಆಶ್ರಮೇ ತಂ ಮುನಿಶ್ರೇಷ್ಠಂ ಶಂಖಾಹ್ವಂ ಸುಖಮಾಸ್ಥಿತಂ ॥ ೭ ॥

---

೩. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ! ಶಂಖ ನೆಂಬ ಋಷಿವರ್ಯನಿಗೂ ಒಬ್ಬ ದ್ವಿಜನಿಗೂ ನಡೆದ ಸಂವಾದವನ್ನು ಹೇಳುವೆನು. ಅವಧಾನದಿಂದ ಕೇಳು. ಅಯ್ಯಾ ನೃಪತಿಯೇ! ಆ ಸಂವಾದವನ್ನು ಕೇಳಿದ ಮನು ಷ್ಯನ ಪಾಪಗಳು ಪರಿಹಾರವಾಗುತ್ತವೆ.

೪. ರಮ್ಯವಾದ ಒಂದು ಋಷ್ಯಾಶ್ರಮ. ಅದು ಹಣ್ಣುಗಳ ಭಾರದಿಂದ ಬಗ್ಗಿರುವ ಮರಗಳ ಗುಂಪಿನ ನೆರಳಿನಿಂದ ಕೂಡಿದ್ದಿತು.

೫. ಅಲ್ಲಿ ಜಿಂಕೆಗಳು ಗುಂಪುಗೂಡಿ ಕೋಡಿನ ತುದಿಗಳಿಂದ ಒಂದನ್ನೊಂದು ತುರಿಸಿಕೊಳ್ಳುತ್ತಿದ್ದುವು. ನವಿಲುಗಳು ವನಾಂತರದ ಜಲವಸತಿಪ್ರದೇಶಗಳಲ್ಲಿ ಬೆಳೆದ ಗಡ್ಡೆಗಳನ್ನು ತಂದು ಭಕ್ಷಣಮಾಡುತ್ತಿದ್ದುವು.

೬. ಸಮೃದ್ಧಿಯಾದ ಹೂಗಳ ಸುವಾಸನೆಗೆ ಭ್ರಮರಗಳು ಝೇಂಕರಿಸುತ್ತಾ ಗಾನಮಾಡುತ್ತಿದ್ದುವು. ಸಿದ್ಧತೀರ್ಥ, ಗಂಧರ್ವತೀರ್ಥ, ದೇವರ್ಷಿತೀರ್ಥ ಇವುಗಳಿಂದ ಜಲಸಮೃದ್ಧಿ ಚೆನ್ನಾಗಿತ್ತು.

೭. ಜಟೆಯನ್ನು ಧರಿಸಿದ ಕೆಲವರು, ಮುಂಡನಮಾಡಿಸಿಕೊಂಡ ಕೆಲವರು, ಹೀಗೆ ಬಹುಜನ ತಪಸ್ವಿಗಳಿಂದ ಅದು, ಶೋಭಿಸುತ್ತಿತ್ತು. ಈ ಪ್ರಕಾರವಾಗಿ ತನ್ನ ಆಶ್ರಮದಲ್ಲಿ ಶಂಖನೆಂಬ ಋಷಿವರ್ಯನು ಸುಖವಾಗಿ ಕುಳಿತಿದ್ದನು.

ಸ್ತೋತ್ರೈಃ ಸ್ತೋತುಂ ಸಹಸ್ರಾಂಶುಂ ತದ್ಭಕ್ತಂ ತತ್ಪರಾಯಣಂ ।
ತತಃ ಸಂಹತ್ಯ ಸಹಸಾ ತಂ ಭೋಜಕಕುಮಾರಕಾಃ ॥ ೮ ॥

ವಿನೀತಾ ಉಪಸಂಗಮ್ಯ ಯಥಾವದಭಿವಾದ್ಯ ಚ ।
ಆಸನೇಷೂಪವಿಷ್ಟಾಸ್ತ ಉಪವಿಷ್ಟಮಥಾ ಬ್ರುವನ್ ॥ ೯ ॥

ಭಗವನ್ ಸರ್ವ ವೇದೇಷು ಚ್ಛಿಂಧಿ ನಃ ಸಂಶಯೋ ಮಹಾನ್ ।
ವಿನಯೇನೋಪಪನ್ನಾನಾಂ ಕುಮಾರಾಣಾಂ ತತೋ ಮುನಿಃ ॥ ೧೦ ॥

ಅನಾದೀಂಶ್ಚತುರೋ ವೇದಾನುವಾಚ ಪ್ರೀತಮಾನಸಃ ।
ತೇಷಾಂ ತು ಪಠಿತಾಮೇವ ಆಶ್ರಮಂ ತು ಯದೃಚ್ಛಯಾ ॥ ೧೧ ॥

---

೮. ನಾನಾವಿಧ ಸ್ತೋತ್ರಗಳಿಂದ ಸೂರ್ಯನನ್ನು ಸ್ತುತಿಸುತ್ತಾ, ಸೂರ್ಯಭಕ್ತನಾಗಿ, ಸೂರ್ಯಪೂಜಾಪರಾಯಣನಾಗಿರುವ ಶಂಖಋಷಿಯನ್ನು ನೋಡಬೇಕೆಂದು ಭೋಜಕಕುಮಾರರು ಬಂದರು.

೯. ಹೀಗೆ ಹಠಾತ್ತಾಗಿ ಬಂದು, ಅವರು ನಮ್ರತೆಯಿಂದ ವಿಧಿಗನುಸಾರವಾಗಿ ನಮಸ್ಕರಿಸಿ ಆತನ ಸಮೀಪವನ್ನು ಸೇರಿ, ಆಸನಗಳಲ್ಲಿ ಕುಳಿತುಕೊಂಡು ಸುಖವಾಗಿ ಕುಳಿತಿದ್ದ ಋಷಿಯನ್ನು ಕುರಿತು ಈರೀತಿ ಹೇಳಿದರು.

೧೦. ಎಲೈ ಪೂಜ್ಯರಾದ ಶಂಖಮಹರ್ಷಿಗಳೇ! ನಮಗೆ ಸಮಸ್ತ ವೇದಗಳ ವಿಷಯದಲ್ಲಿಯೂ ಮಹಾ ಸಂಶಯವಾಗಿದೆ. ಅದನ್ನು ಪರಿಹರಿಸಿಕೊಡಿ ಎಂದು ಕೇಳಿದರು.

೧೧. ಈ ರೀತಿಯಾಗಿ ವಿನಯದಿಂದ ಕೇಳಿದ ಭೋಜಕಕುಮಾರರಲ್ಲಿ ಆ ಋಷಿಗೆ ಪ್ರೀತಿಹುಟ್ಟಿ, ನಾಲ್ಕು ವೇದಗಳೂ ಅನಾದಿಯೆಂದು ತಿಳಿಸಿದನು. ಅಯ್ಯಾ ಸುವ್ರತನೇ! ಅವರು ವೇದಗಳನ್ನು ಹೇಳುತ್ತಿರುವಾಗಲೇ ಮುನಿಶ್ರೇಷ್ಠನಾದ ದ್ವಿಜನೊಬ್ಬನು ಆ ಪ್ರದೇಶಕ್ಕೆ ಹಠಾತ್ತಾಗಿ ಬಂದನು.

**ಮುನಿಶ್ರೇಷ್ಠೋsಥ ತಂ ದೇಶಮಾಜಗಾಮ ದ್ವಿಜೋ ನೃಪ ।**
**ಯಥಾವದರ್ಚಿತಸ್ತೇನ ಶಂಖೇನಾಮಿತತೇಜಸಾ ॥ ೧೨ ॥**

**ವಂದಿತಶ್ಚ ಕುಮಾರೈಸ್ತೈರಭವತ್ಪ್ರೀತಮಾನಸಃ ।**
**ಅಥೈತಾನಬ್ರವೀತ್ ಶಂಖಃ ತಾನ್ ಭೋಜಕಕುಮಾರಕಾನ್ ॥ ೧೩ ॥**

**ಶಿಷ್ಟಾಗಮಾದನಧ್ಯಾಯಃ ಸ ಚ ಜಾತೋ ವಿರಮ್ಯತಾಂ ।**
**ಯಥಾಜ್ಞಾಪಯಸೀತ್ಯಾಹುಃ ಕುಮಾರಾಸ್ತೇ ಋಷಿಂ ತತಃ ॥ ೧೪ ॥**

**ಪಪ್ರಚ್ಛ ಸಿದ್ಧಿದಶ್ಚೈತಾನ್ ಕೇ ಹ್ಯೇತೇ ಕಿಂ ಪಠಂತಿ ಚ ।**
**ಶಂಖೋವಾಚ ಮಹಾರಾಜ ಕುಮಾರಾ ಭೋಜಕಾತ್ಮಜಾಃ ॥ ೧೫ ॥**

**ಸ ಸೂತ್ರಕಲ್ಪಾಂಶ್ಚತುರೋ ವಿಪ್ರವೇದಾನಧೀಯತೇ ।**
**ತಥೈವ ಸಪ್ತಮೀಕಲ್ಪೇ ಪರಿಚರ್ಯಾಂ ಚ ಭಾಸ್ವತಃ ॥ ೧೬ ॥**

---

೧೨. ಮಹಾತೇಜಸ್ವಿಯಾದ ಶಂಖನು ಆಶ್ರಮಕ್ಕೆ ಬಂದ ಮುನಿಯನ್ನು ವಿಧಿಪ್ರಕಾರ ಪೂಜಿಸಿದನು. ಆ ಭೋಜಕುಮಾರರೂ ಆತನಿಗೆ ನಮಸ್ಕರಿಸಿದರು. ಆ ಮುನಿಯ ಮನಸ್ಸು ಸಂತುಷ್ಟವಾಯಿತು.

೧೩. ಅನಂತರ ಶಂಖಮುನಿಯು ಭೋಜಕುಮಾರನನ್ನು ಕುರಿತು, "ಪೂಜ್ಯರು ಆಶ್ರಮಕ್ಕೆ ಬಂದದಿನ ಅಧ್ಯಯನಮಾಡತಕ್ಕದ್ದಲ್ಲ ಇದು ಹಿಂದಿನಿಂದ ಬಂದ ಸಂಪ್ರದಾಯ.

೧೪. ಅದರಂತೆ ಈ ದಿನ ಶಿಷ್ಟಾಚಾರಪರರಾದ ಈ ಮುನಿವರ್ಯರು ಬಂದಿರುವುದರಿಂದ ಈ ದಿನ ಅಧ್ಯಯನಕ್ಕೆ ವಿಶ್ರಾಂತಿಯಾಗಲಿ" ಎಂದನು. ಆ ರಾಜಕುಮಾರರು 'ತಮ್ಮ ಆಜ್ಞೆಯಂತೆ ಆಗಲಿ' ಎಂದರು.

೧೫. ಸಿದ್ಧಿಯನ್ನು ಕೊಡತಕ್ಕ ಮಹಿಮೆಯುಳ್ಳ ಆಗಂತುಕ ಮುನಿಯು ಬಾಲಕರನ್ನು ನಿರ್ದೇಶಿಸಿ ಶಂಖನನ್ನು ಕುರಿತು, ಈ ಬಾಲಕರು ಯಾರು? ಏನು ಓದುತ್ತಾರೆ? ಎಂದು ಪ್ರಶ್ನಿಸಿದನು. ಆಗ ಶಂಖನು ಅಯ್ಯಾ ವಿಪ್ರನೇ! ಇವರು ಮಹಾರಾಜನಾದ ಭೋಜನ ಮಕ್ಕಳು.

೧೬. ಇವರು ಆಪಸ್ತಂಬಾದಿ ಸೂತ್ರಗಳು, ಕಲ್ಪಗಳೆಂಬ ವೇದಾಂಗಗಳು. ಇವು ಸಹಿತವಾಗಿ ನಾಲ್ಕು ವೇದಗಳನ್ನೂ ಮತ್ತು ಸಪ್ತಮೀ ಕಲ್ಪದಲ್ಲಿ ಸೂರ್ಯದೇವನ ಉಪಚಾರಕ್ರಮವನ್ನೂ ಅಧ್ಯಯನಮಾಡುತ್ತಾರೆ" ಎಂದನು.

ಅಗ್ನಿಕಾರ್ಯವಿಧಾನಂ ಚ ಪ್ರತಿಷ್ಠಾಕಲ್ಪಮಾದಿತಃ ।
ಅಂಗಾನಾಂ ಲಕ್ಷಣಂ ಬ್ರಹ್ಮನ್ ರಥಯಾತ್ರಾವಿಧಿಂ ತಥಾ ॥ ೧೭ ॥

॥ ದ್ವಿಜ ಉವಾಚ ॥
ಕಥಂ ಕ್ರಿಯೇತ ಸಪ್ತಮ್ಯಾಂ ಕಶ್ಚಾರ್ಚನ ವಿಧಿಕ್ರಮಃ ।
ಗಂಧ ಪುಷ್ಪಪ್ರದೀಪಾನಾಂ ಕಿಂ ಫಲಂ ರವಿಮಂದಿರೇ ॥ ೧೮ ॥

ಕೇನ ತುಷ್ಯತಿ ದಾನೇನ ವ್ರತೇನ ನಿಯಮೇನ ಚ ।
ಧೂಪಪುಷ್ಪೋಪಹಾರಾದಿ ಕಿಂ ಚ ದೇಯಂ ವಿವಸ್ವತೇ ॥ ೧೯ ॥

ಏತದಿಚ್ಛಾಮ್ಯಹಂ ಶ್ರೋತುಂ ತನ್ಮೇ ಬ್ರೂಹಿ ತಪೋಧನ ।
ವಿಶೇಷತಸ್ತು ಮಾಹಾತ್ಮ್ಯಂ ಬ್ರೂಹಿ ಮಾಂ ಭಾಸ್ಕರಸ್ಯ ಹಿ ॥ ೨೦ ॥

॥ ಶಂಖ ಉವಾಚ ॥
ಇಮಮರ್ಥಂ ವಸಿಷ್ಠೇನ ಪೃಷ್ಟಃ ಸಾಂಬೋ ಯಥಾ ಪುರಾ ।
ಸ ಚೋವಾಚ ವಸಿಷ್ಠಾಯ ತದಹಂ ಕಥಯಾಮಿ ತೇ ॥ ೨೧ ॥

---

೧೭—೨೦. ಮತ್ತು ಅಗ್ನಿಪ್ರತಿಷ್ಠಾನ ವಿಧಾನವನ್ನೂ ಅಗ್ನಿಕಾರ್ಯ ವಿಧಿಯನ್ನೂ ಮೂರ್ತಿಪ್ರತಿಷ್ಠಾವಿಧಿಯನ್ನೂ ವೇದಾಂತಗಳ ಲಕ್ಷಣಗಳನ್ನೂ, ಸೂರ್ಯ ರಥೋತ್ಸವದ (ಅರುಣ) ವಿಷಯವನ್ನೂ ಅಧ್ಯಯನ ಮಾಡುತ್ತಾರೆ" ಎಂದನು. ಆ ದ್ವಿಜನು ಕೇಳುತ್ತಾನೆ—ಸಪ್ತಮಿಯಲ್ಲಿ ಸೂರ್ಯಪೂಜಾಕ್ರಮವು ಯಾವುದು ? ಅದನ್ನು ಹೇಗೆ ಆಚರಿಸಬೇಕು ? ಸೂರ್ಯದೇವಾಲಯದಲ್ಲಿ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಇವುಗಳ ಸಮರ್ಪಣೆಯಿಂದ ಬರುವ ಫಲವೇನು ? ಯಾವ ದಾನದಿಂದ ಯಾವ ವ್ರತದಿಂದ, ಯಾವ ನಿಯಮದಿಂದ, ಸೂರ್ಯನು ಪ್ರೀತನಾಗುತ್ತಾನೆ ? ಯಾವ ಬಗೆಯ ಧೂಪ, ಯಾವ ಬಗೆಯ ಹೂ, ಯಾವ ಬಗೆಯ ಉಪಾಹಾರ ಇವನ್ನು ಸೂರ್ಯನಿಗೆ ಸಮರ್ಪಿಸಬೇಕು? ಇವುಗಳನ್ನೆಲ್ಲಾ ಕೇಳುವುದಕ್ಕೆ ನಾನು ಬಹಳ ಕುತೂಹಲ ಪಡುತ್ತೇನೆ. ತಪೋಧನನಾದ ಶಂಖ ಮುನಿಯೇ ! ನನಗೆ ಅದನ್ನು ಕೃಪೆಮಾಡಿ ಹೇಳು. ಸೂರ್ಯಮಹಾತ್ಮ್ಯೆಯನ್ನು ವಿಶೇಷವಾಗಿ ಹೇಳು ಎಂದನು.

೨೧. ಶಂಖನು ಹೇಳಿದನು— ಪೂರ್ವಕಾಲದಲ್ಲಿ ವಸಿಷ್ಠನು ಕೃಷ್ಣನ ಮಗನಾದ ಸಾಂಬನನ್ನು ಈ ವಿಚಾರವಾಗಿ ಪ್ರಶ್ನೆಮಾಡಿದಾಗ ಸಾಂಬನು ವಸಿಷ್ಠನಿಗೆ ಹೇಗೆ ಹೇಳಿದ್ದನೋ ಅದನ್ನೇ ನಿನಗೆ ನಾನು ಹೇಳುತ್ತೇನೆ.

**ಅತ್ರಾಶ್ರಮೇ ಪುಣ್ಯತಮೇ ತೀರ್ಥಾನಾಮುತ್ತಮೇ ಮುನಿಃ ।**
**ವವಂದೆ ನಿಯತಾತ್ಮಾನಂ ವಸಿಷ್ಠಂ ಮುನಿಸತ್ತಮಂ ॥ ೨೨ ॥**

**ವಿನಯೇನೋಪಸಂಗಮ್ಯ ವವಂದೇ ಚರಣೌ ಮುನೇಃ ।**
**ಕೃತ ಪ್ರಣಾಮಂ ಸಾಂಬಂ ತು ಭಕ್ತಿ ಪ್ರಹ್ವೀಕೃತಾನನಂ ॥ ೨೩ ॥**

**ವಿಲೋಕ್ಯ ಪರಮಪ್ರೀತೋ ಮುನಿಃ ಪಪ್ರಚ್ಛ ಸಾದರಂ ।**
**ಸರ್ವತಃ ಸ್ಫುಟಿತಂ ಗಾತ್ರಂ ಕುಷ್ಠೇನ ಮಹತಾ ತವ ॥ ೨೪ ॥**

**ಘೋರರೂಪೇಣ ತೀವ್ರೇಣ ಕಥಂ ಸ ವಿಗತಸ್ತವ ।**
**ಕಥಂ ಚ ಲಕ್ಷ್ಮೀರಧಿಕಾ ರೂಪಂ ಚಾತಿಮನೋಹರಂ ॥ ೨೫ ॥**

**ತೇಜಸ್ವಿತಾತಿ ಮಹತೀತಥೈವ ಸುಕುಮಾರತಾ ॥ ೨೬ ॥**

---

೨೨. ಈ ಅತ್ಯಂತ ಪುಣ್ಯಕರವಾದ ಈ ಆಶ್ರಮದ ಉತ್ತಮವಾದ ತೀರ್ಥದಲ್ಲಿ ಸ್ನಾನಕ್ಕೆ ಬಂದಿರುವವನು, ಋಷಿಶ್ರೇಷ್ಠನೂ, ಜಿತೇಂದ್ರಿಯನೂ, ಮಹಾಮುನಿಯೂ, ಆದ ವಸಿಷ್ಠನು ಹಿಂದೆ ಒಂದುದಿನ ಸಾಂಬನು ವಿನಯದಿಂದ ಈ ವಸಿಷ್ಠಮುನಿಗಳ ಹತ್ತಿರ ಬಂದು ಅವನ ಎರಡು ಪಾದಗಳಿಗೂ ನಮಸ್ಕಾರಗಳನ್ನು ಮಾಡಿದನು.

೨೩. ಹೀಗೆ ಭಕ್ತಿಯಿಂದ ಮುಖತಗ್ಗಿಸಿಕೊಂಡು ನಮಸ್ಕಾರಮಾಡಿದ ಸಾಂಬನನ್ನು ನೋಡಿ ಮುನಿಯು ಅತ್ಯಂತ ಸಂತುಷ್ಟನಾಗಿ ಆದರದಿಂದ ಅವನನ್ನು ಹೀಗೆ ಪ್ರಶ್ನಿಸಿದನು.

೨೪. "ಎಲೈ ಯದುವಂಶೋತ್ಪನ್ನನೇ! ನಿನಗೆ ಕುಷ್ಠರೋಗ ಪ್ರಾಪ್ತವಾಗಿ ಶರೀರದ ಎಲ್ಲಾ ಭಾಗವೂ ಒಡೆದುಹೋಗಿ ಘೋರ ರೂಪವಾಗಿ ತೀವ್ರವಾಗಿದ್ದಿತಲ್ಲವೇ.

೨೫. ಆ ಘೋರ ರೂಪಕ್ಕೆ ಕಾರಣವಾಗಿದ್ದ ನಿನ್ನ ಆ ಮಹಾಕುಷ್ಠರೋಗವು ಹೇಗೆ ನಿವಾರಣೆಯಾಯಿತು? ನಿನ್ನಲ್ಲಿ ಲಕ್ಷ್ಮೀ ಕಟಾಕ್ಷವೂ ಹೇಗೆ ಹೆಚ್ಚಿತು?

೨೬. ಈ ನಿನ್ನ ರೂಪವು ಮನೋಹರವೂ, ಮಹಾತೇಜಸ್ಸಿನಿಂದ ಕೂಡಿದುದೂ, ಬಹು ಕೋಮಲತ್ವವುಳ್ಳದ್ದೂ ಅಧಿಕವಾದ ಕಾಂತಿವಿಶಿಷ್ಟವಾದುದೂ ಹೇಗೆ ಆಯಿತು? ಎಂದನು.

॥ ಸಾಂಬ ಉವಾಚ ॥
ಸ್ತುತೋ ನಾಮಸಹಸ್ರೇಣ ಲೋಕನಾಥೋ ದಿವಾಕರಃ ।
ದರ್ಶನಂ ಚ ಗತಃ ಸಾಕ್ಷಾತ್ ದತ್ತವಾಂಶ್ಚ ವರಾನ್ ಮಮ ॥ ೨೭ ॥

॥ ವಸಿಷ್ಠ ಉವಾಚ ॥
ಕಥಮಾರಾಧಿತಃ ಸೂರ್ಯಃ ತ್ವಯಾ ಯಾದವನಂದನ ।
ಕೈಶ್ಚ ವ್ರತತಪೋದಾನೈಃ ದರ್ಶನಂ ಭಗವಾನ್ ಗತಃ ॥ ೨೮ ॥

॥ ಸಾಂಬ ಉವಾಚ ॥
ಶೃಣುಷ್ವಾವಹಿತೋ ಬ್ರಹ್ಮನ್ ಸರ್ವಮೇವ ಮಯಾ ಯಥಾ ।
ತೋಷಿತೋ ಭಗವಾನ್ ಸೂರ್ಯೋ ವಿಧಿನಾ ಯೇನ ಸುವ್ರತ ॥ ೨೯ ॥

ಮೋಹಾನ್ಮಯೋಪಹಸಿತೋ ದುರ್ವಾಸಾಃ ಕೋಪನೋ ಮುನಿಃ ।
ತತೋಽಹಂ ತಸ್ಯ ಶಾಪೇನ ಮಹಾಕುಷ್ಠಮವಾಪ್ತವಾನ್ ॥ ೩೦ ॥

---

೨೭. ಸಾಂಬನು ಹೇಳಿದನು—"ಸ್ವಾಮಿ ಮುನಿವರ್ಯರೇ ! ನಾನು ಲೋಕನಾಥನಾದ ಸೂರ್ಯದೇವನನ್ನು ಸಹಸ್ರನಾಮಗಳಿಂದ ಸ್ತುತಿಸಿದಾಗ ಅವನು ಕಣ್ಣೆದುರಿಗೆ ಬಂದು ಸಾಕ್ಷಾತ್ತಾಗಿ ಕಾಣಿಸಿಕೊಂಡು ನನಗೆ ವರಗಳನ್ನು ಕೊಟ್ಟನು" ಎಂದನು.

೨೮. ವಸಿಷ್ಠನು ಹೇಳಿದನು—ಎಲೈ ಯದುವಂಶೋತ್ಪನ್ನನೇ ! ನೀನು ಸೂರ್ಯನನ್ನು ಆರಾಧಿಸಿದುದೆಂತು ? ಯಾವ ವ್ರತ, ತಪಸ್ಸು, ದಾನಗಳಿಂದ ನಿನಗೆ ಸೂರ್ಯನು ಪ್ರತ್ಯಕ್ಷನಾದನು ಎಂದನು.

೨೯. ಸಾಂಬನು ಹೇಳಿದನು—"ಬ್ರಹ್ಮಪುತ್ರನೂ, ಸುವ್ರತನೂ, ಆದ ವಸಿಷ್ಠ ಮಹರ್ಷಿಯೇ ! ಯಾವ ವಿಧಾನಪ್ರಕಾರ ಹೇಗೆ ಪೂಜಿಸಿದುದರಿಂದ ಸೂರ್ಯನು ನನಗೆ ಪ್ರಸನ್ನನಾದನೋ ಅದೆಲ್ಲವನ್ನೂ ಹೇಳುವೆನು, ಅವಧಾನವಿಟ್ಟು ಕೇಳು" ಎಂದನು.

೩೦. ತಿಳಿವಳಿಕೆಯಿಲ್ಲದ ನಾನು, ಕೋಪಸ್ವಭಾವವುಳ್ಳ ದುರ್ವಾಸಮುನಿಯನ್ನು ಒಂದಾನೊಂದುಸಲ ರೇಗಿಸಿದೆನು. ಆಗ ಅವರ ಶಾಪದಿಂದ ನನಗೆ ಮಹಾಕುಷ್ಠರೋಗ ಪ್ರಾಪ್ತಿಯಾಯಿತು.

ತತೋಽಹಂ ಪಿತರಂ ಗತ್ವಾ ಕುಷ್ಠರೋಗಾಭಿಪೀಡಿತಃ ।
ಲಜ್ಜಮಾನೋಽತಿಗರ್ವೇಣ ಇದಂ ವಾಕ್ಯಮಥಾಽಬ್ರವಂ ॥ ೩೧ ॥

ತಾತ ಸೀದತಿ ಮೇ ಗಾತ್ರಂ ಸ್ವರಶ್ಚ ಪರಿಹೀಯತೇ ।
ಘೋರರೂಪೋ ಮಹಾವ್ಯಾಧಿರ್ವಪುರೇಷ ಜಿಘಾಂಸತಿ ॥ ೩೨ ॥

ಅಶೇಷವ್ಯಾಧಿರಾಜೇನ ಪೀಡಿತಂ ಕ್ರೂರಕರ್ಮಣಾ ।
ವೈದ್ಯೈ ರೋಷಧಿಭಿಶ್ಚೈವ ನ ಶಾಂತಿರ್ಮಮ ವಿದ್ಯತೇ ॥ ೩೩ ॥

ಸೋಽಹಂ ತ್ವಯಾ ಹ್ಯನುಜ್ಞಾತಸ್ತ್ಯಕ್ತುಮಿಚ್ಛಾಮಿ ಜೀವಿತಂ ।
ಯದಿ ವಾಹಮನುಗ್ರಾಹ್ಯಃ ತತೋಽನುಜ್ಞಾತುಮರ್ಹಸಿ ॥ ೩೪ ॥

ಇತ್ಯುಕ್ತವಾಕ್ಯಃ ಸ ಪಿತಾ ಪುತ್ರಶೋಕಾಭಿಪೀಡಿತಃ ।
ಪಿತಾ ಕ್ಷಣಂ ತತೋ ಧ್ಯಾತ್ವಾ ಮಾಮೇವಂ ವಾಕ್ಯಮುಕ್ತವಾನ್ ॥ ೩೫ ॥

---

೩೧. ಅತಿಗರ್ವಯುಕ್ತನಾಗಿರುತ್ತಿದ್ದ ನಾನು ಆಗ ಕುಷ್ಠರೋಗದ ಸೋಂಕಿನಿಂದ ಪೀಡಿತನಾಗಿ ತಂದೆಯಾದ ಕೃಷ್ಣನ ಬಳಿಗೆ ಹೋಗಿ ಈ ರೋಗ ಪ್ರಾಪ್ತಿನಿಮಿತ್ತದಿಂದ ಲಜ್ಜಿತನಾಗಿ ಈ ಮಾತನ್ನು ಹೇಳಿದೆನು.

೩೨. "ಓ ತಂದೆಯೇ! ನನ್ನ ದೇಹವು ಕೃಶವಾಗುತ್ತಿದೆ, ಧ್ವನಿಯು ಕುಗ್ಗುತ್ತಿದೆ, ಘೋರರೂಪವಾದ ಈ ರೋಗವು ನನ್ನ ಶರೀರವನ್ನು ನಾಶಮಾಡಲು ಎಳಸುತ್ತಿದೆ, ಸಮಸ್ತ ವ್ಯಾಧಿಗಳಿಗೂ ರಾಜನೆನಿಸಿ ದಾರುಣವಾಗಿ ಸಂತಾಪಪಡಿಸುವ ಈ ಕುಷ್ಠರೋಗದಿಂದ ಪೀಡಿತನಾಗಿದ್ದೇನೆ.

೩೩. ಯಾವ ವೈದ್ಯರೂ ಇದನ್ನು ಗುಣಮಾಡಲಿಲ್ಲ, ಯಾವ ಔಷಧದಿಂದಲೂ, ಇದು ನಿವಾರಣೆಯಾಗದೆ ಹೋದುದರಿಂದ ನನಗೆ ಶಾಂತಿ ಎಂಬುದೇ ಇಲ್ಲವಾಗಿದೆ.

೩೪. ಈ ಕಾರಣದಿಂದ ನಾನು ನಿನ್ನ ಅಪ್ಪಣೆ ಪಡೆದು ಪ್ರಾಣತ್ಯಾಗಮಾಡಿಬಿಡಬೇಕೆಂದು ಮಾಡಿದ್ದೇನೆ ನೀನು ನನಗೆ ಅನುಗ್ರಹಮಾಡಬೇಕೆಂದು ಇಚ್ಛೆಯಿದ್ದರೆ ಇದಕ್ಕೆ ಅನುಜ್ಞೆಯನ್ನು ಕೊಡು" ಎಂದೆನು.

೩೫. ನನ್ನ ತಂದೆಯು ನಾನು ಹೇಳಿದ ಮಾತನ್ನು ಕೇಳಿ ಪುತ್ರಶೋಕಪೀಡಿತನಾಗಿ ಒಂದುಕ್ಷಣ ಆಲೋಚಿಸಿ ನನ್ನನ್ನು ಕುರಿತು ಮುಂದೆ ಹೇಳುವ ಪ್ರಕಾರ ನುಡಿದನು.

ಧೈರ್ಯಮಾಶ್ರೀಯತಾಂ ಪುತ್ರ ಮಾಶೋಕೇ ಚ ಮನಃ ಕೃಥಾಃ ।
ಹಂತಿ ಶೋಕಾರ್ದಿತಂ ವ್ಯಾಧಿಃ ಶುಷ್ಕಂ ತೃಣಮಿವಾನಲಃ ॥ ೩೬ ॥

ದೇವತಾರಾಧನಪರೋ ಭವ ಪುತ್ರಕ ಮಾ ಶುಚಃ ।
ಇತ್ಯುಕ್ತೇ ಚ ಮಯಾ ಪ್ರೋಕ್ತೋ ದೇವಮಾರಾಧಯಾಮಿ ಕಂ ॥ ೩೭ ॥

ಕಮಾರಾಧ್ಯ ವಿಮುಚ್ಯೇಽಹಂ ತಾತ ರೋಗೈಃ ಸಮಂತತಃ ।
ಇತ್ಯೇವಮುಕ್ತೋ ಭಗವಾನ್ ಮಾಮುವಾಚ ಪಿತಾ ಮಮ ॥ ೩೮ ॥

ಇಮಮರ್ಥಂ ಪುರಾ ಪೃಷ್ಟಃ ಪದ್ಮಯೋನಿಃ ಸನಾತನಃ ।
ಯಾಜ್ಞವಲ್ಕ್ಯೇನ ಋಷಿಣಾ ಯೋಗೀಶೇನ ಮಹಾತ್ಮನಾ ॥ ೩೯ ॥

ಯದುವಾಚ ಮಹಾತೇಜಾಸ್ತಸ್ಮೈ ಸ ಯದುನಂದನ ।
ತಚ್ಛೃಣುಷ್ವ ಶುಚಿರ್ಭೂತ್ವಾ ಆತ್ಮನಃ ಶ್ರೇಯಸೇ ಸುತ ॥ ೪೦ ॥

---

೩೬, ಮಗೂ, ಧೈರ್ಯತಂದುಕೋ; ಮನಸ್ಸನ್ನು ದುಃಖಕ್ಕೆ ಗುರಿಮಾಡಬೇಡ, ಬೆಂಕಿಯು ಒಣ ಹುಲ್ಲನ್ನು ಸುಡುವಂತೆ ರೋಗವು ದುಃಖಪೀಡಿತನನ್ನು ಕೊಂದು ಬಿಡುವುದು.

೩೭. ಆದ್ದರಿಂದ ಎಲೈ ಪುತ್ರನೇ ! ದುಃಖಪಡಬೇಡ. ನಿರಾಶನಾಗಬೇಡ. ದೇವತಾರಾಧನದಲ್ಲಿ ನಿರತನಾಗು. ಎಂದು ನನ್ನ ತಂದೆ ಹೇಳಲು ಆಗ ನಾನು "ಅಪ್ಪಾ ತಂದೆಯೇ ! ಯಾವ ದೇವನನ್ನು ಆರಾಧಿಸಲಿ ?

೩೮. ತಂದೆಯೇ ! ನನ್ನನ್ನು ಸಂಪೂರ್ಣವಾಗಿ ಆಕ್ರಮಿಸಿರುವ ಈ ರೋಗಗಳಿಂದ ಮುಕ್ತನಾಗಬೇಕಾದರೆ ನಾನು ಯಾವ ದೇವನನ್ನು ಆರಾಧಿಸಬೇಕು? ಎಂದು ನಾನು ಪ್ರಶ್ನಿಸಲು ನನ್ನ ತಂದೆಯು ಈ ಮುಂದಿನ ಮಾತನ್ನು ಹೇಳಿದನು.

೩೯. ಮಹಾತ್ಮನೂ ಯೋಗೀಶ್ವರನೂ ಆದ ಯಾಜ್ಞವಲ್ಕ್ಯ ಮಹರ್ಷಿಯು ಪೂರ್ವದಲ್ಲಿ ಈ ವಿಷಯವನ್ನೇ ಪುರಾತನನಾದ ಬ್ರಹ್ಮನನ್ನು ಪ್ರಶ್ನಿಸಿದ್ದನು.

೪೦. "ಅಯ್ಯಾ ಯದುವಂಶೋತ್ಪನ್ನನೇ! ಮಹಾತೇಜಸ್ವಿಯಾದ ಬ್ರಹ್ಮನು ಆ ಯಾಜ್ಞವಲ್ಕ್ಯನಿಗೆ ಯಾವರೀತಿ ಏನನ್ನು ಹೇಳಿದನೋ ಅದನ್ನೇ ಈಗ ನಿನ್ನ ಶ್ರೇಯಸ್ಸಿಗೋಸ್ಕರ ಹೇಳುತ್ತೇನೆ ಪರಿಶುದ್ಧನಾಗಿ ಕೇಳು."

ಸುರಜ್ಯೇಷ್ಠಂ ಸುಖಾಸೀನಂ ಪದ್ಮಯೋನಿಂ ಪ್ರಜಾಪತಿಂ ।
ಯಾಜ್ಞವಲ್ಕ್ಯೋ ಮಹಾತೇಜಾಃ ಪರ್ಯಪೃಚ್ಛತ್ಪಿತಾಮಹಂ ॥ ೪೧ ॥

ಭಗವನ್ ಶ್ರೋತುಮಿಚ್ಛಾಮಿ ಕಿಂಚಿನ್ಮಮ ಮನೋಗತಂ ।
ಸಮಾರಾಧ್ಯ ವಿಭೋ ದೇವಂ ನರೋ ಮುಚ್ಯೇತ ವೈ ಭವಾತ್ ॥ ೪೨ ॥

ಗೃಹಸ್ಥೋ ಬ್ರಹ್ಮಚಾರೀ ವಾ ವಾನಪ್ರಸ್ಥೋಽಥ ಭಿಕ್ಷುಕಃ ।
ಯ ಇಚ್ಛೇನ್ಮೋಕ್ಷಮಾಸ್ಥಾತುಂ ದೇವತಾಂ ಕಾಂ ಯಜೇತ ಸಃ ॥ ೪೩ ॥

ಕುತೋ ಹ್ಯಸ್ಯ ಧ್ರುವಃ ಸ್ವರ್ಗಃ ಕುತೋ ನೈಃಶ್ರೇಯಸಂ ಸುಖಂ ।
ಸ್ವರ್ಗತಶ್ಚೈವ ಕಿಂ ಕುರ್ಯಾದ್ಯೇನ ನ ಚ್ಯವತೇ ಪುನಃ ॥ ೪೪ ॥

ದೇವತಾನಾಂ ತು ಕೋ ದೇವಃ ಪಿತೄಣಾಂ ಚೈವ ಕಃ ಪಿತಾ ।
ತಸ್ಮಾತ್ಪರತರಂ ಯಚ್ಚ ತನ್ಮೇ ಬ್ರೂಹಿ ಪಿತಾಮಹ ॥ ೪೫ ॥

---

೪೧. ಪದ್ಮದಲ್ಲಿ ಹುಟ್ಟಿದವನಾಗಿ ಸುರಜ್ಯೇಷ್ಠನೂ ಪ್ರಜಾಪತಿಯೂ ಎನಿಸಿದ ಬ್ರಹ್ಮನು, ಒಂದುದಿನ ಸುಖವಾಗಿ ಕುಳಿತಿರುವಾಗ ಮಹಾತೇಜಸ್ವಿಯಾದ ಯಾಜ್ಞವಲ್ಕ್ಯನು ಆ ಪಿತಾಮಹನನ್ನು ಈ ರೀತಿ ಪ್ರಶ್ನಿಸಿದನು.

೪೨. ಓ ಭಗವಂತನಾದ ಬ್ರಹ್ಮನೇ ! ಯಾವ ದೇವನನ್ನು ಆರಾಧಿಸುವುದರಿಂದ ಮನುಷ್ಯನು ಸಂಸಾರದಿಂದ ಮುಕ್ತನಾದಾನು ? ನನ್ನ ಮನಸ್ಸಿನಲ್ಲಿ ಇರುವ ಈ ಅಂಶವನ್ನು ನಿನ್ನಿಂದ ಕೇಳಿ ತಿಳಿಯಬೇಕೆಂದು ಅಪೇಕ್ಷಿಸುತ್ತೇನೆ.

೪೩. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ (ಭಿಕ್ಷು) ಇವರುಗಳಲ್ಲಿ ಮೋಕ್ಷಹೊಂದಬೇಕೆಂಬ ಇಚ್ಛೆಯಿದ್ದವನು ಯಾವ ದೇವತೆಯನ್ನು ಆರಾಧಿಸಬೇಕು?

೪೪. ಶಾಶ್ವತವಾದ ಸ್ವರ್ಗವು ಯಾವ ನಿಮಿತ್ತದಿಂದ ಲಭಿಸುವುದು, ಮೋಕ್ಷಸುಖಕ್ಕೆ ಕಾರಣವಾವುದು ? ಸ್ವರ್ಗಕ್ಕೆ ಹೋದವನು ಅಲ್ಲಿಂದ ಚ್ಯುತನಾಗದಂತೆ ಇರಬೇಕಾದರೆ ಏನು ಮಾಡಬೇಕು ?

೪೫. ಓ ಬ್ರಹ್ಮನೇ! ದೇವತೆಗಳಿಗೆಲ್ಲಾ ದೇವನಾದವನೂ, ಪಿತೃಗಳಿಗೂ ಪಿತೃವಾದವನೂ ಯಾರು ? ಅವನಿಗಿಂತ ಶ್ರೇಷ್ಠವಾದುದು ಇನ್ನು ಯಾವುದಾದರೂ ಇದ್ದರೆ ಅದನ್ನೂ ನನಗೆ ಹೇಳು.

ಕೇನ ಸೃಷ್ಟಮಿದಂ ವಿಶ್ವಂ ಬ್ರಹ್ಮನ್ ಸ್ಥಾವರಜಂಗಮಂ ।
ಪ್ರಲಯೇ ಚ ಕಮಭ್ಯೇತಿ ತನ್ಮೇ ತ್ವಂ ವಕ್ತುಮರ್ಹಸಿ ॥ ೪೬ ॥

॥ ಬ್ರಹ್ಮೋವಾಚ ॥
ಸಾಧು ಪೃಷ್ಟೋಽಸ್ಮಿ ಭವತಾ ತುಷ್ಟಶ್ಚಾಸ್ಮಿ ಮಹಾಮತೇ ।
ಪ್ರಣಮ್ಯ ಶಿರಸಾದೇವಂ ಪುಣ್ಯೋತ್ತರಮನುತ್ತಮಂ ॥ ೪೭ ॥

ಕಥಯಿಷ್ಯೇ ದ್ವಿಜಶ್ರೇಷ್ಠ ಶೃಣುಷ್ವೈಕ ಮನಾಧುನಾ ।
ಆತ್ಮನಃ ಶ್ರೇಯಸೇ ವಿಪ್ರ ಶುಚಿರ್ಭೂತ್ವಾ ಸಮಾಹಿತಃ ॥ ೪೮ ॥

ಉದ್ಯನ್ನ ಎಷ ಕುರುತೇ ಜಗದ್ವಿತಮಿರಂ ಕರೈಃ ।
ನಾತಃ ಪರತರೋ ದೇವಃ ಕಿಮನ್ಯತ್ಕಥಯಾಮಿ ತೇ ॥ ೪೯ ॥

---

೪೬. "ಓ ಬ್ರಹ್ಮನೇ! ಸ್ಥಾವರ ಜಂಗಮರೂಪವಾದ ಈ ಪ್ರಪಂಚವು ಯಾರಿಂದ ಸೃಷ್ಟಿಸಲ್ಪಟ್ಟಿತು? ಸೃಷ್ಟವಾದ ಈ ಪ್ರಪಂಚವು ಪ್ರಳಯಕಾಲದಲ್ಲಿ ನಷ್ಟವಾಗಿ ಯಾರಲ್ಲಿ ಹೋಗಿ ಐಕ್ಯವಾಗುತ್ತದೆ? ಇದನ್ನೆಲ್ಲಾ ನನಗೆ ಹೇಳಲು ನೀನೇ ಸಮರ್ಥನಾಗಿ ಇರುತ್ತೀಯೆ" ಎಂದನು.

೪೭. ಬ್ರಹ್ಮನು ಹೇಳಿದನು—ಅಯ್ಯಾ ಮಹಾಬುದ್ಧಿಶಾಲಿಯೇ! ನೀನು ನನ್ನನ್ನು ಬಹು ಸಮಂಜಸವಾಗಿ ಕೇಳಿದೆ. ಈ ಪ್ರಶ್ನೆ ಕೇಳಿದುದರಿಂದ ನಾನು ತುಷ್ಟನಾಗಿದ್ದೇನೆ. ಎಂದು ಅವನಿಗೆ ಆ ವಿಚಾರವನ್ನು ವಿವರಿಸಿ ಹೇಳಲು ಉಪಕ್ರಮಿಸಿದನು.

೪೮. ಅಯ್ಯಾ ಬ್ರಾಹ್ಮಣನೇ! ನಾನು ಆ ದೇವದೇವನನ್ನು ತಲೆಬಾಗಿ ವಂದಿಸಿ ಮುಂದೆ ಪುಣ್ಯವನ್ನು ಉಂಟುಮಾಡುವುದೂ, ಶ್ರೇಷ್ಠವಾದುದೂ ಎನಿಸಿದ ಆತನು ಹೇಳಿದ ಮಾತನ್ನೇ ಹೇಳುತ್ತೇನೆ. ಎಲೈ ವಿಪ್ರನೇ! ನಿನಗೆ ಶ್ರೇಯಸ್ಸಾಗಬೇಕಾಗಿದ್ದರೆ ನೀನು ಶುಚಿಯಾಗಿ ಇದೊಂದರಲ್ಲೇ ಆಸಕ್ತನಾಗಿ ಚಿತ್ತೈಕಾಗ್ರತೆಯಿಂದ ಕೇಳು.

೪೯. ಯಾವನು ಉದಿತನಾದರೆ ಪ್ರಪಂಚದಲ್ಲಿ ಕತ್ತಲೆಯಿಲ್ಲದಂತೆ ಹೋಗಲಾಡಿಸುತ್ತಾನೆಯೋ, ಅವನಿಗಿಂತ ಶ್ರೇಷ್ಠವಾದ ದೇವನು ಯಾವನೂ ಇಲ್ಲ. ನಿನಗೆ ಇನ್ನೇನು ಹೇಳಲಿ?

ಅನಾದಿನಿಧನೋ ಹ್ಯೇಷ ಪುರುಷಃ ಶಾಶ್ವತೋऽವ್ಯಯಃ ।
ದೀಪಯತ್ಯೇವ ಲೋಕಾಂಸ್ತ್ರೀನ್ ರವೀ ರಶ್ಮಿಭಿರುಲ್ಬಣೈಃ ॥ ೫೦ ॥

ಸರ್ವದೇವಾತ್ಮಕೋ ಹ್ಯೇಷ ತಪಸಾ ಚಾಂಶುತಾಪನಃ ।
ಸರ್ವಸ್ಯ ಜಗತೋ ನಾಥಃ ಕರ್ಮಸಾಕ್ಷೀ ಶುಭಾಶುಭೇ ॥ ೫೧ ॥

ಕ್ಷಪಯತ್ಯೇಷ ಭೂತಾನಿ ತಥಾ ವಿಸೃಜತೇ ಪುನಃ ।
ಏಷ ಭಾತಿ ತಪತ್ಯೇಷ ವರ್ಧತೇ ಚ ಗಭಸ್ತಿಭಿಃ ॥ ೫೨ ॥

ಏಷ ಧಾತಾ ವಿಧಾತಾ ಚ ಪೂಷಾ ಪ್ರಕೃತಿಭಾವನಃ ।
ನ ಹ್ಯೇಷ ಕ್ಷಯಮಾಯಾತಿ ನಿತ್ಯಮಕ್ಷಯಮಂಡಲಃ ॥ ೫೩ ॥

ಪಿತೄಣಾಂ ಹಿ ಪಿತಾ ಹ್ಯೇಷ ದೇವತಾನಾಂ ಚ ದೇವತಾ ।
ಧ್ರುವಂ ಸ್ಥಾನಂ ಸ್ಮೃತಂ ಹ್ಯೇಷ ಆಧಾರೋ ಜಗತಸ್ತಥಾ ॥ ೫೪ ॥

---

೫೦. ಆದ್ಯಂತ ಶೂನ್ಯನಾದುದರಿಂದ ಯಾವಾಗಲೂ ಇರತಕ್ಕವನೂ ನಾಶಕ ಸಾಮಗ್ರಿಯಿಲ್ಲದವನೂ ಆದ ಸೂರ್ಯನು ತನ್ನ ತೀಕ್ಷ್ಣಗಳಾದ ಕಿರಣಗಳಿಂದ ಮೂರು ಲೋಕಗಳನ್ನೂ ಬೆಳಗಿಸುತ್ತಾನೆ.

೫೧. ಕಿರಣಗಳ ತಾಪದಿಂದ ತಪಿಸತಕ್ಕವನಾದ ಈ ಸೂರ್ಯನು ಸರ್ವದೇವಮಯನೂ, ಸಮಸ್ತ ಲೋಕಗಳಿಗೆ ಒಡೆಯನೂ, ಶುಭಕರ್ಮಗಳಲ್ಲಿಯಾಗಲಿ ಅಶುಭಕರ್ಮಗಳಲ್ಲಿಯಾಗಲಿ ಸಾಕ್ಷೀಭೂತನೂ ಆಗಿದ್ದಾನೆ.

೫೨. ಪ್ರಾಣಿಗಳನ್ನು ನಾಶಮಾಡತಕ್ಕವನೂ ಇವನೇ; ಹಾಗೆಯೇ ಸೃಷ್ಟಿಮಾಡತಕ್ಕವನೂ ಇವನೇ; ಪ್ರಕಾಶಿಸತಕ್ಕವನೂ ತಾಪಪಡಿಸತಕ್ಕವನೂ ಕಿರಣಗಳಿಂದ ವೃದ್ಧಿಹೊಂದುವವನೂ ಇವನೇ ;

೫೩. ಸೃಷ್ಟಿಕರ್ತನೂ; ಮತ್ತು ಸೃಷ್ಟವಾದುದನ್ನು, ಪೋಷಿಸತಕ್ಕವನೂ, ಸ್ವಭಾವ ಸ್ಥಿತಿಯಲ್ಲಿಡತಕ್ಕವನೂ, (ರಕ್ಷಣೆಮಾಡತಕ್ಕವನೂ) ಇವನೇ. ಪೂರ್ಣಮಂಡಲನಾದುದರಿಂದ ಇವನು ಯಾವಾಗಲೂ ಕ್ಷಯರಹಿತನಾದವನು.

೫೪. ಇವನು ಪಿತೃದೇವತೆಗಳಿಗೆಲ್ಲಾ ಪಿತೃವೂ, ದೇವತೆಗಳಿಗೆಲ್ಲಾ ದೇವತೆಯೂ, ಆಗಿದ್ದಾನೆ. ಮತ್ತು ಜಗತ್ತಿಗೆ ಆಧಾರನೂ, ಜಗತ್ತಿಗೆ ಎಂದೂ ತಪ್ಪಿಹೋಗದ ಶಾಶ್ವತವಾದ ವಾಸಸ್ಥಾನವೂ ಎಂದು ಭಾವಿಸಲ್ಪಟ್ಟಿದ್ದಾನೆ.

ಸರ್ವಕಾಲೇ ಜಗತ್ ಕೃತ್ಸ್ನಮಾದಿತ್ಯಾತ್ಸಂಪ್ರಸೂಯತೇ ।
ಪ್ರಲಯೇ ಚ ತಮಭ್ಯೇತಿ ಆದಿತ್ಯಂ ದೀಪ್ತತೇಜಸಂ ॥ ೫೫ ॥

ಯೋಗಿನಶ್ಚಾತ್ರ ಸಂಲೀನಾಸ್ತ್ಯಕ್ತ್ವಾ ಗೃಹಕಲೇವರಂ ।
ವಾಯುಭೂತಾ ವಿಶಂತ್ಯಸ್ಮಿನ್ ತೇಜೋರಾಶೌ ದಿವಾಕರೇ ॥ ೫೬ ॥

ತಸ್ಯ ರಶ್ಮಿಸಹಸ್ರಾಣಿ ಶಾಖಾ ಇವ ವಿಹಂಗಮಾಃ ।
ವಸಂತ್ಯಾಶ್ರಿತ್ಯ ಮುನಯಃ ಸಂಸಿದ್ಧಾ ದೈವತೈಃ ಸಹ ॥ ೫೭ ॥

ಜನಕಾದಯೋ ಗೃಹಸ್ಥಾಸ್ತು ರಾಜಾನೋ ಯೋಗಧರ್ಮಿಣಃ ।
ವಾಲಖಿಲ್ಯಾದಯಶ್ಚೈವ ಮುನಯೋ ಬ್ರಹ್ಮಚಾರಿಣಃ ॥ ೫೮ ॥

ವ್ಯಾಸಾದಯೋ ವನಸ್ಥಾಶ್ಚ ಭಿಕ್ಷುಃ ಪಂಚಶಿಖಸ್ತಥಾ ।
ಸರ್ವೇ ತೇ ಯೋಗಮಾಸ್ಥಾಯ ಪ್ರವಿಷ್ಟಾಃ ಸೂರ್ಯಮಂಡಲಂ ॥ ೫೯ ॥

---

೫೫ ಜಗತ್ತಿನಲ್ಲಿ ವಸ್ತು ಸೃಷ್ಟಿರೂಪವಾದ ವ್ಯಾಪಾರವು ಸರ್ವದಾ ಈ ಸೂರ್ಯನಿಂದಲೇ ಪ್ರವರ್ತಿಸುತ್ತದೆ. ಹೀಗೆ ಸೃಷ್ಟವಾದ ಜಗತ್ತೂ ಕೂಡ, ಪ್ರಳಯಕಾಲದಲ್ಲಿ ಪ್ರಕಾಶಮಾನವಾದ ತೇಜಸ್ಸುಳ್ಳ ಆದಿತ್ಯನನ್ನೇ ಸೇರುತ್ತದೆ.

೫೬. ಯೋಗಿಗಳೂ ಕೂಡ ತಮ್ಮ ವಾಸಸ್ಥಾನವಾಗಿದ್ದ ಕಳೇಬರವನ್ನು ತ್ಯಜಿಸಿ ವಾಯುರೂಪವಾಗಿ ಕಾಂತಿಮಂತನಾದ ಈ ಸೂರ್ಯನಲ್ಲಿಯೇ ಪ್ರವೇಶಿಸುತ್ತಾರೆ.

೫೭. ಸಿದ್ಧರಾದ ಮುನಿಗಳು ದೇವತೆಗಳೊಡನೆ ಕೂಡಿ ಪಕ್ಷಿಗಳು ಮರದ ಕೊಂಬೆಯನ್ನು ಆಶ್ರಯಿಸಿಕೊಂಡಿರುವಂತೆ ಈ ಸೂರ್ಯನ ಸಹಸ್ರರಶ್ಮಿಗಳನ್ನು ಆಶ್ರಯಿಸಿಕೊಂಡಿರುತ್ತಾರೆ.

೫೮-೫೯. ಗೃಹಸ್ಥಾಶ್ರಮದಲ್ಲಿದ್ದು ಯೋಗಧರ್ಮವನ್ನು ಅವಲಂಬಿಸಿರುವ ಜನಕನೇ ಮುಂತಾದ ರಾಜರ್ಷಿಗಳೂ, ಬ್ರಹ್ಮಚಾರಿಗಳಾದ ವಾಲಖಿಲ್ಯನೇ ಮುಂತಾದ ಬ್ರಹ್ಮಋರ್ಷಿಗಳೂ, ವಾನಪ್ರಸ್ಥರಾಗಿದ್ದ ವ್ಯಾಸ ಮುಂತಾದವರೂ, ಭಿಕ್ಷುಗಳೂ, ಸಂಪ್ರದಾಯಾನುಸಾರ ಬ್ರಹ್ಮಚರ್ಯಾಶ್ರಮಪ್ರಾಪ್ತಿ ಕಾಲದಲ್ಲಿ ಪಂಚಶಿಖೆಯನ್ನು ಬಿಟ್ಟಿರುವವರೂ ಈ ರೀತಿ ಸಂಸ್ಕಾರ ಹೊಂದಿದವರು ಯೋಗವನ್ನು ಅವಲಂಬಿಸಿ ಸೂರ್ಯಮಂಡಲವನ್ನು ಪ್ರವೇಶಮಾಡಿದರು.

**ಶುಕೋ ವ್ಯಾಸಾತ್ಮಜಃ ಶ್ರೀಮಾನ್ ಯೋಗಧರ್ಮಮವಾಪ್ಯ ತು ।**
**ಆದಿತ್ಯಕಿರಣಾನ್ ಪೀತ್ವಾ ನ ಪುನರ್ಭವಮಾಪ್ತವಾನ್ ॥ ೬೦ ॥**

**ಶಬ್ದಮಾತ್ರಾಃ ಶ್ರುತಿಮುಖಾ ಬ್ರಹ್ಮ ವಿಷ್ಣು ಶಿವಾದಯಃ ।**
**ಪ್ರತ್ಯಕ್ಷೋಽಯಂ ಸ್ಮೃತೋ ದೇವಃ ಸೂರ್ಯಸ್ತಿಮಿರ ನಾಶನಃ ॥ ೬೧ ॥**

**ತಸ್ಮಾದನ್ಯವ್ರತೇ ಭಕ್ತಿಃ ನ ಕಾರ್ಯಾ ಶುಭಮಿಚ್ಛತಾ ।**
**ದೃಷ್ಟೇನ ಸಾಧ್ಯತೇ ಯಸ್ಮಾದದೃಷ್ಟಂ ನಿತ್ಯಮೇವ ಹಿ ।**
**ತ್ವಯಾತಃ ಸತತಂ ವಿಪ್ರ ಅರ್ಚನೀಯೋ ದಿವಾಕರಃ ॥ ೬೨ ॥**

**॥ ಯಾಜ್ಞವಲ್ಕ್ಯ ಉವಾಚ ॥**

**ಅಹೋ! ಯ ಏಷ ಕಥಿತೋ ಭವತಾ ಭಾಸ್ಕರೋ ಮಮ ।**
**ದೇವತಾ ಸರ್ವದೇವಾನಾಂ ನೈತನ್ಮಿಥ್ಯಾ ಪ್ರಜಾಯತೇ ॥ ೬೩ ॥**

---

೬೦ ವ್ಯಾಸರ ಮಗನಾದ ಶುಕನು ಯೋಗಧರ್ಮವನ್ನು ಅವಲಂಬಿಸಿ ಸೂರ್ಯ ಕಿರಣಗಳನ್ನು ಪಾನಮಾಡಿ ಪುನರ್ಜನ್ಮವನ್ನು ತಪ್ಪಿಸಿಕೊಂಡನು.

೬೧. ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವತೆಗಳು ಕೆಲವು ಶಬ್ದಮಾತ್ರ ದಿಂದ ಪರಿಚಿತರು. ಆದ್ದರಿಂದ ಅವರು ಶ್ರವಣೇಂದ್ರಿಯವಾದ ಕರ್ಣಕ್ಕೆ ಆನಂದ ಮಾತ್ರರೇ ವಿನಾ ಅವರ ಸ್ವರೂಪವನ್ನು ಸಾಕ್ಷಾತ್ತಾಗಿ ಯಾರು ಕಂಡಿಲ್ಲ. ಅಂಧಕಾರ ನಾಶಕನಾದ ಈ ಸೂರ್ಯದೇವನಾದರೋ ಅವ್ಯಕ್ತರೂಪನಲ್ಲ. ಸರ್ವಲೋಕಕ್ಕೂ ಗೋಚರನಾಗತಕ್ಕ ದೇವನೆಂದು ಭಾವಿಸಲ್ಪಟ್ಟಿದ್ದಾನೆ.

೬೨. ಆದುದರಿಂದ ಶುಭವನ್ನು ಅಪೇಕ್ಷಿಸುವವನು ಇತರ ದೇವತಾವ್ರತದಲ್ಲಿ ಭಕ್ತಿಯನ್ನು ಇಡತಕ್ಕುದಲ್ಲ. ಯಾವಾಗಲೂ ದೃಷ್ಟವಾದ ಸಾಧನದಿಂದಲೇ ಅದೃಷ್ಟ ವನ್ನು ಹೊಂದುವುದು ಲೋಕವಾಡಿಕೆಯಾಗಿದೆ. ಆದುದರಿಂದ ನೀನು ಪ್ರತ್ಯಕ್ಷನಾದ ಸೂರ್ಯನನ್ನು ಪೂಜಿಸಬೇಕು ಎಂದನು.

೬೩. ಯಾಜ್ಞವಲ್ಕ್ಯರು ಹೇಳಿದರು—ಈ ಸೂರ್ಯನು ಎಲ್ಲಾ ದೇವತೆಗಳಿಗೂ ಪೂಜ್ಯನಾದ ದೇವತೆ ಎಂದು ನೀನು ನನಗೆ ಹೇಳಿದ ಮಾತು ಸುಳ್ಳಲ್ಲ. ದೇವತೆಗಳು, ಸಿದ್ಧರು, ಮಾನವರು ಇವರಿಂದ ಸ್ತುತನಾಗಿರುವ ಆ ಸೂರ್ಯದೇವನ ಮಹಿಮೆಯನ್ನು ನಾನು ಅನೇಕ ಪ್ರಕಾರವಾಗಿ ಕೇಳಿದ್ದೇನೆ.

ತಸ್ಯ ದೇವಸ್ಯ ಮಾಹಾತ್ಮ್ಯಂ ಶ್ರುತಂ ಸು ಬಹುಶೋ ಮಯಾ ।
ದೇವರ್ಷಿಸಿದ್ಧಮನುಜೈಃ ಸ್ತುತಸ್ಯೇಪ ಮಹಾತ್ಮನಃ ॥ ೬೪ ॥

ಕಃ ಸ್ತೌತಿ ದೈವತಮಜಂ ಯಸ್ಯೈತತ್ಸಚರಾಚರಂ ।
ಅಕ್ಷಯಸ್ಯಾಪ್ರಮೇಯಸ್ಯ ಕಿರಣೋದ್ಗಮನಾದ್ಭವೇತ್ ॥ ೬೫ ॥

ದಕ್ಷಿಣಾತ್ಕಿರಣಾದ್ಯಸ್ಯ ಸಂಭೂತೋ ಭಗವಾನ್ ಹರಿಃ ।
ವಾಮಾದ್ಭವಾಂಸ್ತಥಾ ಜಾತಃ ಕಿರಣಾತ್ಕಿಲ ಕಂಜಜ ॥ ೬೬ ॥

ಲಲಾಟಾದ್ಯಸ್ಯ ರುದ್ರಸ್ತು ಕಾ ತುಲ್ಯಾ ತೇನ ದೇವತಾ ।
ತಸ್ಯ ದೇವಸ್ಯ ಕಃ ಶಕ್ತಃ ಪ್ರವಕ್ತುಂ ಗುಣವಿಸ್ತರಂ ॥ ೬೭ ॥

ಸೋऽಹಮಿಚ್ಛಾಮಿ ದೇವಸ್ಯ ತಸ್ಯ ಸರ್ವಾತ್ಮನಃ ಪ್ರಭೋ ।
ಶ್ರೋತುಮಾರಾಧನಂ ಯೇನ ನಿಸ್ತರೇಯಂ ಭವಾರ್ಣವಂ ॥ ೬೮ ॥

---

೬೪-೬೫. ನಾಶರಹಿತನಾಗಿಯೂ, ಊಹಿಸಲು ಅಶಕ್ಯನಾಗಿಯೂ ಇರುವ, ಯಾವ ದೇವನ ಕಿರಣ ಸಂಪರ್ಕದಿಂದ ಚರಾಚರಾತ್ಮಕವಾದ ಪ್ರಪಂಚವು ಉತ್ಪನ್ನವಾಗುವುದೋ ಅಂತಹ ಉತ್ಪತ್ತಿರಹಿತನಾದ ಸೂರ್ಯದೇವನನ್ನು ಯಾವನು ತಾನೇ ಸ್ತೋತ್ರಮಾಡಲಾಪನು ?

೬೬. ಅಯ್ಯಾ ಬ್ರಹ್ಮನೇ ! ಸೂರ್ಯಮಂಡಲದ ಬಲಗಡೆಯ ಕಿರಣದಿಂದ ವಿಷ್ಣುವೂ, ಎಡಗಡೆಯ ಕಿರಣದಿಂದ ನೀನೂ, ಹಣೆಯಿಂದ ರುದ್ರನೂ ಹುಟ್ಟಿದಿರಿ.

೬೭. ಇಂತಹ ಸೂರ್ಯನಿಗೆ ಸಮನಾದ ದೇವತೆಯು ಯಾವನಿದ್ದಾನೆ? ಆ ದೇವನ ಗುಣಗಳನ್ನು ಬೋಧಿಸುವಷ್ಟು ಸಮೃದ್ಧಿಯಾದ ಶಬ್ದವನ್ನು ಹೇಳಲು ಯಾರು ಶಕ್ತರು ?

೬೮. ಪ್ರಭುವಾದ ಬ್ರಹ್ಮದೇವನೇ ! ಸೂರ್ಯಾರಾಧನ ಕ್ರಮವನ್ನು ಕೇಳುವುದರಿಂದ ಈ ಸಂಸಾರ ಸಮುದ್ರವನ್ನು ದಾಟುವೆನು. ಅಂತಹ ಸರ್ವಾತ್ಮನಾದ ಸೂರ್ಯನ ಆರಾಧನವನ್ನು ಕೇಳಲು ನಾನು ಇಚ್ಛಿಸುತ್ತೇನೆ.

ಕೇನೋಪಾಯೇನ ಮಂತ್ರೈರ್ವಾ ರಹಸ್ಯೈಃ ಪರಿಚರ್ಯಯಾ ।
ದಾನೈರ್ವ್ರತೋಪವಾಸ್ಯೈರ್ವಾ ಹೋಮೈರ್ಜಪ್ಯೈರಥಾಪಿ ವಾ ॥ ೬೯ ॥

ಆರಾಧಿತಃ ಸಮಸ್ತಾನಾಂ ಕ್ಲೇಶಾನಾಂ ಹಾನಿದೋ ರವಿಃ ।
ಶಕ್ಯಃ ಸಮಾರಾಧಯಿತುಂ ಕಥಂ ಶಂಸ ಪ್ರಜಾಪತೇ ॥ ೭೦ ॥

ಧರ್ಮಾರ್ಥಕಾಮಸಂಪ್ರಾಪ್ತ್ಯೈ ಪುರುಷಾಣಾಂ ವಿಚೇಷ್ಟತಾಂ ।
ಜನ್ಮನ್ಯವಿತಥಾ ಸೈಕಾ ಕ್ರಿಯಾ ಯಾಽರ್ಕಂ ಸಮಾಶ್ರಿತಾ ॥ ೭೧ ॥

ದುರ್ಗಸಂಸಾರ ಕಾಂತಾರಮಪಾರಮಭಿಧಾವತಾಂ ।
ಏಕಃ ಸೂರ್ಯನಮಸ್ಕಾರೋ ಮುಕ್ತಿಮಾರ್ಗಸ್ಯ ದೇಶಕಃ ॥ ೭೨ ॥

ಸ್ತೋತುಮಿಚ್ಛಾಮಿ ತಂ ದೇವಂ ಸಪ್ತಲೋಕಪರಾಯಣಂ ।
ಕಾಲಾಯನಮಶೇಷಸ್ಯ ಜಗತೋ ಹೃದ್ಯವಸ್ಥಿತಃ ॥ ೭೩ ॥

---

೬೯-೭೦. ಅಯ್ಯಾ ಪ್ರಜಾಪತಿಯೇ! ಯಾವ ವಿಧಾನ, ಯಾವ ರಹಸ್ಯ ಮಂತ್ರಗಳು, ಯಾವ ಪೂಜೆ, ಯಾವ ದಾನಗಳು, ಯಾವ ವ್ರತನಿಯಮಗಳು, ಯಾವ ಉಪವಾಸಗಳು, ಯಾವ ಹೋಮಗಳು, ಯಾವ ಜಪ, ಇವುಗಳಿಂದ ಆರಾಧಿತನಾಗಿ ಸೂರ್ಯನು ಆರಾಧಕರ ಸಮಸ್ತ ಕ್ಲೇಶಗಳನ್ನೂ ನಾಶಮಾಡುವನು? ಇಂಥ ಸೂರ್ಯನನ್ನು ಆರಾಧಿಸುವುದು ಹೇಗೆ ಸಾಧ್ಯ? ಎಂಬುದನ್ನು ಹೇಳಬೇಕು.

೭೧. ಧರ್ಮ, ಅರ್ಥ, ಕಾಮ ಇವುಗಳ ಪ್ರಾಪ್ತಿಗಾಗಿ ಕೆಲಸಮಾಡುತ್ತಿರುವ ಪುರುಷರ ಜನ್ಮದಲ್ಲಿ ಸೂರ್ಯೋದ್ದೇಶದಿಂದ ಮಾಡುವ ಕಾರ್ಯವು ಒಂದು ಮಾತ್ರ ಸಾಧಕವಾದುದು.

೭೨. ವಿಶಾಲವೂ, ಪ್ರವೇಶಮಾಡಲು ಅಸಾಧ್ಯವೂ ಆದ ಸಂಸಾರವೆಂಬ ಅರಣ್ಯಕ್ಕೆ ಅಭಿಮುಖವಾಗಿ ವೇಗವಾಗಿ ಹೋಗುತ್ತಿರುವವರಿಗೆ ಸೂರ್ಯ ನಮಸ್ಕಾರ ಒಂದೇ ಮುಕ್ತಿಮಾರ್ಗೋಪದೇಶಕವಾಗಿದೆ.

೭೩. ಏಳು ಲೋಕಗಳಿಗೂ, ಉತ್ಕೃಷ್ಟವಾದ ಆಶ್ರಯನೂ, ಸಮಸ್ತ ಪ್ರಪಂಚದಲ್ಲಿಯೂ ವಾಸಿಸುವವನೂ, ಕಾಲಕ್ಕೆ ಆಶ್ರಯನೂ, ಆದ ಸೂರ್ಯದೇವನನ್ನು ಸ್ತುತಿಸಬೇಕೆಂದು ನನಗೆ ಬಹು ಆಶೆಯಾಗಿದೆ.

ಗೋಪಾಲಮಾರಾಧಯಿತುಂ ಗ್ರಹೇಶಮಮಿತೌಜಸಂ ।
ಶಂಕರಂ ಜಗತೋ ದೀಪಂ ಸ್ಮೃತಮಾತ್ರಾಘನಾಶನಂ ॥ ೭೪ ॥

ತಮನಾದ್ಯಂ ಸುರಶ್ರೇಷ್ಠಂ ಪ್ರಸಾದಯಿತುಮಿಚ್ಛತಃ ।
ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ॥ ೭೫ ॥

ತಸ್ಯೈತದ್ವಚನಂ ಶ್ರುತ್ವಾ ಭಕ್ತಿಮುದ್ವಹತೋ ರವೌ ।
ಜಗಾಮ ಪರಿತೋಷಂ ಸ ಪದ್ಮಯೋನಿರ್ಮಹಾತಪಾಃ ॥ ೭೬ ॥

॥ ಬ್ರಹ್ಮೋವಾಚ ॥

ಯತ್ಪೃಚ್ಛಸಿ ದ್ವಿಜಶ್ರೇಷ್ಠ ಸೂರ್ಯಸ್ಯಾರಾಧನಂ ಪ್ರತಿ ।
ವ್ರತೋಪವಾಸ ಜಪ್ಯಾದಿ ತದಿಹೈಕಮನಾಃ ಶೃಣು ॥ ೭೭ ॥

ಅನಾದಿ ಯತ್ಪರಂ ಬ್ರಹ್ಮ ಸರ್ವಹೇಯವಿವರ್ಜಿತಂ ।
ವ್ಯಾಪ್ಯ ಯತ್ಸರ್ವಭೂತೇಷು ಸ್ಥಿತಂ ಸದಸತಃ ಪರಂ ॥ ೭೮ ॥

---

೭೪. ಈ ಸೂರ್ಯನು ಕಿರಣಾಧಿಪತಿಯೂ, ಗ್ರಹಗಳಿಗೆಲ್ಲಾ ಅಧಿಪನೂ, ಅಪರಿಮಿತವಾದ ತೇಜಸ್ಸುಳ್ಳವನೂ, ಸುಖಕರನೂ, ಲೋಕಗಳಿಗೆ ದೀಪಸ್ವರೂಪನೂ, ಪ್ರಕಾಶಕನೂ, ಸ್ಮರಣ ಮಾತ್ರದಿಂದಲೇ ಪಾಪವನ್ನು ನಾಶಮಾಡತಕ್ಕವನೂ ಆಗಿದ್ದಾನೆ.

೭೫. "ಆದಿಯಿಲ್ಲದವನೂ, ಸುರಶ್ರೇಷ್ಠನೂ ಆದ ಆ ಸೂರ್ಯನನ್ನು ಆರಾಧಿಸುವುದಕ್ಕೆ ಇಚ್ಛಿಸುತ್ತಿರುವ ನನಗೆ ಅದಕ್ಕೆ ಅವಕಾಶವುಂಟಾಗುವಂತೆ ಅನುಗ್ರಹ ಮಾಡುವುದಕ್ಕೆ ನೀನೇ ಸಮರ್ಥನು" ಎಂದನು.

೭೬. ಮಹಾತಪಸ್ವಿಯಾದ ಯಾಜ್ಞವಲ್ಕ್ಯನಿಗೆ ಸೂರ್ಯನಲ್ಲಿರುವ ಭಕ್ತ್ಯತಿಶಯವನ್ನು ಸೂಚಿಸುವ ಮಾತುಗಳನ್ನು ಲಾಲಿಸಿ ಬ್ರಹ್ಮನು ಸಂತೋಷಹೊಂದಿದನು.

೭೭. ಬ್ರಹ್ಮನು ಹೇಳಿದನು—ಎಲೈ ಬ್ರಾಹ್ಮಣೋತ್ತಮನೇ! ಸೂರ್ಯನ ಆರಾಧನೆಯ ಸಂಬಂಧವಾದ ಯಾವ ವ್ರತ, ಉಪವಾಸ, ಜಪ, ಮುಂತಾದುವನ್ನು ತಿಳಿದುಕೊಳ್ಳಲು ಆಶಿಪಸುತ್ತೀಯೋ ಅವನ್ನು ಒಂದೇ ಮನಸ್ಸಿನಿಂದ ಶ್ರವಣಮಾಡು.

೭೮-೮೦. ಯಾವುದು ಸಮಸ್ತ ಹೇಯಪ್ರಪಂಚ ಸಂಬಂಧ ಶೂನ್ಯ (ನಿಷ್ಪ್ರಪಂಚ) ವಾದುದೋ, ಯಾವುದು ಸರ್ವಪ್ರಾಣಿಗಳಲ್ಲಿಯೂ ವ್ಯಾಪಿಸಿಕೊಂಡಿರುವ

ಪ್ರಧಾನ ಪುಂಸೋರನಯೋರ್ಯತಃ ಕ್ಷೋಭಃ ಪ್ರವರ್ತತೇ ।
ನಿತ್ಯಯೋರ್ವ್ಯಾಪಿನೋಶ್ಚೈವ ಜಗದಾದೌ ಮಹಾತ್ಮನೋಃ ॥ ೭೯ ॥

ತತ್‌ಕ್ಷೋಭಕತ್ವಾದ್ಬ್ರಹ್ಮಾಂಡ ಸೃಷ್ಟೇರ್ಹೇತುರ್ನಿರಂಜನಃ ।
ಅಹೇತುರಪಿ ಸರ್ವಾತ್ಮಾ ಜಾಯತೇ ಪರಮೇಶ್ವರಃ ॥ ೮೦ ॥

ಪ್ರಧಾನಪುರುಷತ್ವಂ ಚ ತಥೈವೇಶ್ವರಲೀಲಯಾ ।
ಸಮುಪೈತಿ ತತಶ್ಚೈವಂ ಬ್ರಹ್ಮತ್ವಂ ಛಂದತಃ ಪ್ರಭುಃ ॥ ೮೧ ॥

ತತಃ ಸ್ಥಿತೌ ಪಾಲಯಿತಾ ವಿಷ್ಣುತ್ವಂ ಜಗತಃ ಕ್ಷಯೇ ।
ರುದ್ರತ್ವಂ ಚ ಜಗನ್ನಾಥ ಸ್ವೇಚ್ಛಯಾ ಕುರುತೇ ರವಿಃ ॥ ೮೨ ॥

---

ದೋ, ಯಾವುದು ಕಾರ್ಯಸ್ವರೂಪವೂ, ಕಾರಣಸ್ವರೂಪವೂ, ಅಲ್ಲದೆ ಇರುವುದೋ, ಅಂತಹ ತನಗೆ ಕಾರಣವಾದದ್ದು ಯಾವುದೂ ಇಲ್ಲದುದಾದ ಅನಾದಿಯಾದ ಪರಬ್ರಹ್ಮವು ಯಾವುದುಂಟೋ ಅದು ಜಗತ್ತಿನ ಉತ್ಪತ್ತಿಕಾಲದಲ್ಲಿ ನಿತ್ಯರೂ ವ್ಯಾಪಿಗಳೂ, ಮಹಾತ್ಮರೂ ಆದ ಪ್ರಧಾನ ಮತ್ತು ಪುರುಷ ಇವರಿಬ್ಬರೂ, ಕ್ಷೋಭಕವಾಗಿರುವುದರಿಂದ ಸೃಷ್ಟ್ಯಾದಿ ಸಮಸ್ತಕ್ಕೂ ಕಾರಣವಾದ ಪ್ರಕೃತಿ ಪುರುಷ ಇವರ ಕ್ಷೋಭಕ್ಕೆ ಕಾರಣವಾದ್ದರಿಂದಲೇ ಜಗತ್ಸೃಷ್ಟಿಗೆ ಹೇತುವಾದನು.

೮೧. ಆ ಬ್ರಹ್ಮವೇ ತನ್ನ ಸಂಕಲ್ಪಪೂರ್ವಕವಾಗಿ ಮಾಯೆಯನ್ನು ವಶಪಡಿಸಿಕೊಂಡು ಪ್ರಕೃತಿ ಸಂಬಂಧವನ್ನೂ ಪುರುಷ ಭಾವವನ್ನೂ ಅನಂತರ ದೇಶ ವಸ್ತು ಕಾಲ ಎಂಬ ಈ ಮೂರರಿಂದ ಅಪರಿಚ್ಛಿನ್ನವಾದ ತನ್ನ ಪರಮಾರ್ಥವಾದ ಬ್ರಹ್ಮಸ್ವರೂಪವನ್ನೂ ಹೊಂದುವುದು.

೮೨. ಲೋಕನಾಥನೆನಿಸಿದ ಸೂರ್ಯನು ಸ್ವೇಚ್ಛೆಯಿಂದ ಮಾಡುವ ಸೃಷ್ಟಿ ಸ್ಥಿತಿ ಲಯ ಎಂಬ ಪ್ರಾಪಂಚಿಕಗಳಾದ ಮೂರು ಕಾರ್ಯಗಳಲ್ಲಿ ಸ್ಥಿತಿ ಕಾರ್ಯ ನಡೆಯುವಾಗ ಪಾಲಯಿತೃವಾದ ವಿಷ್ಣುತ್ವವನ್ನೂ, ಜಗತ್ತು ಲಯಿಸುವ ಕಾಲದಲ್ಲಿ ಲಯಕಾರಿಯಾದ ರುದ್ರತ್ವವನ್ನೂ, ಹೊಂದುವನು.

ತದೇಕಮಕ್ಷರಂ ಧಾಮ ಸರ್ವದೇವನಮಸ್ಕೃತಂ ।
ಭೇದಾಭೇದಸ್ವರೂಪಂ ತಂ ಪ್ರಣಿಪತ್ಯ ದಿವಾಕರಂ ।
ವರ್ಣಯಿಷ್ಯೇಽಖಿಲಂ ವಿಪ್ರ ತಸ್ಯೈವಾರಾಧನಂ ರವೇಃ ॥ ೮೩ ॥

ಗುಹ್ಯಂ ಚಾಪಿ ತಥಾ ತಸ್ಯ ಭಾಸ್ಕರಸ್ಯ ಶೃಣುಷ್ವ ವೈ ।
ತುಷ್ಟೇನ ಹಿ ಪುರಾ ಮಹ್ಯಂ ಕಥಿತಂ ಭಾಸ್ಕರೇಣ ತು ॥ ೮೪ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಯಾಜ್ಞವಲ್ಕ್ಯ ಬ್ರಹ್ಮ ಸಂವಾದೇ ಆದಿತ್ಯ ಮಾಹಾತ್ಮ್ಯವರ್ಣನಂ ನಾಮ ಷಟ್‌ಷಷ್ಟಿತಮೋಽಧ್ಯಾಯಃ.**



೮೩. " ತತ್ " ಪದವಾಚ್ಯನೂ ಏಕರೂಪನೂ (ಒಂದೇ ಆದುದು) ನಾಶ ರಹಿತನೂ, ತೇಜೋರೂಪನೂ ಎಲ್ಲಾ ದೇವತೆಗಳೂ ನಮಸ್ಕರಿಸಲು ಯೋಗ್ಯನೂ, ವಿವಿಧ ಪ್ರಕಾರಗಳಿಂದ ಭಿದ್ಯಮಾನವಾದ ಜಗತ್ಸ್ವರೂಪವಾದದ್ದರಿಂದ ಭೇದಸ್ವರೂಪನೂ, ಯಾವ ಪ್ರಕಾರದ ಭೇದವೂ ಇಲ್ಲದ ಬ್ರಹ್ಮಸ್ವರೂಪವಾದುದರಿಂದ ಅಭೇದ ಸ್ವರೂಪನೂ ಆದ ಸೂರ್ಯನನ್ನು, ನಮಸ್ಕರಿಸಿ ಅತಿಗೋಪ್ಯವಾದ ಆ ಸೂರ್ಯನ ಆರಾಧನ ಕ್ರಮವನ್ನು ಸಮಗ್ರವಾಗಿ ವರ್ಣಿಸುವೆನು.

೮೪. ಕೇಳಯ್ಯಾ ಬ್ರಾಹ್ಮಣನೇ ! ಪೂರ್ವದಲ್ಲಿ ಸಂತುಷ್ಟನಾದ ಸೂರ್ಯನು ಇದನ್ನು ನನಗೆ ಹೇಳಿದ್ದನು ಎಂದನು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಯಾಜ್ಞವಲ್ಕ್ಯ ಬ್ರಹ್ಮ ಸಂವಾದ ಎಂಬ ಅರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತಷಷ್ಟಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಪ್ರಭಾತೇ ಸಂಸ್ತುತೋ ದೇವೋ ಮೂರ್ತಿಹೇತೋರ್ಮಯಾ ಪುರಾ ।
ಯಜಂತಂ ಚಾಪರಂ ದೇವಂ ಭಕ್ತಿನಮ್ರಂ ಮಹಾಮತಿಃ ॥ ೧ ॥

ಪ್ರತ್ಯಕ್ಷತ್ವಮಥೋ ಗತ್ವಾ ರಹಸ್ಯಂ ಪ್ರೋಕ್ತವಾನ್ ಮಮ ।
ಅಹಂ ಚ ಕೃತವಾನ್ ಪ್ರಶ್ನಂ ದೃಷ್ಟ್ವಾ ಪ್ರತ್ಯಕ್ಷತೋ ರವಿಂ ॥ ೨ ॥

ವೇದೇಷು ಚ ಪುರಾಣೇಷು ಸಾಂಗೋಪಾಂಗೇಷು ಗೀಯಸೇ ।
ತ್ವಮಜಃ ಶಾಶ್ವತೋ ಧಾತಾ ಮಹಾಭೂತಮನುತ್ತಮಂ ॥ ೩ ॥

---

## ಅರವತ್ತೇಳನೆಯ ಅಧ್ಯಾಯ

೧. ಬ್ರಹ್ಮನು ಹೇಳಿದನು—ಸೃಷ್ಟಿಕಾಲವಾದ ಪ್ರಭಾತದಲ್ಲಿ ಸೃಜ್ಯವಸ್ತುಗಳಿಗೆ ಒಂದೊಂದು ಆಕಾರವೇರ್ಪಡುವುದಕ್ಕಾಗಿ ನಾನು ಸೂರ್ಯದೇವನನ್ನು ಸ್ತುತಿಸಿದೆನು ಸರ್ವೋತ್ಕೃಷ್ಟನಾದ ಆ ದೇವನನ್ನು ಪೂಜಿಸುತ್ತಿರುವಾಗ ಸೂರ್ಯನು ಪ್ರತ್ಯಕ್ಷನಾಗಿ ಭಕ್ತಿನಮ್ರವಾದ ನನಗೆ ಗುಟ್ಟಾದ ಒಂದು ವಿಷಯವನ್ನು ಹೇಳಿದನು.

೨-೩. ನಾನು ಸೂರ್ಯನನ್ನು ಪ್ರತ್ಯಕ್ಷವಾಗಿ ನೋಡಿ ಪ್ರಶ್ನೆಮಾಡಿದೆನು. ಏನೆಂದರೆ—ಆರು ವೇದಾಂಗಗಳು, ನಾಲ್ಕು ಉಪಾಂಗಗಳು, ಸಹಿತವಾದ ನಾಲ್ಕು ವೇದಗಳಲ್ಲೂ ನೀನು ಅಜ (ಉತ್ಪತ್ತಿರಹಿತ) ನೆಂದೂ, ಶಾಶ್ವತನೆಂದೂ, ಸೃಷ್ಟಿಕರ್ತನೆಂದೂ, ಸರ್ವಶ್ರೇಷ್ಠನಾದ ದೊಡ್ಡವನೆನಿಸಿರತಕ್ಕವನೆಂದೂ ಹೊಗಳಿಸಿಕೊಳ್ಳುತ್ತೀಯೆ.

ಪ್ರತಿಷ್ಠಿತಂ ಭೂತಭವ್ಯಂ ತ್ವಯಿ ಸರ್ವಮಿದಂ ಜಗತ್ ।
ಚತ್ವಾರೋ ಹ್ಯಾಶ್ರಮಾ ದೇವ ಸರ್ವೇ ಗಾರ್ಹಸ್ಥ್ಯಮೂಲಕಾಃ ॥ ೪ ॥

ಯಜಂತೇ ತ್ವಾಮಹರಹಃ ನಾನಾಮೂರ್ತೀಃ ಸಮಾಶ್ರಿತಾಃ ।
ಪಿತಾ ಮಾತಾ ಹಿ ಸರ್ವಸ್ಯ ದೈವತಂ ತ್ವಂ ಹಿ ಶಾಶ್ವತಂ ॥ ೫ ॥

ಯಜಸೇ ಚೈವ ಕಂ ದೇವಂ ಏವಂ ಚಾಪಿ ನ ವಿದ್ಮಹೇ ।
ಕಥ್ಯತಾಂ ಮಮ ದೇವೇಶ ಪರಂ ಕೌತೂಹಲಂ ಹಿ ಮೇ ॥ ೬ ॥

ಇತ್ಥಂ ಮಯೋಕ್ತೋ ಭಗವಾನ್ ಇದಂ ವಚನಮಬ್ರವೀತ್ ।
ಅವಾಚ್ಯ ಮೇತದ್ವಕ್ತವ್ಯಂ ಆತ್ಮಗುಹ್ಯಂ ಸನಾತನಂ ॥ ೭ ॥

---

೪. ಇದುವರೆಗೆ ಹಿಂದೆ ಹುಟ್ಟಿ ಇದ್ದುದು ಈಗ ಹುಟ್ಟುತ್ತಿರುವುದು, ಮುಂದೆ ಹುಟ್ಟತಕ್ಕದ್ದು. ಈ ಎಲ್ಲಾ ಪ್ರಪಂಚವೂ ನಿನ್ನಲ್ಲಿ ನೆಲಸಿದೆ. ಲೋಕದಲ್ಲಿ ಬ್ರಹ್ಮ ಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಎಂಬುವುಗಳಲ್ಲಿ ಮೊದಲು ಉಂಟಾಗಿದ್ದ ಗಾರ್ಹಸ್ಥ್ಯವೆಂಬುದು ಅದರ ಮುಂದೆ ಸಿದ್ಧವಾಗುವ ವಾನಪ್ರಸ್ಥ, ಸಂನ್ಯಾಸ, ಪುನಃ ಬ್ರಹ್ಮಚರ್ಯ, ಪುನಃ ಗಾರ್ಹಸ್ಥ್ಯ, ಪುನಃ ವಾನಪ್ರಸ್ಥ, ಪುನಃ ಸಂನ್ಯಾಸ, ಈರೀತಿ ಗಾರ್ಹಸ್ಥ್ಯವೆಂಬುದು ಮುಂದೆ ಸಂಭವಿಸುವ ನಾಲ್ಕು ಆಶ್ರಮಗಳಿಗೂ ಕಾರಣವಾಗಿದೆ.

೫. ಅನೇಕ ಆಕಾರಗಳನ್ನು ಹೊಂದಿರುವವನಾಗಿದ್ದರೂ, ಒಬ್ಬನೇ ಆದ ನಿನ್ನನ್ನು ಹೀಗೆ ಪ್ರತಿದಿನವೂ ಪೂಜಿಸುತ್ತಾರೆ. ನೀನು ಎಲ್ಲರಿಗೂ ಪಿತೃವಿನಂತೆ ಹಿತೋಪದೇಶ ಕನೂ, ಮಾತೃವಿನಂತೆ ಕರುಣಾಳುವೂ, ಶಾಶ್ವತವಾದ ದೇವತೆಯೂ, ಆಗಿದ್ದೀಯೆ.

೬. ಇಂತಹ ನೀನು ಯಾವ ದೇವನನ್ನು ಪೂಜಿಸುತ್ತಿದ್ದೀ ಎಂಬುದನ್ನು ನಾವು ಅರಿಯೆವು. ಎಲೈ ದೇವದೇವೇಶನೇ ! ನನಗೆ ಅದನ್ನು ತಿಳಿಯಲು ಬಹು ಕುತೂಹಲವಾಗಿದೆ " ಹೇಳು ಎಂದನು.

೭–೮. ನಾನು ಹೀಗೆ ಹೇಳುತ್ತಲೆ ಸೂರ್ಯದೇವನು ಈ ಮಾತನ್ನು ಹೇಳಿ ದನು. " ಪುರಾತನವಾದ ಈ ಆತ್ಮಸ್ವರೂಪವನ್ನು ವಿವರಿಸಿ ಹೇಳುವುದು ಅಶಕ್ಯವು.

ತವ ಭಕ್ತಿಮತೋ ಬ್ರಹ್ಮನ್ ವಕ್ಷ್ಯಾಮ್ಯಹ ಯಥಾತಥಂ ।
ಯತಃ ಸೂಕ್ಷ್ಮಮವಿಜ್ಞೇಯಮವ್ಯಕ್ತಮಚಲಂ ಧ್ರುವಂ ॥ ೮ ॥

ಇಂದ್ರಿಯೈರಿಂದ್ರಿಯಾರ್ಥೈಶ್ಚ ಸರ್ವಭೂತೈಶ್ಚ ವರ್ಜಿತಂ ।
ಸ ಹ್ಯಂತರಾತ್ಮಾ ಭೂತಾನಾಂ ಕ್ಷೇತ್ರಜ್ಞಶ್ಚೇತಿ ಕಥ್ಯತೇ ॥ ೯ ॥

ತ್ರಿಗುಣವ್ಯತಿರಿಕ್ತೋಽಸೌ ಪುರುಷಶ್ಚೇತಿ ಕಥ್ಯತೇ ।
ಹಿರಣ್ಯಗರ್ಭೋ ಭಗವಾನ್ ಸ್ಯೈವ ಬುದ್ಧಿರಿತಿ ಸ್ಮೃತಃ ॥ ೧೦ ॥

ಮಹಾನಿತಿ ಚ ಯೋಗೇಷು ಪ್ರದಾನಂ ಚೇತಿ ಕಥ್ಯತೇ ।
ಸಾಂಖ್ಯೇ ಚ ಪಠ್ಯತೇ ಶಾಸ್ತ್ರೇ ನಾಮಭಿರ್ಬಹುಭಿಃ ಸದಾ ॥ ೧೧ ॥

---

ಆದರೂ ಭಕ್ತಿಯಿಂದ ಕೇಳುವ ನಿನಗೆ ಶಾಸ್ತ್ರವನ್ನು ಅನುಸರಿಸಿ ಇದ್ದದ್ದು ಇದ್ದಹಾಗೆ ಯಥಾಸ್ಥಿತವಾಗಿ ಹೇಳುತ್ತೇನೆ ಕೇಳು.

೯. ಏಕೆಂದರೆ ಅದು ಅತೀಂದ್ರಿಯವೂ, ತಿಳಿಯಲಸಾಧ್ಯವೂ, ಆದುದರಿಂದ ಅವ್ಯಕ್ತವೂ (ನಿರ್ವಚನಕ್ಕೆ ಅನರ್ಹವೂ) ಕ್ರಿಯಾಶೂನ್ಯವೂ ಆದುದೂ, (ಅಚಲವಾದುದು) ಶಾಶ್ವತವಾದುದೂ, ಇಂದ್ರಿಯಗಳಿಂದಲೂ ವಿಷಯಗಳಿಂದಲೂ (ಇಂದ್ರಿಯಾರ್ಥ) ಪೃಥಿವ್ಯಾದಿ ಸಮಸ್ತ ಭೂತಗಳಿಂದಲೂ ಅಸ್ಪೃಷ್ಟವಾದುದೂ ಆಗಿದೆ. ಅಂಥ ಆತ್ಮನೇ ಸಮಸ್ತಪ್ರಾಣಿಗಳಿಗೂ ಪ್ರತ್ಯಗಾತ್ಮನೆಂದೂ ಕ್ಷೇತ್ರಜ್ಞನೆಂದೂ ಹೇಳುತ್ತಾರೆ.

೧೦. ಸತ್ವರಜಸ್ತಮೋಗುಣಗಳಿಗಿಂತ ಭಿನ್ನವಾದ ಇವನು ಪುರೇ ಶೇತೇ ಇತಿ ಪುರುಷಃ ಎಂದರೆ ದೇಹಾವಚ್ಛಿನ್ನನಾದ ಜೀವನು ಎಂದು ಹೇಳಲ್ಪಡುತ್ತಾನೆ. ಈ ಪರಮಾತ್ಮನೇ ಮುಖ್ಯಸಂಸಾರಿಯಾದ ಹಿರಣ್ಯಗರ್ಭನು ಸಮಸ್ತ ಸೃಷ್ಟಿಲಿಂಗಶರೀರಾಭಿಮಾನಿಯಾಗಿರುವುದರಿಂದ ಅವನು ಬುದ್ಧಿ ಎಂತಲೂ, ಮಹಾನ್ ಎಂತಲೂ ಹೇಳಲ್ಪಡುತ್ತಾನೆ.

೧೧. ಯೋಗಶಾಸ್ತ್ರದಲ್ಲಿಯೂ ಮತ್ತು ಸಾಂಖ್ಯಶಾಸ್ತ್ರದಲ್ಲಿಯೂ (ಸಮ್ಯಕ್ ಖ್ಯಾಯತೇ ಇತಿ ಸಾಂಖ್ಯಃ ಎಂದರೆ ಜ್ಞಾನ) ಈ ಪ್ರಕಾರ ಬ್ರಹ್ಮನನ್ನು ಅನೇಕ ವಿಧವಾಗಿ ಹೇಳಿರುತ್ತಾರೆ.

ವಿಶ್ವಗೋ ವಿಶ್ವಭೂತಶ್ಚ ವಿಶ್ವಾತ್ಮಾ ವಿಶ್ವಸಂಭವಃ ।
ಧೃತಂ ಚೈವಾತ್ಮಕಂ ಯೇನ ಇದಂ ತ್ರೈಲೋಕ್ಯಮಾತ್ಮನಾ ॥ ೧೩ ॥

ಅಶರೀರಃ ಶರೀರೇಷು ಲಿಪ್ಯತೇ ನ ಚ ಕರ್ಮಭಿಃ ।
ಮಮಾಂತರಾತ್ಮಾ ತವ ಚ ಯೇಚಾನ್ಯೇ ದೇಹಿಸಂಜ್ಞಿತಾಃ ॥ ೧೪ ॥

ಸರ್ವೇಷಾಂ ಸಾಕ್ಷಿಭೂತೋಽಸೌ ನ ಕರೋತಿ ನ ಲಿಪ್ಯತೇ ।
ಸಗುಣೋ ನಿರ್ಗುಣೋ ವಿಷ್ಣುಃ ಜ್ಞಾನಗಮ್ಯೋಹ್ಯಸೌ ಸ್ಮೃತಃ ॥ ೧೫ ॥

ಸರ್ವತಃ ಪಾಣಿಪಾದೋಽಸೌ ಸರ್ವತೋಽಕ್ಷಿ ಶಿರೋಮುಖಃ ।
ಸರ್ವತಃ ಶ್ರುತಿಯುಕ್ತೋಽಸೌ ಸರ್ವಮಾವೃತ್ಯ ತಿಷ್ಠತಿ ॥ ೧೬ ॥

---

೧೩. ಸರ್ವವ್ಯಾಪಕನೂ, ಸರ್ವಸ್ವರೂಪನಾಗಿರುವವನೂ, ಸಮಸ್ತ ಪ್ರಪಂಚಗಳಿಗೂ ಅಂತರ್ಯಾಮಿಯೂ, ಪ್ರಪಂಚೋತ್ಪತ್ತಿ ಕಾರಣನೂ, ಈ ಮೂರು ಲೋಕ ಸಮುದಾಯರೂಪವಾದ ಪ್ರಪಂಚವನ್ನು ಸ್ವರೂಪವಾಗಿ ಧರಿಸುವವನೂ,

೧೪. ಶರೀರವಿಲ್ಲದವನಾದರೂ, ಶರೀರದಲ್ಲಿ ವ್ಯಾಪಕನಾಗಿರುತ್ತಾ, ಆ ಶರೀರಗಳಲ್ಲಿ ನಡೆಸಲ್ಪಡುವ ಕರ್ಮಗಳಿಂದ ಅಲಿಪ್ತನೂ, ಅವನೇ ನಮ್ಮಿಬ್ಬರಿಗೂ ಸಹ ಅಂತರಾತ್ಮನೂ ಆಗಿರುವುದಲ್ಲದೆ ಇತರ ಪ್ರಾಣಿವರ್ಗಕ್ಕೂ ಅವನೇ ಅಂತರಾತ್ಮನಾಗಿರುತ್ತಾನೆ.

೧೫. ಅವನು ಎಲ್ಲಾ ಕರ್ಮಕ್ಕೂ ಸಾಕ್ಷಿಭೂತನಾಗಿರುವನೇ ಹೊರತು ತಾನು ಯಾವ ಕರ್ಮಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ, ಪರಮಾರ್ಥತಃ ನಿರ್ಗುಣನಾಗಿದ್ದರೂ ಉಪಾಧಿಯಿಂದ ಗುಣವಿಶಿಷ್ಟನಾಗಿರುವನು. ಪ್ರಾಪಕನ ಕೇವಲ ಜ್ಞಾನ ಮಾತ್ರದಿಂದ ಪ್ರಾಪ್ಯನೆಂದು ಶಾಸ್ತ್ರದಲ್ಲಿ ಹೇಳಿದೆ.

೧೬. ಆ ಪರಬ್ರಹ್ಮವೇ ಕ್ಷೇತ್ರಜ್ಞಸ್ವರೂಪವಾಗಿದ್ದು ಸರ್ವದೇಹಿಗಳಲ್ಲೂ ಪಾಣಿ ಪಾದಾದಿಗಳನ್ನು, ಸರ್ವವ್ಯಾಪಾರಗಳಲ್ಲೂ ಪ್ರವೃತ್ತಿಮಾಡಿಸುವನು. ಅಲ್ಲದೇ ಸರ್ವದೇಹದ ಶಿರಸ್ಸು, ಕಣ್ಣು, ಮುಖ ಇವುಗಳಿಗೂ ಪ್ರವರ್ತಕನೂ, ಸರ್ವದೇಹದ ಶ್ರವಣೇಂದ್ರಿಯಕ್ಕೂ ಪ್ರವರ್ತಕನೂ, ಸಮಸ್ತ ಪ್ರಾಣಿವರ್ಗಗಳಲ್ಲಿ ಅಚೇತನ ಶರೀರಕ್ಕೆ ಸತ್ತಾ ಮತ್ತು ಸ್ಫೂರ್ತಿ ಇವನ್ನು ಕೊಡುವುದರಮೂಲಕ ವ್ಯಾಪಿಸಿಕೊಂಡಿರುವವನೂ, ಹೀಗೆ ಆ ಬ್ರಹ್ಮವು ಸ್ವಯಂ ನಿರ್ಗುಣವಾದುದರಿಂದ ವಾಕ್ ಮನಸ್ಸುಗಳಿಗೆ

**ವಿಶ್ವಮೂರ್ಧಾ ವಿಶ್ವಭುಜೋ ವಿಶ್ವಪಾದಾಕ್ಷಿನಾಸಿಕಃ ।**
**ಏಕಶ್ಚರತಿ ಕ್ಷೇತ್ರೇಷು ಸ್ವೈರಚಾರೀ ಯಥಾಸುಖಂ　　　　॥ ೧೬ ॥**

**ಕ್ಷೇತ್ರಾಣ್ಯಸ್ಯ ಶರೀರಾಣಿ ಬೀಜಂ ಚಾಪಿ ಶುಭಾಶುಭೇ ।**
**ತಾನಿ ವೇತ್ತಿ ಸ ಯೋಗಾತ್ಮಾ ಅತಃ ಕ್ಷೇತ್ರಜ್ಞ ಉಚ್ಯತೇ ।**
**ಅವ್ಯಕ್ತಕೇ ಪುರೇ ಶೇತೇ ತೇನಾಸೌ ಪುರುಷಃ ಸ್ಮೃತಃ　　　　॥ ೧೭ ॥**

**ವಿಶ್ವಂ ಬಹುವಿಧಂ ಜ್ಞೇಯಂ ಸ ಚ ಸರ್ವತ್ರ ವಿದ್ಯತೇ ।**
**ತಸ್ಮಾತ್ಸ ಬಹುರೂಪತ್ವಾತ್ ವಿಶ್ವರೂಪ ಇತಿ ಸ್ಮೃತಃ　　　　॥ ೧೮ ॥**

---

ಅಗೋಚರವಾಗಿ ಇದ್ದರೂ ಸರ್ವಜಗತ್ಪ್ರಾಣಿಗಳ ಪಾಣಿ ಪಾದಾದಿ ಸರ್ವವ್ಯವಹಾರಕ್ಕೂ ಕಾರಣನಾಗಿದ್ದಾನೆ ಎಂದು ಈ ತರಹವಾಗಿ ತಿಳಿಯಬಹುದು.

೧೬. ತಾನು ವಿರಾಡ್ರೂಪನಾಗಿದ್ದುಕೊಂಡು ಸಮಸ್ತ ಪ್ರಾಣಿಗಳ ತಲೆಗಳನ್ನು ತನ್ನ ತಲೆಗಳನ್ನಾಗಿಯೂ, ಸಮಸ್ತ ಪ್ರಾಣಿಗಳ ಭುಜಗಳನ್ನು ತನ್ನ ಭುಜಗಳನ್ನಾಗಿಯೂ, ಸಮಸ್ತ ಪ್ರಾಣಿಗಳ ಪಾದಗಳನ್ನು ತನ್ನ ಪಾದಗಳನ್ನಾಗಿಯೂ, ಸಮಸ್ತ ಪ್ರಾಣಿಗಳ ಕಣ್ಣುಗಳನ್ನು ತನ್ನ ಕಣ್ಣುಗಳನ್ನಾಗಿಯೂ, ಸಮಸ್ತ ಪ್ರಾಣಿಗಳ ನಾಸಿಕವನ್ನು ತನ್ನ ನಾಸಿಕವನ್ನಾಗಿಯೂ ಮಾಡಿಕೊಂಡು ತಾನೊಬ್ಬನಾಗಿದ್ದುಕೊಂಡೇ ನಾನಾದೇಹಗಳಲ್ಲಿ ಅನಾಯಾಸವಾಗಿ ಯಥೇಚ್ಛವಾಗಿ ಸುಖವಾಗಿ ಸಂಚರಿಸುತ್ತಾನೆ.

೧೭. ಶರೀರವು ಕ್ಷೇತ್ರವೆಂದು ಹೇಳಲ್ಪಡುವುದು. ಈ ಶರೀರಕ್ಕೆ ಪುಣ್ಯಾಪಾಪಗಳೇಕಾರಣ. ಯಾವನು ಈ ಶರೀರವನ್ನು 'ನಾನು,' 'ನನ್ನದು' ಎಂದು ಅಭಿಮಾನವುಳ್ಳವನಾಗಿ ವರ್ತಿಸುವನೋ ಅವನು ಕ್ಷೇತ್ರಜ್ಞನೆನಿಸುತ್ತಾನೆ. ಮಾಯೋಪಾದಾನಾತ್ಮಕವಾದ ಈ ಶರೀರದಲ್ಲಿ ಪ್ರವೇಶಮಾಡಿರುವುದರಿಂದ ಈ ಪರಮಾತ್ಮನಿಗೆ ಪುರುಷ ಎಂಬ ಹೆಸರು ಬಂದಿದೆ.

೧೮. ಪ್ರಪಂಚವು ನಾನಾರೂಪವಾಗಿದೆ. ಒಬ್ಬನೇ ಸೂರ್ಯನು ಅನೇಕ ಪಾತ್ರಸ್ಥ ಜಲಗಳಲ್ಲಿ ಬಹುರೂಪವಾಗಿ ಪ್ರತಿಬಿಂಬಿಸುವಂತೆ, ಆತ್ಮನು ಈ ಪ್ರಪಂಚದ ಸರ್ವರೂಪಗಳಲ್ಲಿಯೂ ಅಂತರ್ಗತನಾಗುವನು. ಆದ್ದರಿಂದ ಇವನು ಬಹುರೂಪನಾದಂತಾಯ್ತು. ಹೀಗೆ ಬಹುರೂಪನಾಗಿದ್ದುದರಿಂದ ವಿಶ್ವರೂಪನೆಂದು ತಿಳಿಯಲ್ಪಟ್ಟಿದ್ದಾನೆ.

ಮಹಾಪುರುಷಶಬ್ದಂ ಹಿ ಬಿಭರ್ತ್ಯೇಷ ಸನಾತನಃ ।
ಸ ತು ವೈ ವಿಕ್ರಿಯೊಪನ್ನಃ ಸೃಜತ್ಯಾತ್ಮಾನ ಮಾತ್ಮನಾ ॥ ೧೯ ॥

ಆಕಾಶಾತ್ಪತಿತಂ ತೋಯಂ ಯಾತಿ ಸ್ವಾದಾಂತರಂ ಯಥಾ ।
ಭೂಮೇ ರಸವಿಶೇಷೇಣ ತಥಾಗುಣವಶಾತ್ತು ಸಃ ॥ ೨೦ ॥

ಏಕ ಏವ ಯಥಾ ವಾಯುರ್ದೇಹೇ ತಿಷ್ಠತಿ ಪಂಚಧಾ ।
ಏಕತ್ವಂ ಚ ಪೃಥಕ್ತ್ವಂಚ ತಥಾ ತಸ್ಯ ನ ಸಂಶಯಃ ॥ ೨೧ ॥

ಸ್ಥಾನಾಂತರ ವಿಶೇಷೇಣ ಯಥಾಗ್ನಿರ್ಲಭತೇ ಪರಾಂ ।
ಸಂಜ್ಞಾಂ ದಾವಾಗ್ನಿಕಾದ್ಯೇಷು ತಥಾ ದೇವೋಽಪ್ಯಸೌ ಸ್ಮೃತಃ ॥ ೨೨ ॥

---

೧೯. ಅನಾದಿಯಾದ ಈ ಪರಮಾತ್ಮನು ಮಹಾಪುರುಷನೆಂಬ ಶಬ್ದವನ್ನು ಹೊಂದಿದ್ದಾನೆ. ಸೃಷ್ಟಿಕಾಲದಲ್ಲಿ ಉಪಾಧಿಪ್ರಯತ್ನ ವಿಕಾರಹೊಂದಿ, ರಜ್ಜುವು ತನ್ನ ಸ್ವರೂಪಕ್ಕೆ ಬಾಧಕವಿಲ್ಲದೆ ಸರ್ಪ, ದಂಡ ಇವಾದಿಯಾದ ಅನೇಕ ರೂಪವಾಗಿ ವಿವರ್ತವಾದಂತೆ ಇವನೂ ಪ್ರಪಂಚ ಸ್ವರೂಪನಾಗಿ ವಿವರ್ತಿಸುವನು.

೨೦. ಆಕಾಶದಿಂದ (ಮೋಡದಿಂದ) ಬೀಳುವ ನೀರು, ಯಾವ ರುಚಿಯೂ ಇಲ್ಲದೇ ಇದ್ದರೂ ಭೂಮಿಯ ರಸ ಸಂಬಂಧದಿಂದ ಸ್ವಾದುವಾಗಿ ಪರಿಣಮಿಸಿ ತೋರುವಂತೆ, ನಿರ್ಗುಣನಾದ ಆತ್ಮನು ಸತ್ವಾದಿ ಸ್ವರೂಪವಾದ ಮಾಯಾದಿ ಸಂಬಂಧ ದಿಂದ ಅನೇಕ ಕಾರ್ಯರೂಪಗಳನ್ನು ಹೊಂದುವನು.

೨೧. ಒಂದೇ ವಾಯುವು ದೇಹದಲ್ಲಿ ಹೃದಯಾದಿ ಸ್ಥಾನಸಂಬಂಧದಿಂದ ಪ್ರಾಣಾಪಾನಾದಿ ಐದುರೂಪವಾಗಿ ದೇಹದಲ್ಲಿದ್ದಂತೆ, ಆತ್ಮನು ಪರಮಾರ್ಥತಃ ಒಬ್ಬನೇ ಆಗಿದ್ದರೂ ಉಪಾಧಿಯಿಂದ ಬೇರೆ ಬೇರೆಯಾಗಿ ಇರುವನು. ಆದ್ದರಿಂದ ಅವನಿಗೆ ಭೇದವು ಕೇವಲ ಉಪಾಧಿ ಸಂಬಂಧದಿಂದಲೇ ಬಂದುದು ಎಂಬುದು ನಿಶ್ಚಯ.

೨೨. ಒಂದೇ ಅಗ್ನಿಯು ಅರಣ್ಯಮೊದಲಾದ ಸ್ಥಾನವಿಶೇಷಗಳ ಸಂಬಂಧ ದಿಂದ ದಾವಾಗ್ನಿ ಮೊದಲಾದ ಸಂಜ್ಞಾವಿಶೇಷವನ್ನು ಹೊಂದುವಂತೆ, ಈ ಒಬ್ಬದೇವನು (ಆತ್ಮನು) ವಿಭಿನ್ನಪ್ರಾಣಿಗಳ ದೇಹಗಳಲ್ಲಿರುವುದರಿಂದ ಬೇರೆ ಬೇರೆ ನಾಮಗಳನ್ನು ಹೊಂದುತ್ತಾನೆ.

ಯಥಾ ದೀಪಸಹಸ್ರಾಣಿ ದೀಪ ಏಕಃ ಪ್ರಸೂಯತೇ ।
ತಥಾ ರೂಪಸಹಸ್ರಾಣಿ ಸ ಏವೈಕಃ ಪ್ರಸೂಯತೇ ॥ ೨೩ ॥

ಸ ಯದಾ ಬುದ್ಧ್ಯತೇಽತ್ಮಾನಂ ತದಾ ಭವತಿ ಕೇವಲಃ ।
ಏಕತ್ವಂ ಪ್ರಲಯೇ ಚಾಸ್ಯ ಬಹುತ್ವಂ ಸ್ಯಾತ್ಪ್ರವರ್ತತೇ ॥ ೨೪ ॥

ನಿತ್ಯಂ ಹಿ ನಾಸ್ತಿ ಜಗತಿ ಭೂತಂ ಸ್ಥಾವರಜಂಗಮಂ ।
ಋತೇ ತಮೇಕಮಿಾಶಾನಂ ಪುರುಷಂ ಬೀಜಸಂಜ್ಞಿತಂ ॥ ೨೫ ॥

ಅಕ್ಷಯಶ್ಚಾಪ್ರಮೇಯಶ್ಚ ಸರ್ವಗಶ್ಚ ಸ ಉಚ್ಯತೇ ।
ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ಸರ್ವಕಾರಣಂ ॥ ೨೬ ॥

---

೨೩. ಒಂದೇ ದೀಪವು ಅನೇಕವರ್ತಿರೂಪವಾದ ಉಪಾಧಿಗಳ ಸಂಬಂಧದಿಂದ ಸಾವಿರಾರು ದೀಪಗಳಾಗುವಂತೆ, ಒಬ್ಬನೇ ಪರಮಾತ್ಮನು ಅವಿದ್ಯೆ ಎಂಬ ಉಪಾಧಿಯಿಂದ ಅನೇಕ ಸಂಸಾರಿ ಸ್ವರೂಪನಾಗಿ ಆಗುವನು. ಇದೇ ವಿಚಾರವು ಬೃಹದಾರಣ್ಯಕದಲ್ಲಿ " ಬ್ರಹ್ಮೈವ ಸ್ವಾವಿದ್ಯಯಾ ಸಂಸರತಿ ಸ್ವವಿದ್ಯಯಾ ಮುಚ್ಯತೇ " ಎಂದು ಹೇಳಲ್ಪಟ್ಟಿದೆ.

೨೪. ಯಾವಾಗ ಸೃಷ್ಟಿರೂಪವನ್ನು ತಿಳಿದುಕೊಳ್ಳುವನೋ ಆಗ ಈ ಸಂಸಾರಿತ್ವವು ನಿವೃತ್ತವಾಗಿ ತನ್ನ ಪಾರಮಾರ್ಥಿಕವಾದ ಅದ್ವಿತೀಯ ಬ್ರಹ್ಮ ಭಾವವನ್ನೇ ಹೊಂದುವನು. ಪ್ರಳಯಕಾಲದಲ್ಲಿ ಈ ಅದ್ವಿತೀಯತ್ವವೂ ಬ್ರಹ್ಮನಿಗೆ ಸ್ಪಷ್ಟವಾಗಿದೆ. ಸೃಷ್ಟಿಕಾಲದಲ್ಲಿ ಆ ಪಾರಮಾರ್ಥಿಕವಾದ ಈ ಕಾರ್ಯವರ್ಗದಿಂದ ಬಹುತ್ವವು ಕಲ್ಪಿತವಾಗಿದೆ.

೨೫. ಈ ಪ್ರಪಂಚದಲ್ಲಿ ಜಗತ್ಕಾರಣ ರೂಪನಾದ ಪರಮಾತ್ಮನೊಬ್ಬನನ್ನು ಬಿಟ್ಟರೆ ಸ್ಥಾವರ ಮತ್ತು ಜಂಗಮಾತ್ಮಕವಾದ ಪ್ರಾಣಿ ಯಾವುದೂ ಪಾರಮಾರ್ಥಿಕವಲ್ಲ.

೨೬. ಅವನು ನಾಶರಹಿತನೆಂದೂ ತಿಳಿಯಲು ಅಸಾಧ್ಯನೆಂದೂ ಸರ್ವವ್ಯಾಪಕನೆಂದೂ ಹೇಳಲ್ಪಡುತ್ತಾನೆ. ಆ ಪರಮಾತ್ಮನಿಂದ ಗುಣತ್ರಯಾತ್ಮಕವಾಗಿಯೂ, ಸರ್ವಕ್ಕೂ ಪರಿಣಾಮ್ಯುಪಾದಾನವಾಗಿಯೂ ಅವ್ಯಕ್ತವು ಅಭಿವ್ಯಕ್ತವಾಯಿತು.

ಅವ್ಯಕ್ತಾತ್ವ್ಯಕ್ತ ಭಾವಸ್ಥಾ ಯಾ ಸಾ ಪ್ರಕೃತಿರುಚ್ಯತೇ ।
ತಾಂ ಯೋನಿಂ ಬ್ರಹ್ಮಣೋ ವಿದ್ಧಿ ಯೋಽಸೌ ಸದಸದಾತ್ಮಕಃ ॥ ೨೭ ॥

ನಾಸ್ತಿ ತಸ್ಮಾತ್ಪರೋಹ್ಯನ್ಯಃ ಸ ಪಿತಾ ಸ ಪ್ರಜಾಪತಿಃ ।
ಆತ್ಮಾ ಮಮ ಸ ವಿಜ್ಞೇಯಃ ತತಸ್ತಂ ಪೂಜಯಾಮ್ಯಹಂ ॥ ೨೮ ॥

ಸ್ವರ್ಗತಾಶ್ಚಾಪಿ ಯೇ ಕೇಚಿತ್ ತಂ ನಮಸ್ಯಂತಿ ದೇಹಿನಃ ।
ತೇ ತತ್ಪ್ರಸಾದಾದ್ಗಚ್ಛಂತಿ ತೇನಾದಿಷ್ಟಾಃ ಪರಾಂ ಗತಿಂ ॥ ೨೯ ॥

ತಂ ದೇವಾಶ್ಚಾಸುರಾಶ್ಚೈವ ನಾನಾಮತಸಮಾಶ್ರಿತಾಃ ।
ಭಕ್ತ್ಯಾ ಸಂಪೂಜಯಂತ್ಯಾದ್ಯಂ ಗತಿಂ ಚೈಷಾಂ ದದಾತಿ ಸಃ ॥ ೩೦ ॥

---

೨೭. ಯಾವುದು ವ್ಯಕ್ತರೂಪದಲ್ಲಿದ್ದೂ, ಅವ್ಯಕ್ತವೆನಿಸಿಕೊಂಡಿದೆಯೋ, ಅದನ್ನು ಪ್ರಕೃತಿ ಎನ್ನುವರು. ವ್ಯಾವಹಾರಿಕ (ಸತ್) ಪ್ರಾತಿಭಾಸಿಕ (ಅಸತ್) ಈ ಬ್ರಹ್ಮಪ್ರಪಂಚದ ರೂಪವಾದ ಕಾರ್ಯದಲ್ಲಿ ಅವ್ಯಕ್ತವೆನಿಸುವ ಮಾಯೆಯು ಪರಿಣಾಮ್ಯುಪಾದಾನವಾಗಿದೆ.

೨೮. ಅವನಿಗಿಂತ ಬೇರೆ ಉತ್ಕೃಷ್ಟನಾದವನು ಬೇರೆ ಯಾರೂ ಇಲ್ಲ. ಆದುದರಿಂದಲೇ ಅವನು ಸಮಸ್ತಕ್ಕೂ ಪಿತೃವೆಂದೂ ಪ್ರಜಾಪತಿ ಎಂದೂ ಹೇಳಲ್ಪಟ್ಟಿರುತ್ತಾನೆ ಅವನೇ ನಮ್ಮ ಆತ್ಮನೆಂದು ತಿಳಿಯಲ್ಪಡತಕ್ಕವನು. ಆದುದರಿಂದಲೇ ನಾನು ಅವನನ್ನು ಪೂಜಿಸುತ್ತೇನೆ.

೨೯. ಕೆಲವರು ಸ್ವರ್ಗಗತರಾಗಿದ್ದರೂ ಆ ಸೂರ್ಯನನ್ನು ನಮಸ್ಕರಿಸುತ್ತಾರೆ. ಅವನ ಅನುಗ್ರಹದಿಂದ ಅವನಿಂದ ಅಪ್ಪಣೆ ಹೊಂದಿ ಶ್ರೇಷ್ಠವಾದ ಪ್ರಾಪ್ಯಸ್ಥಾನವನ್ನು ಹೊಂದುತ್ತಾರೆ.

೩೦. ದೇವತೆಗಳು ಅಸುರರು ಎಂಬ ನಾನಾಭೇದಗಳನ್ನು ಹೊಂದಿದವರೂ ಆ ಪರಮಾತ್ಮನನ್ನು ಭಕ್ತಿಯಿಂದ ಚನ್ನಾಗಿ ಪೂಜಿಸುತ್ತಾರೆ. ಆ ಪರಮಾತ್ಮನು ಅವರಿಗೂ ಪ್ರಾಪ್ಯಸ್ಥಾನವನ್ನು ಕೊಡುತ್ತಾನೆ.

**ಸಹಿ ಸರ್ವಗತಶ್ಚೈವ ನಿರ್ಗುಣಶ್ಚಾಪಿ ಕಥ್ಯತೇ ।**
**ಏವಂ ಜ್ಞಾತ್ವಾ ತಮಾತ್ಮಾನಂ ಪೂಜಯಾಮಿ ಸನಾತನಂ ।**
**ಭಾಸ್ಕರಂ ದೇವದೇವೇಶಂ ಸರ್ವಭೂತೇಶಮಚ್ಯುತಂ ॥ ೩೧ ॥**

**॥ ಬ್ರಹ್ಮೋವಾಚ ॥**

**ಇತ್ಯುಕ್ತವಾನ್ ಪುರಾ ಪೃಷ್ಟೋ ಮಯಾ ದೇವೋ ದಿವಾಕರಃ ।**
**ಪೂಜಯ ತ್ವಂ ಮಹಾತ್ಮಾನಂ ತಪಂತಂ ವಿಪುಲಂ ತಪಃ ॥ ೩೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಬ್ರಹ್ಮಯಾಜ್ಞ್ಯ ವಲ್ಕ್ಯ ಸಂವಾದೇ ಸಪ್ತಮೀ ಕಲ್ಪೇ ಸೂರ್ಯಮಹಿಮಾವರ್ಣನಂ ನಾಮ ಸಪ್ತಷಷ್ಟಿತಮೋಽಧ್ಯಾಯಃ.**



---

೩೧ ಅವನು ಸರ್ವವ್ಯಾಪಕನೆಂದೂ, ನಿರ್ಗುಣನೆಂದೂ, ಹೇಳಲ್ಪಡುತ್ತಾನೆ. ಆ ಪುರಾತನ ಪುರುಷನೂ, ದೇವತೆಗಳಲ್ಲೆಲ್ಲಾ ಶ್ರೇಷ್ಠನಾದ ದೇವನೂ, ಸರ್ವಭೂತಗಳಿಗೂ ಒಡೆಯನೂ ನಾಶರಹಿತನೂ ಆದ ಸೂರ್ಯನನ್ನು ನನ್ನ ಆತ್ಮವನ್ನಾಗಿ ತಿಳಿದುಕೊಂಡು ಪೂಜಿಸುತ್ತೇನೆ. ಎಂಬುದಾಗಿ

೩೨. ಬ್ರಹ್ಮನು ಹೇಳಿದನು—ಪೂರ್ವದಲ್ಲಿ ನಾನು ಸೂರ್ಯನನ್ನು ಪ್ರಶ್ನಿಸಿದಾಗ ಅವನು ನನಗೆ ಈ ರೀತಿ ಹೇಳಿದ್ದನು (ವಿಸ್ತಾರವಾದ ಸ್ವಧರ್ಮವುಳ್ಳ ಎಂದರೆ) ತನ್ನ ಕೆಲಸವನ್ನು ತಾನು ಮಾಡುತ್ತಿರುವ ಮಹಾತ್ಮನಾದ ಅವನನ್ನು ನೀನೂ ಪೂಜಿಸು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮ ಪರ್ವದಲ್ಲಿ ಬ್ರಹ್ಮಯಾಜ್ಞವಲ್ಕ್ಯ ಸಂವಾದದಲ್ಲಿ ಸೂರ್ಯನ ಮಹಿಮೆವರ್ಣನೆ ಎಂಬ ಅರವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಷಷ್ಟಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ವಚ್ಮಿ ತೇ ಪರಮಂ ದೇವಂ ಸರ್ವದೇವೈಶ್ಚ ಪೂಜಿತಂ ।
ಆರಾಧಯಂತಿ ಯಂ ದೇವಂ ಬ್ರಹ್ಮವಿಷ್ಣುಮಹೇಶ್ವರಾಃ ॥ ೧ ॥

ಪದ್ಮಾಕೃತಿಂ ಸದಾ ಬ್ರಹ್ಮಾ ನಲಿನೈರ್ಗುಗ್ಗುಲೇನ ತು ।
ವ್ಯೋಮರೂಪಂ ಸದಾ ದೇವಂ ಮಹಾದೇವೋಽರ್ಚತೇ ರವಿಂ ॥ ೨ ॥

ಜಾತೀಪುಷ್ಪೈ ರ್ದ್ವಿಜಶ್ರೇಷ್ಠ ಧೂಪೇನ ವಿಜಯೇನ ತು ।
ವೃಷಣಂ ಸಿಹ್ಲಕಂ ವಿಪ್ರ ಶ್ರೀಖಂಡಮಗರುಸ್ತಥಾ ॥ ೩ ॥

---

## ಅರವತ್ತೆಂಟನೆಯ ಅಧ್ಯಾಯ

೧. ಬ್ರಹ್ಮನು ಹೇಳಿದನು—ಬ್ರಹ್ಮ, ವಿಷ್ಣು, ಮಹೇಶ್ವರ ಇವರುಗಳು, ಸರ್ವ ದೇವತೆಗಳಿಂದ ಪೂಜಿತನೂ, ಶ್ರೇಷ್ಠನಾದ ದೇವನೂ ಆದ ಯಾವನನ್ನು ಆರಾಧಿಸುವರೋ ಆ ಸೂರ್ಯದೇವನ ವಿಚಾರವನ್ನು ಕುರಿತು ಹೇಳುತ್ತೇನೆ.

೨–೩. ಎಲೈ ಬ್ರಾಹ್ಮಣಶ್ರೇಷ್ಠನೇ ! ಆ ಸೂರ್ಯದೇವನು ಪದ್ಮಾಕೃತಿಯಾಗಿ ಇರುವನೆಂದು ಭಾವಿಸಿ, ಬ್ರಹ್ಮನು ಕಮಲಪುಷ್ಪಗಳಿಂದಲೂ, ಗುಗ್ಗುಲ ಧೂಪಗಳಿಂದಲೂ ಸರ್ವದಾ ಪೂಜಿಸುತ್ತಾನೆ. ಶಿವನು ಆ ಸೂರ್ಯನನ್ನು ವ್ಯೋಮರೂಪನೆಂದು ಭಾವಿಸಿ, ಜಾಜಿಯ ಹೂಗಳಿಂದಲೂ, ವಿಜಯ್ಯ ಎಂಬ ಧೂಪದಿಂದಲೂ ಪೂಜಿಸುತ್ತಾನೆ.

**ಕರ್ಪೂರಂ ಚ ತಥಾ ಮುಸ್ತಾ ಶರ್ಕರಾ ಸತ್ವಚಾ ದ್ವಿಜ ।**
**ಇತ್ಯೇಷ ವಿಜಯೋ ಧೂಪಃ ಸ್ವಯಂ ದೇವೇನ ನಿರ್ಮಿತಃ　　॥ ೪ ॥**

**ಕೇಶವಶ್ಚಕ್ರರೂಪಂ ತು ಸದಾ ಸಂಪೂಜಯೇದ್ರವಿಂ ।**
**ನೀಲೋತ್ಪಲದಳಶ್ಯಾಮೋ ನೀಲೋತ್ಪಲ ಕದಂಬಕೈಃ　　॥ ೫ ॥**

**ಧೂಪೇನಾಗರು ಸಂಜ್ಞೇನ ಭಕ್ತಿಶ್ರದ್ಧಾಸಮನ್ವಿತಃ ।**
**ಮಯಾ ಸ ಪೃಷ್ಟೋ ದೇವೇಶಃ ತಸ್ಯೈವಾರಾಧನಾಯ ವೈ　　॥ ೬ ॥**

**ಕಾನಿ ಪುಷ್ಪಾಣಿ ಚೇಷ್ಟಾನಿ ಸದಾ ಭಾಸ್ಕರಪೂಜನೇ ।**
**ತೇನ ಚೋಕ್ತಾನಿ ಪುಷ್ಪಾಣಿ ಸ್ವಯಂ ತಾನಿ ನಿಬೋಧ ಮೇ　　॥ ೭ ॥**

**ಮಲ್ಲಿಕಾಯಾಸ್ತು ಕುಸುಮೈರ್ಭೋಗವಾನ್ ಜಾಯತೇ ನರಃ ।**
**ಸೌಭಾಗ್ಯಂ ಪುಂಡರೀಕೈಶ್ಚ ಭಜತ್ಯೇವ ಚ ಶಾಶ್ವತಂ　　॥ ೮ ॥**

---

೪. ಅಯ್ಯಾ ವಿಪ್ರನೇ! ವೃಷಣ, ಸಿಲ್ಹಕ, ಶ್ರೀಗಂಧ, ಅಗಿಲು, ಕರ್ಪೂರ, ಮುಸ್ತೇ, ತ್ವಕ್ ಸಹಿತವಾದ ಶರ್ಕರಾ ಇವುಗಳ ಮಿಶ್ರಣದ ಹುಡಿಯು ವಿಜಯಧೂಪವೆಂದು ಸ್ವಾಮಿಯೇ ನಿರ್ಣಯಿಸಿದ್ದಾನೆ.

೫–೬. ನೀಲೋತ್ಪಲದಂತೆ ಶ್ಯಾಮವರ್ಣದವನಾದ ಶ್ರೀಮನ್ನಾರಾಯಣನು ಈ ಸೂರ್ಯದೇವನನ್ನು ಚಕ್ರಾಕಾರನಾಗಿರುವನೆಂದು ಭಾವಿಸಿ ಕನ್ನೈದಿಲೆ ಪುಷ್ಪಗಳ ಸಮೂಹದಿಂದಲೂ, ಅಗಿಲು ಚಕ್ಕೆಯ ಧೂಪದಿಂದಲೂ ಭಕ್ತಿಯುತನಾಗಿ ಪೂಜಿಸುತ್ತಾನೆ.

೭. ಭಾಸ್ಕರನ ಪೂಜೆಗೆ ಸರ್ವದಾ ಯಾವ ಹೂಗಳು ಇಷ್ಟವಾದುವು ಎಂಬದಾಗಿ ನಾನು ಆ ದೇವನನ್ನೇ ಕೇಳಲಾಗಿ ಅವನು ನಾನಾ ಪುಷ್ಪಗಳ ಪೂಜಾಫಲವನ್ನು ಕುರಿತು ತಾನೇ ಹೇಳಿದನು. ಅದನ್ನು ಕೇಳು.

೮. ಮಲ್ಲಿಗೆಯ ಹೂಗಳಿಂದ ಪೂಜಿಸುವವನು ಸುಖಪಡುವನು. ಬಿಳಿದಾವರೆ ಹೂಗಳಿಂದ ಪೂಜಿಸುವವನು ಶಾಶ್ವತವಾದ ಒಳ್ಳೆಯ ಅದೃಷ್ಟವುಳ್ಳವನಾಗುವನು.

ಸುಗಂಧಕುಟಜೈಃ ಪುಷ್ಪೈಃ ಪರಮೈಶ್ವರ್ಯಮಶ್ನುತೇ ।
ಭವತ್ಯಕ್ಷಯಮತ್ಯಂತಂ ನಿತ್ಯಮರ್ಚಯತೋ ರವಿಂ ॥ ೯ ॥

ಮಂದಾರಪುಷ್ಪೈಃ ಪೂಜಾ ತು ಸರ್ವಕುಷ್ಠವಿನಾಶಿನೀ ।
ಬಿಲ್ವಪತ್ರೈಶ್ಚ ಕುಸುಮೈಃ ಮಹತೀಂ ಶ್ರೇಯಮಶ್ನುತೇ ॥ ೧೦ ॥

ಅರ್ಕಸ್ರಜಾ ಭವತ್ಯರ್ಥಂ ಸರ್ವಕಾಮಫಲಪ್ರದಃ ।
ಪ್ರದದ್ಯಾದ್ರೂಪಿಣೀಂ ಕನ್ಯಾಮರ್ಚಿತೋ ಬಕುಳಸ್ರಜಾ ॥ ೧೧ ॥

ಕಿಂಶುಕೈರರ್ಚಿತೋ ದೇವೋ ನ ಪೀಡಯತಿ ಭಾಸ್ಕರಃ ।
ಪೂಜಿತೋಽಗಸ್ತ್ಯಕುಸುಮೈರಾನುಕೂಲ್ಯಂ ಪ್ರಯಚ್ಛತಿ ॥ ೧೨ ॥

ಕರವೀರೈಸ್ತು ವಿಪ್ರೇಂದ್ರ ಸೂರ್ಯಸ್ಯಾನುಚರೋ ಭವೇತ್ ।
ತಥಾ ಮುದ್ಗರಪುಷ್ಪೈಶ್ಚ ಸಮಭ್ಯರ್ಚ್ಯ ದಿವಾಕರಂ ॥ ೧೩ ॥

---

೯. ಸುವಾಸನೆಯಾದ ಕುಟಜ ಪುಷ್ಪಗಳಿಂದ ಪೂಜಿಸಿದರೆ ಪರಮೈಶ್ವರ್ಯ ಲಭಿಸುವುದು. ನಿತ್ಯವೂ ಈ ಹೂಗಳಿಂದ ಸೂರ್ಯನನ್ನು ಪೂಜಿಸಿದರೆ ಐಶ್ವರ್ಯವು ಅಕ್ಷಯವಾಗಿ ಹೆಚ್ಚುವುದು.

೧೦. ಮಂದಾರಪುಷ್ಪಗಳಿಂದ ಪೂಜಿಸಿದರೆ ಕುಷ್ಠರೋಗವಿದ್ದವರಿಗೆ ಆ ರೋಗ ನಿವೃತ್ತಿಯಾಗುವುದು. ಸಾಮಾನ್ಯರಿಗೂ ಎಲ್ಲಾ ರೋಗ ನಿವೃತ್ತಿಯಾಗಿ ಆರೋಗ್ಯ ಲಭಿಸುವುದು. ಬಿಲ್ವಪತ್ರೆ, ಹೂ ಇವುಗಳಿಂದ ಪೂಜಿಸಿದವರು ಮಹಾಸಂಪತ್ತಿಯನ್ನು ಹೊಂದುವರು.

೧೧. ಎಕ್ಕದ ಹೂಗಳಿಂದ ಮಾಲೆಯನ್ನು ಕಟ್ಟಿ ಪೂಜಿಸಿದರೆ ಅಪೇಕ್ಷಿಪಟ್ಟ ಸಮಸ್ತ ಫಲಗಳೂ ಲಭಿಸುವುವು. ಬಕುಳ ಪುಷ್ಪಮಾಲೆಯಿಂದ ಪೂಜಿಸಿದರೆ ಸೂರ್ಯನು ರೂಪವತಿಯಾದ ಕನ್ಯೆಯು ಲಭಿಸುವಂತೆ ಮಾಡುವನು.

೧೨. ಮುತ್ತುಗದ ಹೂಗಳಿಂದ ಪೂಜಿತನಾದ ಸೂರ್ಯನು ಪೀಡಾ ಪರಿಹಾರ ಮಾಡುತ್ತಾನೆ. ಅಗಸೆಯ ಹೂಗಳಿಂದ ಪೂಜಿಸಿದರೆ ಸೂರ್ಯನು ಅನುಕೂಲ್ಯವನ್ನು ಕೊಡುತ್ತಾನೆ. (ಸೌಮ್ಯವನ್ನು ಕೊಡುತ್ತಾನೆ.)

೧೩. ಅಯ್ಯಾ ವಿಪ್ರಶ್ರೇಷ್ಠನೇ! ಕಣಿಗಲೆ ಹೂವಿನಿಂದ ಪೂಜಿಸಿದರೆ ಸೂರ್ಯನ ಸಮೀಪದ ಅನುಚರನೇ ಆಗುತ್ತಾನೆ. ಮುದ್ಗರ ಪುಷ್ಪಗಳಿಂದ ಸೂರ್ಯನನ್ನು

ಹಂಸಯುಕ್ತೇನ ಯಾನೇನ ರವೇಃ ಸಾಲೋಕ್ಯಮಾವ್ರಜೇತ್ ।
ಶತಪುಷ್ಪ ಸಹಸ್ರೈಸ್ತು ಪೂಷಸಾಲೋಕ್ಯತಾಂ ವ್ರಜೇತ್ ।
ಬಕಪುಷ್ಪೈರ್ದ್ವಿಜಶ್ರೇಷ್ಠ ಯಾತಿ ಭಾನುಸಲೋಕತಾಂ ॥ ೧೪ ॥

ಚತುಃ ಸಮೇನ ಗಂಧೇನ ಸಮಭ್ಯರ್ಚ್ಯ ದಿವಾಕರಂ ।
ಪಂಚಭೂತಾಲಯಸ್ಥಾನಮಾಪ್ನುಯಾನ್ನಾತ್ರ ಸಂಶಯಃ ॥ ೧೫ ॥

ದೇವಾಗಾರಂ ತು ಸಂಮಾರ್ಜ್ಯ ಭಕ್ತ್ಯಾ ಯಸ್ತು ಪ್ರಲೇಪಯೇತ್ ।
ಸ ರೋಗಾನ್ಮುಚ್ಯತೇ ಕ್ಷಿಪ್ರಂ ದ್ರವ್ಯಲಾಭಂ ಚ ವಿಂದತಿ ॥ ೧೬ ॥

ತಸ್ಯ ಚಾಯತನಂ ಭಕ್ತ್ಯಾ ಗೈರಿಕೇಣೋಪಲೇಪಯೇತ್ ।
ಪ್ರಾಪ್ನುಯಾನ್ಮಹತೀಂ ಲಕ್ಷ್ಮೀಂ ರೋಗೈಶ್ಚಾಪಿ ಪ್ರಮುಚ್ಯತೇ ॥ ೧೭ ॥

---

ಪೂಜಿಸಿದರೆ ಹಂಸಪಕ್ಷಿಯಿಂದ ಯುಕ್ತವಾದ ವಿಮಾನವನ್ನು ಪಡೆದು ಸೂರ್ಯಲೋಕಕ್ಕೆ ಹೋಗುವನು.

೧೪. ಶತಪತ್ರ ಪುಷ್ಪಗಳಿಂದ ಸಹಸ್ರನಾಮಾರ್ಚನೆಯನ್ನು ಮಾಡಿದರೆ ಪೂಷ ನಾಮಕನಾದ ಸೂರ್ಯನ ಲೋಕಕ್ಕೆ ಹೋಗುತ್ತಾನೆ. ಬಕುಲ ಪುಷ್ಪಗಳಿಂದ ಹೀಗೆ ಪೂಜಿಸಿದವನು ಭಾನುಸಂಜ್ಞಕನಾದ ಸೂರ್ಯನ ಲೋಕಕ್ಕೆ ಹೋಗುತ್ತಾನೆ.

೧೫. ಕರ್ಪೂರ, ಅಗಿಲು, ಕಸ್ತೂರಿ, ತಕ್ಕೋಲ ಎಂಬ ನಾಲ್ಕು ವಸ್ತುಗಳನ್ನು ಸಮವಾಗಿ ಅರೆದು ಸೇರಿಸಿ ಮಾಡಿದ "ಯಕ್ಷಕರ್ದಮ" ವೆಂಬ ಗಂಧದಿಂದ ಸೂರ್ಯನನ್ನು ಆರಾಧಿಸಿ ಪಂಚಭೂತಗಳಿಗೆ ಲಯ ಉಂಟಾಗದ (ಪಂಚಭೂತಗಳು ಲಯಿಸದಿರುವ) ಸ್ಥಿತಿಯನ್ನು ಹೊಂದುತ್ತಾನೆ. ಎಂದರೆ ಜನನಮರಣಾದಿಗಳಿಂದ ಮುಕ್ತಿ ಹೊಂದುತ್ತಾನೆ.

೧೬. ದೇವಸ್ಥಾನವನ್ನು ಗುಡಿಸಿ ಯಾವನು ಭಕ್ತಿಯಿಂದ ಸಾರಿಸುವನೋ ಅವನಿಗೆ ದ್ರವ್ಯಲಾಭವಾಗುವುದು. ರೋಗದಿಂದ ಬಿಡುಗಡೆಯೂ ಆಗುವುದು.

೧೭. ಯಾವನು ಭಕ್ತಿಯಿಂದ ಕೂಡಿ ಅವನ ಆಲಯವನ್ನು ಕೆಮ್ಮಣ್ಣಿನಿಂದ ಲೇಪಿಸುವನೋ, ಅವನು ಹೆಚ್ಚಾದ ಸಂಪತ್ತಿಯನ್ನೂ ಹೊಂದಿ ರೋಗದಿಂದ ಬಿಡುಗಡೆಯನ್ನೂ ಹೊಂದುವನು.

ಅಷ್ಟಾದಶೈವ ಕುಷ್ಠಾನಿ ಯೇ ಚಾನ್ಯೇ ವ್ಯಾಧಯೋ ನೃಣಾಂ ।
ಪ್ರಲಯಂ ಯಾಂತಿ ತೇ ಸರ್ವೇ ಮೃದಾ ಯದ್ಯುಪಲೇಪಯೇತ್ ॥ ೧೮ ॥

ವಿಲೇಪನಾನಾಂ ಸರ್ವೇಷಾಂ ರಕ್ತಚಂದನಮುತ್ತಮಂ ।
ಪುಷ್ಪಾಣಾಂ ಕರವೀರಾಣಿ ಪ್ರಶಸ್ತಾನಿ ಪ್ರಚಕ್ಷತೇ ॥ ೧೯ ॥

ನಾತಃ ಪರತರಂ ಕಿಂಚಿದ್ಭಾಸ್ವತಸ್ತುಷ್ಟಿಕಾರಕಂ ।
ಕಿಂ ತಸ್ಯ ನ ಭವೇಲ್ಲೋಕೇ ಯಸ್ತ್ವೇಭಿಃ ಸ್ವರ್ಚಯೇದ್ರವಿಂ ॥ ೨೦ ॥

ಕರವೀರೈಃ ಪೂಜಯೇದ್ಯೋ ಭಾಸ್ಕರಂ ಶ್ರದ್ಧಯಾನ್ವಿತಃ ।
ಸರ್ವಕಾಮಸಮೃದ್ಧೋಽಸೌ ಸೂರ್ಯಕಾಮಮವಾಪ್ನುಯಾತ್ ॥ ೨೧ ॥

ವಿಲೇಪ್ಯಾಯತನಂ ಯಸ್ತು ಕಾರಯೇನ್ಮಂಡಲಂ ಶುಭಂ ।
ಸ ಸೂರ್ಯಲೋಕಮಾಸಾದ್ಯ ಮೋದತೇ ಶಾಶ್ವತೀಃ ಸಮಾಃ ॥ ೨೨ ॥

---

೧೮. ಸೂರ್ಯನ ಆಲಯವನ್ನು ಮಣ್ಣಿನಿಂದ ಸಾರಿಸಿದರೆ ಪ್ರಸಿದ್ಧಗಳಾಗಿರುವ ಹದಿನೆಂಟು ಬಗೆಯ ಕುಷ್ಠಗಳು ಮತ್ತು ಬೇರೆ ಬಗೆಯ ವ್ಯಾಧಿಗಳು ಎಲ್ಲವೂ ನಾಶ ಹೊಂದುತ್ತವೆ.

೧೯. ಎಲ್ಲಾ ಸಾರಣೆಗಳಲ್ಲೂ ರಕ್ತಚಂದನವೆಂಬ ಒಂದು ಬಗೆಯ ಚಂದನದ ಚಕ್ಕೆಯ ಗಂಧದಿಂದ ಸಾರಿಸುವುದು ಉತ್ತಮವು. ಹೂಗಳಲ್ಲಿ ಕೆಂಪುಕಣಿಗಲೆಯ ಹೂಗಳೇ ಉತ್ತಮವೆಂದು ಹೇಳುವರು.

೨೦. ಇದಕ್ಕಿಂತ ಬೇರೆ ಸೂರ್ಯ ಸಂತುಷ್ಟಿಕರವಾದುದು ಯಾವುದೂ ಇಲ್ಲ. ಯಾವನು ಇವುಗಳಿಂದ ಸೂರ್ಯನನ್ನು ಚನ್ನಾಗಿ ಪೂಜಿಸುವನೋ ಅವನಿಗೆ ಈ ಲೋಕದಲ್ಲಿ ಯಾವುದು ತಾನೇ ಆಗುವುದಿಲ್ಲ.

೨೧. ಯಾವನು ಭಕ್ತಿಯಿಂದ ಕೂಡಿದವನಾಗಿ ಕೆಂಪುಕಣಿಗಲೇ ಹೂವಿನಿಂದ ಸೂರ್ಯನನ್ನು ಅರ್ಚಿಸುವನೋ ಅವನು ಎಲ್ಲಾ ಇಷ್ಟವಸ್ತುಗಳನ್ನೂ ಸಂಪೂರ್ಣವಾಗಿ ಪಡೆದು ಸೂರ್ಯನೇ ಆಗಿಬಿಡುವನು.

೨೨. ಯಾವನು ದೇವಾಲಯವನ್ನು ಸಾರಿಸಿ ಶುಭವಾದ ರಂಗವಲ್ಲಿಯಿಂದ ಮಂಡಲವನ್ನು ಮಾಡಿಸುವನೋ, ಅವನು ಸೂರ್ಯಲೋಕವನ್ನು ಹೊಂದಿ ಅನೇಕ ಸಂವತ್ಸರಗಳವರೆಗೆ ಸಂತೋಷಹೊಂದುತ್ತಾನೆ.

ಏಕೇನಾಸ್ಯ ಭವೇದರ್ಥೋ ದ್ವಾಭ್ಯಾಮಾರೋಗ್ಯಮುಶ್ನುತೇ ।
ತ್ರಿಭಿಃ ಸಂತತ್ಯವಿಚ್ಛಿನ್ನಾ ಚತುರ್ಭಿರ್ಭಾರ್ಗವೀಂ ಲಭೇತ್ ॥ ೨೩ ॥

ಪಂಚಭಿರ್ವಿಪುಲಂ ಧಾನ್ಯಂ ಷಡ್ಭಿರಾಯುರ್ಬಲಂ ಯಶಃ ।
ಸಪ್ತಮಂಡಲಕಾರೀ ಸ್ಯಾನ್ಮಂಡಲಾಧಿಪತಿರ್ನರಃ ॥ ೨೪ ॥

ಆಯುರ್ಧನಸುತೈರ್ಯುಕ್ತಃ ಸೂರ್ಯಲೋಕೇ ಮಹೀಯತೇ ।
ಘೃತಪ್ರದೀಪದಾನೇನ ಚಕ್ಷುಷ್ಮಾನ್ ಜಾಯತೇ ನರಃ ॥ ೨೫ ॥

ಕಟುತೈಲಪ್ರದಾನೇನ ಸ ಶತ್ರೂನ್ ಜಯತೇ ನರಃ ।
ತಿಲತೈಲಪ್ರದಾನೇನ-ಸೂರ್ಯಲೋಕೇ ಮಹೀಯತೇ ॥ ೨೬ ॥

---

೨೩. ಇವನು ಹೀಗೆ ಒಂದುಸಂವತ್ಸರ ಆರಾಧಿಸುವುದರಿಂದ ಅರ್ಥಪ್ರಾಪ್ತಿಯೂ, ಎರಡು ವರ್ಷಗಳ ಆರಾಧನೆಯಿಂದ ಆರೋಗ್ಯಲಾಭವೂ, ಮೂರು ವರ್ಷಗಳ ಪೂಜೆಯಿಂದ ಅವಿಚ್ಛಿನ್ನ ಸಂತತಿಪ್ರಾಪ್ತಿಯೂ, ನಾಲ್ಕುವರ್ಷಗಳ ಕಾಲದ ಅರ್ಚನೆಯಿಂದ ಲಕ್ಷ್ಮೀಪ್ರಾಪ್ತಿಯೂ ಆಗುತ್ತದೆ.

೨೪. ಈರೀತಿ ಐದುವರ್ಷಗಳು ಪೂಜೆ ಮಾಡೋಣದರಿಂದ ಹೆಚ್ಚಾದ ಧಾನ್ಯ ಲಾಭವೂ, ಆರು ವರ್ಷಗಳ ಪೂಜೆಯಿಂದ ಆಯುಸ್ಸು, ಬಲ, ಕೀರ್ತಿ, ಇವು ವೃದ್ಧಿಯಾಗುವುವು, ಏಳುವರ್ಷಗಳ ಕಾಲ ಸೂರ್ಯಮಂಡಲವನ್ನು ಮಾಡಿ ಪೂಜಿಸುವವನು ರಾಷ್ಟ್ರಕ್ಕೆ ಅಧಿಪತಿಯಾಗುವನು. ಆಯುಸ್ಸು, ಧನ, ಪುತ್ರರು ಇವರಿಂದ ಕೂಡಿ ಸೂರ್ಯಲೋಕದಲ್ಲಿ ಪೂಜಿತನಾಗುವನು.

೨೫. ಹಿಪ್ಪೇ ಎಣ್ಣೆಯನ್ನು ದಾನಮಾಡುವುದರಿಂದ ಸೂರ್ಯಲೋಕದಲ್ಲಿ ಪೂಜೆಯನ್ನು ಹೊಂದುವನು. ತುಪ್ಪದ ದೀಪವನ್ನು ದಾನಮಾಡುವುದರಿಂದ ಮನುಷ್ಯನು ನೇತ್ರಾರೋಗ್ಯವನ್ನು ಹೊಂದುವನು.

೨೬. ಹರಳೆಣ್ಣೆ, ಬೇವಿನೆಣ್ಣೆ ಇತ್ಯಾದಿ ಕಹಿ ಎಣ್ಣೆಯನ್ನು ದಾನಮಾಡುವುದರಿಂದ ಆ ಮನುಷ್ಯನು ಶತ್ರುಗಳನ್ನೆಲ್ಲರನ್ನೂ ಗೆಲ್ಲುವನು. ಎಳ್ಳು ಎಣ್ಣೆಯನ್ನು ದಾನಮಾಡುವುದರಿಂದ ಆತನು ಸೂರ್ಯಲೋಕದಲ್ಲಿ ಪೂಜಿತನಾಗುವನು.

ಮಧೂಕತೈಲದಾನೇನ ಸೌಭಾಗ್ಯಂ ಪರಮಂ ವ್ರಜೇತ್ ।
ಸಂಪೂಜ್ಯ ವಿಧಿವದ್ದೈವಂ ಪುಷ್ಪಧೂಪಾದಿಭಿರ್ಬುಧಃ ॥ ೨೭ ॥

ಯಥಾಶಕ್ತಿ ತತಃ ಪಶ್ಚಾತ್ ನೈವೇದ್ಯಂ ಭಕ್ತಿತೋ ನ್ಯಸೇತ್ ।
ಪುಷ್ಪಾಣಾಂ ಪ್ರವರಾ ಜಾತೀ ಧೂಪಾನಾಂ ವಿಜಯಃ ಪರಃ ॥ ೨೮ ॥

ಗಂಧಾನಾಂ ಕುಂಕುಮಂ ಶ್ರೇಷ್ಠಂ ಲೇಪಾನಾಂ ರಕ್ತಚಂದನಂ ।
ದೀಪದಾನೇ ಘೃತಂ ಶ್ರೇಷ್ಠಂ ನೈವೇದ್ಯೇ ಮೋದಕಃ ಪರಃ ॥ ೨೯ ॥

ಏತೈಸ್ತುಷ್ಯತಿ ದೇವೇಶಃ ಸಾನ್ನಿಧ್ಯಂ ಚಾಧಿಗಚ್ಛತಿ ।
ಏವಂ ಸಂಪೂಜ್ಯ ವಿಧಿವತ್ಕೃತ್ವಾ ಚಾಪಿ ಪ್ರದಕ್ಷಿಣಂ ॥ ೩೦ ॥

ಪ್ರಣಮ್ಯ ಶಿರಸಾ ದೇವಂ ದೇವದೇವಂ ದಿವಾಕರಂ ।
ಸುಖಾಸೀನಸ್ತತಃ ಪಶ್ಯೇತ್ ರವೇರಭಿಮುಖೇ ಸ್ಥಿತಃ ॥ ೩೧ ॥

---

೨೭. ಇಪ್ಪೆ (ಹಿಪ್ಪೆ) ಎಣ್ಣೆಯನ್ನು ದಾನಮಾಡುವುದರಿಂದ ಶ್ರೇಷ್ಠವಾದ ಸೌಭಾಗ್ಯವನ್ನು ಹೊಂದುವನು. ವಿದ್ವಾಂಸನು ಸೂರ್ಯದೇವನನ್ನು ವಿಧಿಗನುಸಾರ ವಾಗಿ ಪುಷ್ಪ, ಧೂಪ ಮೊದಲಾದವುಗಳಿಂದ ಚನ್ನಾಗಿ ಪೂಜಿಸಿ,

೨೮-೩೦. ಅಲ್ಲಿಂದ ಮುಂದೆ ಭಕ್ತಿಯಿಂದ ಶಕ್ತ್ಯನುಸಾರವಾಗಿ ನೇವೇದ್ಯ ವನ್ನು ಇಡಬೇಕು. ಹೂಗಳಲ್ಲಿ ಜಾಜಿಯ ಹೂವು ಶ್ರೇಷ್ಠವು, ಧೂಪಗಳಲ್ಲಿ ವಿಜಯ ಧೂಪವು ಉತ್ಕೃಷ್ಟವಾದದ್ದು. ಗಂಧಗಳಲ್ಲಿ ಕುಂಕುಮ ಕೇಸರಿ ಗಂಧವು ಶ್ರೇಷ್ಠವು. ಲೇಪ ವಸ್ತುಗಳಲ್ಲಿ ರಕ್ತಚಂದನವು ಶ್ರೇಷ್ಠವು, ದೀಪ ದಾನದಲ್ಲಿ ತುಪ್ಪದ ದೀಪವು ಶ್ರೇಷ್ಠವು, ನೈವೇದ್ಯ ಪ್ರಕರಣದಲ್ಲಿ ಕಡುಬು ಶ್ರೇಷ್ಠವಾದದ್ದು. ಇವುಗಳಲ್ಲಿ ದೇವೇಶ ನಾದ ಸೂರ್ಯನು ಸಂತುಷ್ಟನಾಗಿ ಸಾನ್ನಿಧ್ಯವನ್ನು ಹೊಂದುತ್ತಾನೆ. ಹೀಗೆ ವಿಧಿಯಂತೆ ಚನ್ನಾಗಿ ಪೂಜಿಸಿ, ಪ್ರದಕ್ಷಿಣವನ್ನು ಮಾಡಬೇಕು.

೩೧. ದೇವದೇವನಾದ ಸೂರ್ಯದೇವನಿಗೆ ತಲೆಬಾಗಿ ನಮಸ್ಕಾರಮಾಡಿ ಸುಖ ವಾಗಿ ಕುಳಿತುಕೊಳ್ಳಬೇಕು. ಆಮೇಲೆ ಸೂರ್ಯನಿಗೆ ಅಭಿಮುಖನಾಗಿದ್ದು ಸೂರ್ಯ ದರ್ಶನಮಾಡುತ್ತಾ

**ಏಕಂ ಸಿದ್ಧಾರ್ಥಕಂ ಕೃತ್ವಾ ಹಸ್ತೇ ಪಾನೀಯಸಂಯುತಂ ।**
**ಕಾಮಂ ಯಥೇಷ್ಟಂ ಹೃದಯೇ ಕೃತ್ವಾ ತಂ ವಾಂಛಿತಂ ನರಃ ॥ ೩೨ ॥**

**ಪಿಬೇತ್ಸತೋಯಂ ತಂ ವಿಪ್ರ ಅಸ್ಪೃಷ್ಟಂ ದಶನೈಃ ಸಕೃತ್ ।**
**ದ್ವಿತೀಯಾಯಾಂ ತು ಸಪ್ತಮ್ಯಾಂ ದ್ವೌ ಗೃಹೀತ್ವಾ ತು ಸುವ್ರತ ॥ ೩೩ ॥**

**ತೃತೀಯಾಯಾಂ ತು ಸಪ್ತಮ್ಯಾಂ ಗೃಹೀತವ್ಯಾಸ್ತ್ರಯೋಽಪಿ ಚ ।**
**ಜ್ಞೇಯಾಶ್ಚತುರ್ಥ್ಯಾಂ ಚತ್ವಾರಃ ಪಂಚಮ್ಯಾಂ ಪಂಚ ಏವ ಹಿ ॥ ೩೪ ॥**

**ಷಟ್ ಪಿಬೇಚ್ಚಾಪಿ ಷಷ್ಠ್ಯಾಂ ತು ಇತೀಯಂ ವೈದಿಕೀ ಶ್ರುತಿಃ ।**
**ಸಪ್ತಮ್ಯಾಂ ಚೈವ ಸಪ್ತಮ್ಯಾಂ ಸಪ್ತಚೈವ ಪಿಬೇನ್ನರಃ ॥ ೩೫ ॥**

---

೩೨. ಅಯ್ಯಾ ವಿಪ್ರನೇ! ಬಲದ ಅಂಗೈಯಲ್ಲಿ ನೀರನ್ನು ಹಾಕಿಕೊಂಡು ಅದರಲ್ಲಿ ಒಂದು ಬಿಳಿಯ ಸಾಸುವೆಯಕಾಳನ್ನು ಮುಳುಗಿಸಿ ಕೈಯನ್ನು ಹೃದಯ ಸಮೀಪದಲ್ಲಿಟ್ಟು, ಯಾವ ಇಚ್ಛೆ ನೆರವೇರಬೇಕೆಂದು ಮನಸ್ಸಿನಲ್ಲಿದೆಯೋ ಅದನ್ನು ಮನಸ್ಸಿನಲ್ಲಿ ಧ್ಯಾನಿಸಿ (ಮುಂದೆ ಸೂಚಿಸಿರುವ ಮಂತ್ರದಿಂದ ಅಭಿಮಂತ್ರಿಸಿ) ಹಲ್ಲುಗಳಿಗೆ ಸೋಕದಂತೆ (ಆ ನೀರನ್ನು) ಪಾನಮಾಡುವುದು.

೩೩–೩೪. ಅಯ್ಯಾ ಸುವ್ರತನೇ! ಎರಡನೆಯ ಸಪ್ತಮಿಯಲ್ಲಿ ಅಂಗೈಯಲ್ಲಿ ತುಪ್ಪವನ್ನೂ, ಎರಡು ಬಿಳಿಯ ಸಾಸುವೆಯನ್ನೂ ಹಾಕಿಕೊಂಡು ಪೂರ್ವೋಕ್ತರೀತಿ ಪಾನಮಾಡಬೇಕು. ಹೀಗೆಯೇ ಮೂರನೆಯ ಸಪ್ತಮಿಯಲ್ಲಿ ಮೂರು ಸಾಸುವೆ ಕಾಳನ್ನು ಅಂಗೈ ಜೇನುತುಪ್ಪದಲ್ಲಿ ಹಾಕಿಕೊಂಡೂ, ನಾಲ್ಕನೆಯ ಸಪ್ತಮಿಯಲ್ಲಿ ನಾಲ್ಕು ಸಾಸುವೆ ಕಾಳುಗಳನ್ನು ಮೊಸರಿನಲ್ಲಿ ಹಾಕಿಕೊಂಡೂ, ಐದನೆಯ ಸಪ್ತಮಿಯಲ್ಲಿ ಐದು ಸಾಸುವೆ ಕಾಳುಗಳನ್ನು ಹಾಲಿನಿಂದ ಸಿದ್ಧವಾದ ಅನ್ನರಸದಲ್ಲಿ ಹಾಕಿಕೊಂಡು ಸೇವಿಸಬೇಕು.

೩೫. ಆರನೆಯ ಸಪ್ತಮಿಯಲ್ಲಿ ಆರು ಕಾಳುಗಳನ್ನು ಸಗಣಿಯ ನೀರಿನೊಡನೆಯೂ, ಏಳನೆಯ ಸಪ್ತಮಿಯಲ್ಲಿ ಏಳು ಕಾಳುಗಳನ್ನು ಪಂಚಗವ್ಯದಲ್ಲಿ ಹಾಕಿಕೊಂಡು ಪೂರ್ವೋಕ್ತ ರೀತಿಯಲ್ಲಿ ಅಂಗೈಯಲ್ಲಿಟ್ಟುಕೊಂಡು ದಂತ ಸ್ಪರ್ಶವಿಲ್ಲದ ಹಾಗೆ ಪಾನಮಾಡಬೇಕು ಎಂದು ವೇದದಲ್ಲಿ ವಚನವಿದೆ. ಗೋಮಯ, (ಹಸುವಿನ ಸಗಣಿ) ಗೋಮೂತ್ರ (ಹಸುವಿನ ಗಂಜಲ) ಹಾಲು, ಮೊಸರು, ತುಪ್ಪ ಇವುಗಳ ಮಂತ್ರಪೂರ್ವಕವಾದ ಮಿಶ್ರಣಕ್ಕೆ ಪಂಚಗವ್ಯವೆಂದು ಹೆಸರು.

ಆದ್ಯಪ್ರಭೃತಿ ವಿಜ್ಞೇಯೋ ಮಂತ್ರೋಯಮಭಿಮಂತ್ರಣೇ ।
ಸಿದ್ಧಾರ್ಥಕ ಸ್ತ್ವಂ ಹಿ ಲೋಕೇ ಸರ್ವತ್ರ ಶ್ರೂಯಸೇ ಯಥಾ ।
ತಥಾ ಮಾಮಪಿ ಸಿದ್ಧಾರ್ಥಮರ್ಥತಃ ಕುರುತಾಂ ರವಿಃ ॥ ೩೬ ॥

ತತೋ ಹವಿರುಪಸ್ಪೃಶ್ಯ ಜಪಂ ಕುರ್ಯಾದ್ಯಥೇಪ್ಸಿತಂ ।
ಹುತಾಶನಂ ಚ ಜುಹುಯಾತ್ ವಿಧಿದೃಷ್ಟೇನ ಕರ್ಮಣಾ ॥ ೩೭ ॥

ಏವಮೇವ ಪರಾಃ ಕಾರ್ಯಾಃ ಸಪ್ತಮ್ಯಃ ಸಪ್ತ ಸರ್ವದಾ ।
ಆದಿಪ್ರಭೃತಿ ಕಾರ್ಯಾ ಸಾ ಸರ್ವದೋದಕ ಸಪ್ತಮೀ ॥ ೩೮ ॥

ಏಕಂ ತೋಯೇನ ಸಹಿತಂ ದ್ವೌ ಚಾಪಿ ಘೃತಸಂಯುತ ।
ತ್ರೀಂಸ್ತಥಾ ಮಧುನಾ ಸಾರ್ಧಂ ದಧ್ನಾ ಚತುರ ಏವ ಚ ॥ ೩೯ ॥

---

೩೬. ಮೊದಲನೆಯ ಸಪ್ತಮಿ ಮೊದಲುಗೊಂಡು ಪಾನಕ್ಕಾಗಿ ಜಲಮಿಶ್ರಕ ಸಿದ್ಧಾರ್ಥವನ್ನು ಅಭಿಮಂತ್ರಣಮಾಡುವಾಗ,

ಸಿದ್ಧಾರ್ಥಕಸ್ತ್ವಂಹಿ ಲೋಕೇ ಸರ್ವತ್ರ ಶ್ರೂಯಸೇ ಯಥಾ ।
ತಥಾ ಮಾಮಪಿ ಸಿದ್ಧಾರ್ಥಮರ್ಥತಃ ಕುರುತಾಂ ರವಿಃ ॥

ಎಲೈ ಸಾಸುವೆಯೇ ! ನೀನು ಲೋಕದಲ್ಲೆಲ್ಲಿಯೂ ಸಿದ್ಧಾರ್ಥ (ಸಿದ್ಧಿಸಿದ ಪ್ರಯೋಜನವುಳ್ಳವ) ನೆಂದು ಹೇಳಿಸಿಕೊಳ್ಳುವಂತೆ ನನ್ನನ್ನೂ ಸೂರ್ಯನು ಇಷ್ಟಾರ್ಥಸಿದ್ಧಿಯುಳ್ಳವನನ್ನಾಗಿ ಮಾಡಲಿ ಎಂಬ ಅರ್ಥವುಳ್ಳ ಈ ಮಂತ್ರವನ್ನು ಉಚ್ಚರಿಸಬೇಕೆಂದು ತಿಳಿಯತಕ್ಕದ್ದು.

೩೭. ಅನಂತರ ಹವಿಸ್ಸನ್ನು (ತೊಳೆಯದೇ ಬಸಿಯದೇ ಮಾಡಿದ ಅಕ್ಕಿಯ ಅನ್ನವನ್ನು) ಮುಂದೆ ಇಟ್ಟುಕೊಂಡು ತನ್ನ ಇಷ್ಟಬಂದಷ್ಟು ಸಾರಿ ಈ ಮಂತ್ರ ಜಪ ಮಾಡಬೇಕು.

೩೮. ಬಳಿಕ ಶಾಸ್ತ್ರದಲ್ಲಿ ಕಂಡ ವಿಧಾನದಿಂದ ಅವನ್ನು ಅಗ್ನಿಯಲ್ಲಿ ಹೋಮ ಮಾಡಬೇಕು. ಹೀಗೆ ಏಳು ಸಪ್ತಮಿಗಳಲ್ಲಿಯೂ ಕೂಡ ಆಚರಿಸಬೇಕು. ಈ ಉದಕ ಸಪ್ತಮಿಯನ್ನು ಪ್ರಾರಂಭದಿಂದಲೂ ಹೀಗೆ ಮಾಡಬೇಕು.

೩೯. ಅಯ್ಯಾ ದ್ವಿಜನೇ ! ಒಂದನೆಯ ಸಪ್ತಮಿಯಲ್ಲಿ ಒಂದು ಸಿದ್ಧಾರ್ಥವನ್ನು ಜಲದೊಡನೆಯೂ, ಎರಡನೆಯ ಸಪ್ತಮಿಯಲ್ಲಿ ಎರಡನ್ನೂ ತುಪ್ಪದೊಡನೆಯೂ, ಮೂರನೆಯ ಸಪ್ತಮಿಯಲ್ಲಿ ಮೂರನ್ನು ಜೇನುತುಪ್ಪದೊಡನೆಯೂ, ನಾಲ್ಕನೆಯ ಸಪ್ತಮಿಯಲ್ಲಿ ನಾಲ್ಕು ಸಿದ್ಧಾರ್ಥಕವನ್ನು ಮೊಸರಿನೊಡನೆಯೂ, ಸೇವಿಸುವುದು.

**ಯುಕ್ತಾನ್ನ ಪಯಸಾ ಪಂಚ ಷಟ್ಕ ಗೋಮಯಸಂಯುತಾನ್ ।**
**ಪಂಚಗವ್ಯೇನ ವೈ ಸಪ್ತ ಪಿಬೇತ್ ಸಿದ್ಧಾರ್ಥಕಾನ್ ದ್ವಿಜ ॥ ೪೦ ॥**

**ಅನೇನ ವಿಧಿನಾ ಯಸ್ತು ಕುರ್ಯಾತ್ ಸರ್ಷಸಸಪ್ತಮೀಂ ।**
**ಬಹುಪುತ್ರೋ ಬಹುಧನಃ ಸಿದ್ಧಾರ್ಥಶ್ಚಾಪಿ ಸರ್ವದಾ ॥ ೪೧ ॥**

**ಇಹಲೋಕೇ ನರೋ ವಿಪ್ರ ಪ್ರೇತ್ಯ ಯಾತಿ ವಿಭಾವಸುಂ ।**
**ತಸ್ಮಾತ್ ಸಂಪೂಜಯೇದ್ದೇವಂ ವಿಧಿನಾನೇನ ಭಾಸ್ಕರಂ ॥ ೪೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಿದ್ಧಾರ್ಥ ಸಪ್ತಮೀ ವರ್ಣನಂ ನಾಮ ಅಷ್ಟಷಷ್ಟಿತಮೋಽಧ್ಯಾಯಃ.**



೪೦. ಹೀಗೆಯೇ ಐದನೆಯ ಸಪ್ತಮಿಯಲ್ಲಿ ಹಾಲಿನ ಅನ್ನರಸದೊಡನೆಯೂ ಆರನೆಯ ಸಪ್ತಮಿಯಲ್ಲಿ ಗೋಮಯೋದಕದೊಡನೆಯೂ ಏಳನೆಯ ಸಪ್ತಮಿಯಲ್ಲಿ ಪಂಚಗವ್ಯದೊಡನೆಯೂ ಸೇವಿಸಬೇಕು.

೪೧. ಅಯ್ಯಾ ಈ ವಿಧಿಯಿಂದ ಯಾವನು ಸರ್ಷಪ ಸಪ್ತಮೀಕಲ್ಪವನ್ನು ನಡೆಸುವನೋ ಅವನು ಬಹುಪುತ್ರರುಳ್ಳವನೂ, ಬಹುಧನವಂತನೂ, ಸರ್ವದಾ ಸಿದ್ಧ ಕಾರ್ಯನೂ ಆಗುವನು.

೪೨. ಈ ಪ್ರಕಾರ ಈ ಲೋಕದಲ್ಲಿ ಬಹುಕಾಲ ಬಾಳಿ ಬದುಕಿ ಶರೀರತ್ಯಾಗಾನಂತರ ಸೂರ್ಯಸಾಯುಜ್ಯವನ್ನು ಹೊಂದುತ್ತಾನೆ. ಆದುದರಿಂದ ಸರ್ವರೂ ಈ ವಿಧಿಯಿಂದ ಸೂರ್ಯನನ್ನು ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮ ಪರ್ವದಲ್ಲಿ ಸಿದ್ಧಾರ್ಥ ಸಪ್ತಮೀವ್ರತ ವರ್ಣನೆ ಎಂಬ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.

